'ಕವಿತಿಲಕ' ಗುರುಲಿಂಗಸಿದ್ಧ ಕವಿ

ವಿರಚಿತ

# ಶ್ರೀ ಶರಣಬಸವೇಶ್ವರ ಪುರಾಣ

ಪ್ರಕಾಶಕರು :

ಶ್ರೀ ಶರಣಬಸವೇಶ್ವರ ಸಂಸ್ಥಾನ

ಶರಣನಗರ,

ಗುಲಬರ್ಗಾ.



ಕವಿಗಳು :

ಗುರುಲಿಂಗಸಿದ್ಧ ಕವಿ, ತಡಕಲ್

ಮಹಾಗಾಂವ.

'ಕವಿತಿಲಕ' ಗುರುಲಿಂಗಸಿದ್ಧ ಕವಿ

ವಿರಚಿತ

# ಶ್ರೀ ಶರಣಬಸವೇಶ್ವರ ಪುರಾಣ

ಪ್ರಕಾಶಕರು :

ಶ್ರೀ ಶರಣಬಸವೇಶ್ವರ ಸಂಸ್ಥಾನ

ಶರಣನಗರ,

ಗುಲಬರ್ಗಾ.



ಕವಿಗಳು :

ಗುರುಲಿಂಗಸಿದ್ಧ ಕವಿ, ತಡಕಲ್

ಮಹಾಗಾಂವ.




ಶ್ರೀ ಮರುಳಾರಾಧ್ಯರು : ಶ್ರೀ ಶರಣಬಸವೇಶ್ವರರು

ಶ್ರೀ ಶರಣಬಸವೇಶ್ವರ ಸಂಸ್ಥಾನ ಗ್ರಂಥಮಾಲೆ-೫.

‘ಕವಿತಿಲಕ’ ಗುರುಲಿಂಗಸಿದ್ಧ ಕವಿ

ವಿರಚಿತ

# ಶ್ರೀ ಶರಣಬಸವೇಶ್ವರ ಪುರಾಣ

ಪ್ರಕಾಶಕರು :

ಶ್ರೀ ಶರಣಬಸವೇಶ್ವರ ಸಂಸ್ಥಾನ

ಶರಣನಗರ, ಕಲಬುರ್ಗಿ.

ಕವಿಗಳು :

ಗುರುಲಿಂಗಸಿದ್ಧ ಕವಿ, ತಡಕಲ್

ಮಹಾಗಾಂವ. (ಜಿ. ಗುಲಬರ್ಗಾ)

ಪ್ರಕಾಶಕರು :
ಶ್ರೀ ಶರಣಬಸವೇಶ್ವರ ಸಂಸ್ಥಾನ
ಶರಣನಗರ, ಕಲಬುರ್ಗಿ.



ಎರಡನೆಯ ಅಚ್ಚು ೧೯೬೯

ಸಾದಾ ಪ್ರತಿಗಳು ೧೫೦೦
ಉತ್ತಮ ಪ್ರತಿಗಳು ೫೦೦



ಬೆಲೆ ಉತ್ತಮ ಪ್ರತಿ ರೂ. ೬-೦೦
ಬೆಲೆ ಸಾದಾ ಪ್ರತಿ ರೂ. ೫-೦೦



ಮುದ್ರಕರು :
ಶ್ರೀ. ವ್ಹಿ. ಸಿ. ಹಡಗಲಿಮಠ, ಬಿ. ಎ.,
ಶಾರದಾ ಪ್ರಿಂಟಿಂಗ ಪ್ರೆಸ್
ಸರಾಫ ಬಜಾರ, ಕಲಬುರ್ಗಿ.

ಶ್ರೀ ಶರಣಬಸವೇಶ್ವರ ಸಂಸ್ಥಾನಾಧಿಪತಿಗಳು



ತ್ರಿವಿಧ ದಾಸೋಹ ಮೂರ್ತಿಗಳಾದ

**ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪಾ ಶರಣರು**

# ಅರ್ಪಣೆ

ಮಾನವರ ಮಧ್ಯದಲ್ಲಿ ಬಾಳಿ ತಮ್ಮ ಸದಾಚಾರ, ತಪಸ್ಸು,

ದಾಸೋಹಂಭಾವ ಮತ್ತು ಸಕಲ ಜೀವಾತ್ಮರಿಗೆ ಲೇಸನೇ ಬಯಸಿ

ಶಿವಯೋಗ ಮಾರ್ಗದಿಂದ ಶಿವೈಕ್ಯರಾದ

ಮಹಾತ್ಮರೂ, ಸತ್ಪುರುಷರೂ ಆದ

ಕಲಬುರ್ಗಿಯ

**ಶ್ರೀ ಶರಣಬಸವೇಶ್ವರರ**

ಚರಣಾರವಿಂದಗಳಲ್ಲಿ

ಈ ಕೃತಿಯನ್ನು ಭಕ್ತಿಪುರಸ್ಸರವಾಗಿ

ಸಮರ್ಪಿಸಲಾಗಿದೆ.



ಶ್ರೀ ಶರಣಬಸವೇಶ್ವರ ದೇವಾಲಯ



ಪೂಜ್ಯ ದೊಡ್ಡಪ್ಪಗೌಡ ಶರಣರ ದೇವಾಲಯ

# ಒ ಳ ಪಿ ಡಿ

---

............



ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪಾ, ಎಂ. ಎ.
ಶ್ರೀ ಶರಣಬಸವೇಶ್ವರ ಸಂಸ್ಥಾನ, ಗುಲಬರ್ಗಾ.



"ಕವಿ ತಿಲಕ" ಗುರುಲಿಂಗಸಿದ್ಧ ಕವಿಗಳು, ಮಹಾಗಾಂವ

ಜನನ: ೫-೫-೧೮೭೦ ]

[ ಲಿಂಗೈಕ್ಯ: ೩-೧೨-೧೯೨೮

## ಪ್ರಕಾಶಕರ ನುಡಿ

ಬೆಳಕನ್ನು ಕತ್ತಲೆಯೆಂದು, ವಿಕಾಸ ಕ್ರಮವನ್ನು ವಿವೇಕರಹಿತ ಕಾರ್ಯವೆಂದು ಸಾತ್ವಿಕ ತೇಜವನ್ನು ಸತ್ವಹೀನರ ಮೋಜೆಂದು ಕರೆದು ಅವುಗಳನ್ನು ಉದ್ಧಟತನದಿಂದ ಧಿಕ್ಕರಿಸಿ, ಕೆಟ್ಟು ಕಣ್ತೆರೆದು ಮತ್ತೆ ಆ ಮಹಾಚೇತನವನ್ನೇ "ಅನ್ಯಥಾ ಶರಣಂ ನಾಸ್ತಿ" ಎಂದು ಮೊರೆ ಹೊಕ್ಕಿರುವ ಮಾನವ ಚರಿತ್ರೆ ಯೇಸುವಿನ ಪೂರ್ವದಿಂದ ಗಾಂಧೀಜಿಯ ವರೆಗೆ ಚಾಚಿ ನಿಂತಿದೆ. ಇದರಿಂದ ನಮಗೆ "ಸತ್ಯಂ ವದ ಧರ್ಮಂ ಚರ" "ಸತ್ಯಮೇವ ಜಯತೆ," "ದಯವೇ ಧರ್ಮದ ಮೂಲ" ಎಂಬಂಥ ಮಹಿಮರ ವಚನಗಳು ನಿತ್ಯ ಸತ್ಯವಾದವುಗಳು ಎಂಬದು ತಾನೇ ತಿಳಿದು ಬರುತ್ತದೆ. ಅದರೊಡನೆಯೇ ಇಂಥ ನಿತ್ಯಸತ್ಯವನ್ನು ಅಜ್ಞಾನ, ಅಹಂಕಾರಗಳಿಂದ ಮರೆಯುವದೂ ಮಾನವರ ರೂಢಿಯಾಗಿದೆ ಎಂಬುದು ವಿದಿತವಾಗುವದು. ಇಂದು ನಮ್ಮಲ್ಲಿ ಸಾಹಿತ್ಯ, ಕಲೆ, ಸಂಸ್ಕೃತಿ ತತ್ವ, ವಿಜ್ಞಾನ, ಧರ್ಮ ಮೊದಲಾದ ಮಹತ್ ಶಕ್ತಿಗಳನ್ನು ಕುರಿತು ನಿಚ್ಚಳವಾದ ತಿಳುವಳಿಕೆ ಇಲ್ಲದಿರುವದೇ ಮಹಾ ಗಂಡಾಂತರವಾಗಿ ಪರಿಣಮಿಸಿದೆ. ಜೀವನದಲ್ಲಿ ಇಂತಹ ಗಂಡಾಂತರ ತಲೆದೋರಿ ಮೇಲೆ ಹೇಳಿದ ಮಹತ್ ಶಕ್ತಿಗಳು ಹ್ರಾಸಗೊಳ್ಳುತ್ತಿರುವಾಗ ಮಹಾತ್ಮರು ಜನಿಸಿ ಬರುತ್ತಾರೆ. ತಮ್ಮ ಅಗಾಧ ಶಕ್ತಿಯಿಂದ ಜನತೆಯನ್ನು ಉದ್ಧರಿಸುತ್ತಾರೆ. ಈ ಮಹಾಪುರುಷರೆಲ್ಲ ನೆಲ, ಕುಲ, ಕಾಲಗಳ ಗಸಣಿಯನ್ನು ದಾಟನಿಂತು ಮಾನವರ ಕೇವಲ ಉದ್ಧಾರಕ್ಕಾಗಿ ಶ್ರಮಿಸಿ ಲೋಕ ಪೂಜ್ಯರಾಗುತ್ತಾರೆ. ಇಂಥವರಲ್ಲಿ ಪರಮಪೂಜ್ಯ ಶ್ರೀ ಶರಣಬಸವೇಶ್ವರರೂ ಒಬ್ಬರು. ಈ ಮಹಾನುಭಾವರ ಬೆಳಕಿನ ದಾರಿಯಲ್ಲಿ ರೂಪ ತಾಳಿ ಅವರ ಹೆಸರಿನಲ್ಲಿ ಆರಂಭಿಸಲ್ಪಟ್ಟ ನಮ್ಮ ಈ ಪ್ರಕಟನಾ ಸಂಸ್ಥೆಯು ಸಾಹಿತ್ಯ, ಕಲೆ, ಸಂಸ್ಕೃತಿ, ತತ್ವ, ವಿಜ್ಞಾನ, ಧರ್ಮಗಳ ನೈಜ ಸ್ವರೂಪವನ್ನು ಜನತೆಯಲ್ಲಿ ಬಿತ್ತರಿಸಬೇಕೆಂಬ ಘನೋದ್ದೇಶವನ್ನು ಇಟ್ಟುಕೊಂಡಿದೆ. ವಿಶ್ವ ಮಹಾಪುರುಷರೆನ್ನಿಸಿಕೊಂಡ ಬುದ್ಧ, ಬಸವ, ಚನ್ನಬಸವ, ಪ್ರಭುದೇವ, ಸಿದ್ಧರಾಮ, ಅಕ್ಕಮಹಾದೇವಿ, ಶರಣಬಸವ, ಪರಮಹಂಸ, ಗಾಂಧೀಜಿ ಈ ಮೊದಲಾದ ಖ್ಯಾತಿವೆತ್ತವರ ತತ್ವ, ಚರಿತ್ರೆ ಮುಂತಾದವುಗಳನ್ನು ಸರಳ ರೂಪದಲ್ಲಿ ಜನತೆಗೆ ತಿಳಿಯಪಡಿಸಬೇಕೆಂಬುದೇ ನಮ್ಮ ಪ್ರಮುಖ ಉದ್ದೇಶವಾಗಿದೆ. ಅನ್ನದಾನ, ವಿದ್ಯಾದಾನಗಳ ಜೊತೆಗೆ ಆಧ್ಯಾತ್ಮ ಜ್ಞಾನವನ್ನು ನೀಡಬೇಕೆಂಬುದು ನಮ್ಮ ಗುರಿಯಾಗಿದೆ. ಭಗವದ್ಗೀತೆಯ ಬಗ್ಗೆ ಅನೇಕ ಮಹನೀಯರು ಅನೇಕ ಕಾಲದವರೆಗೆ ಅನೇಕ ಬಗೆಯಾಗಿ ಬರೆಯುತ್ತ ಬಂದಂತೆ ಶ್ರೀ ಶರಣರ ಲೀಲೆಗಳನ್ನೂ ಅನೇಕ ಬಗೆಯಲ್ಲಿ ಪರಂಪರೆಯಾಗಿ ಬರೆಯುತ್ತಲೇ ಬರುವ ರೂಢಿ ಬೆಳೆಯುತ್ತಲೇ ಬಂದಿದೆ. ಇವಾವುಗಳೂ ಹೇಳಿಸಿ ಬರೆಯಿಸಿದ ಗ್ರಂಥಗಳಾಗಿರದೆ ಭಕ್ತಿಪೂರ್ವಕವಾಗಿ ಬರೆದು ಪ್ರಕಟಿಸಿದ ಗ್ರಂಥಗಳಾಗಿವೆ.

ಈ ವರೆಗೆ ಶರಣರ ಮಹಾಜೀವನದ ಬಗ್ಗೆ ಬರೆದು ಪ್ರಕಟಿಸಿದ ಗದ್ಯ, ಪದ್ಯ, ಚರಿತ್ರೆ, ನಾಟಕ, ಸುಪ್ರಭಾತ, ನಾಮಾವಳಿ, ವಿವಿಧ ಬಗೆಯ ಅನೇಕ ಗ್ರಂಥಗಳಲ್ಲಿ ಮೂರು ಪುರಾಣಗಳೂ ಸೇರಿವೆ. ಅವುಗಳಲ್ಲಿ ಮೊದಲನೆಯ ಪುರಾಣವು ಶ್ರೀ ಶಿವಮೂರ್ತಿ ಮಾವನೂರ ಚನ್ನಬಸವ ಕವಿವರ್ಯರಿಂದ ಶ್ರೀ ಶಾಲಿವಾಹನ ಶಕೆ ೧೬೬೩ (ಕ್ರಿ. ವ. ೧೭೪೦) ರಲ್ಲಿ ಅಂದರೆ ಶ್ರೀ ಶರಣರು ಶಿವಸಾಯುಜ್ಯ ಹೊಂದಿದ ೧೭ನೇ ವರ್ಷದಲ್ಲಿ ಬರೆಯಲ್ಪಟ್ಟಿತು. ಅದರಲ್ಲಿ ಶರಣರ ೧೧ ಪ್ರಭಾವಗಳನ್ನು ಮಾತ್ರ ತೆಗೆದುಕೊಳ್ಳಲಾಗಿದೆ. ಶರಣರ ಮಹತ್ವಗಳು ಬಹುವಾಗಿ ಕಲಬುರ್ಗಿಯಲ್ಲಿಯೇ ನಡೆದವುಗಳಾಗಿವೆ. ಶ್ರೀ ಚನ್ನಬಸವ ಕವಿಗಳು ಸಗರ ನಾಡಿನವರಾಗಿದ್ದ

ಕಾರಣ ಕಲಬುರ್ಗಿಯಲ್ಲಿ ನಡೆದ ಶರಣರ ಮಹಿಮೆಗಳು ಅವರಿಗೆ ಗೊತ್ತಿಲ್ಲವಾದ್ದರಿಂದ ಬಿಟ್ಟಿರಬಹುದೆಂದು ಅನ್ನಿಸುತ್ತದೆ. ಮಹಿಮಾಶಾಲಿ ಶ್ರೀ ಶರಣಬಸವೇಶ್ವರರನ್ನು ಕಣ್ಣಾರೆ ಕಂಡವರಾದ ಅವರ ಒಡನಾಡಿಗರ ಮುಖಾಂತರ ಶರಣರ ಲೀಲೆಗಳನ್ನು ಪ್ರತ್ಯಕ್ಷ ಕೇಳಿಕೊಂಡು ಶ್ರೀ ಗುರುಲಿಂಗಸಿದ್ಧ ಕವಿಗಳು ಈ ಪುರಾಣವನ್ನು ರಚಿಸಿದ್ದಾರೆಂಬುದು ಲಿಂಗೈಕ್ಯ ಶ್ರೀ ಚನ್ನಬಸವಯ್ಯ ನಂದಿಮಠ ಇವರ "ಶ್ರೀ ಶರಣ ಬಸವೇಶವಿಜಯ" ಈ ಗದ್ಯ ಗ್ರಂಥದಿಂದ ತಿಳಿದು ಬರುತ್ತದೆ. ಈ ಪುರಾಣದಲ್ಲಿ ಶರಣರ ೫೫ ಮಹಿಮೆಗಳು (ಪವಾಡಗಳು) ಹೇಳಲ್ಪಟ್ಟಿವೆ. ಶ್ರೀ ಶರಣಬಸವೇಶ್ವರ ಪುರಾಣಗಳಲ್ಲಿ ಇದು ಎರಡನೆಯ ಪ್ರಕಟಿತ ಗ್ರಂಥವಾಗಿದೆ. ಮೂರನೆಯದಾಗಿ ಕ್ರಿ. ವ. ೧೯೫೪ರಲ್ಲಿ ದ್ಯಾಂಪುರ ಲಿಂಗೈಕ್ಯ ಶ್ರೀ ಕಲ್ಲಿನಾಥ ಶಾಸ್ತ್ರಿಗಳಿಂದ ರಚಿಸಲ್ಪಟ್ಟಿದೆ. (ಮೇಲೆ ಕಾಣಿಸಿದ ಉಳಿದೆರಡು ಪುರಾಣಗಳು ಈಗಾಗಲೇ ದ್ವಿತೀಯ ಮುದ್ರಣ ಹೊಂದಿ ಹೊರಬಂದಿವೆ.)

ಲಿಂಗೈಕ್ಯ ಶ್ರೀ ಗುರುಲಿಂಗಸಿದ್ಧ ಕವಿಗಳು ಶರಣ ಸನ್ನಿಧಾನದಲ್ಲಿದ್ದುಕೊಂಡು ಈ ಪುರಾಣವನ್ನು ರಚಿಸಿ ಪ್ರಕಟಿಸಿದರು. ಆ ಮೇಲೆ ಸುಮಾರು ೫೦ ವರ್ಷಗಳ ನಂತರ ಇತ್ತೀಚೆಗೆ ಕವಿಗಳ ಚಿರಂಜೀವಿಗಳು ಈ ಗ್ರಂಥವನ್ನು ಶ್ರೀ ಶರಣಬಸವೇಶ್ವರ ಸಂಸ್ಥಾನಕ್ಕೆ ಸರ್ವಾರ್ಪಣಗೈದ ಕಾರಣ ಅದರ ಪರಿಷ್ಕೃತ ಪುನರ್ಮುದ್ರಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಯಿತು. ಶ್ರೀ ಶರಣ ಸನ್ನಿಧಾನಕ್ಕೆ ಸರ್ವಾರ್ಪಣೆಗೈದುದಕ್ಕಾಗಿ ಶ್ರೀ ಶರಣ ಬಸವೇಶ್ವರರು ಅವರಿಗೆ ಕೃಪೆದೋರಲೆಂದು ಹಾರೈಸುತ್ತೇವೆ. ಶ್ರೀ ಶರಣಬಸವೇಶ್ವರರ ಪುರಾಣವನ್ನು ಕರ್ನಾಟಕ ಆಂಧ್ರ, ಮಹಾರಾಷ್ಟ್ರಗಳಲ್ಲಿ ಪ್ರತಿವರ್ಷ ನೂರಾರು ಕಡೆಗೆ ಶರಣ ಸದ್ಭಕ್ತರು ಹೇಳಿಸಿ-ಕೇಳಿ ಮಹದಾನಂದ ಪಡೆಯುತ್ತಿದ್ದಾರೆ ಎಂದು ಬೇರೆ ಹೇಳಬೇಕಾಗಿಲ್ಲ.

ಮರಾಠಿ, ತೆಲಗು, ಸಂಸ್ಕೃತ, ಹಿಂದಿ, ಇಂಗ್ಲೀಷ ಈ ಭಾಷೆಗಳಲ್ಲಿಯೂ ಶ್ರೀ ಶರಣಬಸವೇಶ್ವರ ಪುರಾಣವು ಪ್ರಕಟಗೊಳ್ಳುವ ಸಮಯ ದೂರವಿಲ್ಲ. ಈಗಾಗಲೇ ಆ ದಿಶೆಯಲ್ಲಿ ಕೆಲಸ ನಡೆದಿದೆ. ಯೋಗ್ಯ ಮಹತ್ವಪೂರಿತ ಗ್ರಂಥಗಳ ಪ್ರಕಟಣೆಗೆ ಈ ಸಂಸ್ಥೆ ಸದಾ ಸಿದ್ಧವಾಗಿದೆ. ಈ ಕೃತಿಯ ದ್ವಿತೀಯ ಮುದ್ರಣ ಕಾರ್ಯದಲ್ಲಿ ಹಲವಾರು ಬಗೆಯಲ್ಲಿ ಸೇವೆ ಸಲ್ಲಿಸಿ ಶರಣರ ಕೃಪೆಗೆ ಪಾತ್ರರಾದ, ನಮ್ಮ ವಿದ್ಯಾಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವ **ಪ್ರೊ. ಎಸ್. ಎಸ್. ಬಾಣದ** ಹಾಗೂ **ಶ್ರೀ ಆರ್. ಎಲ್. ಬಡಿಗೇರ** ಇವರಿಗೆ ಶ್ರೀ ಶರಣರು ಕೃಪಾಶೀರ್ವಾದ ನೀಡಲೆಂದು ಪ್ರಾರ್ಥಿಸುತ್ತೇವೆ.

ಈ ಪುರಾಣವು ಕಲಬುರ್ಗಿಯಲ್ಲಿ ಪ್ರಪ್ರಥಮವಾಗಿ ಪ್ರಕಟಿತವಾದ ಬೃಹತ್ ಗ್ರಂಥವಾಗಿದೆ. ಭಕ್ತಿ-ಶ್ರದ್ಧೆ ಈ ಮೂಲಕ ಅಲ್ಪ ಸಮಯಾವಕಾಶದಲ್ಲಿಯೇ ಈ ಗ್ರಂಥವನ್ನು ಶಾರದಾ ಪ್ರಿಂಟಿಂಗ ಪ್ರೆಸ್ಸಿನ ಒಡೆಯರಾದ **ಶ್ರೀ ವ್ಹಿ. ಸಿ. ಹಡಗಲಿಮಠ, ಬಿ. ಎ.** ಹಾಗೂ ಅವರ ಸಹೋದರ **ಶ್ರೀ ಚಂದ್ರಶೇಖರ** ಇವರು ಅಂದವಾಗಿ ಮುದ್ರಿಸಿ ಕೊಟ್ಟಿದ್ದಾರೆ. ಈ ರೀತಿಯ ಬೃಹತ್ ಕಾವ್ಯ ಕಲಬುರ್ಗಿಯಲ್ಲಿಯೇ ಮುದ್ರಣ ಹೊಂದಿ ಪ್ರಕಟಗೊಳ್ಳುತ್ತಿರುವದು ಗಮನಾರ್ಹ ಸಂಗತಿ. ಈ ಬಗೆಯ ಸ್ತುತ್ಯಾರ್ಹ ಕಾರ್ಯ ನೆರವೇರಿಸಿಕೊಟ್ಟ ಅವರಿಗೆ ಹಾಗೂ ಅವರ ಕೆಲಸಗಾರರಿಗೆ ಶ್ರೀ ಶರಣಬಸವೇಶ್ವರರು ಫಲ ಸಂಪದ ನೀಡಲೆಂದು ಹಾರೈಸುತ್ತೇವೆ.

ಶರಣನಗರ
೮-೩-೧೯೭೬

ಶರಣಬಸವಪ್ಪ ಅಪ್ಪಾ, ಎಂ. ಎ.,
ಶ್ರೀ ಶರಣಬಸವೇಶ್ವರ ಸಂಸ್ಥಾನ,
ಗುಲಬರ್ಗಾ.

ಶ್ರೀ ಶರಣಬಸವೇಶ್ವರ ಪ್ರಸನ್ನ

# ಉಪೋದ್ಘಾತ

ವಿದ್ವದ್ವರೇಣ್ಯರೇ ! ಪಾಠಕ ಮಹಾಶಯರೇ !!

ನಾನು ಮಹಾಮಹಿಮನಾದ ಶ್ರೀ ಶರಣಬಸವೇಶ್ವರನ ಚಿತ್ರಮಹಿಮೆಯನ್ನು ಪುರಾಣರೂಪಕವಾಗಿ
ಬರೆಯಲುಜ್ಜುಗಿಸಿ ಸುಮಾರು ಹನ್ನೆರಡು ವರ್ಷವಾಯಿತು. ಈ ಶರಣನು ಶಿವೈಕ್ಯನಾಗಿ ಇಲ್ಲಿಗೆ ೯೧ ವರ್ಷ
ಗಳಿತವಾಯಿತು. ಅರ್ಧ ಶತಮಾನಕ್ಕೆ ಹಿಂದೆ ಶಿ. ಮೂ. ಮಾವನೂರು ಚನ್ನಬಸವಪ್ಪನವರೆಂಬ ಪೂರ್ವ ಕವಿಗಳು
ಭಾಮಿನಿ ಷಟ್ಪದಿ ರೂಪಕವಾಗಿ ಸುಮಾರು ೧೧ ಪ್ರಭಾವಗಳಿಂದ ಕೂಡಿದ ಗ್ರಂಥವನ್ನು ವಿರಚಿಸಿದರು. ಶರಣನ
ಮಹಿಮೆಗಳು ಇನ್ನು ಅನೇಕವಿರುವವೆಂತಲು, ಅಸದೃಶವಾಗಿರುವವೆಂತಲು, ಕಲಬುರಿಗಿ ಪ್ರಾಂತದವರನೇಕ ಭಕ್ತ
ಮಹೇಶ್ವರರು ನನಗೆ ಹೇಳಿ ನೀನು ಒಂದು ಪುರಾಣವನ್ನು ರಚಿಸೆಂದು ಪ್ರೋತ್ಸಾಹಗೊಳಿಸಿದರು. ನಾನು
ಅಂತಹ ಮಹಿಮಾಧುರೀಣನ ಚರ್ಯೆಯನ್ನು ಬರಿಯುವದಕ್ಕು, ಮತ್ತು ಸರ್ವರಿಂದ ಮಾನ್ಯವಾಗತಕ್ಕ ಕವಿತೆ
ಯನ್ನು ರಚಿಸುವದಕ್ಕು, ಅರ್ಹನಲ್ಲವೆಂದು ಭಾವಿಸಿ ಹಿಂಜರಿದೆನು ಅದೇನು ಕಾರಣದಿಂದಲೋ ಶ್ರೀಶರಣನ
ಅಪಾರ ಪ್ರಭಾವವು ಗ್ರಂಥವನ್ನು ರಚಿಸುವಂತೆ ನನ್ನ ಹೃತ್ಪಟಲದಲ್ಲಿ ಬಿಂಬಿತವಾಯಿತು. ಕೂಡಲೇ ಯತ್ನಿಸಿ
ಅನೇಕ ಜನಗಳಿಂದ ಮಹಿಮೆಗಳನ್ನು ತಿಳಿದುಕೊಂಡು ೫೫ ಪ್ರಭಾವಗಳನ್ನು ಸೇರಿಸಿ ವಾರ್ಧಕ ಷಟ್ಪದಿ ರೂಪಕ
ಮಾಗಿ ಪುರಾಣವನ್ನು ರಚಿಸಿದೆನು. ನನ್ನ ಕವಿತೆಯು ಯೋಗ್ಯವಲ್ಲದಿದ್ದರು, ಕೃತಿಪತಿಯ ಮಹಿಮೆಯು ಸರ್ವ
ಶ್ಲಾಘ್ಯವಾಗಿರುವ ಕಾರಣ ಮಾನ್ಯವಾಗಬಹುದೆಂದು ನಂಬಿ ಗ್ರಂಥವನ್ನು ರಚಿಸಿ ಪ್ರಿಂಟು ಮಾಡಿಸಿದೆನು. ಈ
ಗ್ರಂಥದಲ್ಲಿ ಅನೇಕ ವಿಷಯಗಳು ವ್ಯಾಕರಣಕ್ಕು, ಛಂದೋ ಲಕ್ಷಣಕ್ಕು ವಿರುದ್ಧವಿರಬಹುದು. ನಾನು
ವೈಯ್ಯಾಕರಣಿಯಲ್ಲ ಲಾಕ್ಷಣಿಕ ಕವಿಯಲ್ಲ. ಆದುದರಿಂದ ಕಿಂಚಿತ್ಕಿಂಚಿತ್ ವ್ಯಾಕರಣ ಮತ್ತು ಛಂದೋಸ್ಖಾ
ಲಿತ್ಯಗಳಿರಬಹುದು. ಇದ್ದರು, ಕವೀಶ್ವರರು, ಪಂಡಿತರು, ಪಾಠಕ ಮಹಾಶಯರು, ಮನ್ನಿಸಿ, ಹಂಸಕ್ಷೀರ
ನ್ಯಾಯವಂತೆ ಗ್ರಹಿಸುವಿರೆಂದು ಪ್ರಾರ್ಥಿಸುವೆನು.

ಅನೇಕ ಮಹಿಮೆಗಳನ್ನು ಪರಿಶೀಲನೆಮಾಡಿ, ವಿಚಾರಪೂರ್ವಕ ಬೋಧಿಸಿದ ಶಿ. ಮೂ. ನಂದಿಮಠದ
ಚನ್ನಬಸವಪ್ಪನವರಿಗೆ ಅನವರತವು ಕೃತಜ್ಞನಾಗಿರುವೆನು.

ಸುಧೀವಿಧೇಯ
ಗ್ರಂಥಕರ್ತ
**ಗುರುಲಿಂಗಸಿದ್ಧ ಕವಿ**

# ಸಮರ್ಪಣೆ.

ನನ್ನ ಪೂಜ್ಯ ತಂದೆಯವರಾದ ಗುರುಲಿಂಗಸಿದ್ಧ ಕವಿಗಳಿಂದ ವಿರಚಿತ ವಾದ ಶ್ರೀ ಶರಣಬಸವೇಶ್ವರ ಪುರಾಣವನ್ನು ಸಹೃದಯರು ಓದಲೆಂಬ ಸದು ದ್ದೇಶದಿಂದ ಪ್ರೇರಿತನಾಗಿ ಈ ಕೃತಿ ಪುಷ್ಪವನ್ನು ಶ್ರೀ ಶರಣಬಸವೇಶ್ವರ ಸಂಸ್ಥಾನಾಧಿಪತಿಗಳಾದ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪಾ ಅವರ ಸನ್ನಿಧಾನಕ್ಕೆ ಸಮರ್ಪಿಸಿದ್ದೇನೆ. ಈ ಗ್ರಂಥದ ಸರ್ವಾಧಿಕಾರ ಅವರಿಗೆ ಸೇರಿದುದಾಗಿದೆ.

ವಿಜಯದಶಮಿ
೧-೧೦-೧೯೬೮

ಶರಣ ಸದ್ಭಕ್ತ,
ಶರಣಪ್ಪ ತಡಕಲ್ಲ
ಮಹಾಗಾಂವ (ಜಿ. ಗುಲಬರ್ಗಾ)



ಶ್ರೀ ಶರಣಬಸವೇಶ್ವರರು ಬೆಳಗಿಸಿದ ನಂದಾದೀಪ



ಶ್ರೀ ಶರಣಬಸವೇಶ್ವರರ ಲಿಂಗ ಸಜ್ಜಿಕೆ



ಶ್ರೀ ಶರಣಬಸವೇಶ್ವರರ ಪ್ರಸಾದ ಬಟ್ಟಲು
( ಪರುಷ ಬಟ್ಟಲು )

### ಕಲಬುರ್ಗಿ ಶ್ರೀ ಶರಣಬಸವೇಶ್ವರ ಸಂಸ್ಥಾನದ
### ಅಧಿಪತಿಗಳಾದ

## ಪರಮಪೂಜ್ಯ ಶ್ರೀ ದೊಡ್ಡಪ್ಪ ಅಪ್ಪಾ ಶರಣರ ಸಂಕ್ಷಿಪ್ತ ಪರಿಚಯ

ಪುಣ್ಯಕ್ಷೇತ್ರಗಳ ಮಹಾಬೀಡು, ಅನೇಕ ಧರ್ಮಗಳ ಸ್ಥಾಪನಾಚಾರ್ಯರ ಜನ್ಮಭೂಮಿ ಈ ಕರ್ನಾಟಕ. ಅದರಲ್ಲಿಯೂ ಪ್ರಸಿದ್ಧವಾದ ಕಲಬುರ್ಗಿ–ಕಲ್ಯಾಣನಾಡು ಶರಣ-ಶರಣೆಯರನೇಕರಿಗೆ ಜನ್ಮಸ್ಥಳವಾಗಿದೆ. ಅವರು ತಮ್ಮ ಆಧ್ಯಾತ್ಮಿಕ ಪ್ರಗತಿ ಸಾಧಿಸಿದ್ದು ಇಲ್ಲಿಯೇ. ಶಿವಶರಣರು, ವಚನಕಾರರು ಬಾಳಿ ಬೆಳಗಿದ ಪಾವನಭೂಮಿ ಇದಾಗಿದೆ. ಅವಿಮುಕ್ತ ಕ್ಷೇತ್ರವಾದ ಕಲಬುರ್ಗಿಯಲ್ಲಿಯೇ ತಮ್ಮ ಅಪಾರ ಮಹಿಮೆಗಳನ್ನು ತೋರಿಸಿ, ಕರುಣಾಕರ ಶ್ರೀ ಶರಣಬಸವೇಶ್ವರರು ಮಾನವರ ಇಹ-ಪರ ಕಲ್ಯಾಣಕ್ಕೆ ಹೆಣಗಿದರು; ಜನತೆಯ ಉದ್ಧಾರ ಗೈದರು. ಹಾಗೂ ಬಸವೇಶ್ವರರ ಅಪರಾವತಾರಿಗಳೆಂದು ಪ್ರತೀತಿ ಪಡೆದರು. ಶ್ರೀ ಶಾಲಿವಾಹನ ಶಕೆ ೧೭೪೪ರ ಫಾಲ್ಗುಣ ಬ॥ ಪ್ರತಿಪದೆ (ಕ್ರಿ. ಶ. ೧೮೨೨) ಯಂದು ಲಿಂಗೈಕ್ಯರಾಗುವ ಮುನ್ನ ಶ್ರೀ ಶರಣಬಸವೇಶ್ವರರು ತಮ್ಮ ಉತ್ತರಾಧಿಕಾರಿ ಸ್ಥಾನವನ್ನು ಲಿಂಗೈಕ್ಯ ದೊಡ್ಡಪ್ಪ ಶರಣರಿಗೆ ಒಪ್ಪಿಸಿ, ತಾವು ಕೈಕೊಂಡ ದಾಸೋಹ ಧಾರ್ಮಿಕ ಸತ್ಕಾರ್ಯಗಳನ್ನು ನಿರಂತರವಾಗಿ ಮುಂದುವರಿಸಿಕೊಂಡು ಹೋಗುವಂತೆ ಅನುಗ್ರಹಿಸಿದರು. ಅಂದಿನಿಂದ ಇಂದಿನವರೆಗೂ ಶರಣರ ವಂಶಜರು ಶರಣಬಸವೇಶ್ವರರ ಉತ್ತರಾಧಿಕಾರಿಗಳಾಗಿ ಅವರ ಮಹತ್ಕಾರ್ಯಗಳನ್ನು ಮುಂದುವರಿಸಿಕೊಂಡು ನಡೆದಿದ್ದಾರೆ.

ಲಿಂಗೈಕ್ಯ ದೊಡ್ಡಪ್ಪ ಶರಣರು ಶ್ರೀ ಶರಣಬಸವೇಶ್ವರರ ನಂತರ ಸಂಸ್ಥಾನಾಧಿಪತಿಗಳಾಗಿ ಮೂವತ್ತು ವರ್ಷಗಳವರೆಗೆ ಅವ್ಯಾಹತವಾಗಿ ದಾಸೋಹ, ಧಾರ್ಮಿಕ ಸತ್ಕಾರ್ಯಗಳನ್ನು ಮುಂದುವರಿಸಿಕೊಂಡು ನಡೆದರು. ಅವರ ಕಾಲದಲ್ಲಿಯೇ ಶರಣರ ಸಮಾಧಿಯ ಮೇಲಿನ ದೇವಾಲಯದ ಕಟ್ಟಡದ ಕೆಲಸ ಆರಂಭವಾಯಿತು. ಲಿಂಗೈಕ್ಯ ದೊಡ್ಡಪ್ಪ ಶರಣರ ನಂತರ, ಲಿಂಗೈಕ್ಯ ಶರಣಬಸವಪ್ಪ ಅಪ್ಪಾ (ಹುಚ್ಚಪ್ಪ ಅಪ್ಪಾ) ಅವರು ಶರಣಪೀಠಾಧಿಕಾರ ಹೊಂದಿ ಇಪ್ಪತ್ತೈದು ವರ್ಷಗಳಕಾಲ ಈ ಮಹಾಸನ್ನಿಧಾನದ ಅಧಿಪತಿಗಳಾಗಿ ಮಹತ್ಕಾರ್ಯಗಳನ್ನು ಮುನ್ನಡೆಸಿಕೊಂಡು ಹೋದರು. ಇವರು ದೇಶದ ಮೂಲೆ ಮೂಲೆಗಳಿಂದ ರುವಾರಿಗಳನ್ನು (ಶಿಲ್ಪಿಗಳನ್ನು) ಕರೆಯಿಸಿ, ಶರಣರ ದೇವಾಲಯದ ಗರ್ಭಗುಡಿ, ಗೋಪುರ ಈ ಮೊದಲಾದ ಕಟ್ಟಡದ ಮಹತ್ತರ ಭಾಗಗಳನ್ನು ಪೂರ್ಣಗೊಳಿಸಿದರು. ಅವರ ನಂತರ ಅಧಿಕಾರಕ್ಕೆ ಬಂದ ಲಿಂಗೈಕ್ಯ ಬಸವಣ್ಣೆಪ್ಪ ಅಪ್ಪಾ ಅವರು ಏಳುವರ್ಷಗಳವರೆಗೆ ಈ ಸ್ಥಾನದ ಉತ್ತರಾಧಿಕಾರಿಗಳಾಗಿದ್ದರು. ತರುವಾಯ ಈ ಸ್ಥಾನಾಧಿಪತ್ಯವನ್ನು ನಿರ್ವಹಿಸುವ ಭಾರ ತಳೆದವರು ಲಿಂಗೈಕ್ಯ ಲಿಂಗಬಸವಪ್ಪ ಅಪ್ಪಾ ಅವರು. ಇವರು ಹದಿನೈದು ವರ್ಷಗಳ ಕಾಲ ಶ್ರೀ ಶರಣರ ಮಹಾತ್ಕಾರ್ಯಗಳನ್ನು ಬಿಡದೆ ನಡೆಸಿದರು. ಅವರ ನಂತರ ಲಿಂಗೈಕ್ಯ ಶರಣಬಸವಪ್ಪ ಅಪ್ಪಾ ಅವರು ತಮ್ಮ ಚಿಕ್ಕವಯಸ್ಸಿನಲ್ಲಿಯೇ ಸ್ಥಾನಾಧಿಪತ್ಯವನ್ನು ವಹಿಸಿ, ಅಲ್ಪಕಾಲದಲ್ಲಿಯೇ ಲಿಂಗೈಕ್ಯರಾದರು. ಆ ಬಳಿಕ ಸಂಸ್ಥಾನಾಧಿಪತಿಗಳಾದವರು ಸದ್ಯದ ಅಧಿಪತಿಗಳಾಗಿರುವ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪಾ ಅವರು. ಶ್ರೀಶಾಲಿವಾಹನ ಶಕೆ ೧೮೩೭ರ ಜೇಷ್ಠ ಮಾಸದಲ್ಲಿ ಇವರು ಈ ಸ್ಥಾನದ ಏಳನೆಯ ಉತ್ತರಾಧಿಕಾರಿಗಳಾಗಿ

ಅಧಿಕಾರ ವಹಿಸಿಕೊಂಡರು. ಆಗ ಶ್ರೀ ದೊಡ್ಡಪ್ಪ ಅಪ್ಪಾ ಅವರಿಗೆ ಕೇವಲ ಎಂಟು ವರ್ಷ ವಯಸ್ಸುಮಾತ್ರ. (ಶ್ರೀ ಶಾಲಿವಾಹನ ಶಕೆ ೧೮೧೮, ದುರ್ಮುಖಿನಾಮ ಸಂವತ್ಸರ ಶ್ರಾವಣ ಬ॥ ದಶಮಿಯ ಶುಭದಿನವು ಪೂಜ್ಯ ದೊಡ್ಡಪ್ಪ ಅಪ್ಪಾ ಅವರ ಜನ್ಮದಿನವಾಗಿದೆ.)

ಪವಿತ್ರಾತ್ಮರೂ, ತ್ರಿಕಾಲಪೂಜಾನಿಷ್ಠರೂ, ದಾಸೋಹ ಮೂರ್ತಿಗಳೂ ಆದ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪಾ ಅವರು ಅಷ್ಟಾವರಣ ನಿಷ್ಠರಾಗಿ, ಪಂಚಾಚಾರ ಪರಾಯಣರಾಗಿ, ನಿತ್ಯ ದಾಸೋಹಿಗಳಾಗಿ, ಭಕ್ತಿ, ಜ್ಞಾನ, ಕ್ರಿಯಾಶಕ್ತಿಯನ್ನಳವಡಿಸಿಕೊಂಡು ಲಿಂಗಾಂಗ ಸಾಮರಸ್ಯದಲ್ಲಿ ಬೆರೆತು, ಪರಮ ಸಾತ್ವಿಕ ಮೂರ್ತಿಗಳಾಗಿ ಶ್ರೀ ಶರಣರ ಸ್ಥಲದ ಕೀರ್ತಿ ದೂರ ದೂರದವರೆಗೆ ಹರಡುವಂತೆ ಮಾಡಿದ್ದಾರೆ. ಕಳೆದ ಒಂದೂವರೆ ಶತಕದಿಂದಲೂ ಶರಣರು ಹಚ್ಚಿದ ನಂದಾದೀಪ, ಧರ್ಮಜ್ಯೋತಿಯಾಗಿ ಇಂದಿಗೂ ಬೆಳಗುತ್ತಲಿದೆ. ಆ ಜ್ಯೋತಿಗೆ ಹಣತೆಯಾಗಿ, ಎಣ್ಣೆಯಾಗಿ, ಬತ್ತಿಯಾಗಿ ನಿಂದ ಮಹಾತ್ಮರಲ್ಲಿ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪಾ ಅವರು ಅಗ್ರಗಣ್ಯರು. ಕನ್ನಡ, ಮರಾಠಿ, ಇಂಗ್ಲೀಷ, ಉರ್ದು, ಫಾರಸಿ, ಸಂಸ್ಕೃತ ಈ ಮೊದಲಾದ ಭಾಷೆಗಳಲ್ಲಿ ಪ್ರಾವಿಣ್ಯತೆಯನ್ನು ಪಡೆದವರು ಇವರಾಗಿದ್ದಾರೆ. ದಾಸೋಹಕ್ಕೆ ಅರ್ಪಿತವಾಗದೆ ಪದಾರ್ಥವಾವುದನ್ನೂ ಲಿಂಗಾರ್ಪಿತ ಮಾಡದಿರತಕ್ಕ ಇವರ ಮಹಾವ್ರತವು ದೃಢವಾದ ದಾಸೋಹಂ ಭಾವನೆಯನ್ನು ವ್ಯಕ್ತಗೊಳಿಸುತ್ತದೆ. ಇವರಲ್ಲಿರುವ ಉದಾತ್ತ ವಿಚಾರ, ಧಾರ್ಮಿಕ ಭಾವನೆ, ನಿಸ್ಪೃಹ ವೃತ್ತಿ, ನಿರ್ಮಲಾಂತಃಕರಣ, ನಿಸ್ಸೀಮಭಕ್ತಿ, ಉದಾರಗುಣ, ಪರಧರ್ಮ ಸಹಾನುಭೂತಿ, ಸುಖ-ದುಃಖಗಳೆರಡರಲ್ಲಿಯೂ ಅಚಲವಾಗಿರುವ ಮನೋವೃತ್ತಿ ಈ ಮೊದಲಾದ ಶ್ರೇಷ್ಠ ಗುಣಗಳನ್ನು ಪಡೆದ ಇವರು ಶಿವಭಕ್ತಿಯ ಸಾಕಾರಮೂರ್ತಿಗಳಾಗಿ ಗುರು-ಲಿಂಗ-ಜಂಗಮರ ಆರಾಧಕರಾಗಿದ್ದಾರೆ. ಇವರಲ್ಲಿ ತ್ರಿಕಾಲಪೂಜೆ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣಗಳ ಮುಪ್ಪುರಿಗೆಯಾಗಿದೆ. ಅದು ಲಿಂಗದ ಬೆಳಸಾಗಿ, ಮಹಾಪ್ರಸಾದವಾಗಿ ಇವರು ಪ್ರಸಾದ ಕಾಯರಾಗಿರುವರು. ಇವರಲ್ಲಿ ಅಂಗ ಭಾವವಳಿದಿದೆ; ಲಿಂಗ ಭಾವವುಳಿದಿದೆ. ನಡೆ-ನುಡಿಗಳಲ್ಲಿ, ಆಚಾರ-ವಿಚಾರಗಳಲ್ಲಿ ಉಂಬಲ್ಲಿ, ಉಡುವಲ್ಲಿ, ಕೊಂಬಲ್ಲಿ, ಕೊಡುವಲ್ಲಿ ಶರಣಬಸವೇಶ್ವರರನ್ನೇ ಕಾಣುತ್ತಿರುವ ಮಹೋನ್ನತಿ ಪಡದವರಾಗಿದ್ದಾರೆ. ಶರಣ ಬಸವೇಶ್ವರರೇ ಇವರಾಗಿ, ಇವರೇ ಶರಣಬಸವೇಶ್ವರರಾಗಿ ಇವರು ಶ್ರೀ ಶರಣ ಬಸವೇಶ್ವರರೂ ಸಂದಿಲ್ಲದ ಒಂದಾಗಿ ಭಕ್ತವೃಂದಕ್ಕೆ ತೋರುತ್ತಿರುವ, ಅಸಂಖ ಭಕ್ತವೃಂದವನ್ನು ಉದ್ಧರಿಸುತ್ತಿರುವದನ್ನು ಕಂಡರೆ ಶ್ರೀ ಶರಣಬಸವೇಶ್ವರರ ಅಪರಾವತಾರವೇ ಇವರದಾಗಿದೆಯೆಂದು ಗೋಚರಿಸದೆ ಇರಲಾರದು. ಇಲ್ಲಿ ಸಲ್ಲಿ, ಅಲ್ಲಿ ಸಲ್ಲುವ ಭಾಕ್ತಿಕ ಜೀವನವನ್ನು ಕೈವಿಡಿದವರು ಇವರಾಗಿದ್ದಾರೆ. ಇಹ-ಪರಗಳ ಸುಂದರ ಸಮನ್ವಯವೇ ಇವರ ಜೀವನ. ಇವರಿಗೆ ಬೇಕೆಂಬ ರತಿಯಿಲ್ಲ, ಬೇಡೆಂಬ ವಿರತಿಯಿಲ್ಲ; ಬೇಕು-ಬೇಡೆಂಬ ಭವ ಬೀಜವನ್ನು ಹುರಿದು, ಶರಣ ಸ್ಥಲದಲ್ಲಿ ನಿಂದ ಮಹಿಮರು ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪ ಅವರು.

ಶ್ರೀ ಶರಣರಂತೆ ಇವರೂ ಸಹ ಆದರ್ಶ ಗೃಹಸ್ಥರು. ಪರಮ ಸಾಧ್ವೀಮಣಿ ಸೌ॥ ಗೋದೂತಾಯಿ ಇವರು ಶ್ರೀ ದೊಡ್ಡಪ್ಪ ಅಪ್ಪಾ ಅವರ ಧರ್ಮಪತ್ನಿಯವರು. ಪವಿತ್ರಾತ್ಮರಾದ ಈ ದಂಪತಿಗಳಿಗೆ ಪೂಜ್ಯ ಶ್ರೀ ಶರಣಬಸವಪ್ಪ, ಪೂಜ್ಯ ಶ್ರೀ ಬಸವರಾಜಪ್ಪ ಎಂಬ ಇಬ್ಬರು ಗಂಡುಮಕ್ಕಳೂ, ಕುಂ॥ ಸೌ॥ ರಾದ ಶ್ರೀಮತಿ ಚನ್ನಬಸವಮ್ಮ, ಶ್ರೀಮತಿ ನೀಲಮ್ಮ, ಶ್ರೀಮತಿ ಪಂಚಮ್ಮ ಎಂಬ ಮೂವರು ಹೆಣ್ಣುಮಕ್ಕಳೂ ಇದ್ದಾರೆ. ಇವರೆಲ್ಲರೂ ಸಂಸಾರಿಗಳಾಗಿದ್ದರೂ ಸಹ ಸಂಸಾರ ವಿಷಯದಲ್ಲಿ ಜಲಪತ್ರಪದ್ಮದಂತೆ ನಿರ್ಲೇಪರಾಗಿದ್ದಾರೆ. ನಿರಾಡಂಬರ, ವಿದ್ಯಾ ವಿನಯಶೀಲ ಸಂಪನ್ನರಾದ ಇವರು ಲೌಕಿಕ ಪಾರಮಾರ್ಥಿಕ ಇವೆರಡನ್ನು

ಜಯಿಸಿ, ಮಹೋನ್ನತಿಯನ್ನು ಪಡೆದಿದ್ದಾರೆ. ಶ್ರೀ ದೊಡ್ಡಪ್ಪ ಅಪ್ಪಾ ಅವರ ಹಿರಿಯ ಪುತ್ರರಾದ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪಾ ಅವರು ತತ್ವಜ್ಞಾನ (Philosophy) ದಲ್ಲಿ ಉನ್ನತ ಪದವಿ ಪಡೆದ ಕರ್ನಾಟಕ ವಿಶ್ವವಿದ್ಯಾಲಯದ ಎಂ. ಎ., ಪದವಿಧರರು. ಅಲ್ಲದೆ ಅದೇ ವಿಶ್ವವಿದ್ಯಾಲಯದ ಸೆನೇಟ ಸದಸ್ಯರೂ, "ಕರ್ನಾಟಕ ಭಾರತಿ" ಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯರೂ ಆಗಿದ್ದಾರೆ. ಮಾನವನ ಸರ್ವತೋಮುಖದೇಳ್ಗೆಗಾಗಿ ಹೆಣಗಾಡುವ ಧೀರಸಾಹಸ ತೊಟ್ಟು, ಶ್ರೀ ಶರಣಬಸವೇಶ್ವರ ವಿದ್ಯಾವರ್ಧಕ ಸಂಘದ ಪ್ರಧಾನ ಕಾರ್ಯದರ್ಶಿಗಳಾಗಿಯೂ, "ಶ್ರೀ ಶರಣಬಸವೇಶ್ವರ ಅನುಭವ ಮಂಟಪ" ದ ಅಧ್ಯಕ್ಷರಾಗಿಯೂ, ಹೈದ್ರಾಬಾದ ಕರ್ನಾಟಕ ವೀರಶೈವ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾಗಿಯೂ, "ಜನಸೇವೆಯೇ ಶರಣರ ಸೇವೆ" ಯೆಂದು ಬಗೆದು ತಮ್ಮ ಕಾರ್ಯಕ್ಷೇತ್ರದ ಕುಶಲತೆಯ ವಿಶಾಲತೆಯನ್ನು ಅಭಿವೃದ್ಧಿ ಪಡಿಸುತ್ತಲಿದ್ದಾರೆ. ಹಾಗೂ ಆಧುನಿಕ ಕೃಷಿಕಾಯಕದಲ್ಲಿ ಪಳಗಿದ ಅನುಭವಿಕ ವ್ಯಕ್ತಿಗಳಾಗಿದ್ದಾರೆ.

ಕಿರಿಯರಾದ ಪೂಜ್ಯ ಶ್ರೀ ಬಸವರಾಜಪ್ಪ ಅಪ್ಪಾ ಅವರು ಬಿ. ಎ. ಪದವೀಧರರಿದ್ದು, ಎಲೆ ಮರೆಯ ಹೂವಿನಂತೆ ಹಿರಿಯಣ್ಣನವರ ಜೊತೆಗೆ ಅವರ ಸರ್ವ ಕಾರ್ಯಗಳಲ್ಲಿ ಪ್ರಮುಖ ಸಹಾಯಕರಾಗಿ ತಮ್ಮ ಕುಶಲತೆಯ ಪರಿಮಳವನ್ನು ಬೀರುತ್ತಿದ್ದಾರೆ.

ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪಾ ಅವರು ಅನ್ನದಾಸೋಹದ ಜೊತೆಗೆ, ಜ್ಞಾನ ದಾಸೋಹದ ಕಾರ್ಯವನ್ನೂ ಕೈಕೊಂಡದುದರ ಪ್ರತೀಕವಾಗಿ ಶರಣರ ಮಹದಾಶ್ರಯದಲ್ಲಿ ಆರಂಭವಾದ ಶ್ರೀ ಶರಣಬಸವೇಶ್ವರ ವಿದ್ಯಾವರ್ಧಕ ಸಂಘವು ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪಾ ಅವರ ಘನ ಅಧ್ಯಕ್ಷತೆಯಲ್ಲಿ ಶಿಕ್ಷಣ ಪ್ರಸಾರದಲ್ಲಿ ಮೊದಲಿಟ್ಟ ಹೆಜ್ಜೆಯಂತೆ ಕ್ರಿ. ವ. ೧೯೩೮ ರಲ್ಲಿ ಶ್ರೀ ಶರಣಬಸವೇಶ್ವರ ವಾಚನಾಲಯ ಮತ್ತು ಪುಸ್ತಕ ಭಂಡಾರ ಸ್ಥಾಪಿತವಾಯಿತು. ವಿವಿಧ ಭಾಷೆಗಳ ಸಾವಿರಾರು ಪುಸ್ತಕಗಳಿಂದೊಡಗೂಡಿದ ಸುಸಜ್ಜಿತವಾದ ಪುಸ್ತಕ ಭಂಡಾರ ಆದಾಗಿದೆ. ಕ್ರಿ. ವ. ೧೯೫೪ ರಲ್ಲಿ ದೊಡ್ಡಪ್ಪ ಅಪ್ಪಾ ಅವರು ತಮ್ಮ ಹಿರಿಯ ಮಗಳು ಲಿಂ. ಕು|| ಸೌ|| ಮಹಾದೇವಮ್ಮ ಇವರ ಸ್ಮರಣಾರ್ಥವಾಗಿ ಮಹಾದೇವಿ ಕನ್ಯಾ ಪ್ರೌಢಶಾಲೆಯನ್ನು ಸ್ಥಾಪಿಸಿದರು. ಸ್ತ್ರೀಯರಿಗೂ ಪುರುಷರಷ್ಟೇ ಸರ್ವವಿಧದ ಪರಿಜ್ಞಾನ ದೊರೆಯಬೇಕೆಂಬ ಆಧುನಿಕರ ಅಭಿಮತವನ್ನು ಪೂಜ್ಯ ಅಪ್ಪಾ ಅವರು ಮೂವತ್ತುನಾಲ್ಕು ವರ್ಷಗಳ ಹಿಂದೆಯೇ (ನಿಜಾಮ ರಾಜ್ಯದ ಘೋಷಾ ಪದ್ಧತಿ ಕಾಲದಲ್ಲಿ) ಆಚಾರಕ್ಕೆ ತಂದರು. ಕ್ರಿ. ವ. ೧೯೪೯ ರಲ್ಲಿ ಶ್ರೀ ಶರಣಬಸವೇಶ್ವರ ಪ್ರೌಢಶಾಲೆ ಆರಂಭವಾಯಿತು. ೧೯೫೬ ರಲ್ಲಿ ಶ್ರೀ ಶರಣಬಸವೇಶ್ವರ ಆರ್ಟ್ಸ ಮತ್ತು ಸಾಯಿನ್ಸ ಕಾಲೇಜ ಪ್ರಾರಂಭವಾಗಿ, ಅದು ೧೯೬೭ ರಲ್ಲಿ ಆರ್ಟ್ಸ ಮತ್ತು ಸಾಯಿನ್ಸ ಕಾಲೇಜಗಳೆಂದು ಎರಡು ಪ್ರತ್ಯೇಕ ಪರಿಪೂರ್ಣ ಕಾಲೇಜಗಳಾಗಿ ವಿಭಾಗಗೊಂಡಿತು. ೧೯೬೩ ರಲ್ಲಿ ಶ್ರೀ ಶರಣಬಸವೇಶ್ವರ ಕಾಮರ್ಸ ಕಾಲೇಜು, ೧೯೬೭ ರಲ್ಲಿ ಬಸವಕಲ್ಯಾಣದಲ್ಲಿ ಅಷ್ಟಶತಮಾನೋತ್ಸವದ ನೆನಹಿಗಾಗಿ ಶ್ರೀ ಬಸವೇಶ್ವರರ ಹೆಸರಿನಲ್ಲಿ ಆರ್ಟ್ಸ ಮತ್ತು ಸಾಯಿನ್ಸ ಕಾಲೇಜು, ೧೯೬೭ ರಲ್ಲಿ ಇಂಗ್ಲೀಷ ಮಾಧ್ಯಮದ ಶ್ರೀ ಶರಣಬಸವೇಶ್ವರ ಶಿಶುವಿಹಾರ, ಪ್ರಾಥಮಿಕ ಹಾಗೂ ಪ್ರೌಢಶಾಲೆ, ೧೯೬೮ ರಲ್ಲಿ I. A. S. ಮತ್ತು ಲೋಕಸೇವಾ ಆಯೋಗದ ಪರೀಕ್ಷೆಗಳ ತರಬೇತಿ ಕೇಂದ್ರ ಈ ಮೊದಲಾದ ವಿದ್ಯಾಸಂಸ್ಥೆಗಳು ಇವರ ಸಮರ್ಥ ಅಧ್ಯಕ್ಷತೆಯ ಮಾರ್ಗದರ್ಶನದಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಈ ಎಲ್ಲ ವಿದ್ಯಾಸಂಸ್ಥೆಗಳಿಗೆ ಸಂಘವು ಈ ವರೆಗೆ ರೂ. ೫೦ ಲಕ್ಷದಷ್ಟು ಹಣ ವಿನಿಯೋಗ ಮಾಡಿದೆ. ಈ ಎಲ್ಲ ಸಂಸ್ಥೆಗಳಲ್ಲಿ ಉನ್ನತ ಪದವೀಧರರೂ,

ಅನುಭವಿಕ ಅಧ್ಯಾಪಕ, ಪ್ರಾಧ್ಯಾಪಕರೂ, ಸೇವೆ ಸಲ್ಲಿಸುತ್ತಲಿದ್ದು ಅವರೆಲ್ಲರ ಪ್ರತಿ ತಿಂಗಳ ಸಂಬಳದ ಮೊತ್ತವು ಸುಮಾರು ೭೫ ಸಾವಿರ ರೂಪಾಯಿಗಳಷ್ಟಿದೆ. ಈ ಎಲ್ಲ ಸಂಸ್ಥೆಗಳಲ್ಲಿ ಸುಮಾರು ಐದು ಸಾವಿರಕ್ಕೂ ಅಧಿಕ ಸಂಖ್ಯೆಯಲ್ಲಿ ವಿದ್ಯಾರ್ಥಿ–ವಿದ್ಯಾರ್ಥಿನಿಯರು ಅಭ್ಯಾಸ ಮಾಡುತ್ತಲಿದ್ದಾರೆ.

ಕಾಲೇಜ ಆವರಣದಲ್ಲಿಯೇ ವಿದ್ಯಾರ್ಥಿಗಳ ಸುಸಜ್ಜಿತ ವಸತಿಗೃಹ ಹಾಗೂ ಪ್ರಾಧ್ಯಾಪಕ ನಿಲಯಗಳು ಬೆಳೆದು ನಿಂತಿರುತ್ತವೆ. ಹೀಗಿರುವದು ಶೈಕ್ಷಣಿಕ ಸಹಜೀವನದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಾಗಿದೆ. ಇದಲ್ಲದೆ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪಾ ಅವರ ಆಶೀರ್ವಾದ ಫಲವಾಗಿ ೧೯೬೩ ರಲ್ಲಿ ಪೂಜ್ಯ ಶ್ರೀ ಶರಣಬಸವಪ್ಪ ಅಪ್ಪಾ ಅವರ ಅಧ್ಯಕ್ಷತೆಯಲ್ಲಿ ಆರಂಭವಾದ "ಶ್ರೀ ಶರಣಬಸವೇಶ್ವರ ಅನುಭವ ಮಂಟಪ"ವು ಸಾಹಿತ್ಯ, ಕಲೆ, ಸಂಸ್ಕೃತಿ, ತತ್ವ, ವಿಜ್ಞಾನ, ಧರ್ಮಗಳ ನೈಜಸ್ವರೂಪವನ್ನು ಜನತೆಯಲ್ಲಿ ಬಿತ್ತರಿಸಬೇಕೆಂಬ ಘನೋದ್ದೇಶವನ್ನಿಟ್ಟು ಕೊಂಡು ಬೋಧನೆ, ಗ್ರಂಥ ಪ್ರಕಟನೆ, ವಿದ್ವನ್ಮಣಿಗಳ ಉಪನ್ಯಾಸ, ಗ್ರಂಥ ಸಂಶೋಧನೆ, ಈ ಮೊದಲಾದ ಕಾರ್ಯಗಳಲ್ಲಿ ಪ್ರಮುಖ ಪಾತ್ರವಾಡುತ್ತಿದೆ. ಈ ಸಂಸ್ಥೆಯ ಮುಖಾಂತರ ಕನ್ನಡ ಹಾಗೂ ಇಂಗ್ಲೀಷ ಭಾಷೆ ಗಳಲ್ಲಿ ಸಾಹಿತ್ಯಕ, ಸಾಂಸ್ಕೃತಿಕ, ಆಧ್ಯಾತ್ಮಿಕ ವಿಷಯಗಳನ್ನೊಳಗೊಂಡ ಪರೀಕ್ಷೆಗಳು ನಡೆಯುತ್ತಿದ್ದು ಪ್ರತಿವರ್ಷ ಸುಮಾರು ಎರಡು ಸಾವಿರಕ್ಕೆ ಮೇಲ್ಪಟ್ಟು ವಿದ್ಯಾರ್ಥಿ-ವಿದ್ಯಾರ್ಥಿನಿಯರು ಇದರ ಸದುಪಯೋಗ ಪಡೆಯುತ್ತಿದ್ದಾರೆ. ವಿದ್ಯಾರ್ಥಿಗಳಿಗೆ ಶಾಲೆ–ಕಾಲೇಜುಗಳ ಪಠ್ಯಕ್ರಮದ ಜೊತೆಗೆ ಸಾಹಿತ್ಯ, ಸಂಸ್ಕೃತಿ ಹಾಗೂ ಧಾರ್ಮಿಕ ತಿಳುವಳಿಕೆ ನೀಡುವ ಘನ ಉದ್ದೇಶವನ್ನು ಇದು ಹೊಂದಿರುತ್ತದೆ. ಅಲ್ಲದೆ, ಶ್ರೀ ಶರಣರ ಜಾತ್ರೆಯ ಸಮಯದಲ್ಲಿ ಪ್ರಮುಖ ವಿದ್ವಾಂಸರ ಉಪನ್ಯಾಸಗಳೂ ನಡೆಯುತ್ತಲಿವೆ. ಇವೆಲ್ಲವುಗಳ ಜೊತೆಗೆ ಶ್ರೀ ಶರಣಬಸವೇಶ್ವರ ಸಂಸ್ಥೆಯು ಗ್ರಂಥ ಪ್ರಕಟನೆಯ ಕಾರ್ಯವನ್ನು ಕೈಗೆತ್ತಿಕೊಂಡಿದೆ.

ಸುಮಾರು ನೂರು ವರ್ಷಗಳ ಹಿಂದೆ ಆರಂಭವಾದ ಶ್ರೀ ಶರಣರ ಸಮಾಧಿಯ ಮೇಲಿನ ದೇವಾಲಯ ಕಟ್ಟಡವು ಈಗಿನ ಅಧಿಪತಿಗಳಾದ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪಾ ಅವರ ಅಧಿಕಾರಾವಧಿಯ ಆರಂಭದಲ್ಲಿ ಪೂರ್ತಿ ಗೊಂಡಿತು. ಅಲ್ಲದೆ ಇವರಿಂದಲೇ ಸಂಸ್ಥಾನದ ನೂತನ ವಿಶಾಲವಾದ ದಾಸೋಹಮನೆ ಕಟ್ಟಿಸಲ್ಪಟ್ಟಿತು. ಪ್ರತಿನಿತ್ಯ ಈ ದಾಸೋಹದಲ್ಲಿ ನೂರಾರು ಬಡ ವಿದ್ಯಾರ್ಥಿಗಳು ಹಾಗೂ ಯಾತ್ರಾರ್ಥಿಗಳಾಗಿ ಬಂದ ಸದ್ಭಕ್ತರೂ ಪ್ರಸಾದ ಸೇವಿಸಿ ಪುನೀತರಾಗುತ್ತಿದ್ದಾರೆ. ಶ್ರಾವಣ ಮಾಸದಲ್ಲಿ ಪ್ರತಿನಿತ್ಯ ಸಾವಿರಾರು ಜನರು ಈ ದಾಸೋಹದಲ್ಲಿ ಶರಣ ಪ್ರಸಾದ ಸ್ವೀಕರಿಸಿ ಧನ್ಯರಾಗುತ್ತಿದ್ದಾರೆ. ಕೇವಲ ೧೪ ವರ್ಷಗಳಲ್ಲಿ ಈ ಎಲ್ಲ ಪ್ರಗತಿ ಹೊಂದಿದ ಈ ಸಂಸ್ಥಾನ, ಜಗದ್ವಿಖ್ಯಾತಿ ಪಡೆದ ಶ್ರೀ ಶರಣರ ದೇವಸ್ಥಾನ ಪ್ರತಿನಿತ್ಯ ನಾಡಿನ ವಿವಿಧ ಭಾಗಗಳಿಂದ ಆಗಮಿಸಿ ದರ್ಶನಾಶೀರ್ವಾದ ಪಡೆದು ಆತ್ಮೋನ್ನತಿ ಹೊಂದುವ ಪವಿತ್ರ ಯಾತ್ರಾ ಸ್ಥಾನಗಳಾಗಿವೆ.

ಪೂಜ್ಯ ಶ್ರೀ ದೊಡ್ಡಪ್ಪ ಅವರ ಅಂತರಂಗದಲ್ಲಿ ನಡೆದ ತ್ರಿವಿಧ ದಾಸೋಹ ಬಹಿರಂಗದಲ್ಲಿ ಪ್ರಕಟ ವಾಗಿದೆ. ಇವರು ನಿತ್ಯ ನಡೆಸುತ್ತಿರುವ ಪ್ರಸಾದ ವಿತರಣೆ ಅನ್ನದಾನದ ಉನ್ನತ ಆದರ್ಶ, ಇವರ ಉದಾರ ದಾನದಿಂದ ನಡೆಯುತ್ತಿರುವ ಶಿಕ್ಷಣ ಸಂಸ್ಥೆಗಳು ವಿದ್ಯಾದಾನದ ಪರಮಾದರ್ಶ. ಸಕಲ ಜೀವಾತ್ಮರಿಗೆ ಲೇಸನೇ ಬಯಸಿ ಇವರು ಮಾಡುವ ಆಶೀರ್ವಾದ ಧರ್ಮದಾನದ ದಿವ್ಯಾದರ್ಶ.

ಶರಣನಗರ
೧-೩-೧೯೬೭

ಆರ್. ಎಲ್. ಬಡಿಗೇರ, ಬಿ. ಎ.,
ಅಧ್ಯಾಪಕ
ಶ್ರೀ ಶರಣಬಸವೇಶ್ವರ ಪ್ರೌಢಶಾಲೆ, ಗುಲಬರ್ಗಾ.



ಮ ಹಾ ಮ ನೆ



ದಾಸೋಹಮನೆ

## ಕವಿ, ಕಾವ್ಯ ಪರಿಚಯ

# 'ಕವಿತಿಲಕ' ಗುರುಲಿಂಗಸಿದ್ಧ ಕವಿಗಳು

**ಪರಂಪರೆ:—** ನಾಡಿನ ಘನ ಪುಣ್ಯದಿಂದ ಸಾಧು ಸತ್ಪುರುಷರು, ಕವಿಗಳು, ಪ್ರತಿಭಾಸಂಪನ್ನರು, ಯೋಗಿ, ತ್ಯಾಗಿಗಳು ಉದ್ಭವಿಸುವರು. ಈ ಮಾತನ್ನು ಅಲ್ಲಗಳೆಯುವಂತಿಲ್ಲ. ಇದಕ್ಕೆ ನಿದರ್ಶನವೆಂದು ಎಲ್ಲ ನಾಡುಗಳಲ್ಲಿ ಕಾಲ, ಕಾಲಕ್ಕೆ ಕವಿಗಳು, ಮಹಾಪುರುಷರು ಜನಿಸಿದ್ದಾರೆ. ನಮ್ಮ ನಾಡೂ ಇದಕ್ಕೆ ಅಪವಾದ ವಾಗಿಲ್ಲ. ಸಂತರಿಗೆ, ಶರಣರಿಗೆ, ಕವಿಗಳಿಗೆ ಜನ್ಮಕೊಟ್ಟ ಭಾಗ್ಯ ನಮ್ಮ ನಾಡಿನದಾಗಿದೆ. ಪ್ರತಿಭಾಸಂಪನ್ನರಿಗೆ ಇಲ್ಲಿ ಕೊರತೆಯಿಲ್ಲ. ಇಂತಹ ನಮ್ಮ ನಾಡು ಬಿಡುಗಣ್ಣರ ಬೀಡಾಗಿದೆ. "ನಾನು ಬರಡಲ್ಲ" ಎಂಬುದನ್ನು ಸಾರಿಹೇಳುತ್ತಿದೆ. ಇಂಥ ಭವ್ಯ ಪರಂಪರೆ ನಮ್ಮ ನಾಡಿಗಿದೆ. ಕವಿನಾಡಿನ ಚೇತನ ಸಂಪತ್ತು, ಈ ಐಶ್ವರ್ಯ ವನ್ನು ಕಾಪಾಡುವದು, ಬೆಳಗಿಸುವದು, ನಾಡವರ ಪವಿತ್ರ ಕರ್ತವ್ಯ.

**ಜನನ, ಬಾಲ್ಯ:—** ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಆಗಿ ಹೋದ ಕವಿಶ್ರೇಷ್ಠರೊಳಗೆ, ಗುರುಲಿಂಗಸಿದ್ಧ ಕವಿಗಳು ಒಬ್ಬರು ಮನೋಜ್ಞವಾದ ನಾಡು ಕರ್ನಾಟಕ. ಅಲ್ಲಿಯ ಪ್ರದೇಶಗಳಲ್ಲೆಲ್ಲ ಮಿಗಿಲೆಂದೆ ನ್ನಿಸಿ ಮೆರೆಯುವಕಲ್ಯಾಣ ಕಲಬುರ್ಗಿ ಮಧ್ಯ ಪ್ರಾಂತದಲ್ಲಿರುವ, ವರಪುರವೆಂಬ ನಾಮವನ್ನುಳ್ಳ ಮಹಾಗಾಂವಿ "ಕವಿತಿಲಕರು" ಹುಟ್ಟಿದಊರು. ಮಹಾಗಾಂವಿ ರಾಜಕಾರಣಿಗಳಿಂದ, ಪಂಚಾಂಗಕರ್ತರಿಂದ, ಕವಿಗಳಿಂದ ಇಂದಿಗೂ ಹೆಸರುವಾಸಿಯಾಗಿದೆ. ಈ ಗ್ರಾಮದ ಪ್ರಸಿದ್ಧ ಮನೆತನಗಳಲ್ಲಿ "ತಡಕಲ್ಲ" ಅವರದೊಂದು. ತಡಕಲ್ಲ ವಂಶದವರು ಸಚ್ಚಾರಿತ್ರ ಸಂಪನ್ನರು, ಲಿಂಗನಿಷ್ಠಾಪರರು, ಜಂಗಮ ಪ್ರಾಣಿಗಳು. ಗುರುಲಿಂಗ ಕವಿಗಳು ಅದೇ ಮನೆತನ ದವರು. ಶಿವಾಚಾರ ಸಂಪನ್ನನಾದ ಶಿವಲಿಂಗಪ್ಪ ಆ ಮನೆತನದ ಹಿರಿಯ, ಕವಿಗಳ ಅಜ್ಜ. ಉದಾರಮತಿ ಯಾದ ಸಿದ್ದಪ್ಪ ಕವಿಗಳ ತಂದೆ. ಸಾಧ್ವಿ ವೀರಮ್ಮ, ಕವಿವರ್ಯರ ತಾಯಿ. ನಿರ್ಮಲಚರಿತರಾದ ದಂಪತಿಗಳ ಹೊಟ್ಟೆಯಲ್ಲಿ ಕ್ಷೀರಾಂಭುನಿಧಿಗೆ ಚಂದ್ರನಂತೆ, ಕವಿತಿಲಕ, ಗಂಭೀರಮತಿ, ಗುರುಲಿಂಗಸಿದ್ಧ ಕವಿಗಳು ಕ್ರಿ. ಶ. ೧೮೮೦ನೆಯ ಮೇ, ಐದನೆಯ ದಿನಾಂಕ ಜನಿಸಿದರು. ಶಿವಲಿಂಗೇಶ್ವರರು ಕವಿಗಳ ಮನೆದೇವರು. ಕಡಗಂಚಿ ಹಿರೆಮಠದ ಶಾಂತೇಶದೇವರು ಕವಿಗಳ ಪರಮ ಗುರುಗಳು. ಇವರ ಕರಜಾತರಾದ ತಡಕಲ್ಲ ಗ್ರಾಮ ಹಿರೆಮಠದ ರೇವಣಾರ್ಯರು ಕುಲಗುರುಗಳು. ಗಡವಂತಿ ಹಿರೆಮಠದ ಪಟ್ಟಚರ ವರದೇವರು. ಭಕ್ತರ ಪಾಪವೆಂಬ ಅರಣ್ಯಕ್ಕೆ ಅಗ್ನಿಯೋಪಾದಿಯಾದ ಬಸವಣಾರ್ಯರು ಕವಿಗಳ ಕ್ರಿಯಾಗುರುಗಳು.

**ವಿದ್ಯಾಭ್ಯಾಸ:—** ಶೈಶವ ಕಳೆದ ಬಳಿಕ ಆಗಿನ ಪದ್ಧತಿಯಂತೆ ಕವಿಗಳು ಬಾಲ್ಯದಲ್ಲಿ ಮಹಾಗಾಂವದ ಮಠದಲ್ಲಿಯೇ ಅಭ್ಯಾಸಕ್ಕೆ ನಿಂತರು. ಪ್ರಾಚೀನ ಕಾವ್ಯಸಾಗರದಲ್ಲಿ ಈಜಾಡುವ ಹಂಬಲ ಕವಿಗೆ. ಆದರೆ ಅಲ್ಲಿ ಅದಕ್ಕೆ ಅನುಕೂಲ ಪರಿಸರವಿದ್ದಿಲ್ಲ. ಹಾಗೂ ಹೀಗೂ ಹದಿನೆಂಟು ವರುಷಗಳು ಸಂದವು. ಹರಸೂರ ಗ್ರಾಮದ

ತಿಲಕೂರ ಶ್ರೀ. ರುದ್ರಮುನಿಯಪ್ಪ, ಪುರಾಣ ಹೇಳುವದರಲ್ಲಿ ಎತ್ತಿದ ಕೈಯವರು. ಇವರು ವೀರಶೈವ ಸಾಹಿತ್ಯದ ಪರಿಚಯವುಳ್ಳವರು. ತಮ್ಮ ಮನದ ಬಯಕೆ ಈಡೇರಿಸಿಕೊಳ್ಳಲು ಅವರನ್ನು ಗುರುಲಿಂಗ ಕವಿಗಳು ಕರೆಸಿಕೊಂಡು ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಪ್ರೌಢ ವ್ಯಾಸಂಗಕ್ಕೆ ತೊಡಗಿದರು. ಅಲ್ಲದೆ, ಆ ಕಾಲದ ಪಂಡಿತೋತ್ತಮರನ್ನು ಕಂಡು ತಮ್ಮ ಸಾಹಿತ್ಯ ತೃಷೆಯನ್ನು ನೀಗಿಸಿಕೊಳ್ಳಲು ಪ್ರಾರಂಭಿಸಿದರು. ಜ್ಞಾನ ವೃದ್ಧರ ಸೇವೆಗೈದರು. ಸತತ ಅಭ್ಯಾಸ ನಿಲ್ಲಿಸಲಿಲ್ಲ. ಸ್ವಗ್ರಾಮದಲ್ಲಿಯ ಸಾವಳಿಗೆ ಶಿವಲಿಂಗೇಶ್ವರ ಮಠದಲ್ಲಿ ಕೆಲದಿನ ಉಳಿದು ಅನುಷ್ಠಾನ ಕೈಕೊಂಡರು. ಯೋಗ ಶಾಸ್ತ್ರದ ಪರಿಚಯವನ್ನು ಮಾಡಿಕೊಂಡರು. ಶ್ರೀ ಸ್ವಾಮಿಗಳವರ ಅನುಗ್ರಹಕ್ಕೆ ಪಾತ್ರರಾದರು. ವೀರಶೈವ ಕವಿಪುಂಗವರ, ಕೃತಿಪುಷ್ಪಗಳ ಪರಿಮಳ ಮುಡಿದು ಕೊಂಡರು. ಮಹಾಕವಿ, ಶಿವಕವಿ, ಹರಿಹರದೇವ (ಕ್ರಿ. ಶ. ೧೨೦೬) ರ ರಗಳೆಗಳನ್ನು ಓದಿದರು. ಜನ ಬಯಕ ಬೇಕೆಂದು ಕಾವ್ಯ ಬರೆದ ರಾಘವಾಂಕನ (ಕ್ರಿ. ಶ. ೧೨೨೫) ಸೋಮನಾಥ ಚರಿತೆ, ಸಿದ್ಧರಾಮ ಪುರಾಣ, ವೀರೇಶ ಚರಿತೆ, ಹರಿಶ್ಚಂದ್ರ ಕಾವ್ಯಗಳ ನಿಕಟ ಪರಿಚಯ ಹೊಂದಿದರು. ಚಾಮರಸ (ಕ್ರಿ. ಶ. ೧೪೩೦) ವಿರೂಪಾಕ್ಷ ಪಂಡಿತ (ಕ್ರಿ. ಶ. ೧೫೮೪) ಷಡಕ್ಷರದೇವ (ಕ್ರಿ. ಶ. ೧೬೫೫) ಸುರಂಗಕವಿ (ಕ್ರಿ. ಶ. ೧೮೫೦) ಗುಬ್ಬಿ ಮಲ್ಲಣಾರ್ಯರ ಅತ್ಯಮೂಲ್ಯ ಕೃತಿಗಳನ್ನೆಲ್ಲ ಓದಿ ಅವುಗಳ ರಸಸ್ವಾದನೆಯನ್ನು ಸವಿದರು; ಸುಖಿಸಿದರು. ಕುಮಾರವ್ಯಾಸನ (ಕ್ರಿ. ಶ. ೧೪೩೦) ಕನ್ನಡ ಭಾರತ, ಲಕ್ಷ್ಮೀಶ ಕವಿಯ (೧೭೦೦) ಜೈಮಿನಿ ಭಾರತಗಳ ಸೊಗಸಿಗೆ ಮನಸೋತರು. "ಪ್ರತಿಭೆಯುಂ, ಅಭ್ಯಾಸಮುಂ, ವಿದ್ವತ್‌ಸೇವೆಯುಂ, ಕಾವ್ಯ ಪರಿಚಯಮುಮುಂ, ಕವಿತೆಗೆ ಕಾರಣಂ" (ಕೇಶಿರಾಜ) "ಪ್ರತಿಭಾಸಂ ಕಾವ್ಯವಿದ್ಯಾ ಪ್ರಚಯ ಪರಿಚಯಂ, ವೃದ್ಧಸೇವಾನುರಾಗಂ, ಸತತಾಭ್ಯಾಸ ಪ್ರಯತ್ನಂ, ಕವಿತೆಗೆ ನಿಯತಂ ಕಾರಣಂ (ಕಾವ್ಯಾಲೋಕನ) ಇಷ್ಟೆಲ್ಲವನ್ನು ಪಡೆದ ಗುರುಲಿಂಗ ಸಿದ್ಧರಿಗೆ ಕಾವ್ಯ ರಚಿಸುವದು ಕಷ್ಟವಾಗಲಿಲ್ಲ, ಸುಲಭವಾಯಿತು. ಪುಕ್ಕಳು ಪೆಪ್ಪರುಮೆಂಟ ಚಪ್ಪರಿಸಿದಂತೆ.

**ರಚಿತ ಕೃತಿಗಳು:—** ಸಂತತ ಅಭ್ಯಾಸ ಪ್ರತಿಭೆ, ವೃದ್ಧರಸೇವೆ, ಪ್ರಸನ್ನಚಿತ್ತ ಕವಿತೆ ರಚಿಸಲು ಬೇಕಾದುವೆಂದು ತಿಳಿದವರಾದರೂ "ನವಕವಿತಾ ಚಿಂತಾರತ್ನಂ ದೊರೆಗುಮೆ ಪುರಾರಿಯ ಕೃಪೆಯಿಲ್ಲದಂಗೆ ಧರಣೀ ತಳದೊಳ್" ಎಂಬ ಷಡಕ್ಷರದೇವನ ನುಡಿಯಲ್ಲಿ ಅಪಾರ ನಂಬಿಗೆಯುಳ್ಳವರು. ಅಂತೆಯೇ "ಅಪಾರ ಕಲೆಗಳು, ಕಲಿಯದಲೆ ಬಂದು ಕೈಗೂಡಿದವು ಶಿವ ಕರುಣೆಯಿಂದ" ಎಂಬ ನುಡಿಯನ್ನು ಒತ್ತಿ ಹೇಳಿದ್ದಾರೆ ಶರಣಬಸವೇಶ್ವರ ಪುರಾಣದಲ್ಲಿ. ಶಿವನ ಕೃಪೆಯಿಂದ ಕಾವ್ಯಶಕ್ತಿ ಉಂಟಾಯಿತೆಂಬುವದರಲ್ಲಿ ದೃಢವಿಶ್ವಾಸ ಅವರಿಗೆ. ಈ ನಂಬುಗೆಯೇ ಹಲವಾರು ಕೃತಿಗಳನ್ನು ರಚಿಸುವಂತೆ ಮಾಡಿತು.

I (1) ಶ್ರೀ ಶರಣಬಸವೇಶ್ವರ ಪುರಾಣ (ಕಾವ್ಯ) 1911 ಕ್ರಿ. ಶ.

II. (1) ಮಹಾತ್ಮ ಶ್ರೀ ಬಸವೇಶ್ವರರು
(2) ಶ್ರೀ ರೇಣುಕಾಚಾರ್ಯರು
(3) ಪದ್ಮಾವತಿ ಪರಿಣಯ
} ನವರಸಭರಿತ ನಾಟಕಗಳು. ಕಾಲ ಸುಮಾರು 1923.

III. (1) ನವಮುಗ್ಧರ ಕೀರ್ತನ ತರಂಗಿಣಿ.
(2) ವೀರಶೈವ ಸಭಾ ಕಂಠಮಾಲೆ.

(3) ಬಾಲಿಕೆಯರ ಹಾಡು. [ನೀತಿ ಪುಸ್ತಕ]

(4) ಭಜನಾವಳಿಗಳು. [ಭಕ್ತಿ ಗೀತೆಗಳು]

IV. (1) ಶರಣಬಸವೇಶ್ವರರ ಮಹಿಮಾದರ್ಶನ.

ಮುಂತಾದ ಗ್ರಂಥಗಳನ್ನು ಬರೆದರು. ಇಂದು ಶ್ರೀ ಶರಣಬಸವೇಶ್ವರ ಪುರಾಣದ ಹೊರತಾಗಿ, ಇನ್ನುಳಿದ ಯಾವ ಗ್ರಂಥಗಳೂ ಸಿಗಲಾರದ್ದು ಕನ್ನಡ ಸಾಹಿತ್ಯಕ್ಕೆ ಹಾನಿಯೆಂದೇ ಹೇಳಬಹುದು. ಶಿವ ಕವಿಗಳ ಗಾಢವಾದ ಪ್ರಭಾವ ಇವರ ಮೇಲೆ ಬಹುವಾಗಿದೆ. ಅದರಲ್ಲಿಯೂ ರಾಘವಾಂಕ, ವಿರೂಪಾಕ್ಷ ಪಂಡಿತರ ಪ್ರತಿಭೆಗೆ ಕವಿಗಳು ಮುಗ್ಧರಾದಂತೆ ತೋರುತ್ತದೆ.

ಸನ್ಮಾನ:— ಸಾಹಿತ್ಯ ಸೇವೆಗೈದವರಿಗೆ ಗೌರವಿಸಲು ಸಹೃದಯರು ಯಾವಾಗಲೂ ಹಿಂದುಳಿದಿಲ್ಲ. ಕವಿಯ ಪರಿಚಯು ಸಾಮಾನ್ಯರಿಗೆಲ್ಲ ಆಗಬೇಕೆಂದು ಕವಿ ಕೃತಿಯನ್ನು ಸರ್ವರೂ ಓದುವಂತಾಗಲೆಂಬ ಸದುದ್ದೇಶ ದಿಂದ ಪ್ರೇರಿತರಾಗಿ ಅಭಿಮಾನಿಗಳು ಕವಿಗೆ ಗೌರವಿಸಲು ಏರ್ಪಡಿಸಿದರು. ಕವಿ ಮುಖಾಂತರ ಕೃತಿಗೆ ಪೂಜೆ ಸಲ್ಲಿಸಲು ಮುಂದೆ ಬಂದರು. ಕ್ರಿ. ಶ. ೧೯೨೧ ರಲ್ಲಿ ಚಿಟಗುಪ್ಪ ತಾಲೂಕಿನ, ಇಟಗಿಯೊಳಗೆ ಕವಿಭಕ್ತರ ದೊಡ್ಡ ಸಭೆ ನೆರೆಯಿತು. ನಿರ್ಮಲ ದೇಶಮುಖರು ಅಧ್ಯಕ್ಷತೆ ವಹಿಸಿದರು. ಹೈಕೋರ್ಟಿನ ಪ್ರಸಿದ್ಧ ವಕೀಲರಾದ ಕೀರ್ತಿಶೇಷ ಬಾಳಾರಾವ ಹಾಗು ಇನ್ನಿತರರ ನೇತೃತ್ವದಲ್ಲಿ ಕವಿಗಳಿಗೆ ಕವಿತಿಲಕನೆಂಬ ಪದವಿಕೊಟ್ಟು ಮರ್ಯಾದೆ ಸಲ್ಲಿಸಿದ್ದಲ್ಲದೆ ತಮ್ಮನ್ನೂ ಗೌರವಿಸಿಕೊಂಡರು.

ಕವಿಗಳಿಗೆ ನಾಲ್ಕು ಜನ ಗಂಡುಮಕ್ಕಳು, ಒಬ್ಬಾಕೆ ಮಗಳು. ಗಂಡುಮಕ್ಕಳಲ್ಲಿ ಇಬ್ಬರು ಬದುಕಿ ಇದ್ದಾರೆ. ಇವರಲ್ಲಿ ಶ್ರೀ ಶರಣಪ್ಪನವರು ಏಕಪಾಠಿಗಳು. ತಂದೆಯ ಕಾವ್ಯವನ್ನು ಗ್ರಂಥದ ಸಹಾಯವಿಲ್ಲದೆ ನಿರರ್ಗಳವಾಗಿ ಹೇಳುವ ಸಾಮರ್ಥ್ಯ ಪಡೆದಿದ್ದಾರೆ. ಶಿಕ್ಷಕ ವೃತ್ತಿಯಿಂದ ನಿವೃತ್ತರಾಗಿದ್ದಾರೆ. ಕವಿವರ್ಯರ ಮಗಳು ಶ್ರೀಮತಿ ವೀರಮ್ಮನವರು ಮಹಾಗಾಂವದ ಪ್ರಸಿದ್ಧ ಮನೆತನವಾದ ಪಾಟೀಲ, ಶ್ರೀ. ಸಂಗನಗೌಡರ ಧರ್ಮಪತ್ನಿಯು. ಶ್ರೇಷ್ಠ ರಾಜಕಾರಣಿ ದಿವಂಗತ ಚಂದ್ರಶೇಖರ ಪಾಟೀಲರ ತಾಯಿ. ಶ್ರೀ. ನೀಲಕಂಠ ಪಾಟೀಲ, B. A., L L. B., M. L. A. ಶ್ರೀ. ರುದ್ರಶೆಟ್ಟಿ ಪಾಟೀಲರು ಆ ಸಾಧ್ವಿಯ ಇನ್ನುಳಿದ ಇಬ್ಬರು ಮಕ್ಕಳು. ಕವಿಗಳಿಗೆ ಅಂತ್ಯಕಾಲದಲ್ಲಿ ಜಾಡ್ಯ ತಲೆದೋರಿತು. ತಮ್ಮ ಅವಸಾನಕಾಲ ಸಮೀಪಿಸಿದ್ದನ್ನು ಮೊದಲೇ ತಿಳಿದ ಅವರು ತಮ್ಮ ಹಿರಿಯಮಗ ಶಿವಲಿಂಗಪ್ಪನನ್ನು ಕರೆದು ಕ್ರಿಯಾಮೂರ್ತಿಗಳಿಗೆ ಊರಲ್ಲಿಯೇ ಇರಲು ತಿಳಿಸಲು ಹೇಳಿದರು. ಇದಾದ ಮೂರೇ ದಿನಗಳಲ್ಲಿ ಶ್ರೀಶಕೆ ೧೮೫೦ ವಿಭವನಾಮ ಸಂವತ್ಸರ ಕಾರ್ತಿಕ ಬ॥ ಸಪ್ತಮಿ ಸೋಮವಾರ ರಾತ್ರಿ ಹತ್ತು ಗಂಟೆಗೆ (ಕ್ರಿ. ಶ. ೩-೧೨-೧೯೨೮) ಶಿವೈಕ್ಯರಾದರು. ಕವಿಗಳ ಗದ್ದುಗೆ ಮಹಾಗಾಂವದ ಕಳ್ಳಿಮಠದಲ್ಲಿದೆ.

ಕವಿ ವ್ಯಕ್ತಿತ್ವ: ಭಕ್ತಕವಿಗಳ ಪರಂಪರೆಗೆ ಸೇರಿದವರು. ಕವಿಗಳುಶಿವಕವಿಗಳನ್ನು ಹೃದಯತುಂಬಿ ಹಾಡಿದ್ದಾರೆ. ವೀರಶೈವ ಕವಿಗಳಿಗೆ ಮಾರ್ಗದರ್ಶಕನಾದ ಹಿರಿಯಕವಿ, ಹರಿಹರದೇವನು ಹಾಕಿಕೊಟ್ಟ ಮಾರ್ಗದಲ್ಲಿಯೇ ಮುನ್ನಡೆವರು ಗುರುಲಿಂಗ ಕವಿಗಳು. ಅಂತೆಯೆ ಅವರ ಕೃತಿಗೆ ವಸ್ತು, "ಶೀಲ ಸಂಪನ್ನ" ಶರಣನ

ಚರಿತೆಯೇ ಆಯಿತು. ಶರಣರ ಬಗ್ಗೆ ಅಪಾರ ಭಕ್ತಿಯನ್ನು, ಶ್ರದ್ಧೆಯನ್ನು ಇಟ್ಟುಕೊಂಡವರು. ಮಾವನೂರ ಕವಿ ಚನ್ನಬಸವರು ಶರಣರ ಚರಿತ್ರೆಯನ್ನು ಬರೆದಿದ್ದರೂ ಶರಣರಲ್ಲಿದ್ದ ಶ್ರದ್ಧೆ ಇವರಿಗೆ ಇನ್ನೊಂದು ಪುರಾಣ ರಚಿಸಲು ಕಾರಣವಾಯಿತು. ಶರಣಬಸವೇಶ್ವರ ಪುರಾಣವು ೨೦ನೆಯ ಶತಮಾನದ ಬೃಹತ್ ಕಾವ್ಯಗಳಲ್ಲಿ ಮೊದಲನೆಯದು (ಕ್ರಿ. ಶ. ೧೯೧೧) ಜಂಗಮ ಪ್ರಾಣಿಗಳು, ಲಿಂಗನಿಷ್ಠಾಪರರು, ದಯಾಳುಗಳೂ ಸದಾಚಾರ ಸಂಪನ್ನರೂ ಆಗಿದ್ದರು. ಕವಿ ವಿನಯಶೀಲತೆ ಅವರ ಮತ್ತೊಂದು ಮುಖ್ಯಗುಣ. ಶರಣ ಚರಿತೆ ಹೇಳುವ ಸಾಮರ್ಥ್ಯ ವಿದ್ದರೂ "ಶರಣನ ಚರಿತೆ ಎನಿತೆಂದು ಪೇಳುವಡೆಯನ್ನಳವೆ, ಶರಣಬಸವನ ಮಹಾತ್ಮೆ ಸಂಪೂರ್ಣ ಎನ್ನಿಂದ ಕೊನೆಗಾಂಬದೆಂದೆಂಬ ಗರ್ವಲ್ಲ ಕಲಬುರ್ಗಿ ಭಕ್ತ ಚರವೃಂದ ಹೇಳಿದ ಮಹಿಮೆಯ" ಎಂದು ವಿನಯ ಮೆರೆದಿದ್ದಾರೆ. ಕಥನಕಲೆ ಇವರಿಗೆ ಚನ್ನಾಗಿ ಸಾಧಿಸಿದೆ. ಸುಜನರ ಒಲುಮೆ ಬೇಡಿದ್ದಾರೆ. "ವೀರಶೈವನ ಸದಾಚಾರ ಸಂಪನ್ನತೆಯ, ತಾರತಮ್ಯಗಳುಳ್ಳ ಮತ್ಯ್ರತಿಗೆ ಶಿವಲಿಂಗಧಾರಿಗಳು ಪಾಲಿಪರಲ್ಲೈ" ಎಂದಿದ್ದಾರೆ. ತಮ್ಮ ಮನೆತನದ ಹಿರಿಯರ ಬಗ್ಗೆ ತಳೆದ ಗೌರವ ಹಿರಿದಾದುದು. ಕವಿಗಳು ಗಂಭೀರ ಮತಿಗಳು, ಗುರುಲಿಂಗ ಚರಸೇವಕರು ಕವಿರಸಿಕಜನ ಸಖರು ಆಗಿದ್ದರು. (ಪ್ರತಿ ಸಂಧಿಯ ಕೊನೆಯ ಪದ್ಯದಲ್ಲಿ ಈ ಮಾತು ವಿದಿತವಾಗಿದೆ) ತಾವೂ ರಸಿಕರೆಂಬುದಕ್ಕೆ ಪುರಾಣದಲ್ಲಿ ಹೇರಳವಾದ ಉದಾಹರಣೆಗಳಿವೆ. ನೀತಿಗೆ ಪ್ರಾಧಾನ್ಯವಿತ್ತವರು. ಪರಸ್ತ್ರೀಯರನ್ನು ತಂಗಿ, ತಾಯಂದಿರಂತೆ ಕಾಣಬೇಕೆಂಬುವವದನ್ನು ಕಾವ್ಯದಲ್ಲಿ ಸಾರಿಹೇಳಿದ್ದಾರೆ. ಆಚರಣೆಗೆ ಮುಖ್ಯಸ್ಥಾನ ಸಲ್ಲಬೇಕೆಂದು ಪ್ರತಿಪಾದಿಸಿದವರು. ಮಾನವೀಯತೆಯ ಬಗ್ಗೆ ಅನುಕಂಪ, ನೋವು ಹೃದಯದಲ್ಲಿ ತುಂಬಿತ್ತು. ಜೀವನ್ಮುಕ್ತಿ ಕತೆಯೇ ಇದಕ್ಕೆ ಉದಾಹರಣೆ. ಸೈಜಕವಿ, ವರಕವಿಯಾಗಿ ಬಾಳಿದರು.

**ಕೃತಿ ವಿವೇಚನೆ:—**

**ಶರಣರ ಪಾತ್ರ:—** ವೀರಶೈವ ಪುರಾಣಗಳು ಮಾನವ ಕಲ್ಯಾಣಕ್ಕಾಗಿ ಟೊಂಕ ಕಟ್ಟಿ ಅಂತು ಆಚರಿಸಿ, ಮಾರ್ಗದರ್ಶಿಗಳಾದವರ ಚರಿತ್ರಗಳಾಗಿವೆ. ಚರಿತ್ರೆ ಕಾವ್ಯಗಳು ಕನ್ನಡದಲ್ಲಿಲ್ಲವೆಂಬ ಉಕ್ತಿಯನ್ನು ಬಹುಮಟ್ಟಿಗೆ ಶಿವಕವಿಗಳ ಚರಿತ್ರ ಗ್ರಂಥಗಳು (ಪುರಾಣಗಳು) ಪೊಳ್ಳು ಮಾಡಿವೆಯೆಂಬುವನ್ನು ನೆನೆಸಿಕೊಳ್ಳಬೇಕು. ಮಾನವ ಕೋಟಿಯ ಉದ್ಧಾರಕ್ಕಾಗಿ ಮಹಿಮರು ಕಾಲ ಕಾಲಕ್ಕೆ ಜನಿಸಿ, ಜನಸಾಮಾನ್ಯರ ಆರ್ತ್ರ ಹೃದಯಕ್ಕೆ ಸಾಂತ್ವನ ನೀಡಿದ್ದಾರೆ. ಮಹರ್ಷಿ ಅರವಿಂದರ "The hero, The Rishi, The Saint, are the natural fruits of our Indian Soil and there has been no age in which they have not been born" ಮಾತು ಸತ್ಯವೇ ಆದುದು. [ಸಾಧುಗಳು, ಸಿದ್ಧಪುರುಷರು, ವೀರರು, ಭರತಭೂಮಿಯ ಪುಣ್ಯಫಲಗಳಾಗಿದ್ದಾರೆ; ಅವರು ಜನಿಸಿದಂತಹ ಯುಗವೇ ಇರುವದಿಲ್ಲ.] ಇಂತಹ ವಿಭೂತಿ ಪುರುಷರಲ್ಲಿ ಕಲಬುರ್ಗಿಯ ಶರಣಬಸವೇಶ್ವರರೂ ಒಬ್ಬರು. ಶರಣರ ಜೀವನ ಚರಿತ್ರೆಯನ್ನು ಮಾವನೂರ ಚನ್ನಬಸವ ಕವಿಗಳು ಕ್ರಿ. ಶ. ೧೮೮೦ ರಲ್ಲಿ ಬರೆದರು. ಇನ್ನೂ ಹಲವರು ಶರಣರ ಜೀವನ ಕುರಿತು, ಬರೆದ ಗ್ರಂಥಗಳನ್ನು ಗುರುಲಿಂಗ ಕವಿಗಳು ನೋಡಿರಬೇಕು. "ಹಿಂದೆ ಕವಿಗಳು ಪೇಳಿದೊಂದೆರಡು ಶರಣ ಪ್ರಬಂಧ ಮಿರಲಾಗಿ ಬೇರೊಂದ್ಯಾಕೆ ರಚಿಸಿದನೂ ಎಂದೆನ್ನಬೇಡಿ. ಕರುಣದಿ ನೋಡಿ ಕಾರಣವ ತಿಳಿದಿನ್ನು ಕೃಪೆಯಮಾಡಿ ಒಂದರೊಳು ಶರಣಬಸವ ಮಹಾತ್ಮೆ ಸಂಪೂರ್ಣ ಬಂದಿಲ್ಲ, ಮುಂದಾದರೆನ್ನಿಂದ ಕೊನೆಗಾಂಬದೆಂದೆಂಬ ಗರ್ವಲ್ಲ ಕಲಬುರಗಿ ಭಕ್ತಚರ ವೃಂದ ಹೇಳಿದ ಮಹಿಮೆಯಂ" ಶರಣರ ಮಹಾತ್ಮೆಗಳೆಲ್ಲವನ್ನು ಬಿಡದಂತೆ ಹೇಳಬೇಕೆಂಬುದು ಕವಿಯ ಅಭಿಪ್ರಾಯವಿದ್ದರೂ ಎಲ್ಲ ಮಹಿಮೆಗಳನ್ನು ಹೇಳಿದ್ದೇನೆಂದು ತಿಳಿಯಬಾರದಾಗಿ ಕೇಳಿದ್ದಾರೆ.

ಅರಳಗುಂಡಿಗೆಯಲ್ಲಿ ಶ್ರೀ ಶರಣಬಸವೇಶ್ವರರು ಸಂಗಮ್ಮ, ಮಲಕಪ್ಪ ದಂಪತಿಗಳಿಗೆ ಮಗನಾಗಿ ಶ್ರೀ ಶಾಲಿವಾಹನ ಶಕೆ ೧೬೬೮ ಪೌಷ್ಯ ವದ್ಯ ೬, ಸೋಮವಾರ ಜನಿಸಿದರು. ಜನ್ಮಕೊಟ್ಟ ತಂದೆ-ತಾಯಿಗಳು, ಮಲಕಪ್ಪ, ಸಂಗಮ್ಮ ಆದರೂ ಮಡಿಯಮ್ಮನ ಉಡಿಲಲ್ಲಿ ಬೆಳೆದರು. ಆದಯ್ಯನ ಹಿತಚಿಂತನೆಯಲ್ಲಿ ದೊಡ್ಡವರಾದರು ಶರಣರು. ಈ ಕಾರಣಿಕ ಶಿಶುವಿನ ಚರಿತ್ರೆಯೇ ಶರಣಬಸವೇಶ್ವರ ಪುರಾಣವು. ಈ ಗ್ರಂಥವನ್ನು ಗುರುಲಿಂಗ ಕವಿಗಳು ೧೯೧೧ ರಲ್ಲಿ ಬರೆದು ಮುಗಿಸಿದರು.

ಗುರುಲಿಂಗ ಕವಿಗಳು ಈ ಕೃತಿಯಲ್ಲಿ ಶರಣರ ಕರುಣೋದಧಿಯನ್ನೇ ಹರಿಸಿದ್ದಾರೆ. ಈ ದಿವ್ಯ ಪ್ರವಾಹದಲ್ಲಿ ಮಿಂದು ಪುನೀತರಾಗದವರಿಲ್ಲ ಆ ಕಾಲದಲ್ಲಿ. ಶ್ರೀ ಶರಣರ ವ್ಯಕ್ತಿ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ಮೂಡಿಸಿದ್ದಾರೆ ಈ ಪುರಾಣದಲ್ಲಿ ಕವಿಗಳು. ಶರಣರ ಮುಖ್ಯ ಕಾರ್ಯಗಳನ್ನು ಹೀಗೆ ಸಂಗ್ರಹಿಸಬಹುದು.

೧. ಸರ್ವ ಪ್ರಾಣಿಗಳಲ್ಲಿ ಅನುಕಂಪ ಹೊಂದುವದೇ ಪರಬ್ರಹ್ಮವೆಂದು ಆಚರಿಸಿದರು. ದಯಾಗುಣದ ಖಣಿಯಾಗಿದ್ದರು ಶರಣರು. ಮೂಕ ಪ್ರಾಣಿಗಳ ಬಗ್ಗೆ ಅವರು ತೋರಿದ ದಯೆ, ಅನುಕರಣೀಯವಾದುದು, ವೈಶಿಷ್ಟ್ಯಪೂರ್ಣವಾದುದು. ಅಂತೆಯೇ ಸ್ವಂತ ಲಾಭದ ಕಡೆ ಗಮನವೀಯದೆ ತಮ್ಮ ಹೊಲದಲ್ಲಿ ಪಶು ಪಕ್ಷಿಗಳಿಗೆ ನೀರು ಕುಡಿಯಲು ಅನುಕೂಲ ಮಾಡಿದರು. ಗೋರಕ್ಷಣೆಯ ಮಹತ್ವವನ್ನು ಸಾರಿ ಹೇಳಿದ್ದಷ್ಟೇ ಅಲ್ಲ, ಗೋವಧೆ ನಿಲ್ಲಿಸಲು ಸ್ವತಃ ಕಟುಕರ ಕೇರಿಗೆ ಹೋಗಿ ಗೋವಿನ ಉಪಯುಕ್ತತೆ ತಿಳಿಸಿ ಅಹಿಂಸಾವ್ರತದಿಂದ ಬಾಳಬೇಕೆಂದು ಉಪದೇಶಿಸಿದರು. ಗೋಹತ್ಯ ನಿಲ್ಲಿಸಲು ದೀರ್ಘ ಯತ್ನಿಸಿದರು. ತಾವು ಬದುಕಿದ ಕಾಲದಲ್ಲಿ ಆಕಳು ಕೊಲ್ಲುವದನ್ನು ನಿಲ್ಲಿಸಿದರು. ಇದಕ್ಕೆ ಪುರಾಣದಲ್ಲಿ ನಿದರ್ಶನಗಳಿವೆ. ಗೋವಧೆ ನಿಲ್ಲಿಸಲು ಇಂದು ಉದ್ದುದ್ದ ಭಾಷಣ ಮಾಡುವದನ್ನು ಕೇಳಿಬಲ್ಲೆವು. ಶರಣರು ಮಾತಿನ ರೋಗದಿಂದ ದೂರ ನಿಂತವರು; ಸದಾಚರಣೆ ಕಠಿಣವಾದರೂ ಮಾಡಲು ಸದಾ ಸಿದ್ಧರು.

೨. ಶರಣರ ಪುಣ್ಯನಾಮ ಕೇಳಿದ ಮಾತ್ರದಿಂದ ಜನತೆ ಪ್ರಭಾವಿತರಾಗಿ ದುಷ್ಟಕಾರ್ಯಕ್ಕೆ, ಅನೀತಿ ಕೆಲಸಗಳಿಗೆ ಕೈಹಾಕುತ್ತಿದ್ದಿಲ್ಲ. ಅಸಹಾಯಕ ಸ್ತ್ರೀಯರನ್ನು ಮಾನಹಾನಿಗೊಳಿಸಲು ಯತ್ನಿಸಿದ ದುಷ್ಟರು' ಹೃದಯ ತುಂಬಿ ಭಕ್ತಿಯಿಂದ ಶರಣರ ಪವಿತ್ರನಾಮ ಉಚ್ಚರಿಸಲು, ದುಷ್ಟರ ಕೈಕಾಲುಗಳ ಶಕ್ತಿ ಅಡಗಿ ಹೋಗುತ್ತಿತ್ತು. ಅಂತಹ ಪ್ರಭಾವಿತ ವ್ಯಕ್ತಿಗಳು ಶರಣರಾಗಿದ್ದರು.

೩. ಶರಣರ ಹೆಸರು ಹೇಳಿದರೆ ಸಾಕು, ಅಧಿಕ ಸಂಖ್ಯೆಯಲ್ಲಿ ಜನ ನೆರೆಯುತ್ತಿದ್ದರು. ಅಂತಹ ಸಂದರ್ಭದಲ್ಲಿ ಭಾರವಾದ ಕೆಲಸ ಸುಲಭವಾಗಿ ನಡೆಯುತ್ತಿದ್ದವು. ಕೋರವಾರ ಗ್ರಾಮದ ಅಡವಿಯಲ್ಲಿ ಶರಣ ಅಣವೀರಪ್ಪನಿಗೆ ದೇವಾಲಯ ರಚಿಸುವಾಗ ದೊಡ್ಡ ಬಂಡೆಗಳನ್ನು ಎತ್ತುವದು ಕಷ್ಟವಾಯಿತು. ಕೂಡಿದವರೆಲ್ಲ ಶರಣರ ನಾಮ ತೆಗೆದುಕೊಳ್ಳಲು ಅವು ಅರಳೆಯಷ್ಟು ಹಗುರಾದವು.

೪. ಶರಣರಲ್ಲಿ ಬೇಡ ಬಂದವರು ಬರಿಗೈಯಿಂದ ಮರಳಲಿಲ್ಲ. ಯಾಚಕರಿಗೆ ನೀಡಲು ಅವರ ಸಿದ್ಧಹಸ್ತ ಸದಾ ಸಿದ್ಧವಾಗಿರುತ್ತಿತ್ತು. ಜಂಗಮನಿಗೆ ಸಾವಿರ ಹಣ ಕೊಟ್ಟದ್ದು, ಬ್ರಾಹ್ಮಣನ ಮಗನ ಮದುವೆಗೆ ಹಣ ನೀಡಿದ್ದು.

೫. ಜನರ ರೋಗ ರುಜಿನಗಳನ್ನು ಕಂಡು ಕಡು ನೊಂದುಕೊಳ್ಳುತ್ತಿದ್ದರು ಶರಣರು. ಅವುಗಳನ್ನು ಪರಿಹರಿಸಲಿಕ್ಕೆ ಯತ್ನಿಸಿದರು. ಶರಣರ ಪರುಷ ಹಸ್ತಸ್ಪರ್ಶದಿಂದ ರೋಗ ರುಜಿನಗಳು ದೂರಾಗುತ್ತಿದ್ದವು. ಅವರ ಅಂತಃಕರುಣದ ನೋಟಕ್ಕೆ ಎಂಥ ರೋಗಗಳೂ ಕಾಲಿಗೆ ಬುದ್ಧಿ ಹೇಳುತ್ತಿದ್ದವು. [೧] ಬೇಡನ ಕರ್ಣ ಶೂಲಿ. ಹಿರಿ ದೇಶಮುಖರ ಪತ್ನಿಯ ಹೊಟ್ಟೆಶೂಲಿ ಮುಂತಾದವು ಇಲ್ಲದಂತಾದವು. [೨] ಹುಚ್ಚು ಬಿಟ್ಟೋಡಿತು; ಭೂತಗಳು ಸುಳಿಯದಂತಾದವು. [೩] ಜಂಗಮಮೂರ್ತಿಯ ದಮ್ಮು ತಾವೇ ತೆಗೆದುಕೊಂಡರು. (ತ್ರೇತಾಯುಗದಲ್ಲಿ ಶಬರಿ, ಶ್ರೀರಾಮನಿಗೆ ಬಂದ ರೋಗವನ್ನು ತೆಗೆದುಕೊಂಡಂತೆ)

೬. ದೀನ ದಲಿತರ ದುಃಖ ಕಂಡು ಮರುಗಿದರು. ಅವರಿಗಾಗಿ ಶರಣರ ಅಂತಃಕರುಣ ಕದಡದೆ ಉಳಿದ ಪ್ರಸಂಗವೇ ಇಲ್ಲ. ಅಂತಹರಿಗೆ ಸಹಾಯ ನೀಡಲು ಯಾವಾಗಲೂ ಸಿದ್ಧರು ಶರಣರು.

೭. ಜಾತಿ, ಮತ, ಪಂಥಗಳಲ್ಲಿ ಭೇದಮಾಡದೆ ದುಃಖಿತರ ದುಃಖ ಅಳಿಸುವದೊಂದೆ ತಮ್ಮ ಮೇಲಾದ ಧರ್ಮವೆಂದು ತಿಳಿದಿದ್ದ ನವಾಬನಿಗೆ ಸಹಾಯ ಮಾಡಿದ್ದು.

೮. ಅನ್ನಸಂತರ್ಪಣೆ ಗೈವುದರಲ್ಲಿ ಅವರನ್ನು ಸರಿಗಟ್ಟುವವರು ಕಡಿಮೆ. ಹೋದಲ್ಲೆಲ್ಲ ದಾಸೋಹ ನಡೆಸಿ ಪ್ರಸಾದ ಕೊಟ್ಟರು. ಭೀಕರ ಬರಗಾಲದ ದವಡೆಗೆ ನಾಡು ಸಿಕ್ಕಾಗ, ಅನ್ನದ ಕೂಗು ಎಲ್ಲಕಡೆ ಕೇಳಿ ಬರುತ್ತಿತ್ತು. ಜೀವಕ್ಕೆ ಸಮಾನರಾದ ಮಕ್ಕಳನ್ನು ಮಾರಿ ಆಹಾರ ಕೊಳ್ಳಲು ಮುಂದೆ ಬಂದ ಭೀಕರ ದೃಶ್ಯ ಶರಣರ ಕರುಳನ್ನೇ ಕತ್ತರಿಸಬೇಕು. ಜನರಿಗೆ ಅಗತ್ಯವಾದ ಆಹಾರವೊದಗಿಸಲು ಪಣತೊಟ್ಟು, ದಾಸೋಹ ನಡೆಸಿ ಯಶಸ್ವಿಯಾದರು, ಆದರ್ಶರಾದರು. ಅನ್ನಬೇಡಲು ಮಧ್ಯೆ ರಾತ್ರಿಯಲ್ಲಿ ಬಂದರೂ ಕರುಣಿಸಲು ಅವರು ಸಿದ್ಧರು. ಮಧ್ಯರಾತ್ರಿಯಲ್ಲಿ ಫಕೀರರು ೭೦೦ ಜನ ಬಂದರೂ ಅವರಿಗೆ ಅನ್ನ ಒದಗಿಸಿದರು. ತನ್ನ ಮತದವರು, ಅನ್ಯ ಮತದವರು, ಬೇರೆ ಭಾಷೆಯವರು, ಇನ್ನೊಂದು ನಾಡಿನವರೆಂಬ ಸಂಕುಚಿತ ಮನೋವೃತ್ತಿ ಅವರ ಬಳಿ ಸುಳಿಯಲಿಲ್ಲ. ಎಲ್ಲರನ್ನು ಯಾವಾಗಲೂ ಸ್ನೇಹದಿಂದ ಕಂಡು ಅವರ ಕಷ್ಟ ಪರಂಪರೆಯನ್ನು ನೀಗಿಸುವುದೇ ಕರ್ತವ್ಯವೆಂದು ಬಾಳಿದರು.

೯. ಕಳ್ಳರು, ಖಳರು, ಸದಯನಾದ ಕರಣೇಶನ ದಯೆಯಿಂದ ಸಹೃದಯರಾಗಿ ಬಾಳಿದರು ( ಸದಯ ನೀಂ ನಿಂದಲ್ಲಿ ಸಹೃದಯರಾಗದವರಾರು )

೧೦. ಕುಚೇಷ್ಟೆಗೈದವರಿಗೂ ಕರುಣೆ ತೋರಿದರು, ಕೋಪಿಸಿಗೊಂಡು ಕೊಲ್ಲಲಿಲ್ಲ, ಅವರ ಹೃದಯದಲ್ಲಿ ಕ್ರೌರ್ಯಕ್ಕೆ, ಸೇಡಿಗೆ ಸ್ಥಳವೇಯಿದ್ದಿಲ್ಲ. ದಯೆ ಅವರಲ್ಲಿ ಮಡುಗಟ್ಟಿನಿಂತಿತ್ತು. "ಅಖಿಳವ್ಯಾಧಿಗೆ ಔಷಧವು ಕರುಣೋದದಿ" ಎಂಬುದು ಅವರ ಮಂತ್ರವಾಗಿತ್ತು. ಕಾರುಣ್ಯವೇ ಅವರ ಕಣ್ಣು. ವಿಶಾಲು ಉದಾತ್ತ, ದಯಾಮಯ ವ್ಯಕ್ತಿತ್ವ ಹೊಂದಿದ್ದರು. ಶರಣರು ಮಾನವರಾಗಿ ಜನಿಸಿ, ಮಾನವರ ಮಧ್ಯದಲ್ಲಿ ಬೆಳೆದು ದೇವತ್ವಕ್ಕೇರಿ ದೇವಮಾನವರಾಗಿ ಕಂಗೊಳಿಸಿದರು. ಮಾನವೀಯತೆಯ ಮಡುವಾದರು. ಈ ಎಲ್ಲ ಗುಣಗಳನ್ನು ಕವಿತಿಲಕ ಗುರುಲಿಂಗಸಿದ್ಧರು ಅದ್ಭುತವಾಗಿ ಪ್ರದರ್ಶಿಸಿದ್ದಾರೆ. ಶರಣ ಜೀವನದ ಕುಂದಿಲ್ಲದ ಕಲಾಕೃತಿ ನಿರ್ಮಿಸಿದ್ದಾರೆ.

**ಷಟ್ಪದಿ :—** ಶ್ರೀ ಶರಣಬಸವೇಶ್ವರ ಪುರಾಣವು ಕನ್ನಡದ ಸೊಲ್ಲಿಗೆ ಸರಿಯಾಗಿ ಹೊಂದಿದ ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದೆ. ಕೋವಿದರು, ರಸಿಕರು, ಸದ್ಬುಧರು ಮೆಚ್ಚಲೆಂದು "ಒಂದೊಂದು ಪ್ರಾಸಕ್ಷರಂ ಹದಿನಾಲ್ಕರಂತಿಟ್ಟು, ವದಿಸಿದೆನು" ಎಂಬ ಕವಿಯ ಹೇಳಿಕೆಗೆ ಎಲ್ಲಿಯೂ ಚ್ಯುತಿ ಬಂದಿಲ್ಲ. ಈ ಗ್ರಂಥದ ಭಾವ, ಶೈಲಿ, ವರ್ಣನೆ, ಅಲಂಕಾರ ಮುಂತಾದವುಗಳಲ್ಲಿ ಮಹಾಕವಿ ರಾಘವಾಂಕನ, ಸೋಮನಾಥ ಚರಿತೆ ಸಿದ್ಧರಾಮ ಪುರಾಣ, ಹರಿಶ್ಚಂದ್ರ ಕಾವ್ಯ, ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣ ಮೊದಲಾದುವನ್ನು ಹೋಲುತ್ತವೆ.

**ಭಕ್ತಿ :—** ಕವಿಗೆ ಭಕ್ತಿಯೇ ಸ್ಥಾಯಿ. ಅಂತೆಯೇ ಗುರುಸ್ತುತಿ ಹರ ಪ್ರಾರ್ಥನೆಯನ್ನು ಹೃದಯ ತುಂಬಿ ಮಾಡಿದ್ದಾನೆ. ೭ನೆಯ ಸಂಧಿಯ ೨-೩ ಪದ್ಯಗಳನ್ನು ನೋಡಬಹುದು. [ ಪದ್ಯ ೭೧-೭೩ ]

"ಈಶನೀಂ ದಾಸನಾಂ ದೋಷನಾಂ ಭಾಸನೀಂ।
ದೇಶಿಕನೆ ನಿನ್ನ ಮಹಿಮಾಸುರವ ಬಣ್ಣಿಪೊಡೆ।
ಸಾಸಿರದ ರಸನೆಯಾ ಶೇಷನಿಗೆ ತೀರದೆನಲೇಸರವ ನಾನೆಣಿಸಲು ||
ಪರಮನೀಂ ಪಾಪಿನಾಂ, ದುರುಳನಾಂ ದೇವನೀಂ।
ಕರುಣೆನೀಂ ಕಠಿಣನಾಂ, ವಿರಸನಾಂ ಪುರುಷನೀಂ।
ನರಕಿನಾಂ ನಾಕಿನೀಂ, ನರಪನೀಂ ನರಸುನಾಂ ; ಗೊರವನಾಂಗುರುವೆ ನೀಂ।
ಮರುಳನಾಂ ಮಾನನೀಂ, ಗರಳನಾಂ ಗೋಜೆ ನೀಂ।
ತರಳನಾಂ ತಾತನೀಂ, ಕುರುಡನಾಂ ಕುತಪ ನೀಂ।
ಪೊರೆಯಲಾಗದೊಡೆನ್ನ ತಿರುಗಣಿಯ ಮಡುವಿಂಗೆ ಭರದಿ ಅಪ್ಪಣೆಕೊಡು.

ಮತ್ತೆ ೧೫ನೆಯ ಸಂಧಿ ೯೩-೯೭ ನುಡಿಗಳಲ್ಲಿ ಕವಿಯಭಕ್ತಿ ಸುವ್ಯಕ್ತವಾಗಿದೆ.

**ನಾಟಕೀಯತೆ :—** ಗುರುಲಿಂಗ ಕವಿಗಳ ಶೈಲಿಯ ಮತ್ತೊಂದು ಗುಣವಾಗಿದೆ. ಶರಣಬಸವೇಶ್ವರ ಪುರಾಣದಲ್ಲಿ ಇದಕ್ಕೆ ಹಲವಾರು ನಿದರ್ಶನಗಳಿವೆ. ಕಾವ್ಯ ಪ್ರಾರಂಭದಲ್ಲಿಯ ಕೈಲಾಸನೃತ್ಯ, ಶಿವನ ಒಡ್ಡೋಲಗದಲ್ಲಿ ನಾರದನೊಡನೆ ನಡೆದ ಸಂಭಾಷಣೆ, ರಾಘವಾಂಕನ ಪ್ರಸಂಗ, (೩ನೆಯ ಸಂಧಿ) ಮಹಾಶಿವಶರಣೆ ನೆಲ್ಲೂರ ನಂಬೆಕ್ಕನ (೪ನೆಯ ಸಂಧಿ) ಪ್ರಸಂಗಗಳು ಒಳ್ಳೆಯ ಉದಾಹರಣೆಗಳಾಗಿವೆ. ಅಲ್ಲೆಲ್ಲ ನಾಟಕೀಯತೆಯ ಸೊಗಸನ್ನು ಕಾಣಬಹುದು.

**ವರ್ಣನೆ:—** ಗುರುಲಿಂಗ ಕವಿಯ ವರ್ಣನೆಗಳು ಕಲಾಭಿಜ್ಞತೆಯ ಗುರುತುಗಳಾಗಿವೆ. ಪ್ರಾಚೀನ ಲಾಕ್ಷಣಿಕರು ಮಹಾಕಾವ್ಯದಲ್ಲಿ ೧೮ ವರ್ಣನೆಗಳಿರಬೇಕೆಂದು ತಿಳಿಸಿದಂತೆ ಕವಿಯಲ್ಲಿ ಸಂದರ್ಭೋಚಿತವಾಗಿ ೧೮ ಪ್ರಕಾರದ ವರ್ಣನೆಗಳನ್ನು ಮಾಡಿದ್ದಾನೆ. ಸಮುದ್ರ ವರ್ಣನೆ, ಸೂರ್ಯೋದಯ, ಸೂರ್ಯಾಸ್ತ, ಚಂದ್ರೋದಯ, ವೇಶ್ಯಾವಾಟನದ ವರ್ಣನೆ, ಯುದ್ಧದ ವರ್ಣನೆ, ಷಡ್‌ಋತುಗಳ ವರ್ಣನೆ ಮುಂತಾದವುಗಳಲ್ಲಿ ಕವಿಯ ಕಲ್ಪನಾಶಕ್ತಿಯ ಪರಿಚಯವಾಗುತ್ತದೆ. ಕವಿಯ ಸ್ತ್ರೀಯರ ವರ್ಣನೆಗಳಂತೂ ಹೇರಳವಾಗಿವೆ; ಬಹಳ ಸೊಗಸಾಗಿವೆ. ವರ್ಣನೆಗಳು ಚರ್ವಿತ, ಚರ್ವಣವಾಗಿಲ್ಲ.

ಮುನಿಸತಿಗೆ ಸಲುಹಿದೆನು, ಮುನಿದೆನ್ನ ಕುಡಿದನವ ।
ಘನ, ಘನಂ, ಸಿರಿಗೊಂಡು, ಮರುಳೆನ್ನ ಕಡೆದನವ ।
ದನುಜಾರಿಗೊಂದು ಮಗಳಿತ್ತರದುಗೊಂಡೆನ್ನ ಕಾಡಿದನು ಕಡೆಗೆ ॥
ಘನಕೆ ನೀರ್ಗೊಟ್ಟಡದು ತಿರುಗಿತ್ತು ತಣಿಸಿದುದು ।
ಋಣಿಗಳ್ಗರಿಯ ಋಣಿ ಘನಶಿವನ ಋಣವಧಿಕ ।
ತನಗೆ ವಿಷಗೊಟ್ಟಡಂ ಬಗಲೊಳೆತ್ತಿದವನೆಂದು ಪೊಗಳ್ವುದಾವನಧಿಯು ॥

ನೂತನತೆ ಇದರಲ್ಲಿದೆ.

ಕತ್ತಲೆಯ ವರ್ಣನೆಯಲ್ಲಿ ಕವಿಯ ಸುಂದರ ಕಲ್ಪನೆಗಳಪರಿಚಯ ಪಡೆಯಬಹುದು.

ರವಿಸಿಂಗ ಕೋಪದಿಂ ತಮಕರಿಯ ಮಸ್ತಕಂ ।
ತವೆಸೀಳೆ ಪೋಗಿ ತಾ ಗವಿಸೇರೆ ಮೃತಗಜದ ।
ಅವಯವದ ರಕ್ತ ಪೊರ ಪ್ರವಿಸಿತೆನೆ ಸಂಧ್ಯಾರುಣವು ಶೋಭೆವೆತ್ತದರೊಳು ॥
ನವಮೌಕ್ತಿಕವು ನೆಗೆದು ದಿವಕೆ ಬಲುಪರಪಿರ್ದ ।
ನಿವಹಮೆನೆನಲು ಭತ್ರಲವ, ಲವಿಕೆಯಾ ಕರಿಯ ।
ತೊವಲು ಸೂಸುವ ಕಾಳಚ್ಛವಿಯೆನಲು ಕತ್ತಲೆಯದೆತ್ತೆತ್ತ ಬಿತ್ತರಿಸಿತು ॥

ಕವಿಕಂಡ ಪ್ರಭಾತಕಾಲ---

ಅರುಣಕರವೆಂಬ ಜಲ ಸುರಿಯೆ ಕಜ್ಜಲಿಯಗಿರಿ ।
ಕರಗಿ ಕರಣಿಗಳಾಗಿ ಧರೆಗುರುಳುವಂತೆ ಸರ ।
ಸಿರುಹದೊಳಗೆರಗುವಾರಡಿಗಳೆಸೆಯಲ್ಕವಕೆ ಕರಿವವೆನೆ ತೆರೆದು ಮುಖವಾ ॥
ಶರಜಗಳು ಖರ ಕರನಿಗರಿಸಿಯರ್ಯ ನಾವಿಲ್ಲ ।
ಯಿರೆ ಮೋಸವೆಂದೇಳುತಿರೆ ಮರಳಿ ಕರೆದವವು ।
ಕರಗಿದರೆ ಕರಗುವದು ವರಧರ್ಮವೆಂಬುದಂ ಧರೆಗರುಪವಂತೆಸೆದವು ॥

ಛಳಿಯೆಂಬ ರಕ್ಕಸನ ತಲೆಗಡೆಯಲೆಂದು ಮಧುಭೂಪನ ಆಗಮನವಾಯಿತು. ಋತುಗಳು ಒಂದರನಂತರ ಒಂದು ಬರುವುದು ಸ್ವಾಭಾವಿಕ. ಆದರೆ ಇಲ್ಲಿ ವಸಂತನ ಬರುವಿಕೆ ಶರಣನ ವಿವಾಹಕ್ಕೆ ಅನುಕೂಲವಾಗಲೆಂದು.

ಪೊಡವಿ ಜನಕೆಲ್ಲ ಬಲುನಡುಗಿಸುವ ಮಾಗಿಯಿಂ ।
ನಡುಗಿಸದೆ ಬಿಟ್ಟರದು ಮಡಿಯಮ್ಮನಾತ್ಮಜನು ।
ಸಡಗರದ ಲಗ್ನವಂ ಕೆಡಿಸದಲೆ ಬಿಡದೆಂದು ಗಡನೆ ಮಧುಭೂಪ ತನ್ನ ॥
ಪಡೆಗಪ್ಪಣೆಯನಿತ್ತು ಗುಡಿಯ ಪೊಯ್ಸಿದನೊ ಕೆಂ ।
ಪಿಡಿದ ತಳಿರುಗಳೊ, ಇಂಗಡಿಸಲಿಕೆ ಬಾರದೆಂ ।
ದಡಿಗಡಿಗೆ ಪಿಕಬಳಕ ನಿಡುಸರದಿ ಕೂಗಲಾರಡಿಗಳತಿ ಧನಿಗೊಟ್ಟವು ॥

(ಮತ್ತೆ ನೋಡಿ. ೧೫ನೆಯ ಸಂಧಿ ೫೧-೫೬)

ಸ್ತ್ರೀಂಪುರ ವರ್ಣನೆಗಳನ್ನು ಕೇಳಿ.

ಅಂಬುಜಾನನೆಯರರವಿಂದದಳ ಲೋಚನೆಯ ।
ರಂಬುಜದ ಪರಿವಾಸನಾಂಗಿಯರು ತುಂಬಿ ಕಚ ।
ಬಿಂಬ ಸುಮನಧರ ವರಕುಂಭಿ ಕುಂಭಾಭ ಕುಚಬಿಂಬ ಜಘನದ ಸತಿಯರು ॥
ಕಂಬುಕಂಧರಿಯರರುಣಾಂಬು ಜಾಂಘ್ರಿಯರು ವರ ।
ನಿಂಬವಳ ಪೂರ್ಬಿಯರು ರಂಭೆರತಿ ಸಮರೂಪ ।
ಗಂಭೀರ ನಾಭಿಯರು ಜಂಬೀರ ಕಾಂತಿಯಂ ನಾಂತಿಯರು ಸಲೆಬಂದರು ॥

“ಕಡುರೂಪವತಿ ಚಾರು ಉಡುರಾಜ ವದನೆ ಸೋಗೆಮುಡಿ, ಬಿಂಬದುಟಿ, ಸಿಂಗನಡು, ಕೋಕಿಲಾಲಾಪೆ, ಜಡಜಲೋಚನೆಯು, ಗಿಳಿಯನುಡಿ, ಶಂಕಗೊರಳೆ, ತೆಳುಪೊಡೆ, ಕುಂಭಕುಚೆ, ಹಸ್ತಿನಡೆ, ಕಮಲಗಂಧಿ, ಸೊಂಪಿಡಿದ ಸೌಂದರ ರಾಶಿಯು” ಕವಿಯ ದೃಷ್ಟಿಯ ಸುಂದರಿ ಇವಳು.

ಆತುರದಲ್ಲಿ ಆಗುವ ಅವಾಂತರವನ್ನು ಕವಿ ಎಷ್ಟು ಸೊಗಸಾಗಿ, ಸಹಜವಾಗಿ ವರ್ಣಿಸಿದ್ದಾನೆ; ಕೇಳಿ. ಇಲ್ಲಿಯ ವಿನೋದ ಯಾರಿಗೆ ನಗು ತರಿಸಲಿಕ್ಕಿಲ್ಲ?

ಆಲಿಗಲತಿಯು ಪಚ್ಚಿ, ಕಾಲಿಗಂಜನವಿಟ್ಟು, ತೋಳಬಂದಿಯು ಪದದ ಮೇಲಿನೊಳು, ಪೈಜಣಂ ತೋಳಿನೊಳು, ಕೊರಳ ಜೋಮಾಲಿ ಕಟ್ಟಿಯೊಡ್ಯಾಣ ಮೇಳವಿಸಿ ಕಂಠದೊಳಗೆ, ವಾಲಿ ಮೂಗಿನೊಳು, ಕಿವಿ ಯಾಲಿಯೊಳು ನತ್ತಿಟ್ಟು, ಶಾಲುಟ್ಟು, ಸೀರೆ ತಲೆಮೇಲಿಂದ ಪೊತ್ತು, ಗುಣಶೀಲ ಶಿವಶರಣನಂ ನಾಲೋಕಿಸುವ ಭರದಿ ಬಾಲೆಯೋರ್ವಳು ಬಂದಳು.

ಮನೋಜ್ಞವಾದ ಅಲಂಕಾರಗಳನ್ನೇ ಕವಿ ಬಳಸಿದ್ದಾನೆ. ಕಾವ್ಯ ಕನ್ಯೆಗೆ ತೊಡುವುಗಳೆಂದರೆ ಅಲಂಕಾರಗಳು; ಸಹಜವಾದ ಅಲಂಕಾರಗಳಿಂದ ಕವಿ ಕೃತಿಗೆ ಕಳೆಗಟ್ಟಿಸಿದ್ದಾನೆ. ಈ ಕವಿಯ ಶಬ್ದಾಲಂಕಾರಗಳು ಸೊಗಸಾಗಿವೆ. ಅನುಪ್ರಾಸ ವಿಶೇಷವಾಗಿ ಕಂಡುಬರುತ್ತವೆ. ಕಾವ್ಯದಲ್ಲಿ ಅರ್ಥಾಲಂಕಾರಗಳಲ್ಲಿ ಉಪಮೆ, ರೂಪಕ, ಉತ್ಪ್ರೇಕ್ಷೆ, ದೀಪಕ, ಸಸಂದೇಹ, ಸ್ವಭಾವೋಕ್ತಿ ಮುಂತಾದ ಕಾವ್ಯಸೌಂದರ್ಯ ಹೆಚ್ಚಿಸುವ ಅಲಂಕಾರಗಳೇ ವಿಪುಲವಾಗಿವೆ.

ಉತ್ಪ್ರೇಕ್ಷೆ:— ನಿಂದಿಸಲು ನೋಡಲ್ಕೈತಂಡನಾ ಸದ್ಧರ್ಮ,
ಕಂದಮಾಕಂದ, ಮದಕಂದ ಜಂಝಾಮಾರುತ,
ನಂದು ಪುರಪಳ್ಳಿ ಪಟ್ಟಣ ಪಟ್ಟಣಗಳು ನದಿಕಂದಕವು ಝರಿ, ಕೆರೆಗಳು ॥
ಒಂದಕೊಂದಗಲದೊಲು ಕೈ ಕೈಗಳಂ ಕಲೆಸಿ,
ನಿಂದನೆನೆ ಗಂಧಶಾಲಿಂಗಳು ಪವನವನುರೆ,
ನಂದನಂಗಳು ಬಳಿಸುತಂದದೇ ಕಲಗಳಿಗೆ ಬಂದಿತ್ತು ಸಗರನಾಡು ॥

ದೀಪಕ:— ಕಂದನಿಲ್ಲದ ಸಂಸೃತಿ ಕಾನನದ ವಸತಿ, ಇಂದುಯಿಲ್ಲದ ನಿಶೆ, ವೀರಶೈವವಿಲ್ಲದ ಆಚಾರಂ, ನರಪದಕ ಸೇರಿಸದಲಿರುವ ಗಳಹಾರವಂ, ಜೋಗುಳದ ಚಾರುಸರವಿಲ್ಲದ ಮಹಾರವಂ ಕಿವಿಗತಿ ಕಠೋರವಂ, ಕೇಳು ಮತ್ತೆ, ಶೂರರಿಲ್ಲದ ರಣ, ವಿಚಾರವಂ ಮದಧಾರಿ ಸೋರದಿರುತಿರುವ ಗಜ; ತೇಜವಿಲ್ಲದ ತೇಜಿ ಬೇರುವಿಲ್ಲದ ತರು, ಕುಮಾರರಿಲ್ಲದ ಸಂಸಾರವೇಂ ಸಾರಪ್ಪುದೋ.

ಸಸಂದೇಹ:— ನೀಲಗಳ ಭಿರುದಿಗೆಂದೆತ್ತಿ ಪಿಡಿಸಿದ ನಂದಕೋಲಿವೋ, ಸೋಮವ್ವೆಯಕ್ಕ ಬಯಸಿದ ಸೊಡರಗೋಲವೋ, ಭೂಗಗನ ಕೀಲಿವೋ, ಶಿವನ ಮುಂದೆಸೆಯೊಳತಿ ಶೋಭೆಯಿಂ ಮೇಲಕೆತ್ತಿದ ಚಂದ್ರನ ಜ್ಯೋತಿ ಮದ್ದಿನ ದಿವ್ಯಗೋಲವೋ, ಸುರಸತಿಯರಲಿ ಸುಖದ ಮೂಲವ ಶೈಲವೋ, ಖಚರ ಖಗ ಪಾಲವೋ, ತಾನೆಂಬವೋಲೆಸೆದುದಾಗಿರಿ ವರಂ.

ಸ್ವಭಾವೋಕ್ತಿ:— ಕಿಬ್ಬೆರಣ ಪಿಡಿದು ತೊನೆಯುತಲಿ ಹಿಂದಕೆ, ಮುಂದಕಪ್ಪೆ, ದಾದಾ, ಬೂವ, ವುಕ್ಕ ನಿಬ್ಬರದಿ ಕಾಡಿ ಶಿವಶಂಕರೆಂದೆನಲದಕೆ, ತಿಬತೆಂಕರೆಂದು ಪಾಡಿ, ಮುಂತಾದವು.
ಗಾದೆ ಮಾತುಗಳನ್ನು ಕವಿ ಹಲವಾರನ್ನು ಉಪಯೋಗಿಸಿದ್ದಾನೆ:—

೧. ಹಾಲಿದ್ದ ಕಾಲಕ್ಕೆ ಹೋಳಿಗೆಯ ಮಾಡುವುದು. ೨. ಶಕ ಬಡಿಪಲಿಕೇಕೆ ನಿಶಿತ ಶಸ್ತ್ರಾಸ್ತ್ರಂಗಳು ೩. ಬಿಸಿಲ ದೊರೆದಾಂಟಲಿಕೆ ಪೊಸ ಪೊಡಗವೇಕೆ? ೪. ಕ್ಷೆತಿಯೊಳಾರ್ಗಾದೊಡೇನತಿಯಾಸೆ ಗೈದವನ ಗತಿಗೆಡಿ ಸದೇಂ ಬಿಡುವುದೆ? ೫. ಬೆಣ್ಣೆ ಬೆಂಕಿಯೊಳಿಡಲು ತಣ್ಣಗಿರುವುದೆ ಜಗದಿ. ೬. ಜಾತಸ್ಯ ಮರಣಂ ಧೃವಂ ೭. ಊಚಮಣಿ ಬಿಟ್ಟೊಡೆದ ಕಾಚ ಕೈಗೊಂಬಂತೆ. ೮. ನೊಪಲೆ ಫಾಲ್ಗುಣಮಾಸ ಮುಪರೊಳೀಯುಲ್ಲಾಸ. ೯. ನೀಚಜನ ತಮ್ಮ ಪದಕೆ ತಾವ್ಕಲ್ಲಿಟ್ಟ ಹದನಾಯಿತು.

ಉರ್ದು ಮಾತುಗಳ ಬಳಕೆ:— ಉರ್ದುಭಾಷೆ ಹೈದರಾಬಾದ ಕರ್ನಾಟಕ ಆಡಳಿತ ಭಾಷೆಯಾಗಿತ್ತು ಕವಿಬಾಳಿದ ಕಾಲದಲ್ಲಿ. ರೂಢಿಯ ಉರ್ದು ಮಾತುಗಳು ಕಾವ್ಯದಲ್ಲಿ ಸಹಜವಾಗಿ ಬಂದಿವೆ. ಸಜ್ಜಾದಿ. ಡಬೀರ, ನ್ಯಾಮತ ಮುಂತಾದ ಪದಗಳು; ಇವುಗಳ ಉಪಯೋಗ ಹೀಗೆ:– ಸಾಲಿಯಾ, ಸಾಚಾತು, ಮೌಲಾಲಿ ಹಿಂದು ತು ಕೆಂವಾಯೆ? ಯಾರೆ ಕ್ಯಾದೇಕ್ತೆ ಕಾಫಿರ್ಕುಸಿ, ಕೌನ್ಹಿಂದು ಮುಸಲ್ಮೀನ್ ಕೌನ್? ಆಡುವಾತು ಗಳನ್ನು ಕವಿ ಹೆಚ್ಚಾಗಿ ಬಳಸಿದ್ದಾನೆ. ಮುದ್ದಾಡಲ್ಯಾತುಕೆನೆ, ಬಡಿಯಲಿಕ್ಯಾಕೆ, ಪೊಡಗವ್ಯಾಕೆ, ಲೋಲ್ಯಾಡು, ಈಡ್ಯಾಡು ಮುಂತಾದವು. ಸ್ವರದಿಂದ ಪ್ರಾರಂಭವಾಗುವ ಪದಗಳು ವ್ಯಂಜನದಿಂದ ಪ್ರಾರಂಭವಾಗಿವೆ. ಪುರಾಣದಲ್ಲಿ ಯೀಶಾಕ್ಷರ, ವುಕ್ಕೇರು, ಯಿದು, ಯಿದಕೊಂದು ಮುಂತಾದವು.

ಸಂಸ್ಕೃತ ಪದಗಳ ಬಳಕೆ ಹಿತಮಿತವಾಗಿದೆ. ಊರುಗಳ ಹೆಸರುಗಳನ್ನು ಸಂಸ್ಕೃತಕ್ಕೆ ಪರಿವರ್ತಿಸಿ ಕೊಂಡುದು ಕವಿಯ ಸಂಸ್ಕೃತ ಭಾಷೆಯ ವ್ಯಾಮೋಹಕ್ಕೆ ಉದಾಹರಣೆಯಾಗಿದೆ. ಬ್ರಹ್ಮಪುರಕ್ಕೆ– ತಾವರೆಯ ಮಗನೂರು, ವಿಷಜಭವಪುರ, ಸರಸಿಜೋದ್ಭವಪುರ, ಸಲಿಲಭವ ಭವಪುರ, ಕೀಲಾಲಜ ಭವಪುರ, ವನಜಭವಪುರ ಅಜಪುರ ಇತ್ಯಾದಿ.

ಕಲಬುರ್ಗಿಗೆ–ಉಪಲನಗರ, ಅಶ್ಮಪುರ: ರಟ್‌ಗಲ್ಲು–ರಟ್ಟಪಾಷಾಣಪುರ; ಪರ್ವತಾಬಾದಿಗೆ–ಶೈಲಬಾಗಿ ಪುರವೆಂದು ಕರೆದಿದ್ದಾನೆ. ಪ್ರತಿಸಂಧಿಯ ಪ್ರಥಮ ಪದ್ಯ ಅತ್ಯಂತ ಪ್ರೌಢವಾಗಿದೆ. ಒಂದೇ ಪದವನ್ನು ೧೨-೧೩, ಅರ್ಥಗಳಲ್ಲಿ ಬಳಸಿದ್ದಾನೆ. ಉದಾ:- ಹರಿ, ಸಾರಂಗ.

ಸಾರಂಗಮುಖಿ ಶಾಖಿ, ಸಾರಂಗನಯನೆ, ಜಿತಸಾರಂಗಗಂಧೆ, ಕಚಸಾರಂಗ, ಸಾರಂಗ ಸಾರಂಗಪುರ್ಬೆ, ಕಟಿಸಾರಂಗ, ಧಮ್ಮಿಲ್ಲೆ ಸಾರಂಗ, ವಸನಧಾರಿ ಸಾರಂಗ, ವಿಜಿತಗಳೆ ಸಾರಂಗ, ರತ್ನವಿತೆ ಸಾರಂಗ, ಸಾರಂಗ, ಸಾರಂಗದಿಂ, ನಾರಿಸಾರಂಗ ಜನಕೆಲ್ಲ, ಸಾರಂಗ ಪರಪುತಲಿ, ಸಾರಂದೋಲ್ ಬಂದಳು.

ನುಡಿ ಮುತ್ತುಗಳು:— ಕರಗಿದರೆ ಕರಗುವದು ವರಧರ್ಮ, ದುಷ್ಕೃತಿಗಳಿಗೆ ಜಯವಿರುವುದೆ, ಧನ್ಯ ವದು ಗೃಹಾಷ್ಠಶ್ರಮಂ; ಸದೆಯನೀಂ ನಿಂದಲ್ಲಿ ಸಹೃದಯರಾಗದವರಾರು, ಹೆಣಕತ್ತರೇನಪ್ಪುದು, ಸಾದರಹಿಂಸ ಪರಮೋಧರ್ಮ, ಅಖಿಳವ್ಯಾಧಿಗೆ ಔಷಧವು ಕರುಣೋದಧಿ, ವನಕೆಳಲ, ವೈರ, ಪಿಶುನ, ಸಂಕುಳ ಮುಖ್ಯ ಪಿಡಿದವರಿಗೊಳಿತಾಗಲರಿಯದು; ಶತಬರಿಸವೃದ್ಧಾಗಿ, ಮಿತಿಯಿಂದ ಧರ್ಮಪದ್ಧತಿ ತಿಳಿಯದವನೇ ತಾನತಿ ಕಿರಿಯರಿಂ ಕಿರಿಯ, ಮತಿಯುಳ್ಳ ಬಾಲಾದೊಡಂ ಕ್ಷಿತಿಗೆಲ್ಲ ಪಿರಿಯಂ, ಗರ್ವವಾರಾರೊಳಗೆ ತರವಲ್ಲ ನೆರೆ ವಿಚಾರಿಸಲು ಕಸವರ, ರಜತ, ಕಬ್ಬಿಣಗಳಾನಿರುತ ಹಿತ್ತಾಳಿ, ತಾಂಬರ, ಮಣ್ಣು ಪಾತ್ರೆಯೊಳಗಿರುವ ಹಾಲ್ ರುಚಿಯೊಂದೆ, ಸಿರಿಕೊಟ್ಟವಂ ಮರೆವುದದೇಹಿತ, ಕೊಂಡಪಂ ಅರಿಮರೆಯಲಾಗದು, ಕೆಡದಿರಿ ಅಳಿಯಾಸಿಂಗೆ, ಪರರಿಗುಪಕಾರಗೈವುದೇ ಪುಣ್ಯ, ಕ್ರೂರತನದಿಂ ಪರರಿಗೋರಿಸುವುದೇ ಪಾಪ, ವೈರಾಗ್ಯ ವರಭಕ್ತಿಯುಳ್ಳವನೆ ಧಾರುಣಿಯೊಳು ಅತ್ಯಧಿಕ, ಮುಂತಾಪ ನುಡಿಮುತ್ತುಗಳು ಸದಾ ನೆನಪಿನಲ್ಲಿಡಲು ಅರ್ಹವಾಗಿವೆ.

ಕಥನರೀತಿ:— ಕಥೆ ಹೇಳುವ ರೀತಿ ಸೊಗಸಾಗಿದೆ. ಸುತ್ತುವರಿಯದೆ ನೇರವಾಗಿ ಕಥೆ ಪ್ರಾರಂಭಿಸಿ ಬಿಡುತ್ತಾನೆ. ಅಷ್ಟಾವರಣಗಳ ಮಹತ್ಮೆ ಹೇಳುವಾಗ, ಒಂದೊಂದು ಕಥೆ ಹೇಳಿ ವಿಷಯ ಮನದಟ್ಟಾಗುವಂತೆ ಮಾಡಿದ್ದಾನೆ. ಸಂಗ್ರಹಕಲೆ ಅನುಕರಣೀಯವಾಗಿದೆ. ಒಬ್ಬೊಬ್ಬ ಪುರಾತನ ಭಕ್ತರ ಚರಿತೆಯನ್ನು ಕೇವಲ ಒಂದೊಂದೇ ವಾರ್ಧಕ ಷಟ್ಪದಿಯಲ್ಲಿ ಹೇಳಿದ್ದಾನೆ. ನಿಜ ನಿಜಗುಣರ ೬೩ ಪುರಾತನರ ತ್ರಿಪದಿಯನ್ನು ನೆನಪಿಗೆ ತರುತ್ತದೆ. ತಿರುನೀಲಕಂಠರ ಚರಿತ್ರೆ, ತಿರುನೀಲಕಂಠ ಕುಶವರಗಾತ್ಮ ಸತಿ, ಮುಟ್ಟದಿರು ಎನಗೆ, ನಿನಗೆ ಶಂಕರನಾಣೆಯೆಂದಿಡಲು, ಹರಿಯದಲೆ ತೊರೆದು ಸತಿ ಬರಿಸ ತೊಂಬತ್ತಾಗೆ ನರೆಗೂದಲಂ ಬಂದವು.

ಮೆರಿಸಲೆಂದಿಶ್ಚಯಿಸಿ ಹರಬಂದು ಗಿನ್ನಲೊಂ। ದಿರಿಸಿ ಮಾಯಂಗೈದು ತಿರುಗಿ ಬೇಡುತ ಕಾಡಿ।
ಸರಸಿಯೊಳು ಪೋಗಿ ಸೇಕಿ ಕರೆಸಿ ಶಪಥಂ ಬಿಡಿಸಿ ಹರಯವಿತ್ತವರ ಪೊರೆದಂ ॥

ಕಾವ್ಯಕ್ಕೆ ರಸವೇ ಜೀವ, ಕವಿ ನವರಸಗಳನ್ನು ಸಮಯೋಚಿತವಾಗಿ ಬಳಸಿದ್ದಾನೆ. ಕಾವ್ಯದಲ್ಲಿ ಕರುಣೆಯೇ ಇಲ್ಲಿಯ ಪ್ರಧಾನ ರಸ.

ಕವಿ ಹೇಳಿಕೊಂಡಂತೆ– "ಚಾರುತರ ವರ್ಣದಿಂ ಸತ್ಕರ್ಮ ಪೂರ್ಣದಿಂ।
ಮೂರು ಲಿಂಗಗಳಿಂ ಕ್ರೀಯಾಪದಗಳಿಂ।
ದಾರು ಸಂಪದದಿಂದ ಭೂರಿನವರಸದಿಂದ
ಯತಿಪದ ವಿಭಕ್ತಿಯಿಂದಂ ॥

ರಾರಾಜಿಸುವದಿಂತು ಗಣ ಮಾತ್ರಿಯೊಳಗಾಂತು
ವೀರಶೈವನ ಸದಾಚಾರ ಸಂಪನ್ನತೆಯ
ತಾರತಮ್ಯಗಳುಳ್ಳ ಮತ್ಕೃತಿಗೆ ಶಿವಲಿಂಗ
ಧಾರಿಗಳು ಪಾಲಿಸರಲ್ಲೈ "

ನಡಕೊಂಡಿಪ್ಪಾರೆ, ಆ ಭರವಸೆಯೂ ಕವಿಗಿದೆ. ಒಟ್ಟಾರೆ ಶರಣಬಸವೇಶ್ವರ ಕಾವ್ಯದ ಶೈಲಿ ಬಂಧುರವೂ ಮನೋಜ್ಞವೂ ಆಗಿದೆ,

ಶರಣಬಸವೇಶ್ವರ ಪುರಾಣಗಳಲ್ಲೆಲ್ಲಾ ಗುರುಲಿಂಗ ಕವಿಗಳಿಂದ ವಿರಚಿತವಾದುದೇ ದೊಡ್ಡದು. ಶ್ರೀ ಶರಣರು ಲಿಂಗೈಕ್ಯರಾದ ೮೯ (ಕ್ರಿ. ಶ. ೧೯೧೧) ವರ್ಷಗಳ ನಂತರ ಈ ಕೃತಿ ರಚಿತವಾಗಿದೆ. ಈ ಪುರಾಣದಲ್ಲಿ ವಾರ್ಧಕ ಷಟ್ಪದಿಯಲ್ಲಿ ರಚಿತವಾದ ೧೩೬೯ ನುಡಿಗಳಿವೆ. ಶರಣಬಸವೇಶ್ವರ ಪುರಾಣವು ಈ ಶತಮಾನದ ಬೃಹತ್ ಕಾವ್ಯಗಳಲ್ಲೊಂದು ಹಾಗೂ ಮೊದಲನೆಯದು.

" ಧರೆಯ ಜನರೆಲ್ಲ ಸುಖವೆರಸಲಿ ಸಕಾಲ ಮಳೆ ।
ಗರಿಯಲಿ ಸುಪುತ್ರಿ ಪುತ್ರರ ಪಡೆದುಕೊಳಲಿ ಶಂ ।
ಕರಭಕ್ತಿ ಧೃಡವಿರಲಿ ಕರೆಯಲಾವ್ಯಮ್ಮೆ ಪಾಲ್ ಸಿರಿಸಂಪದಂ
ಪಡೆಯಲಿ ॥ "

ಪ್ರೊ. ಎಸ್. ಎಸ್. ಬಾಣದ, ಎಂ. ಎ., ಬಿ. ಇಡಿ.
ಶ್ರೀ ಶರಣಬಸವೇಶ್ವರ ವಿಜ್ಞಾನ ಮಹಾ ವಿದ್ಯಾಲಯ.
ಗುಲಬರ್ಗಾ.

# ಸದಯೂಳು ಶ್ರೀ ಶರಣಬಸವೇಶ್ವರರು

## [ ಪುರಾಣದ ಸಾರಾಂಶ ]

### ಒಂದನೆಯ ಸಂಧಿ

ಶಿವನ ಮಂದಹಾಸವೇ ಬಲಿದು ಬೆಳ್ಳಿ ಬೆಟ್ಟವಾಗಿದೆ. ಅಲ್ಲಿ ಮುನಿಗಳ ಆಶ್ರಮ, ಸುರ, ಗಂಧರ್ವ, ರಂಭಾದಿ ಅಪ್ಸರೆಯರ ಅರಮನೆಗಳು ಕಂಗೊಳಿಸುತ್ತಿದ್ದವು. ಪಾರಿಜಾತಾದಿ ಪರಿಮಳ ಪುಷ್ಪಗಳು, ಸುರಧೇನು, ಕರುಗಳು ಮೊದಲಾದವುಗಳಿಂದ ಆ ಸಿತನಗ ಸುಂದರವಾಗಿ ಕಾಣುತ್ತಿತ್ತು. ಆ ರಜತಗಿರಿಯ ತುದಿಗೆ ಲೋಕ ಪಾಲಕನಾದ ಪರಶಿವನ ಸುಂದರ, ಭವ್ಯವಾದ ಅರಮನೆಯು ಮೆರೆಯುತ್ತಿತ್ತು. ಅದರ ವೈಭವವನ್ನು ವರ್ಣಿಸುವದು ಅಸಾಧ್ಯ. ಅಲ್ಲಿ ಶಂಕರನು ಒಪ್ಪಿ ಮೆರೆಯುತ್ತಿದ್ದನು. ಒಂದು ದಿನ ಅಲ್ಲಿ ಶಿವನು ಎಂದಿನಂತೆ ಒಡ್ಡೋಲಗ ನಡೆಸಿದ್ದನು. ನಂದಿ, ಭೃಂಗಿ, ಪ್ರಮಥ ಗಣಂಗಳು ನೆರೆದಿದ್ದರು. ಅಚ್ಯುತ, ಬ್ರಹ್ಮ ಮೊದಲಾದ ದೇವಾದಿ ದೇವತೆಗಳು, ಸುರಪತಿ, ಸಿದ್ಧ ಪುರುಷರು, ಪರ ಮನು ಮುನಿಗಳಿಂದ ಸಾಲೋಕ್ಯ, ಸಾಯುಜ್ಯ, ಸಾಮಿಪ್ಯ, ಸಾರುಪ್ಯ ಪದವಿಗಳನ್ನು ಪಡೆದವರ ಸಾಲು ಸಾಲುಗಳಿಂದ ಕಾಲಹರನ ಓಲಗಸಾಲೆ ಸಕಲರಿಗೆ ಆಶ್ಚರ್ಯವನ್ನಿತ್ತಿತ್ತು; ಶೋಭಾಯಮಾನವಾಗಿ ಕಾಣುತ್ತಿತ್ತು. ಎಲ್ಲರೂ ಶಿವನನ್ನು ಸಭೆಯಲ್ಲಿ ಕೊಂಡಾಡು ವವರೇ. ಶಾರದೆಯು ನಲಿದಾಡಿದಳು, ಭೃಂಗಿ ನೃತ್ಯವಾಡಿದನು. ತುಂಬುರ ಗಾನ ಮಾಡಿದನು.

ಇಂತಹ ಸುಸಂಪರ್ಭದಲ್ಲಿ ಶುಭ್ರ ದೇಹದ ನಾರದನು ಶಿವನನ್ನು ಸ್ತುತಿಸುತ್ತ ಅಲ್ಲಿಗೆ ಬಂದನು.

ಶಿವ:— ನಾರದನೆ ಎಲ್ಲಿಂದ ಆಗಮಿಸಿದೆ?

ನಾರದ:— ಭೂಲೋಕದಿಂದ.

ಶಿವ:— ಅಲ್ಲಿಯ ವಿಶೇಷವೇನು?

ನಾರದ:— ಅಲ್ಲಿಯ ಅಪವಿತ್ರ ನಡತೆಯನ್ನು ಕುರಿತು ನುಡಿಯಲಂಜವೆ ನಂಜುಗಳನೆ.

ಶಿವ:— ಬೆದರದಿರು ನಾರದ; ಮರ್ತ್ಯರೇನು ಗೈವರದನು ಬಿಡದಂತೆ ಹೇಳು.

ನಾರದ:— ಗುರು, ಲಿಂಗ, ಜಂಗಮ ಪಾದೋದಕ ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರಗಳ ಮಹಿಮೆಯನ್ನು ತಿಳಿಯದೇ ನಿಂದಿಸುವರು. ಪಂಚಾಚಾರಗಳನ್ನು ಹಳಿಯುವರು. ಹೊಳೆ, ನದಿ, ಜಂತೆ, ಮಡಕೆ, ಮುಚ್ಚಳ, ಇಲಿ, ಹೊಸ್ತಿಲ, ಕಲ್ಲು, ಕಟ್ಟಿಗೆ ನಾನಾ ಧಾತುಗಳಿಂದ ತಯಾರಾದ ಮೂರ್ತಿಗಳನ್ನೇ ದೇವರೆಂದು ಹೇಳಿ ಹೊಲಬರಿಯದೆ ಪೂಜಿಸುವ ಅವರು ನಿಜವಾಗಿ ನಿಂದ್ಯರು ವಿಶೇಷವಾಗಿ ಗರ್ವಿಷ್ಠರು, ಕ್ರೂರ ಕರ್ಮಿಗಳು, ಸದಾಚಾರ ಹೀನರು, ಪರದಾರ ಲಂಪಟರು ದುರಾಚಾರಿಗಳು, ನಿನ್ನ ಭಕ್ತರ ಸಂಗಡ ವೈರ ಮಾಡುವರು. ಇಂತಹರಿಂದಭೂಮಿ ತುಂಬಿ ಹೋಗಿದೆ. ಹಗಲು ತಾಯಿಯೆಂದು ಕರೆಯಿಸಿಕೊಳ್ಳುವವಳು ರಾತ್ರಿ ಹೆಂಡತಿಯಾಗುವಳು, ತಂಗಿಯಾದವಳು ಅರ್ಧಾಂಗಿಯಾಗುವಳು. ನಿನ್ನನು ಪೊಗಳಲರಿಯರು, ಭೂಲೋಕದ ಹೀನ ಮನುಜರ ನಡತೆಯನ್ನು ಹೇಳಬಾರದು ದೇವ! ತಮಗಿದು ತಿಳಿಯದುದಲ್ಲ. ಮೌನಿಜನ ವಂದಿತನೆ ನೀವಾಗಲಿ, ನಂದೀಶನಾಗಲಿ ಮರ್ತ್ಯಕ್ಕೆ ಹೋಗಿ ನೋಡಿದರೆ ತಾನೆ ತಿಳಿಯುವದು. ತಡಮಾಡಿದರೆ ನಿಮ್ಮ ಮತಕ್ಕೆ ಉಳಿಗಾಲವಿಲ್ಲ. "ಆಲಸ್ಯವಮೃತಂ ವಿಷಂ ಶುಭಕೆ ಶೀಘ್ರೇಂದರಿಯಿರೆ?"

ಶಿವ:— ಮುನಿ ಶ್ರೇಷ್ಠನೆ, ನಿನ್ನ ಕುಟಿಗೆ ಹೋಗಿ ವಿಶ್ರಮಿಸು.

ನಾರದನಿಗೆ ಹೀಗೆ ದಟ್ಟಿಸುತ್ತ ನುಡಿದು, ಶಿವನು ಸಭೆಯನ್ನು ವಿಸರ್ಜಿಸಿ ತನ್ನ ಹೃದಯಾಕಾಶದ ರವಿಯಂತೆ ಶೋಭಿಸುವ ಸದ್ಧರ್ಮ ನಂದಿಯನ್ನು ನೆನೆಯುವನು.

ಶಿವ:— ನಂದಿ, ಭೂಲೋಕಕ್ಕೆ ಹೋಗಿ ನನ್ನ ಮತವನ್ನು ಉದ್ಧರಿಸು. ಈ ಕಾರ್ಯ ನಿನ್ನಬಿಟ್ಟಾರಿಂದ ಸಾಧ್ಯ?

ನಂದಿ:— ಶಿವನೆ, ಭೂಲೋಕದ ಕಾಳು ಮಾನವರ ಮಧ್ಯದಲ್ಲಿ ಹೇಗೆ ಬಾಳಬೇಕು? ನರಲೋಕದ ದಾಳಿಗೆ ಈಡಾಗಲೊಲ್ಲೆ; ಖೂಳರ ಉಪಟಳ ತಾಳಲಾರೆ; ಪಾಲಿಸು ಕಾಲಹರ.

ಶಿವ:— ಅಳುಕದಿರು ನಂದೀಶ, ಹುಲ್ಲಿನ ದೊಡ್ಡ ಬಣವೆ ಅಗ್ನಿಕಣವೊಂದು ತಾಗಿದರೆ ಸುಟ್ಟು ಭಸ್ಮವಾಗಲಾರದೆ? ಗರುಡಗೆ ಹಾವು ಈಡೆ? ಮಡಕಿಗಳು ಒನಕಿಯ ಪೆಟ್ಟನ್ನು ತಾಳಬಲ್ಲುವೆ? ಗುಣಕೀರ್ತಿ ಕೆಡಿಸಲು ಅವಗುಣಿ ಏನು ಮಾಡಬಲ್ಲ? ಕ್ಷುಲ್ಲಕ ಕಲಿಯಿಂದ ನಿನ್ನನ್ನೆದುರಿಸುವದು ಸಾಧ್ಯವಿಲ್ಲ, ತಳುವದಲೆ ನಡೆ.

ನಂದಿ:— ಸದಯಾಳ ನಿಮ್ಮ ಊಳಿಗವನ್ನಿತ್ತು ರಕ್ಷಿಸು. ಬಾಲಕನ ಮೇಲೆ ಶ್ರೀಶೈಲ ಹೊರಿಸಿದರೆ ತಾಳುವನೆ? ದೀವಿಗೆಯು ಗಾಳಿಗಿಟ್ಟರೆ ಅರೆನಿಮಿಷ ತಾಳಬಲ್ಲುದೇ?

ಶಿವ:— ಚಿಂತೆ ನಿನಗೇಕೆ, ನೀ ಹಿಡಿದುದನ್ನೇ ಹಿಡಿಯುವೆ, ನೀ ನುಡಿದಂತೆ ನುಡಿವೆ, ನಡೆದಂತೆ ನಡಿವೆ, ಇದು ನಿಶ್ಚಯ.

ನಂದಿ:— ತವಾಜ್ಞೆ ಹೊತ್ತು ಹೋಗುವೆ. ನನಗಾದ ಹಾನಿ, ಲಾಭ ನಿಮ್ಮವು. ಮೇದಿನಿಯ ಭೋಗದಲ್ಲಿ ಮೈಮರೆಸದೆ "ಜಲಧಿ ಅಂಬರಕೆ ದಯದಿ ನೀರ್ಗೊಟ್ಟು ಮರಳಿ ಕೈಗೊಳ್ಳುವಂತೆ" ನೀನು ನನ್ನ ಮೇಲೆ ಕೃಪೆಯಿಟ್ಟು ಕರೆಯಿಸಿಕೊಳ್ಳಬೇಕು.

ಶಿವ:— ಬೆದರಬೇಡ ಮಗನೆ ಪೋಗು.

ನಂದಿ:— ಯಾರ ಮಗುವಾಗಿ ಜನಿಸಲಿ ?

ಶಿವ:— (ಸಂತೋಷಭರಿತನಾಗಿ) ಭರತ ಖಂಡಾಂತರ್ಗತ ಕರ್ನಾಟಕದಲ್ಲಿಯ ಸಗರ ನಾಡಿನ ಅರಳಗುಂಡಿಗೆ ಯೊಳಗೆ ಸಾಲೋಕ್ಯ ,ವಂಶದವನೂ, ಶಿವಭಕ್ತನೂ, ಸಚ್ಚಾರಿತ್ರ್ಯ ಸಂಪನ್ನನೂ, ಶಿವಶರಣನಾದ ಆದಯ್ಯ, ಅವನ ಸತಿ ಪತಿವ್ರತೆ, ಪಾವನ ಚರಿತೆ, ವರಗುಣ ವಿಶಾಲೆ. ಚರ ಚರಣ ಪೂಜಿತೆ, ಮನೋಹರ ಚರಿತೆ, ಮಡಿಯಮ್ಮಗೆ ಮಗನಾಗಿ ಅವತರಿಸು; ಭರದಿಂದ ಪೋಗು.

ನಂದಿ:— ನಂಬಲೇ ?

ಶಿವ:— ನಂಬು.

ನಂದಿ:— ಪೋಗಲೇ ?

ಶಿವ:— ಪೋಗು, ಇದಕೆ ಎರಡಿಲ್ಲ. ಭೋಗ ತೀರಿದ ಬಳಿಕ ನನ್ನ ಬಳಿ ಸಾಗಿಸುವೆ. ಇದು ಸತ್ಯ, ನಿಶ್ಚಯ !

ಶಿವನಾಜ್ಞೆಯಂ ಶಿರದಲ್ಲಿ ತಳೆದು ಗಗನ ಭಾಗದಿಂದ ನಂದಿಯು ಭೂಲೋಕದತ್ತ ಪ್ರಯಾಣ ಬೆಳಸಿದನು.

## ಎರಡನೆಯ ಸಂಧಿ

ನಂದಿಯು ರಜತಗಿರಿಯಿಂದ ಧ್ರುವ ಮುನಿ ಮುಂತಾದ ಲೋಕಗಳನ್ನು ದಾಟಿ ಭಕ್ತಿಯ ಬೀಡಾದ, ಸೌಖ್ಯದ ನೆಲೆವೀಡಾದ, ಪುಣ್ಯದ ಜೋಡಾದ ಕರ್ನಾಟಕಕ್ಕೆ ಬಂದನು. ಸಗರನಾಡು ಉದ್ಯಾನ, ಬನ, ನದ, ನದಿ, ಕೆರೆ, ಕಾಲುವೆಗಳಿಂದ ಕಂಗೊಳಿಸಿತು. ಬಾಗಿ ಬಳಕುವ ಬಾಳೆಗೊನೆಗಳಿಂದ ತೂಗಿ ತೊನೆಯುವ ನೆಲ್ಲು ತೆನೆಗಳಿಂದ ಉದ್ಯೋಗಿಗಳ ಪಂಕ್ತಿಗಳಿಂದ ಆ ನಾಡು ಎಸೆಯಿತು. ದಾರಿ ದಾರಿಗೆ ಅನ್ನಛತ್ರ, ಕಳವೆ ಕ್ಷೇತ್ರ, ರನ್ನ ಗೋತ್ರಗಳಿಂದ ಅತ್ಯಧಿಕ ಕೃಷ್ಣೆ, ಭೀಮಾ ನದಿಗಳಿಂದ, ಚಿತ್ತ ತೋಷಿಪ ತಳಿರು ಕುಸುಮ ಫಲ ಗುದಿಗಳಿಂದ ಪ್ರಭೆವೆತ್ತು ಸಗರ ನಾಡು ಮೆರೆದುದು. ಆ ನಾಡು ಏಂ ಚೆಲ್ವನಾಳ್ದುದು! ಅದನ್ನು ಆಳುವ ದೊರೆ ಬೇಡನು. ಶಿವನ ಮಗ ನಂದಿಯು ಅವತರಿಸುವದರಿಂದ ಆ ನಾಡಿಗೆ ಭಾಗ್ಯ ಬೇಡದಲೆ ದೊರೆಯಿತು ಅಪಾರ ಮಹಿಮಾಗಾರ, ದಯಾಸಿಂಧು ಶರಣಬಸವನು ಅವತರಿಸಲು ಬಂದುದು ಸಗರ ನಾಡಿನೊಳಗಿರುವ ಅರಳಗುಂಡಿಗೆಗೆ. ಪೆಂಪಿನ ಅಲಿಂಪಿನಿಂದ ಶೋಭಿಪುದು ಆ ಪುರ. ಸಭ್ಯರು ಸದಾಚರಣೆಯರಿಂದ ಆ ನಗರ ಮೆರೆದುದು.

ಆ ನಗರ ಕಾಂತೆಯ ನಿಜ ರೂಪವೊ, ಆ ಪುರದ ಪುಣ್ಯವೊ ಇಲ್ಲವೆ ಶಿವನ ಸದ್ರೂಪವೊ, ರಜತ ಗಿರಿಯ ಸಾಕಾರ ರೂಪವೊ, ಹಾಲ್ಗಡಲಿನ ತೆರೆಗಟ್ಟಿದ ಆಳಾಪವೊ—ಇವು ಯಾವೂ ಅಲ್ಲ. ಸಾಲೋಕ್ಯದವರ

ಸಂತತಿಯ ನಿಜವಾದ ಮಂದಿರವೇ ಅದು ಖಂಡಿತ. ಹೀಗೆ ಒಪ್ಪುತ್ತಿರುವ ಗೃಹದ ಒಡೆಯನೆ ಭಕ್ತ ಆದಯ್ಯ. ಅವನು ಶ್ರೇಷ್ಠ ಶಿವಭಕ್ತ, ಗುರುಲಿಂಗ ಚರಪೂಜಕ, ಅನಂತಗುಣ ನಿಧಿ, ಕಲಾಕೋವಿದ, ವೀರಶೈವಾಚಾರ ಸಂಪನ್ನ, ವಿಚಾರಶೀಲ. ಮಡಿಯಮ್ಮ ಅವನ ಧರ್ಮಪತ್ನಿ, ಭುವನ ಪಾವನ ಚರಿತೆ, ಶಿವಲಿಂಗ, ಗುರು, ಜಂಗಮರ ಪೂಜಿತೆ, ಸುಗುಣ ಜನಮಿತ್ರೆ, ಸುವಿಚಾರೆ, ಸುಂದರ ತರುಣಿಮಣಿ, ಆತ್ಮಧವನವ್ರತ ನಿರುತೆ, ಮಡಿಯಮ್ಮ ತನ್ನ ಸದ್ಗುಣಗಳಿಂದ ಮಾದರಿಯಾಗಿ ಬಾಳುತ್ತಿದ್ದಳು. ಈ ದಂಪತಿಗಳಿಗೆ ಕೊರತೆಯಂದರೆ ಸುತರಿಲ್ಲದ್ದೆ.

ಒಂದು ದಿನ ಮಡಿಯಮ್ಮ ತನ್ನ ಪತಿಯಲ್ಲಿಗೆ ಬಂದು ವಂದಿಸಿ, "ಮಕ್ಕಳಿಲ್ಲದ ಬಾಳ್ವೆ ಚಂದ್ರನಿಲ್ಲದ ಆಕಾಶದಂತೆ, ಒಳ್ಳೆ ಆಚಾರವಿಲ್ಲದ ವೀರಶೈವನಂತೆ, ವರ ಪದಕವಿಲ್ಲದ ಕೊರಳ ಹಾರದಂತೆ, ಅಡವಿಯಲ್ಲಿಯ ಬಾಳ್ವೆಯಂತೆ, ಕುಲದ ಕುಡಿಯನ್ನು ಹಬ್ಬಿಸವ ಬಂಜೆಯರ ಬಾಳು ಹಾಳು" ಎಂಬ ನುಡಿದಳು. ಕುಮಾರರಿಲ್ಲದ ಸಂಸಾರ, ಬೇರಿಲ್ಲದ ತರು, ತೇಜವಿಲ್ಲದ ತೇಜಿಯಂತೆ ಸಾರ ರಹಿತವಾದುದು. ಕಿರಿ ಬೆರಳನ್ನು ಹಿಡಿದು ಹಿಂದು ಮುಂದೆ ತೊನೆಯುತ್ತ "ಬೂವ, ಉಕ್ಕ, ಅಚ್ಚಿ" ಎಂದು ತಾಯಿಗೆ ಕಾಡುವ "ಶಿವಶಂಕರ" ಎಂದರೆ ತಿಬತೆಂಕರ ಎಂದು ನುಡಿಯುವ, ತಬ್ಬಿಕೊಂಡರೆ ಕೊರಳಿಗೆ ಜೋತು ಬೀಳುವ ಮಗುವಿಗೆ ಭಾಪು ಬಾ ಎಂದು ಮುದ್ದಿಟ್ಟು ಕೊಂಡು ಸಂಭ್ರಮದಿಂದ ಆಡಿಸುವ ಭಾಗ್ಯ ತನಗಿಲ್ಲವೆಂದು ಚಿಂತಿಸಿದಳು. "ನಿನ್ನ ಬಯಕೆ ಅಖಿಳ ಲೋಕ ಪಾಲಕಗೆ ತಿಳಿಯದೆಯಿಲ್ಲ, ಮೃಕಂಡು ಮುನಿಯ ಶೋಕವನ್ನು ಪರಿಹರಿಸಿ ಮಗನನ್ನು ಕರುಣಿಸಿದವನು ಪರಶಿವನಲ್ಲವೆ ? ಆ ಪರಮಾತ್ಮನೇ ನಮ್ಮ ಕುಲದೇವತೆಯಾಗಿರುವಾಗ ನಮಗೇಕೆ ಚಿಂತೆ ? ವ್ಯಾಕುಲವನ್ನು ಬಿಟ್ಟು ಗುರು, ಲಿಂಗ, ಜಂಗಮರನ್ನು ಭಜಿಸಿ ಸದಾ ದಾಸೋಹ ಮಾಡುತ್ತಿರು." ಎಂದು ಆದಯ್ಯ ಮಡಿಯಮ್ಮ ನನ್ನು ಸಂತೈಸಿದನು. ಪತಿಯ ಮಾತಿನಂತೆ ಮಡಿಯಮ್ಮ ನಿತ್ಯ ದಾಸೋಹ ಮಾಡುತ್ತ ಗುರು, ಲಿಂಗ, ಜಂಗಮರನ್ನು ಪೂಜಿಸುತ್ತ ದಿನಗಳೆಯುತ್ತಿದ್ದಳು. ವ್ಯಥೆಯನ್ನು ದೂರು ಮಾಡಿ, ಒಂದು ರಾತ್ರಿ ಹರಧ್ಯಾನ ಮಾಡುತ್ತ ಮಲಗಿರಲು ದಂಪತಿಗಳ ಕನಸಿನಲ್ಲಿ ಶಂಕರನು ಚರರೂಪ ಧರಿಸಿ ಬಂದು "ಮರುಕ ಬೇಡ ಆದಯ್ಯ, ನಿನ್ನ ಕಿರಿತಮ್ಮನ ಸತಿ ಸಂಗಮ್ಮನ ಉದರದಲ್ಲಿ ಜನಿಸುವವನು ಶಿವಶರಣರೊಳಗೆ ಅಧಿಕನಾಗುವನು. ಇ ಮಗನಿಗೆ ಮರೆಯದೆ ಶ ರ ಣ ಬ ಸ ವ ಪ್ಪ ನೆಂದು ಹೆಸರಿಡಬೇಕು. ಅವನೇ ನಿಮಗೆ ಮಗನಾಗುವನು. ಜನಿಸಿದಾಕ್ಷಣ ಆ ಮಗುವನ್ನು ಅವರು ನಿಮಗೆ ಒಪ್ಪಿಸುವರು." ಎಂದು ಹೇಳಿ ಕಾಣದಂತಾದನು. ಎಚ್ಚತ್ತು ಇದು ಒಳ್ಳೆಯ ಕನಸು ನಿಜವಾಗುವದು. ' ಹರನು ಚರರೂಪದಿಂದ ಬಂದು ನಿರೂಪಿಸಿದ್ದರಿಂದ ಇದನ್ನು ತಿಳಿದು ಮಡಿಯಮ್ಮ ಆದಯ್ಯರಿಗೆ ಸಂತೋಷವಾಯಿತು. ಅತ್ತ ಸಂಗಮ್ಮನಿಗೆ ಗರ್ಭ ಬೆಳೆಯತೊಡಗಿತು. ಬಸಿರಾಂತ ಶರಣಬಸವನ ಮಾತಿಗೆ "ಶಶಿಮಂಡಲವದಂದು ಬಿಸಿಗದರಿನಂತಾಯ್ತು, ಮಿಸುನಿಗಿರಿ ಯುಗ ಶಿರಕೆ ಮಸಿಯೊರಸಿ ದಂತಾಯ್ತು, ಕಸವರಿದಿ ಪಚ್ಚೆ ಸಂಧಿಸಿದಂತೆ ತನುವಾಯ್ತು, ದೃಶಕೆ ತಾರಾಪಥವು ವಶವಾಯ್ತು, ತ್ರಯತಾಪ ನಶಿಸಿದಂತೆ ವಳಿತ್ರಯವು ದೃಶವಾಯ್ತು." ಉದರದಲ್ಲಿರುವವ ಉರಿಗಣ್ಣಿನ ಭಕ್ತನೆಂದು ಆ ಸತಿಯು ಭಸ್ಮ ತಿನ್ನತೊಡಗಿದಳು. 'ಅರಿಷಡ್ ವರ್ಗಗಳ ವೈರಿಯವನೆಂದು ಷಡ್‌ರಸಗಳನ್ನು ಓಕರಿಸಿದಳು. ಬಸವನೇ ಬಸಿರಿನಲ್ಲಿ ಯೋಗ ನಿದ್ರೆಯೊಳಿರಲು ಪರವಶವಾದೆನೆಂಬೊಲು ಆಕಳಿಸತೊಡಗಿದಳು. ಗರ್ಭಕ್ಕೆ ನವಮಾಸ ತುಂಬಿದವು. ಒಂದು ರಾತ್ರಿ ಸತಿಪತಿಗಳಿಗೆ "ಮುಂದೆ ಮಗನಾಗಿ ಜನಿಸುವವನನ್ನು ಆದಯ್ಯ ಮಡಿಯಮ್ಮರಿಗೆ

ಕೊಡ" ಬೇಕೆಂದು ಕನಸಾಯ್ತು ದಂಪತಿಗಳು ಸಂತೋಷಭರಿತರಾದರು. ಶುಭ ದಿನದಲ್ಲಿ ಮಗನನ್ನು ಪಡೆದಳು ಸಂಗಮ್ಮ. ಮಡಿಯಮ್ಮನನ್ನು ಕರೆದು ಕನಸಿನ ವಿಚಾರ ತಿಳಿಸಿ ಶಿಶುವನ್ನು ಕಡು ತೋಷದಿಂದ ಒಪ್ಪಿಸಿದಳು. ಮಡಿಯಮ್ಮ ಮಗನನ್ನು ಎತ್ತಿ ಕೊಂಡಾಡಿದಳು. ಮುಕ್ಕಣ್ಣನ ಅಣುಗನು ಉದ್ಭವಿಸಲು ಶರಧಿ ಉಕ್ಕೇರಿದವು; ಅಖಿಳಜನ ನಲಿದಾಡಿತು. ಭೂದೇವಿ ಆನಂದದಿಂದ ನಕ್ಕಳು. ಶಿವನ ಭಕ್ತರಿಗೆ ಬಲತೋಳು, ನೇತ್ರಗಳು ಹಾರಿದವು. ಕೇರಿ ಕೇರಿಯ ಜನರೆಲ್ಲ ಉಕ್ಕುವ ಆನಂದದಿಂದ ಸಕ್ಕರೆ ಹಂಚಿದರು. ಜಗತ್ತಿಗೆಲ್ಲ ಸಮ್ಮೋದ ವಾಯಿ:ತು. ಪಂಚಾಚಾರ್ಯರು ಕೂಡಿ ಬಂದು ಇಷ್ಟಲಿಂಗಾಭಿಷೇಕ ಮಾಡಿಸಿ ಕೂಸಿಗೆ ಲಿಂಗಕಟ್ಟಿ ಪಾದೋದಕ ಕೊಟ್ಟು ಭಸಿತ ಲೇಪಿಸಿದರು. ಆದಯ್ಯ ಯಾಚಕರಿಗೆ ತೃಪ್ತಿಯಾಗುವಂತೆ ದಾನ ಮಾಡಿದನು.

ಹನ್ನೆರಡನೆಯ ದಿನ ನಂದನಿಗೆ ನಾಮವಿಡಲು ಮಣಿದೊಟ್ಟಿಲನ್ನು ಶೃಂಗರಿಸಿದರು. ಸುಲಭನ ನಾಮಕರಣೋತ್ಸವಕ್ಕೆ ಮುತ್ತೈದೆಯರು ಚೆಲುವಾಂಗನೆಯರು ಆತುರದಿಂದ ಬಂದರು. ದುಷ್ಟಜನ ದೂರಿಯರು ದುಷ್ಟಮನ ಪೂರಿಯರು ಮಣಿದೊಟ್ಟಿಲಲ್ಲಿ ಮಗುವನ್ನಿಟ್ಟು ಕೋಗಿಲೆಯ ಸ್ವರದಂತೆ ಜೋ ಎಂದು ಪಾಡಿದರು. ಗುರುವಿಗೆ ಯಾವ ಹೆಸರಿಡಬೇಕೆಂದು ಕೇಳಿದರು, ಸ್ವಪ್ನದಲ್ಲಿ ಶಿವ ಹೇಳಿದುದನ್ನೇ ಇಡಲು ತಿಳಿಸಿದಾಗ ಮಗುವಿನ ಸೋದರತ್ತೆ "ಶರಣಬಸವಪ್ಪ" ನೆಂದು ಮೂರು ಸಲ ಕೂಗಿದಳು. ನೆರೆದ ನಾರಿಯರಿಗೆಲ್ಲ ಬಾಗಿನ ಕೊಟ್ಟು ಕಳಿಸಿದರು. ಚರರಿಗೆ ಔತಣವಿತ್ತು ಪಕ್ವಾನ್ನದಿಂದ ತಣಿಸಿದರು; ವಸ್ತ್ರ, ತಾಂಬೂಲ, ದಕ್ಷಿಣೆಗಳನ್ನಿತ್ತರು. ಮಗುವಿಗೆ ಆಶೀರ್ವದಿಸಿ ಪರಮ ಹರುಷಿತರಾಗಿ ಸಾಗಿದರು.

ಮಗುವಿಗೆ ತಾಯಿಯು ವಿಧ ವಿಧ ಆಭರಣ ತೊಡಿಸಿ ಕಣ್ಣಿನ ಪ್ರೀತಿಯನ್ನು ಪಡೆದುಕೊಂಡರು. ಮಗುವಿನ ದಿವ್ಯ ಗಾಡಿಗೆ ನಲವೇರಿ ದಂಪತಿಗಳು ಪದುಳದಲ್ಲಿದ್ದರು. "ಹಿಡಿದ ವ್ರತವನ್ನು ತಾ ಬಿಡುವವನು, ಬಿಟ್ಟುದನ್ನು ಹಿಡಿವವನು ಸಚ್ಚರಣರೊಡನೆ ಸರಿ ಬಾರ" ನೆಂದು ಕೈತಳಗಳಿಡಿದು ಬಿಚ್ಚಾಡಿದನು. "ಮೃಡನು ದೈವವಲ್ಲೆಂದು ನುಡಿವವನೆದೆಗೊದಿಯುವದೀ ಪಡಿಯೆಂದು ತೋರಿಸುವ ತೆರದಿಂದ ತೊಟ್ಟಿಲದಲ್ಲಿ ಹಿಮ್ಮಡದಿಂದ ಒದೆಯಲು ವೈರಿಗಳ ಎದೆ ಝುಲ್ಲನೆ ಘಿಲ್ಲೆಂದುದು. ಅಂಬೆಗಾಲಿಟ್ಟು ನಡೆದು ಏಳುತ್ತ, ಬೀಳುತ್ತ ಗೋಡೆಯ ಆಶ್ರಯದಿಂದ ನಡೆದನು. ಬಾಲ ಶರಣನು ತೊದಲ ಮಾತುಗಳನ್ನು ಆಡತೊಡಗಿದನು. ಧೂಳಾಟ ಓರಿಗೆಯ ಬಾಲಕರೊಡನೆ ಆಡಿದನು. ಹೀಗೆ ಏಳು ವರ್ಷಗಳು ಸಂದವು. ಬಾಲಕನಿಗೆ ಓದಿಸಲು ಸಕಾಲವೆಂದರಿತು ಆದಯ್ಯ ಶರಣಬಸವನನ್ನು ಕರೆದುಕೊಂಡು ಗುರುವರ್ಯನ ಮಠಕ್ಕೆ ಹೋದನು. ಗುರುಗಳು ಸಂತೋಷದಿಂದ ನಾದದೊಳಗೆ ಅಖಿಳ ಕಲೆಗೆ ಆದಿಯಾದ 'ಓಂ' ಕಾರ ಬರೆಸಲು ಬಾಲಕ ಶರಣಬಸವನು ಅದರರ್ಥ ಕೇಳಿದನು. "ಅದು ವೇದದ ಆದಿ, ಮಂತ್ರದ ಅಧಿದೈವ, ಸಕಲ ಸಿದ್ಧಿ, ಕಲ್ಪಿತದ ಕಲ್ಪತರು, ಚಿಂತಾಮಣಿ" ಹಿಂದೆ ಬ್ರಹ್ಮನಿಗೆ ಶಿವನು ತನ್ನ ಮಗ ಷಣ್ಮುಖನಿಗೆ ವಿದ್ಯೆ ಕಲಿಸಲು ಹೇಳಿದನು. ಕುಮಾರನು 'ಓಂ' ಕಾರದ ಅರ್ಥ ಕೇಳಲು "ಮೃಡನ ಮಂತ್ರದ ಘನತೆಯನ್ನು ನುಡಿಯಲು ಸಾಧ್ಯವಿಲ್ಲ; ಇವನ್ನು ಒಮ್ಮೆ ಭಕ್ತಿಯಿಂದ ನುಡಿದವರು ಮುಕ್ತರಾಗುವರು. ಇದಕ್ಕೆ ಹನ್ನೆರಡು ಕೋಟಿ ಅರ್ಥಗಳಿವೆ. ಇದನ್ನು ತಿಳಿದು ಎಲ್ಲ ವಿದ್ಯೆ ಕಲಿಯೆಂದು ಗುರುಗಳು ಹೇಳಿದರು. ಎಲ್ಲ ಕಲೆಗಳನ್ನು ಶರಣಬಸವೇಶ್ವರನು ತೀವ್ರ ಕಲಿತನು.

ಎಂಟು ವರ್ಷಗಳಾಗಲು ಆದಯ್ಯನು ಗುರುಗಳ ಬಳಿಗೆ ಹೋಗಿ ಮಗನಿಗೆ ದೀಕ್ಷೆ ಮಾಡೆಂದು ಬಿನ್ನೈಸಿಕೊಂಡನು. ಸಕಲರ ಅಭಿಷ್ಟವನ್ನು ಪಾಲಿಸುವ ಮಂತ್ರದೀಕ್ಷೆಯನ್ನು ಸುತನಿಗೆ ಪಾಲಿಸಿ ಕಾಪಾಡೆಂದು ಶರಣಬಸವಪ್ಪನನ್ನು ಕರೆತಂದು ಗುರುವಿನ ಪಾದಕ್ಕೆ ಕೆಡವಿದನು. ವೀರಶೈವರಿಗೆ ಅವಶ್ಯಕವಾದ ಅಷ್ಟಾವರಣ, ಪಂಚಾಚಾರ, ಷಟಸ್ಥಲಗಳ ಮಹಿಮೆಯನ್ನು ಗುರುಗಳು ಶಿಷ್ಯನಿಗೆ ಬೋಧಿಸುವದು ಅಗತ್ಯ. ಅಂತೆಯೇ ಶ್ರೀ ಶರಣರ ಗುರುಗಳು ಈ ದೀಕ್ಷಾಸಂಸ್ಕಾರ ಸಮಯದಲ್ಲಿ ಕ್ರಮವಾಗಿ ಅಷ್ಟಾವರ್ಣಗಳ ಘನತೆಯನ್ನು ಹೇಳಿದರು.

## ಮೂರನೆಯ ಸಂಧಿ

ಶರಣರು ಗುರುವಿಗೆ ಪ್ರಣಾಮಮಾಡಿ "ದೀಕ್ಷೆ ಸಂಸ್ಕಾರವಿತ್ತು ಪೊರೆ" ಯೆಂದು ಗುರುವನ್ನು ಕೃಪಾಕರ, ಭಕ್ತ ಸುರತರು, ದುರಿತ ಸಂಹಾರಕನೆಂದು ಕೊಂಡಾಡಿದರು. "ಚಿಕ್ಕಂದು ದೀಕ್ಷೆ ಪಡೆದು ಆಚರಿಸುವದು ಅತಿಕಷ್ಟ, ಶರಣಪ್ಪ ನಿನಗೇನು ಮರುಳು ಹಿಡಿಯಿತೆ ? ಈಗ ದೀಕ್ಷೆ ಹೊಂದುವದು ಗಿಳಿ, ಬೆಕ್ಕಿಗೆ ಔತಣವಿತ್ತಂತೆ" ಎಂಟು ವರ್ಷದೊಳಗೆ ದೀಕ್ಷೆ ಪಡೆಯದಿದ್ದರೆ ದುರಿತ ಅಂಟುವದೆಂದು ಗುರುಗಳೇ ಹೇಳಿದ್ದನ್ನು ಶರಣಬಸವನು ಪುನಃ ನೆನಪಿಸಿ ಕೊಡುವನು. ಆಗ ಗುರುಗಳು ವಿಧಿಪೂರ್ವಕವಾಗಿ ಶರಣಬಸವೇಶನಿಗೆ ದೀಕ್ಷೆ ಮಾಡುವರು. ದೀಕ್ಷಾ ಕಾಲದಲ್ಲಿ ಗುರುವು ಶಿಷ್ಯನ ಶರೀರಕ್ಕೆ ಭಸಿತವನ್ನು ಧರಿಸಿ ಏಕಾಂತದಲ್ಲಿ ಮಂತ್ರವನ್ನು ಬೋಧಿಸಿ, ಕಂಠದೊಳಗೆ ಲಿಂಗವನ್ನು ಕಟ್ಟಿ **"ಸತಿಶರಣ ಪತಿಲಿಂಗ"** ವೆಂಬುದನ್ನು ಮರೆಯದಿರು ಶರಣಬಸವ. ಇದನ್ನು ಮರೆತ ಮಾನವನು ನರಕದೊಳಗೆ ಕುರಿಯಾಗುವದು ಖಂಡಿತ. ಕಾರಣ ಗುರು, ಲಿಂಗ, ವಿಭೂತಿ, ರುದ್ರಾಕ್ಷಿ, ಪಾದೋದಕ ಮೊದಲಾದವುಗಳನ್ನು ಮರೆಯದಿರು. ಪರರಿಗೆ ಉಪಕಾರ ಮಾಡು; ಪರಧನ, ಪರವನಿತೆಗೆಳೆಸಿದರೆ ನರಕವಾಗುವದು. ಶಿವಯೋಗವನ್ನರಿತು ಆಚರಿಸು.

ವೀರಶೈವರಿಗೆ ಅಷ್ಟಾವರಣಗಳು ಅತಿ ಮುಖ್ಯ. ಅವು ಅಂಗದ ಸಮಾನ. ಪ್ರತಿಯೊಬ್ಬ ವೀರಶೈವನು ಅವುಗಳ ಬಗ್ಗೆ ಅರಿಯುವದು ಅಗತ್ಯ. ಅಂತೆಯೇ ದೀಕ್ಷಾಬದ್ಧರಾದ ಶ್ರೀ ಶರಣರಿಗೆ ಗುರುಗಳು ಅಷ್ಟಾವರ್ಣ ಗಳಲ್ಲಿ ಮುಖ್ಯ ಮತ್ತು ಮೊದಲಿನದಾದ ಗುರುವಿನ ಮಹಿಮೆಯನ್ನು ಹೇಳಿದರು. ಗುರುವು ಪರದೈವ, ಹರ ಮುನಿಯೆ ಗುರು ಕಾಯ್ವನು. ಗುರು ಬ್ರಹ್ಮ, ಗುರು ಸದಾಶಿವ, ಗುರುವು ಮರಣಕ್ಕೆ ಅರಿಸಿಂಗ, ಮುಕ್ತಿಯ ಆಗರವೇ ಗುರು, ಗುರು ಸರ್ವಮಯ, ಶಿವಪಥ ಅರಿತುಕೊಳ್ಳಲು ಗುರುಪಥ ಮೊದಲು. ಸಾಕ್ಷಾತ್ ಶಿವನೇ ಸದ್ಭಕ್ತಿಯಿಂದ 'ನ ಗುರೋರಧಿಕ' ವೆಂದು ಹೊಗಳಿದನು.

ಗುರು ಮಹಿಮೆಯನ್ನು ಸಾರುವ ಕಥೆಎರಡನ್ನು ದೃಷ್ಟಾಂತ ಪೂರಕವಾಗಿ ಶ್ರೀ ಶರಣಬಸವನಿಗೆ ಹೇಳಿದರು. ಆರಾಧ್ಯ ಪುಂಗವ ಸುಜ್ಞಾನಿಯೆಂಬವನು ಬಸವಣ್ಣನ ಖ್ಯಾತಿಕೇಳಿ, ನೋಡಲು ಬಯಸಿ, ಕಲ್ಯಾಣದತ್ತ ಪ್ರಯಾಣ ಬೆಳೆಸಿದನು. ಮಾರ್ಗದಲ್ಲಿ ಅತಿ ಭಯಂಕರವಾದ ಕಾಡನ್ನು ದಾಟಬೇಕಾಗಿತ್ತು. ಆ ಕಾಡಿನ ಒಡೆಯ ಒಬ್ಬ ಕ್ರೂರ ಬೇಡ. ಅವನು ಕೊಂದ ಜೀವಿಗಳ ಎಲುವಿನರಾಶಿ ವಿಂಧ್ಯ ಪರ್ವತದಷ್ಟಿತ್ತು.

ಮುಂದೆ ನಡೆಯಲು ಅವನಿಗೆ ಜೈನ ಸನ್ಯಾಸಿಗಳು ಬೇಡೆಂದು ಪರಿಪರಿಯಿಂದ ಬೇಡಿಕೊಂಡರು. ಆದರೂ ಗುರುವಿನ ದರ್ಶನಕ್ಕೆ ಹೊರಟಾಗ ಸಂಕಟಗಳು ಹಲವಾರು ಎದುರಾದರೂ ಅವಕ್ಕೆ ಹೆದರಿ ಹಿಂದಿರುಗಬಾರದೆಂದು ತಿಳಿಸಿ ಸುಜ್ಞಾನಿ ಮುಂದೆ ಸಾಗಿದನು. ದಯೆಹೀನ ಬೇಡನೆದ್ದು, ಅವನನ್ನು ತಡೆದು ಪ್ರಾಣ ತೆಗೆಯದೆ ಬಿಡುವದಿಲ್ಲೆಂದು ಖಡ್ಗವನ್ನು ಕುತ್ತಿಗಿಗೆ ಅನಿಸಲು, ಸುಜ್ಞಾನಿಯು ಶಿವನನ್ನು ಸ್ತುತಿಸಿದನು. ಆಗ ಬೇಡನ ಹೃದಯವರಳಿ ಇಂತಹನ ಪ್ರಾಣ ತೆಗೆದುಕೊಳ್ಳುವದರಿಂದ ಲಾಭವಿಲ್ಲೆಂದು ತಿಳಿದು ಅವನಲ್ಲಿರುವ ಬಾಣ ಸೂತ್ರದ ಲಿಂಗಗಳನ್ನು ಕಂಡು ಇವೇನೆಂದು ಕೇಳಿದ್ದಕ್ಕೆ ಅವು ಇಷ್ಟಲಿಂಗಗಳು: ಇವನ್ನು ಕಟ್ಟಿಕೊಂಡವನ ಮನದಭಿಲಾಷೆ ಈಡೇರುವದೆಂದು ಹೇಳಿದನು. ಬೇಡನು ತಾನೊಂದು ಕಟ್ಟಿಕೊಳ್ಳಬೇಕೆಂದಾಗ, ಗುರುವಿಲ್ಲದೆ ಲಿಂಗ ಧರಿಸಿದರೆ ಕೂಡಲೇ ಸಾಯುವನೆಂದು ತಿಳಿಹೇಳಿದನು. "ನೀವೆ ಆ ಗುರುಗಳಾಗಿ ಲಿಂಗ ಕಟ್ಟಿ" ರೆಂದು ವಿನಯದಿಂದ ನುಡಿಯಲು ಬೇಡನಿಗೆ ತಿಳಿಸಿದನು. ನಂತರ ಅವನಿಗೆ ಇಷ್ಟಲಿಂಗವನ್ನು ದಯಪಾಲಿಸಿದನು. ಸಿಟ್ಟು ಬಿಟ್ಟವನ ಪಾಪ ಸುಟ್ಟು ಹೋಗುವದೆಂದು ಸುಜ್ಞಾನಿ ಬೋಧಿಸಿದನು. ಬಳಿಕ ಗುರುವಿನ ಪೂಜಾ ಸಾಮುಗ್ರಿಗಳನ್ನು ಹೊತ್ತು ನಡೆದಾಗ ಹೊತ್ತು ಮುಳುಗಿತು. ಗಿಡವೊಂದರ ಕೆಳಗೆ ವಾಸ ಮಾಡಿದರು. ಗುರುವಿನ ಪೂಜೆಗೆಂದು ಹೂ ಪತ್ರಿ ತರಲು ಲಿಂಗ ಪಡೆದ ಬೇಡನು ಕಾಡಿನೊಳಗೆ ಹೋದನು. ಅತ್ತ ಕಳ್ಳರು ಅರಮನೆ ಯಲ್ಲಿಯ ಆಭರಣಗಳನ್ನು ಕದ್ದು ಓಡುತ್ತಿರುವರನ್ನು ಅರಸನ ಆಳುಗಳು ಬೆನ್ನತ್ತಿದ್ದರು. ಮರದಡಿಯಲ್ಲಿ ಕುಳಿತ ಗುರುವಿನ ಬಳಿ ಕದ್ದ ಎಲ್ಲ ವಸ್ತುಗಳನ್ನು ಒಗೆದು ಓಡಿಹೋದರು. ಅರಸನ ಆಳುಗಳು ಅವನೇ ಕಳ್ಳ ರೊಡೆಯನೆಂದು ಭ್ರಮಿಸಿ ಗುರುವಿನ ಶಿರವನ್ನು ಕತ್ತರಿಸಿಕೊಂಡು ಹೋದರು. ಹೂ ಪತ್ರಿ ಆಯ್ದು ತಂದ ಶಿಷ್ಯ, ಗುರುವಿಗೆ ಒದಗಿದ ಸ್ಥಿತಿಯನ್ನು ಕಂಡು, "ನಾನಿದ್ದು ನಿನ್ನನ್ನು ಕಾಯದಾದೆ, ನನಗೇಕೆ ಸಾವು ಬರದು" ಎಂದು ತಲೆಕೊಡಲು ಸಿದ್ಧನಾದ ಸಮಯದಲ್ಲಿ ಆಕಾಶವಾಣಿಯು ಕೇಳಿಸಿತು. ಅದರಂತೆ ಮಣ್ಣಿನ ಶಿರಮಾಡಿ ದೇಹಕ್ಕೆ ಸೇರಿಸಲು ಕಳೆಯೇರಿ ಪ್ರಾಣ ಬಂದಿತು. ಪೂಜೆಗೆ ಅಣಿಗೊಳಿಸಿದನು. ನಂತರ ದೇಶಿಕನ ಕೈಕೋ ಲಾಗಿ ಕಲ್ಯಾಣದತ್ತ ಸಾಗಿದನು. ಮುಂದೆ ಒಂದು ಆಲದ ಮರದಡಿಯಲ್ಲಿ ಕುಳ್ಳಿರಿಸಿ ಪಾದಸೇವೆ ಮಾಡುವ ಕಾಲದಲ್ಲಿ ತರುಶಾಖೆಯಲ್ಲಿ ಜೋತಾಡುವ ತಲೆ ಕಂಡು ಮರಯೇರಿ ಶಿರ ತಂದನು. ಮುನ್ನಿನ ಆಕಾಶವಾಣಿ ನೆನಪಿಗೆ ಬರಲು ಮಣ್ಣಿನ ದೇಹಮಾಡಿ ಶಿರ ಸೇರಿಸಿದನು; ಅದಕ್ಕೆ ಕಳೆಯೇರಿತು. ಹೀಗೆ ಆ ಗುರುಗಳೀರ್ವರಿಗೆ ಸೇವಕನಾಗಿ ಕಲ್ಯಾಣಕ್ಕೆ ಬಂದಾಗ ಶಿರ ತನುಗಳು ಬೇರೆ ಬೇರೆ ಇದ್ದುದರ ಕಾರಣವೇನೆಂದು ಬಸವೇಶ್ವರನನ್ನು ಕಲ್ಯಾಣದವರು ಕೇಳಿದರು. ಆಕಾಶದತ್ತಣಿಂದ ಸುಮ ಮಳೆಯಾಯಿತು. ಶಿವಲೋಕದಿಂದ ಪುಷ್ಪಕ ವಿಮಾನವೊಂದು ಇಳಿದು ಗುರು ಶಿಷ್ಯರನ್ನು ಶಿವಲೋಕಕ್ಕೆ ಕರೆದೊಯ್ಯಿತು.

ಮಹಾಕವಿ ಹರೀಶ್ವರನ ಶಿಷ್ಯ ರಾಘವಾಂಕನು ಹರಿಶ್ಚಂದ್ರ ಕಾವ್ಯ ಬರೆಯಲು ಅರಸ ಆನೆಯ ಮೇಲೆ ಕೃತಿಯಿಟ್ಟು ಕವಿಯನ್ನು ಮೆರೆಸಿದನು. ಆಗ ಗುರುವರನ ಮಠ ಕಾಣಲು, ಆನೆಯಿಂದ ಇಳಿದು ಬಂದು ರಾಘವಾಂಕನು ಗುರು ಹರಿಹರನಿಗೆ ವಿನಯಪೂರ್ವಕ ನಮಿಸಿದನು. ಗುರು ಅವನಿಗೆ ಆಶೀರ್ವದಿಸದೆ ಸುಮ್ಮ ನಿರಲು ಕೋಪದ ಕಾರಣವೇನೆಂದು ರಾಘವನು ಕೇಳಿದನು. ಹರ ಕವೀಶ್ವರನೆಂಬ ನಿನ್ನ ಬಿರುದು ವ್ಯರ್ಥ. ಧನಕೊಲಿವ ಭವಿಗಳರಸರ ಕತೆ ಪೇಳುವದೇ? ನಡೆ; ನಡೆ ದುರುಳ ಎಂದನು. ಚೋಳ, ಬಲ್ಲಾಳರು ನರರಲ್ಲವೇನು? ಅವರನ್ನು ಕುರಿತು ತಾವು ಚರಿತೆ ಬರೆದುದೇಕೆಯನೆ ಹರಿಹರ ಕಿವಿ ಮುಚ್ಚಿಕೊಂಡು,

ಉರಿದೆದ್ದು ಹಾವಿಗೆಯಿಂದ ಹೊಡೆಯಲು ಹಲ್ಲುದುರಿದವು. ರಾಘವನು "ಪಂಪಾಪುರದರಸನ ಒಲುಮೆ ನನಗಿರಲು ಹಲ್ಲು ಪಡೆಯುವದು ಕಠಿಣವಲ್ಲ" ವೆಂದು ಭರದಿಂದ ಹೊರಟನು. ದೇವಾಲಯವನ್ನು ಪ್ರವೇಶಿಸಿ, ವಿರೂಪಾಕ್ಷನನ್ನು ನಾನಾ ರೀತಿಯಿಂದ ಭಜಿಸಿದರೂ ಪ್ರತ್ಯಕ್ಷನಾಗದಿರಲು ಆತ್ಮಹತ್ಯ ಮಾಡಿಕೊಳ್ಳಲು ಸಿದ್ಧನಾದನು ಕವಿ ರಾಘವಾಂಕ. "ಮಿಡುಕದಿರು, ಪುಡುಕದಿರು ದೈವತಂ, ಮೃಡನು ಗುರುವರನ ಸರಿ ಬಾರನು" ಎಂಬ ನುಡಿ ಕೇಳಿಬಂತು ಗಗನ ಭಾಗದಿಂದ. ನಂತರ ರಾಘವಾಂಕ ಹರೀಶ್ವರನ ಕಡೆ ಸಾಗಿ, ವಂದಿಸಿ ಅಪರಾಧ ಕ್ಷಮಿಸಲು ಬೇಡಿಕೊಂಡನು. ಗುರು, ತಂದೆ, ತಾಯಿ, ಬಂಧು ದಯಾಸಿಂಧು ಗುರು ಇಂದುಧರನಿಂದ ವಂದ್ಯನೆಂದು ಗುರು ಸ್ತುತಿಯನ್ನು ಹೃದಯ ತುಂಬ ಹಾಡಿದಾಗ, ಗುರು ಶಿಷ್ಯನ ಮೇಲೆ ಕೃಪೆಯಿಟ್ಟು ಕಾಪಾಡಿದನು. ರಾಘವನಿಗೆ ಹಲ್ಲುಗಳು ಪುನಃ ಮೂಡಿದವು. ಬೋಧೆ ಪಡೆದು ಕವಿ ರಾಘವನು ಪಂಪಾದವನ ದೇವಾಲಯಕ್ಕೆ ಬರುವ ಮುನ್ನವೆ ಶಿವನು ಬಾಗಿಲಿಗೆ ಬಂದು ಅವನನ್ನು ಅಪ್ಪಿಕೊಂಡನು. "ನ ಗುರೋರಧಿಕ" ನೆಂಬ ಆಗಮದ ನುಡಿ ಗೌರಿಗೆ ಶಿವನು ಆಡಿದುವನ್ನು ನೀ ತಿಳಿಯದಿಲ್ಲ. "ನರ ಮುನಿಯೆ ಹರಕಾಯ್ವ, ಹರ ಮುನಿಯೆ ಗುರುಕಾಯ್ವ" ಗುರು ಮುನಿಯೆ ಹರಕಾಯಲು ಸಾಧ್ಯವಿಲ್ಲ, ಕಾರಣ ಗುರುಹಿರಿಯರಿಗೆ ನೀನು ನಂಬು, ಅವರಿಗೆ ಬಾಗಿ ನಡೆ.

## ನಾಲ್ಕನೆಯ ಸಂಧಿ

ಶರಣಪ್ಪನಿಗೆ ಮುಂದೆ ಗುರುಗಳು ಲಿಂಗ ಮಹಿಮೆಯನ್ನು ಹೇಳಿವರು. ಲಿಂಗ ನಿಷ್ಕಲ ವಸ್ತು, ಲಿಂಗ ನಿರುಪಮ, ಅದು ಚೇತನರೂಪ, ಲಿಂಗ ಭವಭಯ ಲೋಪ, ಲಿಂಗ ಚಿದ್ಘನ, ಶಾಂತಲಿಂಗ, ಅದಕ್ಕೆ ದೃಷ್ಟಾಂತ ವಾಗಿ ಗುರುಗಳು ಕಥೆಯೊಂದನ್ನು ನಿರೂಪಿಸಿದರು. ಹಿಂದೆ ಬಸವನು ಕಲ್ಯಾಣದಲ್ಲಿದ್ದಾಗ ಅಲ್ಲಿ ಕಮಳಾಯಿ ಎಂಬ ಸುಂದರ ವಾರಸ್ತ್ರಿ ಇದ್ದಳು. ಅವಳು ನಿತ್ಯ ಪರಮಾತ್ಮನ ರೂಪಾದ ಜಂಗಮರೇ ತನ್ನ ಜಪರೆಂದು ನಂಬಿ ರತಿಸುಖ ಹೊಂದುತ್ತಿದ್ದಳು. ಅವರಿಗೆ ಉಪಚಾರ ಮಾಡುತ್ತ, ಮದನಕೇಳಿ ಸಮಯದಲ್ಲಿ ಮಂಚದ ಕಾಲಿನಲ್ಲಿ ಕೈ ತೆಗೆಯದಂತೆ ಲಿಂಗವನ್ನು ಹಿಡಿದು ಕೂಪರೊಡನೆ ಭೋಗಿಸುತ್ತಿದ್ದಳು. ಇದನ್ನು ತಿಳಿದ ಪರಮಾತ್ಮನು ಪರೀಕ್ಷಿಸಲು ಕೋಟಿ ಮದನರನ್ನು ಹಳಿಯುವಂತಹ ರೂಪತಾಳಿ, ಸೂರ್ಯಕಾಂತಿಯನ್ನು ಧಿಃಕ್ಕರಿಸುವ ಸೊಬಗನ್ನು ಹೊಂದಿ, ವೃಷಭ ನಾರದರೊಡನೆ ಕಲ್ಯಾಣಕ್ಕೆ ಬಂದನು. ಅಷ್ಟರಲ್ಲಿ ಸೂರ್ಯನು ಮುಳುಗಿದನು. ರಾತ್ರಿಯಲ್ಲಿ ವೇಶ್ಯೆಯರ ಮನೆ, ಅವರ ಸೌಂದರ್ಯ, ಮಾತಿನ ಚಾತುರ್ಯಗಳನ್ನು ಕೇಳುತ್ತ ಸಾಗಿದನು. ಕೊನೆಗೆ ಕಮಳಾಯಿ ಮನೆಗೆ ನಡೆದನು. ಆದರದಿಂದ ಕಮಳಾಯಿ ವೇಷದ ಶಿವನನ್ನು ಬರಮಾಡಿಕೊಂಡು ನೃತ್ಯ, ಗಾಯನ ಕೇಳಿಸಿದಳು. ಕಮಳಾಯಿಯೊಂದಿಗೆ ಸರಿರಾತ್ರಿವರೆಗೆ ಸಮರಸದೊಳು ಪರಿಭೋಗಿಸಿದನು. ರತಿಯಲ್ಲಿ ಮೈಮರೆಸಿ ಕರಡಿಗಿಯಲ್ಲಿಟ್ಟ ಲಿಂಗ ತೆಗೆದುಕೊಂಡನು. ಅವರೊಂದಿಗೆ ಅವಳ ಹರಣ ಏಕಾಯಿತು. ಅದನ್ನು ತಿಳಿದು ಶಿವ ಹೊರಬಂದು ವೃಷಭ, ನಾರದರೊಂದಿಗೆ ತ್ರಿಪುರಾಂತಕ ದೇವಾಲಯದೆಡೆ ಸಾಗಿದನು. ಬೆಳಗಾಯಿತು. ದಾಸಿಯರು ಗಾರಾದ ಕಮಳಾಯಿಯನ್ನು ಕಂಡು ಬೆರಗಾದರು; ಅವರೆಲ್ಲ ದುಃಖಭರಿತ ರಾದರು. ಈ ಸುದ್ದಿ ಊರಲ್ಲಿ ಹಬ್ಬಿತು. ಮಂಚಣ್ಣ ಇದನ್ನು ಸಾಧಿಸಿ ಜಂಗಮರಿಂದ ಸಾರಸಾಯಿಯು

ಮರಣ ಹೊಂದಿದ್ದನ್ನು ಅರಸನಿಗೆ ದೂರು ಹೇಳಿದನು. ಇದಕ್ಕೆಲ್ಲ ಬಸವನೆ ಹೊಣೆ, ಧನದಾಸೆಯಿಂದ ಈ ಕೆಲಸವನ್ನು ಜಂಗಮರಿಗೆ ಹೇಳಿ ಅವಳನ್ನು ಕೊಲ್ಲಿಸಿದ್ದಾನೆಂದು ಹೇಳಿದನು. ಬಸವೇಶನು ಅಪ್ಪಣ್ಣನನ್ನು ಕಳಿಸಿ ಶಿವನನ್ನು ಕರೆತರಲು ಪ್ರಾಣ ಬಂದಿತು ಕಮಳಾಯಿಗೆ. ಮೃಡನು ಅವರೆಲ್ಲರಿಗೆ ತನ್ನ ನಿಜರೂಪ ತೋರಿದನು ಪುಷ್ಪವೃಷ್ಟಿಯಾಯಿತು. ದೇವಲೋಕದಿಂದ ಸುಮಯಾನವು ಬರಲು ಕಮಳಾಯಿಯನ್ನು ಅದರಲ್ಲಿ ಕುಳ್ಳಿರಿಸಿಕೊಂಡು ದೇವಲೋಕಕ್ಕೆ ನಡೆದನು. ಚಂಡೇಶ, ಚೋಳ ಭೂಪಾಲ, ಉರಿಲಿಂಗ ಪೆದ್ದಣ್ಣ, ಚೌಪಾರ್ಯ, ಘಟ್ಟಿವಾಳಯ್ಯ ಮೊದಲಾದವರು ಲಿಂಗ ಜೀವಿಗಳು. ಅವರನ್ನು ಲಿಂಗವೆಂದೇ ಭಾವಿಸು ಶರಣಪ್ಪ.

ಶರಣಪ್ಪ ಕೇಳು, ಜಂಗಮನು ಗುರು, ಲಿಂಗಗಳಿಗಿಂತ ಹತ್ತು ಮಡಿ ಘನವಾದವನು. ಅವನಿಗೆ ಭಕ್ತರ ಹಂಗಿಲ್ಲ. ಹಿಂದೆ ಕಾಂಚಿಯಲ್ಲಿ ಶಿರಿಯಾಳನೆಂಬವನು ಸುತನ ತಲೆಕೊರೆದು ಜಂಗಮಗೆ ಉಣಿಸಿದ್ದರಿಂದ ಅವನಿಗೆ ಒಲಿದು ಶಿವ ಕೈಲಾಸಕ್ಕೆ ಕರೆದೊಯ್ದನು. ಇದರಿಂದ ಶಿರಿಯಾಳನು ಗರ್ವಿಷ್ಠನಾದನು. ಅವನ ದರ್ಪ ಬಿಡಿಸಲು ಪರಶಿವನು ಅವನನ್ನು ಪರಮ ಪಾವನ ಚರಿತೆ ನಂಬೆವ್ವೆಯರ ಮನೆಗೆ ಕರೆದುಕೊಂಡು ಬಂದ. "ನಂಬೆಕ್ಕ, ಮೂರು ದಿನದಿಂದ ಉಪವಾಸ, ಹಸಿವು ಘನವಾಗಿದೆ. ಬಿಸಿಯ ಕರಿಗಡಬು, ತುಪ್ಪ, ಕೆನೆಮೊಸರನ್ನು ಸಂತಸದಲಿ ನೀಡಮ್ಮ" ಎಂದು ಕೇಳಿದನು. ಸಂತೋಷಚಿತ್ತಳಾದ ನಂಬೆವ್ವ ಮಡಿಯಾಗಿ ಪಾಯಸ, ಫೇಣಿ, ತಿಳಿದುಪ್ಪದಲ್ಲಿ ಕರಿದ ಕಡುಬು, ಗಾರಿಗೆ ಮಾಡಿ ಇಳುಹಿ ನೀರು ತರಲು ಹೋದಳು. ಅಷ್ಟರಲ್ಲಿ ಆಕಳು ಕಾಯಲು ಹೋದ ಅವಳ ಮಗ ಮನೆಗೆ ಬಂದು ತಾಯಿಯನ್ನು ಕೂಗಿ, ಕಾಣದಿರಲು ಹಸಿವನ್ನು ತಾಳದೆ ಒಳಗೆ ಹೋಗಿ ಕಡಬನ್ನು ಕಂಡು, ಕೈಗಳೆರಡರಲ್ಲಿಯೂ ಹಿಡಿದುಕೊಂಡು ತಿನ್ನತೊಡಗಿದ. ನಂಬೆವ್ವ ಬಂದು ಕೊಡವನ್ನು ಇಳುಹಿ "ಈ ನಾಯಿ ಚರರಡಿಗೆಯ ಮೀಸಲನ್ನು ಮುರಿಯಿ" ತೆಂದು ಒನಕೆಯತ್ತಿ ಹೊಡೆದಳು, ಮಗುವಿನ ಶಿರ ಭಾಗವಾಯಿತು. ಕಾಲು ಹಿಡಿದು ದರದರ ಎಳೆದು ಗೋದಲೆಯಲ್ಲಿ ಹುಲ್ಲು ಮುಚ್ಚಿಟ್ಟಳು. ಮತ್ತೆ ಸ್ನಾನಮಾಡಿ ಶುದ್ಧ ಪಾಕ ಮಾಡಿದಳು. ಶಿವನು ನಡೆದುದೆಲ್ಲವನ್ನು ಶಿರಿಯಾಳನಿಗೆ ತೋರಿಸಿದನು. ಶೆಟ್ಟಿ ಗರ್ವ ತೊರೆದು ಭಕ್ತಿಗೆ ಇವಳು ಜನನಿಯೆಂದು ಕೊಂಡಾಡಿದನು.

"ಶಿವನೆ ಅರ್ಚನೆಗೆ ಈಗ ದಯೆಗೈಯುವದು" ಎನಲು ಮಜ್ಜನಗೈದು ಲಿಂಗಪೂಜೆ ಮಾಡಿಕೊಂಡರು. "ಪ್ರಸಾದ ಸ್ವೀಕರಿಸಲು ಬನ್ನಿ" ರೆನ್ನಲು "ನಿನ್ನ ಮಗನನ್ನು ಕರೆ, ಮಕ್ಕಳಿಲ್ಲದ ಊಟ ಭಾವಿಸಲು ಕಾಲಕೂಟ, ಅವನಿಲ್ಲದೆ ಊಟ ಮಾಡುವದಿಲ್ಲ" ಎನ್ನಲು ಅಣುಗನನ್ನು ಕರೆಯಲು ನಾನೇನು ಶಿರಿಯಾಳ ಚಾಂಗುಳಿಯೇನು ಜಂಗಮನಿಗೆಂದು ತಯಾರಿಸಿದ ಪ್ರಸಾದದ ಮೀಸಲನ್ನು ಕಳೆದ ಭವಿಶುನಕನನ್ನು ಕೊಂದೆ. ನೀ ಇನ್ನು ನೆನಸದಿರು. ಉಣದಿದ್ದರೆ ಒನಕೆಯಿದೆ ನೋಡೆಂದಳು. ಅದನ್ನು ಕೇಳಿ ಶಿರಿಯಾಳನಿಗೆ ನೀರಿಳಿಯಿತು. ಶಿವನು ತನ್ನ ನಿಜರೂಪ ತೋರಿ ನಂಬೆಕ್ಕಗೆ "ನಿನ್ನ ಇಚ್ಛಿತದ ಪದವಿ ಬೇಡೆಂ" ದನು. ಆ ನುಡಿಕೇಳಿ ಕೋಪ ತಾಳಿದ ನಂಬೆಕ್ಕ, "ಕೊಡುವುದನ್ನು ಶಿರಿಯಾಳನಿಗೆ ಕೊಡು ಈ ಲಲಿತರೂಪ ಎನ್ನ ಆಲೋಕನೆಗೆ ಬೇಡ, ಸಾಕು. ಮೊದಲಿನ ನಿನ್ನ ರೂಪು ತೋರು; ಭಕ್ತಿ ಮೂಲ ಕೆಡಿಸಲಿಕ್ಕೆ ತೋಳ ಮೊದಲಾದ ರೂಪು ತೋರಿದರೆ ಭ್ರಮೆಯೊಳಗೆ ಬೀಳುವೆನೆಂದು ತಿಳಿದಿರಾ? ಗಿರಿ ಚಲಿಸಿದರೂ ಚರಭಕ್ತಿ ಹೊರತು ಪೆರತೊಂದನ್ನು ಬಯಸೆನೆಂದರಿ. ನಿನ್ನ ಚರರೂಪಕ್ಕೆ ಭಿನ್ನ ತಿಳಿದಿಲ್ಲ. ಎರಡು ಕಣ್ಣೇನು, ಮೂರೇನು, ಸಾಕು; ಉಣ್ಣುತೆಮ್ಮನು ಸಲಹು

ಎಂದು ಬೇಡಿದಳು. ಶಿಷ್ಟೆಯೊಂದಿಗೆ ಶಿವನು ಪ್ರಸಾದ ಸೇವಿಸಿ ಮಗುವಿಗೆ ಪ್ರಾಣನೀಡಿ ಸುಮಯಾನದಲ್ಲಿ ಅವರಿಗೆ ಕೈಸಾಸಕ್ಕೊಯ್ದು ಗಣಪದವಿ ಕೊಟ್ಟು ಮನ್ನಿಸಿದನು. ಮಾನಕಂಜ, ಬಲ್ಲಾಳ, ಕಲಿಕಂಭ, ಎಳೆಯಾಂಡಮಾರ, ಚಾಮಯ್ಯ, ನಿರ್ಲಜ್ಯ ಶಾಂತಯ್ಯ ಮೊದಲಾದ ಭಕ್ತರ ಜಂಗಮ ಪ್ರೇಮವನ್ನು ಮರೆಯದಿರು ಎಂದು ಶರಣೇಶನಿಗೆ ಗುರುಗಳು ಜಂಗಮ ಮಹಿಮೆ ಅರುಹಿದರು.

## ಐದನೆಯ ಸಂಧಿ

ಗುರುಗಳು ಸಂಪ್ರೀತಿಯಿಂದ ಶರಣಪ್ಪನಿಗೆ ವಿಭೂತಿ ಮಹಿಮೆ ತಿಳಿಸಿದರು. ಭಸ್ಮ ಮಹಿಮೆ ಅಪಾರ, ಕುಸುಮ ಶರಹರನೇ ಭಕ್ತಿಯಿಂದ ಧರಿಸುವನು. ವಿಶ್ವಾಸದಿಂದ ವಿಭೂತಿಯ ಪೆಸರ್ಗೊಳ್ಳಲು ಸಂತೋಷ ಕೊಡುವುದು. ಭಸಿತವನ್ನು ಧರಿಸಲು ಸಂಪತ್ತು ವೃದ್ಧಿಯಾಗುವದು. ಮನು, ದಿವಿಜ, ದನುಜ ಮುಖ್ಯರೆಲ್ಲ ಭಸ್ಮದಿಂದ ಪಾವನರಾದರು. ಭಸ್ಮ ಮಹಿಮೆಯ ಕಥೆ ಹೀಗಿದೆ. ಧನೇಂಜಯನೆಂಬ ಯತಿಗೆ ಸತಿಯರು ನೂರ್ವರು, ಮಕ್ಕಳೂ ಅಷ್ಟೇ; ಕಿರಿಯ ಹೆಂಡತಿಯ ಮಗ ಕರ್ಣ, ಅವನ ಹೆಂಡತಿ ಸುಚಿಸ್ಮಿತೆ. ಅವಳು ಸಾಧ್ವಿ. ಮಹೋಬಳಪುರಕ್ಕೆ ಕರ್ಣ ಬಂದು ಸಲಿಲದಲ್ಲಿ ಮಿಂದು ಶಿವಲಿಂಗವನ್ನು ಬಲವಂದು ಹೋಗುವಾಗ ಲಿಕುಚ ಮುನಿ ಫಲ ಒಯ್ಯುತ್ತಿದ್ದನು. ಆ ಫಲದ ರಸ ಸೆಳೆದು ಮೂಸಿಸಲು ಅವನ ಹೊಲಸು ನಡೆಗೆ ಕೋಪಿಸಿ, ಆ ಮುನಿ ನೂರು ವರ್ಷ ನೊಣ ಜನ್ಮಕಿಳಿಯೆಂದು ಶಾಪವಿತ್ತನು. ಸತಿ ಈ ಸಂಗತಿ ತಿಳಿದು ದುಃಖಿತಳಾಗಿ ನೊಣ ಹಾರಿದತ್ತ ಹೋಗಿ ಆರೈದಳು. ಅದನ್ನು ದಾಯಾದಿಗಳು ಕೊಲ್ಲಲು ಶೋಕಿತಳಾದ ಶುಚಿಸ್ಮಿತೆ, ಅರುಂಧತಿ ಬಳಿ ಬಂದು ತನ್ನ ದುಃಖ ತೋಡಿಕೊಂಡಳು. ಅರುಂಧತಿ ಆ ಸತ್ತ ನೊಣಕ್ಕೆ ಭಸ್ಮ ಲೇಪಿಸಿ ಬದುಕಿಸಿದಳು. ಅದನ್ನು ಪ್ರೀತಿಯಿಂದ ಶುಚಿಸ್ಮಿತೆಯು ತನ್ನ ಪ್ರಾಣದಂತೆ ರಕ್ಷಿಸಿದಳು. ವೈರಿಗಳು ಮತ್ತೆ ಅದನ್ನು ಕೊಂದರು. ನೊಣದ ಶವವನ್ನು ಅರುಂಧತಿಯ ಬಳಿಗೆ ಪುನಃ ತಂದು ಪತಿಯ ಪ್ರಾಣದಾನಕ್ಕೆ ಪರಿ ಪರಿಯಿಂದ ಬೇಡಿಕೊಂಡಳು. ಅರುಂಧತಿಯ ಪತಿ ಈ ಸಲ ಆ ಶವಕ್ಕೆ ಭಸ್ಮ ತಳೆಯಲಾಗಿ ತತ್‌ಕ್ಷಣದಲ್ಲಿ ಮುನ್ನಿನಂತೆ ಅಸು ಬಂದು ನರನಾಗಿ ನೂರು ಕೋಟಿ ಕಾಮದೇವರಂತೆ ಸುಂದರವಾಗಿ ಕಂಡನು. ಆ ಕರ್ಣಸತಿ ಪತಿಯೊಡನೆ ಬಹಳ ಸುಖದಿಂದ ಜೀವನ ಕಳೆದಳು. ಮೂರು ಲೋಕಕ್ಕೆ ಭಸಿತ ಶ್ರೀಕರಂ, ಸಲೆಪಾವನಾಕರವು, ಯಮನಿಗೆ ಅತಿ ಭೀಕರವಾದುದು ಮತ್ತು ಮೃತ್ಯುರಹಿತವಾದುದು. ವಿಭೂತಿ ಧರಿಸದೆ ನೂರಾರು ಆಭರಣ ಇಟ್ಟುಕೊಂಡರೂ ಶೋಭೆ ಬಾರದು. " ಭಸಿತವಿಲ್ಲದ ಹಣೆ ಮಸಿ ತೆನೆಗೆ ಸಮಾನ. " ಪ್ರೀತಿಯಿಂದ ಭಸ್ಮ ಲೇಪಿಸಿ ಕೊಳ್ಳುವವನನ್ನು ಮುಕ್ಕಣ್ಣ ಮೆಚ್ಚುವನು.

ರುದ್ರಾಕ್ಷಿ ಚರಿತೆಯನ್ನು ಅರುಹಲು ಗುರುವಿಗೆ ಶರಣಬಸವನು ವಿಜ್ಞಾಪಿಸಿಕೊಂಡ ಮೇರೆಗೆ ಹಿಂದೆ ಅನೇಕರನ್ನು ರಕ್ಷಿಸಿಪ ಶಿವ, ದೃಗಗುಣಮಣಿಯ ಮಹಿಮೆಯನ್ನು ವಿಸ್ತರಿಸಿದರು. ದೀಕ್ಷಾ ಸಮಯದಲ್ಲಿ ಜಂಗಮರ ಪಾದೋದಕವನ್ನು ಸೇವಿಸುವಾಗ, ಪ್ರಸಾದವನ್ನು ಕೈಕೊಳ್ಳುವಾಗ ದೇಹದ ಮೇಲೆ ರುದ್ರಾಕ್ಷಿ ಇಲ್ಲದಿದ್ದರೆ ನೆರೆ ನಿಷ್ಫಲ. ಯಾವಾಗಲೂ ಕಾಯದ ಮೇಲೆ ಹರನಾಕ್ಷಿ ಧರಿಸಿದವರಿಗೆ ಯಮಪುರದ ಭಯವಿಲ್ಲ. ದುರಿತ ದೂರಾಗುವದು. ಸಂತತ ಬೇಡಿದ ಇಷ್ಟಾರ್ಥ ಕೈಗೂಡುವವು. ಬಹು ದಿನಗಳ ಹಿಂದೆ ಕಾಶಿಯಲ್ಲಿ

ಸುಜ್ಞಾನಾಶ್ರಮನೆಂಬ ಋಷಿಯಿದ್ದನು. ಅವನ ಬಳಿ ಶೂದ್ರನೆಂಬ ಸೇವಕನಿದ್ದನು. ಅವನಿಗೆ ವಯಸ್ಸಾಗಿ ಮರಣ ಹೊಂದಿದನು. ಯತಿಪಾದ ಸೇವೆಯ ಫಲವಾಗಿ ಆ ಶೂದ್ರನಿಗೆ ಯಮಪುರದಲ್ಲಿ ಯಮನ ಕಿಂಕರ ನಾಗುವ ಭಾಗ್ಯ ದೊರೆಯಿತು. ಒಂದು ದಿನ ಆ ಶೂದ್ರನು ಭೂಲೋಕಕ್ಕೆ ಬಂದು ತನ್ನ ಗುರುವಿನ ಬಳಿಗೆ ಹೋದನು. ಆಗ ಅವನು ಅತ್ಯಂತ ಗಾಬರಿಯಾಗಿದ್ದನು. ತೊದಲು ಮಾತು, ಬಿಡುವ ನಿಡಿದಾದ ಉಸಿರು, ಹೆಜ್ಜೆ ಹೆಜ್ಜೆಗೆ ಉಂಟಾದ ಮೈನಡುಕ, ರಕ್ತಸುರಿದು ಓಕಳಿಯಾಡಿದಂತಾದ ದೇಹದಿಂದ ಕೂಡಿ, ಹೀಗೆ ಓಡಿ ಬಂದು ಮುನಿಯ ಪಾದಗಳ ಮೇಲೆ ಬಿದ್ದನು. ರವಿಸುತನ ಚರನೆಂಬುದನ್ನು ಸುವಿವೇಕದಿಂದ ತಿಳಿದು ಅವಸರ ದಿಂದ ಬಂದ ಕಾರಣವೇನು? ವಿವರಿಸೆನೆ ಆ ಸೇವಕನು ಭಕ್ತಿಯಿಂದ ನಮಸ್ಕರಿಸಿ, ತಾನು ಮೊದಲು ಅವರ ಸೇವೆ ಮಾಡಿದ್ದನ್ನು ತಿಳಿಸಿ, ಯಮನ ಸೇವಕರಿಗೂ, ಶಿವದೂತರಿಗೂ ನಡೆದ ಯುದ್ದದ ವೃತ್ತಾಂತವನ್ನು ಹೇಳಿದನು. ಯಮಲೋಕದಲ್ಲಿಯ ತನ್ನ ಕಾಯಕ - ದುರಾಚಾರಿಗಳನ್ನು ದರ ದರ ಎಳೆದೊಯ್ದು ನರಕದಲ್ಲಿ ತಳ್ಳುವದು. ಒಡೆಯನಿಗೆ ಹೇಳಿ ಸೇವಕರಿಂದ ಅವರಿಗೆ ನಾನಾ ಸಂಕಟಗಳನ್ನು ಕೊಡಿಸುವದು, ಪುಣ್ಯ ಜೀವಿಗಳನ್ನು ಸತ್ಕರಿಸಿ, ಅವರಿಗೆ ಯಮದೇವನು ತನ್ನ ಅರ್ಧಾಸನವನ್ನು ನೀಡಿ ಹರಲೋಕಕ್ಕೆ ಕಳಿಸುವನು. ಕಾಶಿಯಲ್ಲಿರುವ ಅಂತ್ಯಜ ನೊಬ್ಬ ತೀರಿಕೊಳ್ಳಲು ಯಮದೂತರು ಯಮಪುರಿಗೆ ಒಯ್ಯುವ ಕಾಲದಲ್ಲಿ ಯಮನ ಸೇವಕರಿಗೂ, ಶಿವನ ದೂತರಿಗೂ ಕಾಳಗವಾಯಿತು. ಆ ಅಂತ್ಯಜನ ವಿಶೇಷವನ್ನು ತಿಳಿದ ಶಿವದೂತರು ತಮ್ಮ ಲೋಕಕ್ಕೆ ಕರೆ ದೊಯ್ಯಲು ಅವನನ್ನು ಬಿಟ್ಟುಕೊಡಿರೆಂದು ಕೂಗಿದರು. ಅದಕ್ಕೆ ಕಿವಿಗೊಡದೆ ಮುಂದೆ ಸಾಗಿದರು ಯಮ ನಾಳುಗಳು. ಕಾರಣ ಎರಡೂ ಕಡೆಯವರಿಗೆ ಘೋರ ಯುದ್ಧ ನಡೆಯಿತು. ಅದು ಅತಿ ಭಯಂಕರವಾಗಿತ್ತು. ಪರಮಾತ್ಮನ ಸೇನೆಯೊಡನೆ ಶೂರತನದಿಂದ ಯಮನ ಸೈನ್ಯ ಯುದ್ಧಮಾಡಿ ಸೋಲು ಪಡೆಯಿತು. ಮತ್ತೊಂದು ಯಮನಪಡೆ ಬಂದಿತು. ಹೀಗೆ ಯಮನ ಅಶ್ವ, ಆನೆ, ರಥದ ಬಲ ಈ ತುಮುಲ ಯುದ್ಧದಲ್ಲಿ ಸೋತು ಓಡಿ ಹೋಯಿತು. ಹೆಣಗಳ ಬಣವೆಯಾಯಿತು; ಪಿಶಾಚಿಗಳಿಗೆ ಇದು ಔತಣವಿತ್ತಂತಾಯಿತು. ಆ ಘೋರ ಕಾಳಗದಲ್ಲಿ ಸತ್ತು ಉಳಿದು, ಕೆಲ ಯಮನ ಸೇವಕರು ಶಿವನ ಚರರನ್ನು ಕಂಡು "ಈ ಪಾಪಾತ್ಮನಿಗೆ ಶಿವನ ಲೋಕವೆಂತು ದೊರಕುವದು ಅದನ್ನು ತಿಳಿಸೆ" ನಲು ಅಂತರಾತ್ಮನ ಸೇವಕರು "ಹೊಲೆಯನು ಸತ್ತ ಸ್ಥಳದಲ್ಲಿ ಮೊಳಕಾಲ ಕೆಳಗೆ ಒಂದು ನರನಳತೆಯಲ್ಲಿ ರುದ್ರಾಕ್ಷಿ ಫಲವಿದ್ದುದರ ಪರಿಣಾಮವಾಗಿ ಇವನಿಗೆ ಆ ಸುಕೃತ ದೊರೆತು ಗಣತಿಲಕ ಪದವಿಗೆ ಏರಲು ಅರ್ಹನಾದನೆಂದು ತಿಳಿಸಿದರು. ಮುನಿನಾಥ ಅತ್ತ ಅಂತ್ಯಜನನ್ನು ಶಿವದೂತರು ಶಿವಲೋಕಕ್ಕೆ ಒಯ್ಯಲು ರುದ್ರಾಕ್ಷಿಯನ್ನು ನೋಡಬೇಕೆಂಬ ಮನಸ್ಸಾಗಲು ಕೆಲವರೊಡನೆ ಭೂಲೋಕಕ್ಕೆ ಬಂದು ನೆಲ ಅಗಿದು ನೋಡಲು ರುದ್ರಾಕ್ಷಿಯನ್ನು ಕಂಡರು. ಈ ರತ್ನಗರ್ಭವೆಂಬ ಮಣಿಯ ಪರಿಣಾಮವಾಗಿ ಅವನಿಗೆ ಶಿವಲೋಕ ಪ್ರಾಪ್ತವಾಯಿತೆಂಬುದು ಮನದಟ್ಟಾಯಿತು. ಆ ರುದ್ರಾಕ್ಷಿಯನ್ನು ಎತ್ತಿಕೊಂಡು ನಮಿಸುತ್ತ ಆ ಮುನಿವರನಿಗೆ ಯಮನ ಚರನು (ಮುನಿವರನ ಸೇವಕ) "ಮಂಡಲದೊಳು ಇದನ್ನು ಧರಿಸಿಕೊಂಡವಗೆ ಅಂಡಲೆಯು ಅಗದು. ಮುಕ್ತಿ ಕನ್ಯೆಗೆ ರುದ್ರಾಕ್ಷಿ ವರನು ಅಪ್ಪಂತೆಯಿರುವದು. ಬ್ರಹ್ಮಾಂ ಡದಲ್ಲಿ ಇದಕ್ಕೆ ಸರಿಯಾದುದುಯಿಲ್ಲ. ಇದನ್ನು ಖಂಡಿಸಿದವನಿಗೆ ಚಾಂಡಾಲ ಜನ್ಮ ದೊರಕುವದು. ಇದು ಅಂಗದಲ್ಲಿರಲು ಪಾಮರ ಪೂತನಾಗುವನು; ಪುಣ್ಯಚರಿತನಾಗುವನು. ದುರಿತಾಳಿಗಳೆಲ್ಲ ಸ್ಪರ್ಶಮಾತ್ರದಲ್ಲಿ ನಾಶವಾಗುವವು'' ಕಾರಣ ಇದನ್ನು ತಾವು ಧರಿಸಬೇಕು. ಅದನ್ನು ನಾನು ಧರಿಸಿದರೆ ಒಡೆಯನಿಗೆ ಎರಡು

ಬಗೆದಂತಾಗುವದು" ಎಂದು ಹೇಳಿ ಆ ರುದ್ರಾಕ್ಷಿಯನ್ನು ಸುಜ್ಞಾನಾಶ್ರಮ ಮುನಿಗೆ ಕೊಟ್ಟು ಪಾದಕ್ಕೆ ವಂದಿಸಿ ಯಮಲೋಕಕ್ಕೆ ಹೋದನು.

ಆದರದಿಂದ ಹರನಾಕ್ಷಿ ಧರಿಸಿದವನಿಗೆ ಸುಸ್ಥಿರ ಪದವಿ ದೊರಕೊಳುವದು ಖಂಡಿತ. ವರನಂದಿ ಗ್ರಾಮದೊಳಗಿರುವ ಮಹಾನಂದಿ, ಕಪಿ, ಕೋಳಿಗಳಿಗೆ ಇದನ್ನು ಕಟ್ಟಲು ಮರುಜನ್ಮದಲ್ಲಿ ಮಂತ್ರಿ, ಅರಸು ಜನ್ಮ ಪಡೆದು ಅವು ಸುಖಿಯಾದವು. ಪಾಪಿಷ್ಟನೊಬ್ಬ ಮಾರ್ಗದಲ್ಲಿ ನಡೆದು ಬರುವಾಗ ರುದ್ರಾಕ್ಷಿಯನ್ನು ಕಂಡು ಮರದ ಮಣಿಯೆಂದು ಭಾವಿಸಿ ಕೊರಳೊಳಗೆ ಧರಿಸಿ, ಶಿವಪುರ ಪೊಕ್ಕು ಪ್ರಮಥಗಣರ ಯರೆಯನಾಗಿ ಮೆರೆದನು. ಪಾಪಾತ್ಮನೊಬ್ಬ ಕೋಳಿಗೊಂದು ರುದ್ರಾಕ್ಷಿ ಕಟ್ಟಿಸಲು ಬೇಂಟೆಯೊಳಗಿರಲು ಬೇಡನನ್ನು ಗುದ್ದಿ, ಕಿರುಬನನ್ನು ಸಹ ಕೊಂದು ತಾನೂ ಸತ್ತು ಬೀಳಲು ಶಿವದೂತರು ಸುಮಯಾನದಲ್ಲಿ ಅದನ್ನು ಕೂಡ್ರಿಸಿ ಶಿವಲೋಕಕ್ಕೆ ಒಯ್ದು ಗಣಪದವಿ ಕೊಟ್ಟರು. ರುದ್ರಾಕ್ಷಿ ತಳೆದ ಚಾರಮನು ತನ್ನ ದಳದೊಂದಿಗೆ ಹರಪುರಕ್ಕೈದಿ ರುದ್ರಗಣ ತಿಲಕನಾಗಿ ಮೆರೆದನು. ರುದ್ರಾಕ್ಷಿ ಶರಣಜನ ತಲೆಮಣಿ. ರುದ್ರಾಕ್ಷಿಯ ಮಹಿಮೆ ತಿಳಿದು ಗುರುಗಳ ಪದನಳಿನ ಗಳಿಗೆರಗಿದನು.

## ಆರನೆಯ ಸಂಧಿ

ಪಂಚಾಕ್ಷರಿ ಮಂತ್ರ ಮಹಿಮೆಯನ್ನು ಬೋಧಿಸಲು ಶರಣಬಸವನು ಕೇಳಿದನು. ಗುರುಗಳು ಶಿಷ್ಯನಿಗೆ ಸಂಪ್ರೀತಿಯಿಂದ ಶರಾಕ್ಷರಿ ಮಹಿಮೆಯನ್ನು ಉಸುರಿದರು. ಕೊಡುವಾಗ, ಕೊಂಬಾಗ, ಮೈಲಿಗೆಯಲಿರುವಾಗ ಮಡಿಯೊಳಿರುವಾಗ ಎಡೆಬಿಡದೆ ಶಿವಮಂತ್ರ ಜಪಿಸುತ್ತಿರಬೇಕು. ಇದು ರಾಯಮಂತ್ರ **"ನಮಃ ಶಿವಾಯ"** ಎಂದು ನುಡಿಯಲ್ಕೆ ಕಾಯವು ಸನ್ಮುಕ್ತಿಯ ಗೇಯವಾಗುವದು. ಸದುಪಾಯದಿಂದ ಗುರುವನ್ನು ಹುಡುಕಿ ಮಂತ್ರೋಪದೇಶ ಪಡಕೊಂಡವಗೆ ಸಿರಿ, ಯಶಸ್ಸು ತಪ್ಪದಲೇ ದೊರೆಯುವವು. ಅದಕ್ಕೊಂದು ಕಥೆಯನ್ನು ಗುರುಗಳು ಶಿಷ್ಯನಿಗೆ ಹೇಳಿದರು. ಗುಣಶೇಖರನೆಂಬವನು ಕುಂತಳ ದೇಶದ ಅರಸು. ರೂಪವತಿಯಾದ, ಸೌಂದರ್ಯವತಿ ಅರಸನ ಸಹಧರ್ಮಚಾರಿಣಿ ಜೀವನ್ಮಂತ್ರಿ ಯಾವತ್ತೂ ಪ್ರಜಾಕೋಟಿಯ ಜೀವನವೇ ಆಗಿ ಮೆರೆಯುತ್ತಿದ್ದನು. ರಾಜ್ಯದಲ್ಲಿ ಸುಖವಿತ್ತು. ರಾಜನು ಒಂದು ದಿನ ಜೀವನ್ಮಂತ್ರಿಯನ್ನು ಏಕಾಂತದಲ್ಲಿ ಕರೆದು ಪ್ರಜೆಗಳಿಗೆ ಕ್ರಾಂತಿಯೋ, ಮತ್ತೊಂದು ಚಿಂತೆಯೋ ಹೇಳೆಂಬುದನ್ನು ಮತ್ತು ರಾತ್ರಿ ಕಾಲದೊಳು ಪುರದೊಳಗೆ ತಿರುಗಾಡಿ ನೀನು ಅರಿತುಕೊಳ್ಳುವಂತೆ ಆಜ್ಞೆ ಮಾಡಿದನು. ಅರಸನ ಅಪ್ಪಣೆಯಂತೆ ಮಂತ್ರಿಯು ರಾತ್ರಿ ಕಾಲದಲ್ಲಿ ಪುರದೊಳಗೆ ಗೂಢಚಾರಿಯಾಗಿ ತಿರುಗುವ ಸಮಯದಲ್ಲಿ ಅರಮನೆಯ ಕೊನೆಯ ಅಂತಸ್ತಿನಲ್ಲಿ ಮಾಧವ ಚತುರ್ಥಿಯರು ಅಳುತ್ತಿರುವದು ಕೇಳಿಸಿತು. ಅವರ ಬಳಿಗೆ ಹೋಗಿ ಮಂತ್ರಿಯು "ನೀವಾರು ಅಳುವಿರೇಕೆ" ಎಂದು ಪ್ರಶ್ನಿಸಿದನು. ಅದಕ್ಕೆ ಅವರು ನಿನ್ನ ಅರಸನನ್ನು ಇಲ್ಲಿಯ ವರೆಗೆ ಕಾಪಾಡಿದವರು ನಾವು, ಸಿರಿ ವಿಜಯಾದಿ ದೇವತೆಗಳು. ನಾಳೆ ನಿಮ್ಮ ಅರಸನಿಗೆ ಸಾವು ಬರುವದು. ಅವನನ್ನು ಇಲ್ಲಿಯ ವರೆಗೆ ಸೇವಿಸಿ ಇನ್ನು ಬಳಿಕ ಬೇರೆಯವರಲ್ಲಿರಲು ಮನ ಒಪ್ಪದಿರಲು, ನೋವನ್ನು ತಾಳಲಾರದೆ ಪ್ರಲಾಪ ಮಾಡುತ್ತಿರುವೆವು. ಅಯ್ಯೋ! ದುರ್ದೈವವೆ "ಇನ್ನು ಬಳಿಕ ಕಾಪಾಡುವವರಾರೆಂದು ಭೂಮಿಯಲ್ಲಿ ಬಿದ್ದು ಹೊರಳಾಡಿದನು."

ತಾಯಂದಿರೆ ಅರಸನನ್ನು ಉಳಿಸುವ ಉಪಾಯಗಳನ್ನು ತಿಳಿಸಿರೆಂದು ಬೇಡಿಕೊಂಡನು. ಆ ಯುವತಿಯರು ಮಾಯದ ಕುದುರೆ, ವಿಷಬೆರೆದ ಕಜ್ಜಾಯ ಮತ್ತು ಉಗ್ರ ಸರ್ಪಗಳಿಂದ ಅರಸನಿಗೆ ಸಾವು ಬರುವದು. ಈ ಅಪಾಯಗಳಿಂದ ಪಾರಾದರೆ ರಾಜನಿಗೆ ನೂರು ವರ್ಷ ಆಯುಷ್ಯ." ಎಂದು ಹೇಳಿದರು. "ದೈವವಿದ್ದಂತೆ ಆಗಲೆಂದು" ಅರಸನನ್ನು ಕಾಪಾಡಲು ಹೃದಯದಲ್ಲಿ ನಿಶ್ಚೈಸಿ ಅವರಿಂದ ಬೀಳ್ಕೊಂಡು ನಡೆದನು. ಬೆಳಗಾಯಿತು. ಅರಸ ಸಭೆ ಕರೆದನು. ವಂದಿ, ಮಾಗಧರು ಸ್ತುತಿಮಾಡುವ ಸಮಯದಲ್ಲಿ ದ್ವಾರಪಾಲಕ ಬಂದು "ನಮಸ್ಕರಿಸಿ ಕುದುರೆ ತಂದವನೊಬ್ಬ ಬಂದು ನಿಂತಿರುವನು ಪ್ರಭು" ಎನ್ನಲು ಅವನನ್ನು ಕರೆ ತರುವಂತೆ ಅರಸ ಅಪ್ಪಣೆ ಮಾಡಿದನು. ಅಳಕಾಪುರೀಶನೆ, ತನ್ನ ಅಶ್ವವನ್ನು ಕಳಿಸಿದಂತೆ ಅದು ಮನೋಹರ ವಾಗಿ ಕಂಡಿತು. ನಯನ ಮೋಹಿತವಾದ ತೇಜಿಯನ್ನು ಅರಸ ಚನ್ನಾಗಿ ನೋಡಿದನು. ಏರಲು ಮನಸ್ಸು ಮಾಡಿದನು. "ಹೊಸ ಕುದುರೆ ಏರುವದು ಕೇಡಿಗೆ ತವರೆಂ" ದು ಮಂತ್ರಿಯು ಗುಣಶೇಖರನಿಗೆ ಅಗತ್ಯವಾದ ರಾಜನೀತಿಯನ್ನು ಬೋಧಿಸಿದನು. ಮತ್ತೊಮ್ಮೆ ಸೇವಕನಿಗೆ ಕುದುರೆ ಹತ್ತುವಂತೆ ಸನ್ನೆಮಾಡಲು ಅವನು ಅಂತೆ ಮಾಡಿದನು. ಕುದುರೆ ನಿಮಿಷಾರ್ಧದಲ್ಲಿ ಅವನನ್ನು ಕೆಡವಿ ಯಮಸದನಕ್ಕೆ ಕಳಿಸಿ ತಾನು ಅದೃಶ್ಯ ವಾಯಿತು. ಇದನ್ನು ತಿಳಿದ ಪುರಜನರು ಮಂತ್ರಿಯನ್ನು ಕೊಂಡಾಡಿದರು.

ಅಷ್ಟರಲ್ಲಿ ದ್ವಾರಪಾಲಕನು ಬಂದು ವನಪಾಲ ಬಂದಿರುವದನ್ನು ತಿಳಿಸಿ ಅವನನ್ನು ಕರೆತಂದನು. ವನಪಾಲನು ಕಾಡು ಮೃಗಗಳಿಂದ ತಮಗಾದ ತೊಂದರೆಗಳನ್ನು ನಿವೇದಿಸಿದನು. ಅರಸನು ಕಾಡು ಪ್ರಾಣಿ ಗಳನ್ನು ಕೊಲ್ಲಲು ಬೇಡ ಪಡೆಯನ್ನು ಕರೆಸಿ ಬೇಟೆಯಾಡಲು ನಡೆದನು. ಘೋರಾರಣ್ಯದಲ್ಲಿಯ ಕ್ರೂರ ಮೃಗಗಳನ್ನು ಬೇಡರು ಬೆನ್ನಟ್ಟಿದರು. ಬಹಳಕಾಲ ಬೇಟೆಯಾಡಿ ದಣಿದ ದೇಹಕ್ಕೆ ವಿಶ್ರಾಂತಿ ಬೇಕೆಂದು ಮರದ ನೆರಳಲ್ಲಿ ಕುಳಿತನು. ಹಸಿವು, ತೃಷೆ ಹೆಚ್ಚಾಗಿರಲು ಕಜ್ಜಾಯ ತಿನ್ನಲು ಬಯಸಿದನು. ಆಗ ಜೀವನ್ಮಂತ್ರಿ ಕರಜೋಡಿಸಿ, ಅದು ವಿಷದ ಬುತ್ತಿ, ತಿನ್ನಬೇಡಿರೆಂದು ಬೇಡಿಕೊಂಡು ಅದನ್ನು ಮೊದಲು ಕಾಗೆಗೆ ಹಾಕಲು ಅದು ತಿಂದು ಪ್ರಾಣ ನೀಗಿತು. ಅದನ್ನು ತಿಳಿದ ಮಂತ್ರಿಗೆ ಅತಿ ಆಶ್ಚರ್ಯವಾಯಿತು. ಬೇಡ ಪಡೆಯೊಂದಿಗೆ ತಿರುಗಿ ಪುರಕ್ಕೆ ಬಂದನು. ಸರ್ವರೂ ನೃಪನಾಜ್ಞೆಯನ್ನು ತಳೆದು ತಮ್ಮ ತಮ್ಮ ಮನೆಗೆ ಹೋದರು. ಮಂತ್ರಿ ಮಾತ್ರ ಮನೆಗೆ ಹೋಗದೆ ಯಾರಿಗೂ ತಿಳಿಯದಂತೆ ಸೇವಕರೂಪ ಧರಿಸಿ ಅರಸನೊಂದಿಗೆ ಸಜ್ಜಾಗೃಹವನ್ನು ಪ್ರವೇಶಿಸಿ ಕೈಯಲ್ಲಿ ಖಡ್ಗ ಹಿಡಿದುಕೊಂಡು ಮರೆಯಲ್ಲಿ ಕುಳಿತನು. ಅತ್ತ ಅರಸನು ಸಂಧ್ಯೋಪಾಸನೆ ಮುಗಿಸಿ ಉಪಹಾರ ಕೊಂಡನು. ಪ್ರೀತಿಯ ಮಡದಿ ಸೌಂದರ್ಯದೇವಿಯೊಂದಿಗೆ ರತಿಸುಖ ಪಡೆದು, ಮೈಮರೆದು ಒರಗಿದನು. ಆಗ ಉಗ್ರ ಸರ್ಪವಂದು ಸರಪಳಿ ಹಿಡಿದು ಬರುವುದನ್ನು ಎಚ್ಚರವಿದ್ದ ಮಂತ್ರಿ ನೋಡಿ ಖಡ್ಗದಿಂದ್ರ ಕತ್ತರಿಸಿ ಹಾಕಿದನು. ಅದರ ವಿಷವು ರಾಣಿಯ ಮೊಲೆಯ ತುದಿಯ ಮೇಲೆ ಸುರಿದುದನ್ನು ನೋಡಿ ಮಂತ್ರಿ ಮರಮರ ಮರುಗಿದನು. ನಾಲಗೆಯಿಂದ ಮಂತ್ರಿ ವಿಷವನ್ನು ಹೀರುವ ಕಾಲದಲ್ಲಿ ರಾಣಿ ಎಚ್ಚತ್ತು ಅರಸನಿಗೆ ಎಬ್ಬಿಸಿ ಸಂಗತಿ ತಿಳಿಸಿದಳು. ಅರಸನು ಸೇವಕರನ್ನು ಕರೆಸಿ ಮಂತ್ರಿಯನ್ನು ಕಂಭಕ್ಕೆ ಕಟ್ಟಿಸಿದನು. "ನೀಚಾ ಪಾಪಾತ್ಮ, ನೀನೆನಿತುಗೈದೆ ಪ್ರಭುಮಾನಿನಿಗೆ ಮನಸು, ದೀನಮುಖ ವ್ಯಾಘ್ರನೆಂದು ನಾ ಅರಿಯದಾದೆ, ನಿನ್ನ ಪ್ರಾಣ ಹೊಡಿಸುವೆ." ಮಂತ್ರಿ ಇದನ್ನೆಲ್ಲ ಕೇಳಿ ಮೌನದಿಂದ ಶಿವಧ್ಯಾನ ಮಾಡಿದನು. ಸೂರ್ಯೋದಯ ವಾಯಿತು. ಅರಸನು ಚಾಂಡಾಲರನ್ನು ಕರೆಸಿ ಮಂತ್ರಿಯನ್ನು ಕೊಲ್ಲಲು ಆಜ್ಞೆ ಮಾಡಿದನು. ಇನ್ನುಳಿದ

ಮಂತ್ರಿಗಳು, ಆಸ್ಥಾನ ಪಂಡಿತರು "ಕೇಣ ಬೇಡರಸ ಪ್ರವೀಣನೇ, ಇವನಿಂಥ ಹೀನಕೃತಿಗೈಯಲ್ಕೆ ಸಾಧ್ಯವಿಲ್ಲ: ಜೀವದಾನ ಮಾಡು" ಎಂದು ಬೇಡಿದರು. "ನಾನು ಮಂಕನಲ್ಲ, ಕೈಕಂಕಣಂ ನೆರೆಕಾಣಲು ಕನ್ನಡಿಯೇಕೆ ಬೇಕು? ಇವನ ತಲೆ ಕಡಿಪೆ" ನೆಂದು ಅರಸನಾಡಿದನು ಮತ್ತೆ. "ಅಂಗನೆಯರಂ ಕಂಡಕ್ಷಣವೆ ಕಣ್ಣು, ಮನ ತನು ಸೋಂಕದಣ್ಣರೊಳರೇಂ ಪೇಳು, ಬೆಣ್ಣೆ ಬೆಂಕಿಯೊಳಿರಲು ತಣ್ಣಗಿರುವದೇ? ಹೆಣ್ಣಿಂಗೆ ಸೋತು ಮಸಿ ಮಣ್ಣಾಗದವರಾರು" ಪ್ರಜಾನುರಾಗಿ ಜೀವನ್ಮಂತ್ರಿಗೊದಗಿದ ಸ್ಥಿತಿ ಅರಿತು ಜನರೆಲ್ಲ ದುಃಖಿತರಾದರು. ಅವನ ಪರವಾಗಿ ಪರಿ ಪರಿ ಬೇಡಿದರು. ಅರಸನಿಗೆ ಇದರಿಂದ ಪರಿಣಾಮವೇನೂ ಆಗಲಿಲ್ಲ. ಜೀವನ್ಮಂತ್ರಿಯೆ ಜನರಿಗೆಲ್ಲ ಸಮಾಧಾನ ಹೇಳಿದನು. "ಪ್ರಜೆಗಳಿರಾ, ನಿಮ್ಮ ಕರುಣವಂದಿದ್ದರೆ ಪಂಚಾಕ್ಷರಿ ಮಂತ್ರವನ್ನು ಏಕ ನಿಷ್ಠೆಯಿಂದ ಜಪಿಸುವೆ. "ಜಾತಸ್ಯ ಮರಣಂ ಧ್ರುವಂ ನೆಂಬುದನ್ನು ಅರಿಯಿರೆ' ಕೊಲೆಗಡುಕರ ಎದುರಿನಲ್ಲಿ ಆಸನವನ್ನು ಹಾಕಿಕೊಂಡು ಸಂತೋಷದಿಂದ ಈಶ ಮಂತ್ರ ಧ್ಯಾನಪರನಾದನು. ಕೊಲೆ ಪಾತಕಿಗಳು ಸಹ "ಹಾ ಶಿವನೆ ನಾವೆನಿತು ದೋಷ ಜೀವಿಗಳು" ಎಂದು ಕರವಾಳ ಬೀಸಲು ಮಂತ್ರಿಯ ಗಳದಲ್ಲಿ ಹೂವಿನ ಸರಗಳು ಭೂಷಿತವಾದವು. ದೇವತೆಗಳು ಸುಮ ವೃಷ್ಟಿಗರೆದರು. ಪುರಹರನ ಭಕ್ತರಿಗೆ ಅರಿಯಲಿಕ್ಕೆ ಅಶುಭವಿಲ್ಲೆಂದು ಪುರ ಜನರು ಸಂತೋಷದಿಂದ ಹೊಗಳಿದರು. ಉಘೆ, ಚಾಂಗು ಭಳಿರೆಂದು ಹರ್ಷದಿಂದ ಕುಣಿದಾಡಿದರು. ಅರಸನು ಪರಿ ಜನರೊಡನೆ ಭರದಿಂದ ಬಂದು ಶಂಕರ ಭಕ್ತ ತ್ರಾಹಿಯೆಂದು ಅವನ ಚರಣಕ್ಕೆ ಬಾಗಿದನು. ಮತ್ತೆ ನಿನ್ನೆ ರಾತ್ರಿಯೊಳು ಅರಮನೆಗೆ ಏಕೆ ಬಂದಿರೆಂದು ತಿಳಿಸಲು ಬಿನ್ನ ವಿಸಿದನು. ಜೀವನ್ಮಂತ್ರಿ ಅರಸನಿಗೆ ಹಿಂದಿನ ಸಂಗತಿಯನ್ನೆಲ್ಲ ಬಿಡದಂತೆ ಹೇಳಿದನು. ಅರಸನು ಆಶ್ಚರ್ಯ ತಾಳಿ ಅವನ ಉಪಕಾರ ಸ್ಮರಿಸಿದನು. ಶಿವನು ಪ್ರಮಥ ಗಣದೊಂದಿಗೆ ಪ್ರತ್ಯಕ್ಷನಾಗಿ ಮಂತ್ರಿಯನ್ನು ಅಪ್ಪಿ ಕೊಂಡು "ನಿನ್ನಿಚ್ಛಿತವದೇನು ಬೇಡೆ" ನಲು "ಪಟ್ಟಣದ ಜನರನ್ನು ನಾನು ಬಿಟ್ಟಿರುವದಿಲ್ಲ; ದಯವಿಟ್ಟು ಎಲ್ಲರನ್ನು ಬೆಳ್ಳಿ ಬೆಟ್ಟಕ್ಕೆ ಕರೆದೊಯ್ಯಬೇಕು". ಎನ್ನಲು ಕರುಣ ಪುಟ್ಟಿ ಎಲ್ಲರಿಗೆ ಪ್ರಮಥಗಣ ಪದವಿಯ ನ್ನಿತ್ತು ಸ್ವರ್ಗಕ್ಕೆ ಕರೆದೊಯ್ದನು. ಇದು ಮಂತ್ರದ ಮಹಿಮೆ. ಶರಣಬಸವೇಶ, ಸೊಡ್ಡಳ ಮಲ್ಲಿವರ, ಮಕ್ಕಳ ಮಾರ, ಮುರುಘ ಮೊದಲಾದ ಭಕ್ತರು ಶಿವನೊಳು ಏಕಾದರು. ಮಂತ್ರವನ್ನು ಉಲ್ಲಾಸದಿಂದ ನುಡಿದವರಿಗೆ ದುರಿತ ಬಾಧೆ ತಟ್ಟದು.

## ಏಳನೆಯ ಸಂಧಿ

ಗುರುವರ್ಯ ಅಷ್ಟಾವರ್ಣದಲ್ಲಿಯ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ವರಮಂತ್ರ ತಿಳಿಸಿದಂತೆ ಚರಣೋದಕದ ಘನತೆಯನ್ನು ಅರುಹಬೇಕು. ಶಿಷ್ಯನನ್ನು ಪ್ರೈದಡವಿ ಪಾದೋದಕದ ಮಹಿ ಮೆಯನ್ನು ಹೇಳಿದರು. ವರ ವಾರಣಾಸಿ, ಪುಸ್ಕರ, ನರ್ಮದಾ, ಸಿಂಧು, ಸರಸ್ವತಿ, ಪ್ರ ಯಾ ಗ, ಸುಂದರ ಗಂಗೆ, ಬದರಿ, ಕನ್ಯಾಸೇತು, ಪರತರ ಯಮುನೆ, ತುಂಗಸುಧೆ, ದುರಿತನಾಶಿನಿಯು, ಚರ ಣೋದಕವು. ಸಪ್ತಶರಧಿದೊಳಗಿರುವ ಸತ್ವವು ಜಂಗಮರ ಪಾದೋದಕಕ್ಕಿದೆ. ಜೀವನದಲ್ಲಿ ಒಮ್ಮೆ ಜಂಗ ಮ ಪದ ನಿರ್ಮಲೋದಕವ ನೆಮ್ಮಿ ಸೇವಿಸಲು ದುಷ್ಕರ್ಮಗಳೆಲ್ಲ ನಾಶವಾಗುವವು. ಕೋಟಿ ಜನ್ಮದಘವಳಿದು ನಿತ್ಯ ಸದ್ಧರ್ಮಪರವೆನಿಸಿ, ಪರಬೊಮ್ಮದೊಳು ಬೆರಸಿ ಜೀವನ್ಮುಕ್ತಿಯನ್ನು ಕೊಡುವದು.

ಭೂತ ಕಾಲದಲ್ಲಿ ಸಕಲ ಗುಣಶೀಲ ಆದಿತ್ಯ ಭೂಪಾಲನೆಂಬವನು ಪ್ರಜೆಗಳನ್ನು ಮಕ್ಕಳಂತೆ ಪಾಲಿಸಿ ವೃದ್ಧಾಪ್ಯದಲ್ಲಿ ಮಗನಿಗೆ ರಾಜ್ಯ ಒಪ್ಪಿಸಿ ಶಿವನನ್ನೊಲಿಸಲು ಕಾಡಿಗೆ ಹೋಗಿ ಘೋರತಪಗೈದನು. ಕಾಲುಂಗಟವನ್ನು ನೆಲದ ಮೇಲೂರಿ, ಉದ್ದವಾದ ತೋಳುಗಳೆರಡನ್ನು ಸಹಿತ ಮುಖ ಮೇಲೆತ್ತಿ ಸೂರ್ಯನನ್ನು ಎವೆಯಿಕ್ಕದಂತೆ ನೋಡಿ ಉಸಿರಾಡುವದನ್ನು ನಿಲ್ಲಿಸಿ, ಉಗ್ರ ತಪಮಾಡಿ ಪರಮಾತ್ಮನನ್ನು ಕಂಡನು. ಅತ್ಯಂತ ಪ್ರಯಾಸಕರ ತಪ ಮಾಡಿದುದಕ್ಕೆ ಶಿವ ಒಲಿದು. ಸಪ್ತರ್ಷಿಗಳನ್ನು ಕರೆದು ಸುಮಯಾನದಲ್ಲಿ ಇವನನ್ನು ಏರಿಸಿ ಸ್ವರ್ಗಕ್ಕೆ ಒಯ್ಯಲು ಆಜ್ಞೆಯಿತ್ತನು. ವಿಮಾನ ಹೊತ್ತು ತರುವ ಹೊತ್ತಿನಲ್ಲಿ ಆದಿತ್ಯ ಭೂಪಾಲನು "ಇಳಿಯಿರಿ (ಗಮಿಸಿರಿ) ಎಂದು ಉಸುರಲು ಅವರು ಕೋಪಗೊಂಡು ಸರ್ಪಾಗೆಂದು ಶಾಪವಿತ್ತರು. ನಿಷ್ಯಾಪವೆಂದು ಬೇಡಲು ಅರಸನಿಗೆ ಕರುಣಿಸಿ ಚಾರು ಚರಣೋದಕ ನಿನಗೆ ದೊರೆದಂದು ಬಿಡುಗಡೆ ಎಂದು ಹೇಳಿ ಶಿವನೊಂದಿಗೆ ಕೈಲಾಸಕ್ಕೆ ಹೋದರು. ಇತ್ತ ಅರಸನು ಕಾಳೋಗರಾಗಿ ಭೂಮಿಗೆ ಬಿದ್ದು ದನ, ಕರ, ಕುರಿ, ಮೈಮರೆದು ಮಲಗಿದವರನ್ನು ನುಂಗಿ ಚಿರಕಾಲ ಕಾನನದಲ್ಲಿದ್ದನು. ಆತನು ಸರ್ಪವಾಗಲು ಆ ಭೀತಿಗೆ ನಡುಗುತ್ತ ಪೂತ ಕರ್ಮಿಗಳು ಶೀತಲೋದಕ ಸ್ನಾನ, ಪ್ರಾಥಃ ಸಂಧ್ಯಾಕ್ರಿಯೆಯನ್ನು ತ್ಯಜಿಸಿದರು. ಶೀತಘನ ಋತು ಬರಲು ಕ್ರಿಯಾದಿಗಳೇಕೆಂದು ಸಲೆ ಕುಚವೇ ಶೀತಕೌಷಧವೆಂದು ಮಗ್ಗುಲ ಪೊಕ್ಕರು. ಹಿಮವಂತನ ಉಬ್ಬರ ವಿಶೇಷವಾಯಿತು. ತುಂತುರ ಹನಿಗಳು ಹುಲ್ಲು ಕೊನೆಯಲ್ಲಿ ಎಸೆದವು. ಆಗ ಒಬ್ಬ ಜಂಗಮನು ಊರೂರೊಳಗೆ ಭಿಕ್ಷೆ ಕಾರಣದಿ ತಿರುಗುತ್ತ ಬಂದು ಒಂದು ಮಠದಲ್ಲಿ ರಾತ್ರಿ ಕಳೆದನು. ಸೂರ್ಯೋದಯಕ್ಕೆ ಮುಂಚೆಯೆದ್ದು ದಾರಿ ಹಿಡಿದು ನಡೆಯುತ್ತಿರುವಾಗ ಕಟ್ಟಡವಿಯಲ್ಲಿಯ ಚೋರನು ಚೀರಿ ನಿಲ್ಲೆಂದು ಹಾರುತ್ಯೆತರಲು, ಜಂಗಮನು ಹೌಹಾರಿ ಮಾರಾರಿಯನ್ನು ಧ್ಯಾನಿಸಿದನು. ಭೀತಿಯಿಂದ ಕಂಡಕಡೆ ಓಡುವಾಗ ಹುಲ್ಲಿನ ಮೇಲಿರುವ ಇಬ್ಬನ್ನಿಗೆ ಅವನುಟ್ಟ ಧೋತರದ ಅಂಚು ತೊಯ್ದಿತು. ಕಂಪಿಸುತ್ತ ನಡೆತರುವಾಗ ಸರ್ಪವು ಬಾಯಿತೆರೆದು ಮಲಗಿತ್ತು. ಚರಪಾದೋದಕವು ಸರ್ಪದ ಮುಖದಲ್ಲಿ ಸೇರುವಷ್ಟರಲ್ಲಿ ಕಳ್ಳನು ತಿಳಿಯದೆ ಹಾವಿನ ಮೇಲೆ ಕಾಲೂರಲು ಅದರ ಕೋಪ ಹೆಚ್ಚಿ ಕಚ್ಚಿತು. ಕಳ್ಳನು ಪ್ರಾಣ ನೀಗಿದನು. ಪಾದೋದಕದ ಮಹಿಮೆಯಿಂದ ಆಕಾಶದತ್ತಣಿಂದ ಸುಮಯಾನ ಬಂದು ಅದರಲ್ಲಿ ಕೂಡ್ರಿಸಿಕೊಂಡು ಸ್ವರ್ಗಕ್ಕೆ ಹೋಯಿತು. ಶಿವನು ಕರುಣಿಸಿ ಆರಾಧ್ಯ ಪಟ್ಟವನ್ನು ಅವರಿಗೆ ಕರುಣಿಸಿದನು.

ಸಗರ ಚಕ್ರವರ್ತಿಯ ಅರವತ್ತು ಸಾವಿರ ಮಕ್ಕಳ ಪಾಪ ಕಳೆಯಲೆಂದು ಭಗೀರಥನು ತಪಸ್ಸುಮಾಡಿ ಪರಶಿವನನ್ನು ಒಲಿಸಿ ಜಗದ ಪಾವನಾರ್ಥ ಶಿವನ ಜಡೆಯಲ್ಲಿಯ ಗಂಗೆಯನ್ನು ತಂದುದರ ಫಲವಾಗಿ ಅಸಂಖ್ಯಾತರ ದುರಿತ ಅಳಿದು ಪುಣ್ಯಜೀವಿಗಳಾದರು. ಇದು ಶಿವನ ಮಜ್ಜನೋದಕದ ಮಹಿಮೆ. ಜಂಗಮರ ಮೇಲೆ ಅಪರಾಧ ಹೊರಿಸಿ ಬಿಜ್ಜಳನು ಬಸವರಸನೊಡನೆ ಬರುವಾಗ ಅರಸ ದಂಡಾಧಿಪಗೆ ಕೇಳಲು ಇದು "ಸಿದ್ಧರಸ" ಎಂದು ಹೇಳಿದನು. ತರ ತರದ ಧಾತುಗಳನ್ನು ಚರಣಾಂಬುದಲ್ಲಿ ಅದ್ದಿ ಬಂಗಾರ ಮಾಡಿ ತೋರಿಸಿದನು. ಹರಳಯ್ಯನೆಂಬ ಶಿವಶರಣನ ಬಚ್ಚಲುದಕದಿಂದ ಮಧುವರಸ ಪಾವನನಾದನು. ಮೋಳಿಗೆಯ ಮಾರಯ್ಯ ಚರಣೋದಕದಿಂದ ಕಟ್ಟಿಗೆಗಳನ್ನು ಬಂಗಾರವಾಗಿಸಿದನು. ಕನ್ನಯ್ಯ, ಧೂಳಯ್ಯ, ವೀರಮ್ಮ ಮುಂತಾದವರು ಪಾದೋದಕದಿಂದ ಪ್ರಮಥ ಗಣಕ್ಕೇರಿದರು. ಚರಣೋದಕವು ಬೇಡಿದಿಷ್ಟಾರ್ಥವನ್ನು ಕೊಡುವದು.

ಪಾದೋದಕದ ಮಹಿಮೆ ತಿಳಿದು ಪಾವನನಾದೆ ಪ್ರಸಾದದ, ಘನತೆಯನ್ನರುಹಿ ಉದ್ಧರಿಸೆಂದು ಶರಣನು ಗುರುಗಳಿಗೆ ಬೇಡಿದನು. ಚರವರ ಪ್ರಸಾದ ನೆರೆ ನಂಬಿ ಸೇವಿಸಿದವರಿಗೆ ಮರಣ ಭಯವಿಲ್ಲ. ಪರಮ ಪ್ರಸಾದವನ್ನು ಅನ್ನವೆಂದು ಸೇವಿಸುವ ನರಗೆ ಮುಕ್ತಿ ದೊರಕೊಳದು. ಪ್ರಸಾದ ಸೇವನೆಯಿಂದ ದುರಿತಭವ ಮರಣ ಅಳಿದು ಸ್ಥಿರ ಮುಕ್ತಿ ಪಡೆದು ಬಾಳಲು ಸಾಧ್ಯವಾಗುವದು.

ಬಿಚ್ಚಿ ಬಾಚರಸನೆಂಬೋರ್ವ ನಿಜ ಶರಣ ಗೊಬ್ಬೂರಲ್ಲಿದ್ದನು. ಹರ ಪ್ರಮಥ ಗಣರ ಹಬ್ಬವಿದ್ದಲ್ಲಿ ಹೋಗಿ 'ಭವದೊಬ್ಬಿಸುವ' ಶೇಷವನ್ನು ಸೇವಿಸುತ್ತ ಪರಶಿವನ ಒಲುಮೆಗೆ ಪಾತ್ರನಾಗಿದ್ದನು. ಅವನು ತ್ರಿವಿಧ ಪ್ರಸಾದದನುಭವದಲ್ಲಿರುವ ಕಾಲದೊಳಗೆ ಒಂದು ದಿನ ನೆರೆಯ ಹಳ್ಳಿಯಲ್ಲಿ ಶಿವಗಣಾರಾಧನೆ ನಡೆವಲ್ಲಿ ಹೋಗಿ ಗಣ ತಿಂಥಿಣಿಗೆ ನಮಿಸಿ ತಿಂದು ಉಳಿದುದನ್ನು ಮನದಣಿ ಸೇವಿಸಿ ಮರಳಿ ಬರುತ್ತಿದ್ದನು. "ತಾನು ಭೂಮಿಸುರ ತಿಲಕನಾಗಿ ಕುಲಹೀನ ಮನುಜರೆಂಜಲ ತಿಂದು ಕುಲಗೆಟ್ಟ ಹೊಲೆಯ" ನೆಂದು ಆ ಊರ ಅನ್ಯ ಮತದವರು ಹೀಯಾಳಿಸಿ ಅವನನ್ನು ಊರೊಳಗೆ ಬರದಂತೆ ತಡೆದರು. "ಶಶಿಧರನ ಭಕ್ತ, ಅಸಮ ಪ್ರಸಾದವೆನಲು ಸುರಿದೊಲು ದೃಷ್ಟ ತೋರಿಸುವದೆಂಬ ಆಶವಸದಿ ವಸನಂ ತೆಗೆ ಪೋಗಲು" ನೋಡಿ ಕಿಡಿ ಕಿಡಿಯಾಗಿ "ಬೇಡ ಬೇಡೆಲೆ ವಿಪ್ರ ಖೋಡಿಗಳೆ ನಿಮಗಿಂದುಕೇಡು ಮೊದಗಿಹುದು ನಿಜ" ಬೇಡಿದಿಷ್ಟರ್ಥ ಕೈಗೂಡಿಸುವದೈದೆ ಶಶಿಚೂಡ ಭಕುತರ ಶೇಷನಾಡೆ ಭಕುತಿಯಲಿ ಕೊಂಡಾಡಿ ಸೇವಿಸಲು ಸುಖನೀಡುವುದು; ನಿಂದ್ಯವಂಗಾಡಿದವಗೆ ಕೇಡಹುದು." ಇನ್ನಾದರೂ ನಿಮ್ಮ ಮೂಢತನ ಬಿಡಿರೆಂದು ಬೋಧಿಸಿದನು, ಬಾಚರಸನು. ಆ ಪುರದ ಬ್ರಾಹ್ಮಣರಿಗೆ ಬಾಚರಸನ ಮಾತು ಹಿತವೆನ್ನಿಸಲಿಲ್ಲ. ಮನಬಂದಂತೆ ಬಯ್ದರು; ಆಗ ಪರಮಭಕ್ತ ಕೋಪ ತಾಳಿ, ಆ ಪುರದ ಕಡೆ ತೆಗೆದು ಶೇಷದೊಂದಗುಳಿಡಲು ಉರಿಹಬ್ಬಿ ಗ್ರಾಮವನ್ನೇ ಸುಡತೊಡಗಿತು. ಎಲ್ಲರೂ ಗೋಳಾಡಿ ಸಿಕ್ಕಕಡೆ ಓಡತೊಡಗಿದರು. ಹೋದಲ್ಲೆಲ್ಲ ಉರಿಯ ತಾಪ ಹೆಚ್ಚಲು, ಮರಳಿ ಎಲ್ಲರೂ ಬಂದು ವಿನಯಪೂರ್ವಕವಾಗಿ ಬೇಡಿದರು. "ಸದಯಾಳ ಪೊರೆಯಂಪು ಪದಕೆರಗಿ ಬಾಚರಸನ" ವಿನುತರಾಗಿಹ ಪಾರ್ವನನ್ನು ನೋಡಿ ತೋಷಿತನಾಗಿ ಕೊನೆಗಣ್ಣಿನಿಂದ ನೋಡುವಷ್ಟರಲ್ಲಿ ಎಲ್ಲವೂ ಶಾಂತವಾಗಿತ್ತು. "ಮನ್ಮಥನಿಗೆ ಅಂದು ಶಿವ ಅಗ್ನಿನೇತ್ರದಿಂದ ಉರಿಸಿದ ಬಳಿಕ ಆದು ಮುನ್ನಿನಂತಾಗಲಿಲ್ಲ. ಈ ಪುಣ್ಯಾತ್ಮನಿಂದ ನಾವೆಲ್ಲ ಮುನ್ನಿನಂತಾದೆವು" ಅದು ಕಾರಣ "ಶಿವನಭಕ್ತ ಘನನೆನುತ" ಬಾಚರಸನನ್ನು ಕೊಂಡಾಡಿದರು.

ಮತಿಪಂತೆ, ಸನ್ನುತಗಾತ್ರೆ; ಚೋಳಾದೇವಿ ಜಿತಕಾಮನೆ ತನ್ನ ಪತಿಯೆಂದು ವ್ರತದೊಳಗಿದ್ದಳು. ಅವಳನ್ನು ಪ್ರಥಮ ಋತುಮತಿಯಾದ ಎರಡನೆಯ ದಿನವಂದು ಗೆಳತಿಯರು ಎರೆದು ಶುಭ್ರ ವಸ್ತ್ರಗಳನ್ನು ಉಡಿಸಿದರು. ಗಿಣ್ಣವನ್ನು ನೀಡಿದರು. ಉಣ್ಣಲೆಂದವಳು ಬಾಯೊಳಗೆ ತುತ್ತು ಇಟ್ಟುಕೊಂಡಾಗ ನಾಲಿಗೆಗೆ ರುಚಿಯಾಯಿತು. ಬೆದರಿ ಹಾ! ಮಹಾದೇವ ಎಂದು ಬಟ್ಟಲಲ್ಲಿ ಉಗುಳಿ, ತಂಗಿ ಭೀಮೆಯನ್ನು ಕರೆದು ಶಿವನಿಗೆ ಉಣಿಸಿ ಬಾಯೆಂದು ಹೇಳಿದಳು. ಭೀಮೆ ಬೇಗ ಬಂದು ದೇಗುಲ ಮುಂಭಾಗದಲ್ಲಿ ಅರಸು ಮಕ್ಕಳು ಆಡುತ್ತಿದ್ದುದರಿಂದ ಜನ ನೆರೆದಿತ್ತು. ಹಿಂದಿನಿಂದ ಹೋಗಿ "ಮುಕ್ಕಣ್ಣ, ಬಾ, ಭಾವ" ಎಂದು ಕರೆಯಲು ಶಿವ ಹೊರಗೆ ಬಂದು, 'ಏಕೆ ಕರೆದೆ ಭೀಮೆ' ಎನ್ನಲು, ಶಂಕರನೆ ನಿನಗೆ ಅಗೋಚರವಾದುದು ಯಾವದು; ಎನ್ನಕ್ಕ ಸುರಿದ ಹುಗ್ಗಿಯನು ಹಿಂದಿರುಗುಗುಳಿ ಕಳುಹಿದಳು ಹರುಷದಿಂದ ನಿನ್ನ ಬಳಿಗೆ, ಮಮತೆ

ನಿನ್ನರಘಳಿಗೆ ಮರೆದಿರಳು. ಪುರಹರನೆ ಎನಲು ಶಿವ ಉಂಡನು. ಈ ಭಕುತಿಯನು ತರಪರಿವರಾರೆಂದು ಸುರರೈದೆ ಬೆರಗಾದರು. ಮಾರನೆ ದಿನ ಪೂಜಾರಿ ಬಂದು ದೇವಾಲಯದಲ್ಲಾದ ಬದಲಾವಣೆಯನ್ನು ಅರಸನಿಗೆ ತಿಳಿಸಿದನು. ಹರಿವಾಣಮಿದು ಯಾರದೆಂದು ಅರಸನು ವಿಚಾರಿಸಲು, ನೆರೆಯವರು ಹರದಿ ಚೋಳಾದೇವಿಯ ದೆಂದು ಹೇಳಲು ಅರಸನ ಆಳುಗಳು ಅಲ್ಲಿಗೆ ಹೋಗಿ ಕೇಳಿದರು. ಆಗ ಭೀಮೆ ಬೆರಗಾಗಿ "ಈ ಹರಿವಾಣ ನಮ್ಮದು, ಶಿವನಿಟ್ಟುಕೊಂಡು ಕರದೆದ್ದುದರಿಯದೆ ಸೆರಗಿಟ್ಟು ತಂದೆ"ನೆಂದು ಹೇಳಿದಳು. ನಡೆದುದನ್ನು ಉಸುರಲು ಜನರೆಲ್ಲ ನಗೆಯಾಡಿದರು. ಸಿಟ್ಟಿನಿಂದ ಅರಸನಾಳುಗಳು ಅವಳನ್ನು ಕಟ್ಟಿತಂದರು. ಭೀಮೆ ಕಟ್ಟಿ ನೊಂದಿಗೆ ಗುಡಿಗೆ ಬಂದು ಶಿವನನ್ನು ಪರಿ ಪರಿಯಿಂದ ಕೊಂಡಾಡಿದಳು. ಆಗ ಶಿವನು ಅವಳ ಭಾವಕೆ ಒಲಿದು "ಹರದಿ ಕಳುಹಿದ ಪುಲ್ಗಿ ಹರುಷದಿಂದುಂಡೆನ್ನ ಹರಿವಾಣ ಕೊಟ್ಟೆನೆಂದು ನಿರುತೆಂದು" ನುಡಿದನು. ಅಂಬರದಲ್ಲಿ ಸುರರು ಅರಳ ಮಳೆಗರೆದರು. ಆ ಯುವತಿಗಳಿಗೆ ಒಲಿದು "ಅಪಾಯ ನನ್ನಿಂದಾಯ್ತು ನೋಯದಿರು ಬಾಯೆಂದು" "ಕಾಯದೊಳುಕೊಂಡು ಪದ ಸಾಯುಜ್ಯನಿತ್ತನದಿ ತೋಯನಿಧಿ ಸೇರುವಂತೆ" ಭಾವ ನೀವು ನನ್ನಕ್ಕನನ್ನೇಕೆ ಬಿಟ್ಟು ಹೋದಿರಿ, ಹೇಳಿರೆಂದು ಬಾಯಿಬಿಟ್ಟು ಒಲಿಸಿ ನಿರ್ಮಾಯನೊಳು ಭೀಮೆ ಏಕಾದಳು. ಕರಿಕಾಲ ಚೋಳನ ದಿವ್ಯಾನ್ನ ಬಿಟ್ಟು, ಶಂಕರನು ಮಾದರ ಚನ್ನನಂಬಲಿಯ ಸುರಿಯಲದು ಕೇಳಿ ಅರಸನು ಹೊಲಗೇರಿಗೆ ಬಂದು ಅವನನ್ನು ಕರೆತಂದು ಆನೆಯ ಮೇಲೆ ಮೆರೆಸಿದನು. ಶಿವ ಮೆಚ್ಚಿ ಅವನನ್ನು ಕೈಲಾಸ ಕೊಯ್ದನು.

ಗುರುಲಿಂಗ, ಚರಭೂತಿ, ಹರಿನಾಕ್ಷಿ, ಮಂತ್ರ, ಚರ ಚರಣಾಂಬು, ಶೇಷಗಳ ಪರಿಚರ್ಯಗೈದು ಮನಹರ್ಷದಿಂದಿತ್ತು ಧನ ನೆರೆಕೊಟ್ಟು ಧರಿ, ಧರಿಸಿ, ಸ್ಮರಿಸಿ, ಸೇವಿಸುತುಣ್ಣುವಾ ನರಗೆ ಜಸ, ಮೋಕ್ಷ, ಸಂಪದ ಭೋಗಗಳು ಅಷ್ಟಾವರಣದಿಂದ ದೊರಕುವವು.

## ಎಂಟನೆಯ ಸಂಧಿ

ಗುರುದೇವ, ಈ ಕಲಿಕಾಲದಲ್ಲಿ ಭಕುತಿ ಮಾಡಿದವರು ಉಂಟೇ, ಎನಲು ಗುರು ಸಂತಸ ತಳೆದು ಭಕ್ತಿಯನ್ನು ಮಾಡಿ ಅವ್ಯಕ್ತನನ್ನು ಬೆರೆದು, ವರ ಮುಕ್ತಿಯನ್ನು ಪಡೆದ ಘನ ಭಕ್ತರ ಚರಿತ್ರೆಯನ್ನು ಶರಣನಿಗೆ ಹೇಳಲು ಅವನು ಕೇಳಿ ಸದ್ಭಕ್ತಿಯೊಳಗಿದ್ದನು.

ಭಕ್ತ ಶ್ರೇಷ್ಠರಾದ ಗುರುಬಸವ, ಸೌರಹರನಂಬಿ, ತಿರುನೀಲಕಂಠ, ಎಳೆಯಾರದ ಹುಡಿಮಾರ, ಸಿಂಧು ಬಲ್ಲಾಳ, ಕೊಂಗುಲಿ ಕಲಿಯಾಂಡ ಮೊದಲಾದ ಪುರಾತನರ ಹಾಗು ನೂತನ ಶಿವಶರಣರ ಭಕ್ತಿವಿಶೇಷ, ವನ್ನು ಗುರು ನೆರೆಕೊಂಡಾಡಿ ಶರಣನಿಗೆ ಅವರ ಚರಿತ್ರೆಗಳನ್ನು ಅರುಹಿದನು. "ಭಕ್ತಿ ಮುಕ್ತಿಯ ಸೋಪಾನ" ಭಕ್ತಿರಹಿತ ಮಾನವಗೆ ಮುಕ್ತಿಯಿಲ್ಲ. ಪರಶಿವನೊಲಿಸುವದಕೆ ಭಕ್ತಿಯೇ ಮುಖ್ಯ ಕಾರಣ. "ಭಕ್ತಿಗೈವಡೆ ಶಕ್ತಿಬೇಕು. ಶಕ್ತಿಯೆಂದರೆ ಸತಿಯು, ಶಕ್ತಿಯೆಂದರೆ ಸನ್ಮತಿ ಮತ್ತು ಬಲವು." ಆ ಶಕ್ತಿ ಬಲಿಸಲು ನೀನು ಲಗ್ನಕ್ಕೆ ಉದ್ಯುಕ್ತನಾಗಬೇಕೆಂದು ಗುರು ಶರಣರಿಗೆ ಉಪದೇಶ ಮಾಡಿದರು.

## ಒಂಬತ್ತನೆಯ ಸಂಧಿ

ವೀರಶೈವರ ಅಂಗಗಳಾದ ಅಷ್ಟಾವರಣದ ಮಹಿಮೆಯನ್ನು ಗುರುಗಳು ವಿಸ್ತಾರವಾಗಿ ತಿಳಿಸಿದರು. ಶ್ರೀಶರಣರಿಗೆ ನಂತರ ಲಗ್ನವಾಗಲು ತಿಳಿಸಿದರು. 'ಗುರುವೆ' ನೀವು ವಾಚಿಸಿದಂತೆ ಲಗ್ನವಾಚರಿಸಲು ಶಿವನು ಗೋಚರಿಸಲಾರನು. "ಪೆಣ್ಣೆ ಪೈಶಾಚಂ" ಬ ಸತ್ಪುರುಷರ ಮಾತನ್ನು ತಿಳಿದು ಲಗ್ನಕ್ಕೆಳೆಸುವದು ತರವಲ್ಲ. ಈ ನೀಚ ಸಂಸಾರಕ್ಕೆ ಹೇಸುವೆ. ಪಾಪನಾಶಕಾರಿಯಾದ ವೈರಾಗ್ಯದಿಂದಲೇ ಜೀವನ ಸಾಗಿಸುವೆ. "ವೂಜ ಮಣ್ಣಿ ಬಿಟ್ಟೊಡೆವ ಕಾಜ ಕೈಗೊಂಬಂತೆ" ಈ ಸಂಸೃತಿಯಲ್ಲಿ ಬಾಚಲಾರೆ. "ಸಾನಂದವಾದ ಮನೆ, ಸೂನಸುಧೆ, ರೂಪುಸತಿ ಮಾನಿನಿಯು ಮೃದುಭಾಷಿ, ಮೀನಾಕ್ಷಿಯೊಡನೆ ರತಿ ತಾನೆಳಿಸಿದರೆ ನೂನವಿಲ್ಲ. ತಾನಾಗಿ ಬಂದ ಚರರಿಗೆ ನಿತ್ಯ ಶಿವಪ್ರಸಾದವು ಶಿವಜ್ಞಾನಿಗಳ ಒಡನಾಟ ಸಂತತವಿರುವ ಗೃಹಸ್ಥಾಶ್ರಮವು ನಿಜವಾಗಿ ಧನ್ಯವಾದುದು. ಅದರಿಂದ ನಿನ್ನ ಅಭ್ಯುದಯಕ್ಕೆ ಕಾರಣವಾದ ಮದುವೆಗೆ ಮನಸ್ಸು ಮಾಡುವದು ವಿಹಿತ ಎಂದು ಗುರು ಉಪದೇಶಿಸಲು ಅವರ ಪಾದಕ್ಕೆರಗಿ ಮನಬಂದ ವಿಧಗೈವುದೆಂದು ಶರಣರು ಸುಮ್ಮನಾದರು. ನಂತರ ಗುರುಗಳು ಮುದದಿಂದ ಕೆಲವು ಜನ ಸದ್ಗೃಹಸ್ಥರೊಡನೆ ಸಂಪದಯುಕ್ತ, ಶಿವಾಗಮದ ಅರ್ಥ ಬಲ್ಲವರು ಇರುವ ಊರು, ಮನೆ ಹುಡುಕುತ್ತ ನಡೆದರು. ಪ್ರಸಿದ್ಧ ಗ್ರಾಮವಾದ ಮಾಶಾಳಕ್ಕೆ ಹೋಗಿ, ಬಾವಿಮನೆ ಶಾಂತಲಿಂಗಪ್ಪನನ್ನು ಕಾಣುವ ತವಕದಿಂದ ಅವನನ್ನು ಶೋಧಿಸುತ್ತ ಬರಲು, ಗುರುವರ್ಯರ ಆಗಮನಕ್ಕೆ ಹರುಷ ತಾಳಿ ಪ್ರಣಾಮಮಾಡಿ ಅವರನ್ನು ಕುಳ್ಳಿರಿಸಿಕೊಂಡು, ಬಂದ ಕಾರಣವನ್ನು ಕುರಿತು ಪ್ರಸ್ತಾಪಿಸಿದನು. "ಅರಳಗುಂಡಿಗೆಯವರು ನಾವು" ಬೀಗತನಕ್ಕೆಂದು ಬಂದಿರುವೆವೆಂದು ಹೇಳಲು "ಹುಡುಕುವ ಬಳ್ಳಿ ಕಾಲಿಗೆ ತೊಡಕಿದಂತಾಯಿತೆಂದು ಸಂತೋಷಗೊಂಡು ಬೀಗರನ್ನು, ನೆಂಟರನ್ನು, ಶರಣಶಿವಯೋಗಿಗಳನ್ನು ಕರೆಸಿ, ಪವಿತ್ರವಾದ ಭಸ್ಮದಘಟ್ಟಿ ಮುಂತಾದವನ್ನು ತರಿಸಿದನು. ಮುಗ್ಧೆ ಮಹಾದೇವಿಯನ್ನು ಕೊಡಲು ಒಪ್ಪಲು ಸೂತ್ರ, ಬಗೆ, ಕುರಿತು ವಿಚಾರಿಸಿದರು ಗುರುವರ್ಯರು. ಬಗೆ, ಭಿನ್ನವಾದುದನ್ನರಿತು ಹರ್ಷಚಿತ್ತರಾದರು. ಮಗಳು ಮಹಾದೇವಿಯನ್ನು ಶಾಂತಲಿಂಗಪ್ಪ ಕರೆತಂದು ಗುರುಗಳ ಪಾದಕಮಲಗಳಿಗೆರಗಿಸಿದನು. ಚೆಲುವೆ ಮಹಾದೇವಿಯೆಂದು ಹೊಗಳುತ್ತ, ಪಂಚ ಸುಫಲಗಳನ್ನು ಉಡಿಯಲ್ಲಿಟ್ಟು, ಮುಂದೆ ಕೂಡ್ರಿಸಿಕೊಂಡು ಕರಕಮಲವನ್ನು ನೋಡಿ ಯೌವನ ಮತ್ತೆ ರೂಪು ಲಕ್ಷಣಕೆ ಒಲಿದು, ಜನ್ಮನಾಮ ಕೇಳಿ ಗಣ, ಕೂಟ, ನಾಡಿಗಳ ಗುಣಿಸಿ ಘಟಿತಾರ್ಥ ಬರಲು ವಿಭೂತಿಯನ್ನು ಹಣೆಯಲ್ಲಿ ಧರಿಸಿ, ಹೊಸ ಬಟ್ಟೆ ಉಡಿಸಿ, ಕನಕ ಸುರಗಿಯನ್ನು ಅವಳ ಕೋಮಲ ಕಂಠಕ್ಕೆ ತೊಡಿಸಿದರು. ನೆರೆದ ಸ್ತ್ರೀಯರು ಶೋಭನ ಪಾಡಿದರು. ಜನರಿಗೆಲ್ಲ ಸಕ್ಕರೆ ಹಂಚಿ ಜಂಗಮರಿಗೆ ದಕ್ಷಿಣೆ ಕೊಟ್ಟರು. ವಿವಾಹತಿಥಿ ನಿರ್ಧರಿಸಿದರು. ವೈಶಾಖದ ನಡುವಂದು ಶುಭದಿವಸ ಬಲು ಸಡಗರದಿಂದ ಮದುವೆ ಮಾಡಲು ಆದಯ್ಯ, ಮಡಿಯಮ್ಮನವರಿಗೆ ತಿಳಿಸಿ ಗುರುಗಳು ಕಲಕೇರಿಗೆ ಪ್ರಯಾಣ ಬೆಳಸಿದರು.

ಲಗ್ನದ ತಯಾರಿಗೆಂದು ಸಂಬಂಧಿಕರನ್ನೆಲ್ಲ ಕರೆಸಿದರು. ಬಂಧು ಬಳಗದಿಂದ ಮನೆತುಂಬಿ ಹೋಯಿತು. ಅತ್ಯಂತ ಸಂತೋಷದಿಂದ ಲಲನೆಯರು ಶರಣರ ಶುಭವಿವಾಹಕ್ಕೆಂದು ಹಾಡುತ್ತ, ಕುಟ್ಟುವದು, ಬೀಸುವದು, ಗುಳಿಗೆ, ಶಾವಿಗೆ, ಪರಡಿ ಮಾಡತೊಡಗಿದರು. ಕಾಸಿ ತಿಳಿದುಪ್ಪ ಮಡುಗಿದರು ಅಬಲೆಯರು. ಆಗ ಚಳಿಗಾಲ

ವಿದ್ದುದರಿಂದ ಥಂಡಿ ವಿಶೇಷವಿತ್ತು. ಛಳಿ ರಕ್ಕಸನು ಶರಣರ ಸಂಭ್ರಮದ ವಿವಾಹವನ್ನು ಕೆಡಿಸದಲೆ ಬಿಡನೆಂದು ಕೂಡಲೆ ಮಧುಭೂಪನು ತನ್ನ ಪಡೆಗೆ ಅಪ್ಪಣೆಯಿತ್ತು ಗುಡಿಯ ಪೊಯ್ಸಿದನು. ಕೆಂಪಿಡಿದ ತಳಿರುಗಳಲ್ಲಿ ನಿಡುಸರದ ಪಿಕಬಳಗ ಕೂಡತೊಡಗಿದವು. ಭ್ರಮರಗಳು ಝೇಂಕರಿಸಹತ್ತಿದವು. ಶರಣನ ಲಗ್ನವಾಗುವದು ನೋಡುವದಕ್ಕೆ ಬೇಗ ಬರ್ರೆಂದು" ಇಳೆಯ ಜನಕ್ಕೆ ಕೂಗಿ ಕರೆವಂತೆ ಕೋಗಿಲೆಗಳು ಉಲಿದವು. ಮಧುಮಾಸದ ಆಗಮನದಿಂದ ವನವೆಲ್ಲ ನಗತೊಡಗಿತು. ನೋಡಿದತ್ತೆಲ್ಲ ಪರಿಮಳಯುಕ್ತ ಕುಸುಮಗಳು ವೃಕ್ಷಗಳ ಕೊನೆಗೆ ಎಸೆದವು. ಅಖಿಳ ಲೇಸನ್ನು ಪಡೆದಿರುವ ವೈಶಾಖಮಾಸ ಬಂದಿತಾಗ! ಮಾಶಾಳ ಪುರವರದ ಶಾಂತಲಿಂಗಪ್ಪ, ದೇಶಿಕರನ್ನು ಕರೆಸಿ ಲಗ್ನದ ಮುಹೂರ್ತ ನಿಶ್ಚಯಿಸಲು ಹೇಳಿದನು. "ಗುರು ಲಗ್ನದಲ್ಲಿ ಭಾಸ್ಕರನು ದಶಸಂಖ್ಯ ಯೊಳಗಿರಲು, ಮಂಗಳನು ಹನ್ನೊಂದಕ್ಕೆ ಇರುತಿರುವ ಲಗ್ನ, ಶಂಕರ, ಗಿರಿಜೆ ಲಗ್ನವೆಂದಿರುವದು" ಈ ಶುಭ ಸಮಯದಲ್ಲಿ ವಿವಾಹಗೈಯಲು ಸಿರಿ, ಸುತರು, ಸತ್ಸಂಪದವು ಲಭ್ಯವಾಗುವವು. ಸೋದರ, ಬಂಧುವರ್ಗ, ಪ್ರಮಥ ಗಣಗಳಿಗೆ ಅನುರಾಗದಿಂದ ಪತ್ರ ಬರೆಸಿ ಕರೆಸಿಕೊಳ್ಳಲು ದೇಶಿಕರು ಸೂಚಿಸಿದರು. ಅರಳಗುಂಡಿಗೆಗೆ ಲಗ್ನದ ಮಿತಿಯನ್ನು ತಿಳಿಸಲು ಚರರನ್ನು ಕಳಿಸಿದನು. ಆಗ ಆದಯ್ಯ ಗುರುಗಳನ್ನು ಮತ್ತೆ ಕರೆಸಿಕೊಂಡು ಗೊತ್ತಾದ ವಿವಾಹದ ತಿಥಿ ತಿಳಿಸಿದನು. ಪುರಜನ, ಪರಿಜನ ಬಂಧು, ಬಳಗ, ಆಪ್ತೇಷ್ಟರೊಂದಿಗೆ ಶರಣರು ಮಾಶಾಳ ಗ್ರಾಮಕ್ಕೆ ವಿವಾಹಕ್ಕಾಗಿ ನಡೆದರು. ಈಶ ಶರಣನ ಭಕ್ತರಿಗೆ ಮಾರ್ಗದಲ್ಲಿ ತೊಂದರೆಯಾಗಬಾರ ದೆಂದು ಮಂದಮಾರುತನು ಹಿತಕರವಾಗಿ ಬೀಸಿ, ಮಾರ್ಗಾಯಾಸವನ್ನು ತೋರಗೊಡಲಿಲ್ಲ. ಮಧುಮಾಸದೈಸಿರಿ ಮಾರ್ಗದ ಇಕ್ಕೆಲಗಳಲ್ಲಿ ಸೂರೆಗೊಂಡಿತು. ಸುಗಂಧ ಸುಮಗಳಿಂದ ತೀಡಿ ಬರುತ್ತಿತ್ತು. ವನದಸಿರಿಯನ್ನು ಕಂಡು ಚಿತ್ತಹರ್ಷರಾದ ಬೀಗರು ಮಾಶಾಳ ಗ್ರಾಮವನ್ನು ತಲುಪಿದರು. ಬೀಗರನ್ನು ಮಾಶಾಳದವರು ಸಕಲ ಸಿದ್ಧತೆಯೊಂದಿಗೆ ಎದುರುಗೊಂಡರು. ಅಲ್ಲಿ ಅಲಂಕೃತವಾದ ವಿವಾಹ ಮಂಟಪ ಮಾನವ ಜಾತಿಯ ನಯನ ಗಳಿಗೆ ಉತ್ಸವವಿತ್ತು ಚನ್ನಾಗಿ ಮೆರೆಯಿತು. ಕವಿ, ಗಮಕಿ, ವಾಗ್ಮಿ, ನಟ ವಿದೂಷಕ ಮೊದಲಾದವರಿಂದ ಊರು ತುಂಬಿ ಹೋಗಿತ್ತು. ಪ್ರಮದೆಯರ ಸಡಗರ, ಮಕ್ಕಳ ನಲಿದಾಟ ಮನಕ್ಕೆ ಆನಂದವಾಗುತ್ತಿತ್ತು ವಿವಾಹ ಮಂಟಪ ಬಂಧು ಜನರ, ಪುರಜನರ, ಬೀಗರಿಂದ ನೆರವಿ ಹರುಷದಿಂದ ಕೂಡಿತ್ತು. ಕರಿಯ ಕಂಬಳಿಯ ಮೇಲೆ ಅಕ್ಕಿಕಾಳುಗಳನ್ನು ಸುರವಿ ಹಸಿಯನ್ನು ವಿರಚಿಸಿದರು. ವರ ಮುಹೂರ್ತ ಸಮೀಪಿಸಲು ವಧು-ವರರನ್ನು ಕರೆತಂದರು. ವಧುವನ್ನು ಶ್ರೀ ಶರಣಪ್ಪನ ಬಲದೊಳಿರಿಸಿ ಗುರುತಿಲಕನು ಆ ಹೊತ್ತು ಪಂಚಾಕಲಶ ಸ್ಥಾಪಿಸಿ ದೀಕ್ಷೆಯೊಳು ಮಾಡುವಂತೆ ಮಾಡಿ, ಬಿಳಿದರ್ಭೆ ಮುದ್ರೆಯಂಗುಲಕಿಟ್ಟು ವರನ ಕೈಯೊಳು ಕನ್ಯೆಯ ಕರಕಮಲ ವಿಡಿಸಿದರು. ಮಠದೊಡೆಯರು, ಗುರುಗಳು ಈರ್ವರಿಗೂ ಎರಡು, ಮೂರು ಕೊಂಬಿನ ಅರಿಷಿಣಗಳನ್ನು, ಹುರಿಗೈದ ದಾರದಿಂದ ಸುತ್ತಿಕಟ್ಟಿದರು. ಶಾಂತಲಿಂಗಪ್ಪ ಕನ್ಯೆಯನ್ನು ಧಾರೆಯೆರೆದು ಕೊಟ್ಟನು. ಕಲಧೌತ ಸಹಿತ ಮಂಗಳ ಸೂತ್ರವನ್ನು ಹಾಲಿನಲ್ಲಿ ಅದ್ದಿ ಗುರುಹಿರಿಯರು, ಮುತ್ತೈದೆಯರು ಬಲ ಹಸ್ತದಿಂದ ಮುಟ್ಟಿದ ವರಕಂಠಕ್ಕೆ ಶರಣರು ಕಟ್ಟಿದರು. ವಧು-ವರರು ಹಾಲಿನೊಳು ಮುತ್ತೊಂದನ್ನು ಹುಡುಕಿ ಸಂತೋಷ ಚಿತ್ತ ತಳೆದರು. ಮುತ್ತೈದೆಯರು ಮಾದಮ್ಮನಿಗೆ ಪತಿ ಹೆಸರು ಕೇಳಲು "ಉದಾತ್ತ ಮಹಿಮಾಗಾರ ಸತ್ಯಶರಣೇಶ"ನೆಂದು ಹೇಳಿದಳು. ಪ್ರತಿಯಾಗಿ ಸದ್ವೃತ್ತೆ ಮಹದೇವಿಯೆಂದು ಶರಣರು ಹೆಸರು ಹೇಳಿದರು. ತಟ್ಟೆಯಲ್ಲಿ ತಂಡುಲ ಹರವಿ ಮುತ್ತೊಂದನಿರಿಸುತ್ತ ಅರುಂಧತಿಯ ದರ್ಶನವನ್ನು ಮಾಡಿಸಿದರು. ಗೆಳತಿ

ಯರು, ಹಿರಿಯ ಮುತ್ತೈದೆಯರು ತಾಯಿ ಮಾದೇವಿಗೆ "ನಾದುನತ್ತಿಗೆ, ಭಾವ, ಮೈದುನರ ಸಂಗಡ ಭೇದ ಬುದ್ಧಿಯು ಬೇಡ" ಅತ್ತೆ, ಮಾವರ ಪಾದಸೇವೆ ಮಾಡುತ್ತಿರೆಂದು ಉಪದೇಶಿಸಿದರು. ಹೆರವರು ತಂದಿಟ್ಟ ಕಡವರದಂತೆ ಮಗಳೆ ಇದುವರೆಗೆ ನಮ್ಮ ಮನೆಯಲ್ಲಿ ನಿನ್ನ ಇರುವಾಯ್ತು. ಇಂದು ಪತಿ ಗೊಪ್ಪಿಸಿ ಕೃತಕೃತ್ಯನಾದೆ. ತನ್ನ ಪುರುಷನೆ ದೈವವೆಂದು ನೆರೆನಂಬಿ ನಡೆಯೆಂದು ಶಾಂತಲಿಂಗಪ್ಪನು ಮಾದಮ್ಮನಿಗೆ ಹಿತೋಕ್ತಿಗಳನ್ನಾಡಿದನು. "ನೀನು ಇವಳ ಹಡೆದ ಮಗುವೆಂದು ಕೈಪಿಡಿದು ಕಾಪಾಡೆಂ" ದು ಮಡಿಯಮ್ಮನಿಗೆ ತಾಯಿಯು ಮಾದೇವಿಯನ್ನೊಪ್ಪಿಸಿದಳು. ಮಗಳನ್ನು ಕಳಿಸಿ ಕಣ್ಮರೆಯಾಗುವವರೆಗೆ ಮೈಮರೆದಿದ್ದು, ಎಚ್ಚತ್ತು ತಿರುಗಿ ಎಲ್ಲರು ಮನೆಗೆ ಬಂದರು.

ಅತ್ತ ಅವರೆಲ್ಲರು ಆರಳಗುಂಡಿಗೆಗೆ ಬಂದರು. ಅಲ್ಲಿ ಹರುಷದಿಂದಿರಲು, ಗುರುರಾಯ ಶರಣರಿಗೆ ವರ ಕ್ರಿಯಾಚರಣೆಯನ್ನು ಕರುಣೆಯಿಂದ ತಿಳಿಸಿದನು. ದೇಶಿಕನು ತೋಷದಿಂದ, ಲಿಂಗಾಂಗದ, ಸಕೀಲಗಳ ಜಂಗಮನಿಂದ ಶೇಷವನ್ನೇ ಕೊಡಿಸಿ ಭವಪಾಶ ಘೇಯ್ತುಂದಂತೆ ಶರಣಪ್ಪನಿಗೆ ಆಡಿ ಆಶೀರ್ವಚಂಗೈದು ಅಕ್ಷತೆ ಗಳನ್ನು ಸೂಸಿ "ನಿರುತ ಲೇಸಾಗಲೆಂದು" ಹರಿಸಿ ಕಲಕೇರಿಗೆ ಗುರುಗಳು ಉಲ್ಲಾಸದಿಂದ ತೆರೆಳಿದರು. ಇತ್ತ ಶರಣರು ನಿತ್ಯ ಶಿವಪೂಜಾರ್ಚನೆ, ಜಂಗಮ ತೃಪ್ತಿಮಾಡುತ್ತ, ಪಾದೋದಕ, ಪ್ರಸಾದ ಸೇವಿಸುತ್ತ, ದಾಸೋಹ ಮಾಡುತ್ತ ಸುಖದಿಂದಿರ್ದರು.

ಚರರೇನು ಬೇಡಲಂತರಿಸದಂತಿತ್ತು; ಶಂಕರಪೂಜೆ ಮೂರು ಹೊತ್ತು ವಿರಚಿಸುತೆ, ಪೂಜೋಪಕರಣ ಗಳು, ಪತ್ರಿ, ಸುಮಸರ ಧೂಪಬತ್ತಿಗಳನ್ನು ನೆರಹುತ್ತ ಮನೆಗೆ ಬಂದ ಶರಣರೊಳು ಷಟಸ್ಥಲಾಚರಣೆ ಗೋಷ್ಟಿ ಯಲ್ಲಿರುತ್ತ ಮನೆಗೆಲಸ ಮರೆತ ಕಾರಣದಿಂದ ಕಿರಿ ಕಿರಿಯು ಬಲು ಪುಟ್ಟಿ ಬಂಧುಗಳು ಬೇರೆಯಾಗಲು ಇಚ್ಛಿ ಸಿದರು. ಬೇಡಿ ತಿಂಬುವರ ಸಂಗಡ ಹಾಳು ಮಾತಾಡಿ, ಮನೆಯ ಧನ, ಧಾನ್ಯ ಹಾಳು ಮಾಡಿದೆ ಇನ್ನು ಸಾಕು ಮುಂದೆ ಮಾತಾಡಬಾರದು. ನಾಡು ನಾಡಿನ ಪಕ್ಕಿ ಸಹ ಗೂಡಿನಲ್ಲಿ ಧಾನ್ಯಗಳನ್ನು ಸಂಗ್ರಹಿಸುವ ಸಮಯದಲ್ಲಿ, ಶಿವನನರ್ಚಿಸಿ ಹೊಲ, ಮನೆ ಕಡೆ ಕಣ್ಣೆತ್ತಿ ನೋಡದಲೆ ಜೀವನ ಕಳೆಯುತ್ತ, ಮೂಢರಿಗೆ ಗುರುವಾದೆಯೆಂದು ಕಿಡಿ ನುಡಿದರು ಶರಣನಿಗೆ ಅವರ ಬಂಧುಗಳು.

## ಹತ್ತನೆಯ ಸಂಧಿ

ಶ್ರೀಶರಣರ ಶಿವಪೂಜೆ, ಜಂಗಮಾರ್ಚನೆ ದಿನೆ ದಿನೇ ಹೆಚ್ಚತೊಡಗಿತು. ಅವರ ಬಂಧುಗಳು ಶರಣರ ಈ ವೃತ್ತಿಯಿಂದ ಕುಪಿತರಾಗಿ ಪಾಲಾಗಲು ಇಚ್ಛಿಸಿದರು. ಅವರ ಬಯಕೆಯಂತೆ ಬಂಧುಗಳು ಬೇರೆಯಾಗು ವದು ಅನಿವಾರ್ಯವಾಯಿತು. ಬಂಧುಗಳು ಬೇಕಾದುದನ್ನು ಒಯ್ದುಳಿದುದೇ ಶರಣರಿಗೆ ಬಂದ ಪಾಲಾಯಿತು. ದೊರೆತುದೆ ಹಸಾದವೆಂಪು ತೃಪ್ತಿಯಿಂದ ಜೀವನ ಕಳೆಯತೊಡಗಿದರು. ಹಣವುಳ್ಳವರು ದಿನಕರನ ತೇಜಸ್ಸುಳ್ಳ ವರೆಂದೂ, ಸದ್ಗುಣವಂತರೆಂದೂ ನಾಡಜನರು ಹೊಗಳುವರು; ಹಣಹೋದ ದಿನವೇ ಹೆಣನೆಂದು, ನಾಡೆ ದುರ್ಗುಣಿಯಂದು, ದೊಡ್ಡ ಪೈಶುನನೆಂದು ಧಿಃಕ್ಕರಿಸಿ; ಹಣಿಕಿ ನೋಡಿದರೆ ಭೂತವೆನ್ನುತ್ತ ಓಡಿಹೋಗುವರು. ಹೆಂಡತಿ, ಮಕ್ಕಳು, ಬಗೆಯರು. ಜಗತ್ತಿನಲ್ಲಿ ಜೀವನಕ್ಕೆ ಧನವೇ ಮುಖ್ಯ. ಬೆಳೆದ ಬೆಳೆಗಳು ಪಸುರುಡಿಗೆಯನ್ನು

ತಳೆದಂತೆ, ಭೂಲಲನೆ ಶೋಭಿಸುತ್ತಿದ್ದಳು. ಬೆಳಕಾಗಿ ಕಬ್ಬಕ್ಕಿಗಳ ಸೋವಲೆಂದಟ್ಟದೊಳು ನಿಂತ ಪಾಮರರ ಕಲ ಕಲ ಧ್ವನಿ, ಎತ್ತುಗಳ ಮೇಯಿಸುವವರ ಒಲವು ನೆತ್ರಂಗಳಿಗೆ ಆನಂದ ನೀಡುತ್ತಿದ್ದವು. ಸುಗ್ಗಿಯ ಕಾಲದಲ್ಲಿಯೂ ಶಿವಯೋಗಿ ಶರಣನು ಹೊಲದ ಕಡೆ ನೋಡದೆ, ದಾಸೋಹ ಮಾಡುತ್ತ ಸಲೆ ಲಿಂಗೋಪ ಭೋಗದಲ್ಲಿದ್ದನು. ಶರಣರ ಬೆಳೆದು ನಿಂತ ಹೊಲಕ್ಕೆ ನಾನಾ ಪಶುಪಕ್ಷಿಗಳು ಬಂದು ಮೇಯುವುದನ್ನು, ತಿನ್ನುವುದನ್ನು, ಕಂಡ ನೆರೆಯವರು ಶಿವಯೋಗಿಗೆ ಬಂದು ಹೇಳಿದರು. ಅದನ್ನು ಕೇಳಿ ಹೊಲಕ್ಕೆ ಬಂದು ಕಾಣುತ್ತ, ಪಶು ಪಕ್ಷಿಗಳು ಆನಂದದಿಂದ ಮೇಯುವದಕ್ಕೆ ಇಲ್ಲಿ ಇನ್ನೊಂದು ಕೊರತೆಯಿದೆಯೆಂದು ಮನನೊಂದು ನೀರಿನ ರಂಜಣಿಗೆಗಳನ್ನು ತಂದು ಹೊಲದ ಮೇರೆಯಲ್ಲಿಟ್ಟರು. ನಿತ್ಯವೂ ಮೇಯ್ದು ಪಶು ಪಕ್ಷಿಗಳು ನೀರು ಕುಡಿಯಲೆಂದು ಅವುಗಳಿಗೆ ನೀರುಹೊತ್ತು ತುಂಬಿಸತೊಡಗಿದರು. ಜನಗಳಿಗೆ ಸೀತನೆ ತಿನ್ನಲೆಂದು ಒಲೆಗೂಣಿ ತೋಡಿದರು. ಪಶು ಪಕ್ಷಿಗಳಿಗೆ ನೆರೆಯವರ ಹೊಲಕ್ಕೆ ಹೋದರೆ ಬಡಿಯುವರೆಂದು ತನ್ನ ಹೊಲಕ್ಕೆ ಬಂದು ಇಲ್ಲಿಯೇ ತಿನ್ನಿರೆಂದು ಹೇಳುತ್ತಿದ್ದರು ಶರಣರು. ಇದರಿಂದ ನೆರೆಯವರು ತಮ್ಮ ಹೊಲ ಕಾಯುವ ಸಂಕಟ ತಪ್ಪಿತೆಂದು ಯಥೇಷ್ಟ ನಿದ್ದೆ ಮಾಡುತ್ತಿದ್ದರು. ಹಾದಿ ಹೋಗುವವರನ್ನು ಕರೆ ಕರೆದು ಆದರದಿಂದ ಸೀತೆನೆ ತಿನ್ನಿಸುತ್ತಿದ್ದರು. ಇಂತು ನಿಷ್ಪೇದದಿಂದ ದಿನದೂಡ ತೊಡಗಿದರು. ಮೇದಿನಿಯ ಜನರೆಲ್ಲ ಇವರನ್ನು ಸಾಕ್ಷಾತ್ ಶಿವನೆಂದು ಹೇಳತೊಡಗಿದರು. ಶರಣರು ಜನಾಪವಾದಕ್ಕಂಜಿ ಬೆಳೆಕೋದು ಗೂಡು ಹಾಕಿದರು. ಕಣ ಮಾಡಿದರು. ತೆನೆ ಮುರಿಯಲು ಕೂಲಿಯವರು ಯಾರೊಬ್ಬರೂ ಬರಲೊಪ್ಪಲಿಲ್ಲ. ಶರಣರ ಹೊಲದ ಕರಿಯ, ಕಾಳಿಲ್ಲದ ಕಂಕಿಯನ್ನು ಒಯ್ಯಲು ಯಾರು ಬರಲು ಸಾಧ್ಯ ? ಜೋಳ ಕೊಡಲು ಒಪ್ಪಿದ ನಂತರ ಮುದುಕಿ ಬಂದು ತೆನೆ ಮುರಿದಳು. ಹಂತಿಕಟ್ಟಿ ತಿರುಗಿ ಮದನಕ್ಕೆ ಚರತೃಪ್ತಿ ಪಡಿಸಿದರು. ಹರಹರಾ ಪರಮಾತ್ಮೆಂದು ಕೈಯಿಂದ ತೂರಲು ಹೊಲದಗಲ ರಾಶಿ ನೆರೆಯಿತು. ದಾರಿಹಿಡಿದು ಹೋಗುವವರನ್ನು ಕರೆದು ತೃಪ್ತಿಯಾಗು ವಂತೆ ಧಾನ್ಯ ಕೊಟ್ಟರು. ಅಪಾರ ರಾಶಿಯನ್ನು ಮನೆಗೆ ಶರುವುದನ್ನು ನೋಡಿ ಸಜ್ಜನರು ಆಶ್ಚರ್ಯಗೊಂಡು, ಶರಣರ ಮಹಿಮೆ ನಿಶ್ಚಯವಿದೆಂದು ಸಂತೋಷದಿಂದ ಮಾತಾಡಿದರು. ದುರುಳರಿದನ್ನು ಕಂಡು ಸೈರಿಸದೆ ತಮ್ಮ ರಾಶಿಯನ್ನು ತಿರುವಿಕೊಂಡಲ್ಲದೆ ಈ ರಾಶಿ ಕಾಣಲು ಸಾಧ್ಯವಿಲ್ಲೆಂದು ಅನ್ನಲು ಆ ಮುದುಕಿ, ಶರಣ ಸಾಮಾನ್ಯ ನಲ್ಲ, ನೀವು ಖಳರು. ಅವನಿಂದ ತಾಯಂ ಕಣೆಗಳೊಳು ರಾಶಿ ಮಾಡಿದರೆ ಕೊಳ ಕೊಂಡೆನೆಂದು ಸ್ಪಷ್ಟವಾಗಿ ನುಡಿದಳು. ನೆರೆಜನ ಇದು ಅದ್ಭುತ! ಹಿಂದೆ ಇಂತಹ ಚರಿತೆ ಕೇಳಿದವರಿಲ್ಲ ಹಿರಿಯರೊಳಗೆ. ಶರಣರ ಕರ ಪರುಷ ಸೋಂಕಲು "ಯಾವನಾಳೆಂಬುವ ಕಿರಿನಾಮ ಬಿಟ್ಟು ಶಂಕರನಾಳವೆಂಬ ಉರುತರ ನಾಮ ತಾಳ್ದುದು" ಆಶ್ಚರ್ಯವಲ್ಲವೆಂದು ನೆರೆ ಪೊಗಳಿದರು. ಲಿಂಗ, ಚರಪೂಜೆ, ದಾಸೋಹ ಮಾಡುತ್ತ ಶರಣನು ಸುಖದಿಂದ ಇದ್ದನು.

ಮತ್ತೊಂದು ದಿನ ಬಹಳ ರಾತ್ರಿಯೊಳೆದ್ದು ಅಡವಿಗೆ ಪತ್ರಿ, ಪುಷ್ಪ ತರಲು ಹೋದ ಸಮಯದಲ್ಲಿ ಎಂಟು ಜನ ಕಳ್ಳರು ಬಂದು ಕಾಣುತ್ತ, ಎಲೈ ಸತ್ಯಸಂಧ ಶರಣನೆ, ನಮಗೆ ನಿನ್ನ ಸಮೆಯದ ಧನಕೊಡೆಂದು ಕೇಳಿದರು. ಶರಣರು ಹಣ ತರಲು ಮನೆಕಡೆ ಹೋದರು. ಅವರು ತರುವ ಹಣ ಹೂಳಿಡಲು ತಗ್ಗು ತೆಗೆಯು ವಷ್ಟರಲ್ಲಿ ಕಳ್ಳರಿಗೆ ಅಪಾರ ನಿಧಿ ಪ್ರಾಪ್ತವಾಯಿತು. ಅದನ್ನು ಹೊತ್ತು ಕಳ್ಳರು ಶರಣರ ಕಡೆ ನಡೆದರು. "ಪಾಪಿಗಳು ನಾವು ಮನ್ನಿಸೆಂ" ದು ಬೇಡಿದರು. ಶರಣರು ಅವರಿಗೆ ಅಭಯ ನೀಡಿದರು. ''ಪಾಪಿಗಳ ಕಂಡು

ಸಲೆ ಕೋಪಿಸುವರಲ್ಲದೆ ಅಘಲೋಪ ಕೇಳ್ನಿಮ್ಮಂತೆ ಕಾಪಾಡುವವರೊಳರೆ" ತಾಪಸಂಹರನೆ, ಸದಯಾಪರತೆ ನಿಮಗೊಪ್ಪಿತೆಂದು ಕಳ್ಳರು ಕೊಂಡಾಡಿದರು. ಆಗ ಶರಣರು ಅವರಿಗೆ ಮೊದಲು ವಾಗ್ರುಣವಾದವೆನ್ನ ಮನೆ, ಹಣ ನೀವು ಕೈಕೊಂಡು ಉಣುವದು, ಉಡುವದು, ಚೌರ್ಯತನ ಬಿಡುವದೆಂದು ಸದ್ಗುಣ ಬೋಧಿಸಿದರು.

ಇನ್ನೊಮ್ಮೆ "ಶರಣರು ಜಂಗಮ ಸಹಿತ ಶೇಷಮಂ ಮುಗಿಯುತಿರಲಾಸಮಯ ಶರಣಗಾಯಾಸ ಮೇಯೆನಲುಹೊಹೋಶರಣು" ಎನ್ನಲು ದೋಷವೆ! ಇನ್ನು ನಿನ್ನ ವಾಸ ಸಾಕು, ಜನ ನಿನಗೆ ಸಾಧುವೆನ್ನಲು ಪಿತ್ತ ನೆತ್ತಿಗೇರಿದೆ ಮೂರ್ಖ, ಅತ್ತ ಸರಿಯೆಂದು ಹೇಳುವಷ್ಟರಲ್ಲಿ ಜಂಗಮರಿಗೆ ಉಗ್ರ ಸರ್ಪ ಕಚ್ಚಿತು. ವಿಷವೇರು ತ್ತಿರಲು ಮೂರ್ಛಿತನಾಗಿ ಭೂಮಿಗೆ ಬಿದ್ದನು. ಅವನಿಗೆ ಚರಶೇಷವನ್ನು ಸೇವಿಸಲು, ಮೇಲೊಂದು ದಿವ್ಯಾಂಬರ ವನ್ನು ಹೊದಿಸಿದರು. ಎರಡು ತಾಸಿನ ನಂತರ ಎಚ್ಚತ್ತು ನೋಡಲು ಹಿಮ್ಮಡದಲ್ಲಿ ಸುರಿವ ರಕ್ತ, ಕಡಿವ ಗುರುತಿ ಲ್ಲದಂತೆ ಆಗಿತ್ತು. ಪುರದ ಜನರೆಲ್ಲ ಇದನ್ನು ತಿಳಿದು ಶರಣರನ್ನು ಕೊಂಡಾಡಿದರು.

ಸತ್ಯ ಶರಣರ ಕೀರ್ತಿಯನ್ನು ಕೇಳಿ ಕಡಕೋಳದ ಮಡಿವಾಳಪ್ಪ ದೀಕ್ಷೆ ದಯಪಾಲಿಸೆಂದು ಸದಯಾಳು ಮೂರ್ತಿ ಶರಣನಿಗೆ ಬೇಡಿದನು. ಶರಣರು ಅವನ ಹಂಬಲವನ್ನು ಈಡೇರಿಸಲು ಕ್ರಿಯಾಮೂರ್ತಿಗಳನ್ನು ಕರೆಸಿ ದೀಕ್ಷೆಯ ಸಂಸ್ಕಾರ ಮಡಿವಾಳಪ್ಪನಿಗೆ ಮಾಡಲು ಹೇಳಿದರು. ಅವನ ಜಾತಿ, ಕುಲ, ಮೂಲ, ಅರಿಯದೆ ದೀಕ್ಷೆ ಮಾಡುವದು ಕೀಳೆಂದು ವರಮೂರ್ತಿ ಆಡಿದನು. ಈ ಮೊದಲು ವಚನ ಕೊಟ್ಟಿರುವೆ. ದೀಕ್ಷೆ ತಡೆಯದಿತ್ತು ಪೂತನನ್ನಾಗಿ ಮಾಡೆಂದು ಶರಣರು ಹೇಳಿದರು. ಇದನ್ನು ಕೇಳಿ ಆ ಜಂಗಮಮೂರ್ತಿ ಶರಣರನ್ನು ನಿಂದಿಸಿ, ಮನೆಗೆ ಹೋದನು. ಮತ್ತೊಬ್ಬ ಸುವಿಚಾರಿ ಜಂಗಮನನ್ನು ಕರೆಸಿ ಮಡಿವಾಳಪ್ಪನಿಗೆ ದೀಕ್ಷೆ ಮಾಡಿಸಿದರು. ಮೊದಲಿನ ಜಂಗಮ ಕೋಪಿಸಿಕೊಂಡು, ಅವರನ್ನು ಕೊಲ್ಲಿಸಲೆಂದು ಬೇಡರನ್ನು ಕರೆಸಿ ನೂರು ಹಣ ಕೊಡುವೆ ಕೊಂದು ಬರ್‍ರೆಂದು ತಿಳಿಸಿದನು. ಶರಣರು ಸಾಯಂಕಾಲ ಪತ್ರಿ ಎತ್ತಿ ಬರುವಾಗ ಬೇಡರೆಂಟು ಜನ ಓಡಿಬಂದು ತಡಿಯಿರೆಂದು ಕೈಮೇಲೆತ್ತಿದ್ದಂತೆಯೇ ನಿಂತವು. ಕೈ ಕೆಳಗೆ ಭಾರದಾದವು. ಮುಖ ಕೆಳಗೆ ಮಾಡಿ ನಾಚಿಕೆ ಯಿಂದ ನಿಂತವರ ಮೇಲೆ ಕರುಣೆತೋರಿ ಕಾಪಾಡಿದರು. "ಮೃಡನಲಾ ಜಂಗಮನು ನಾವೆ ಕಡುಭವ್ಯ ಬೆಸಸಿದ ವರಾಣೆ. ಯೋಚಿಸದೆ ಪೊರೆಯೆಂದು ಕೈಮುಗಿದರು. ಪಾಪಾತ್ಮರು ನಾವು, ಪಾಲಿಸೆಂದು ಬೇಡಿಕೊಂಡರು. ಅವರ ಕೈಗಳು ಕೆಳಗಾದವು ಶರಣನ ದಯೆಯಿಂದ.

ಇನ್ನೊಮ್ಮೆ ಜಂಗಮನೊಬ್ಬ ಬಂದು ಮಗನ ಮದುವೆ ವೈಶಾಖದಲ್ಲಿದೆ; ಸಾವಿರ ಹಣ ಕೊಡಲು ಕೇಳಿದನು. ಲೇಸು ಮದುವೆಗೆ ಹಣ ಕೊಡದಿದ್ದರೆ ಉಪವಾಸ ಬೀಳುವೆನೆಂದನು. ಶರಣರು ತತ್ತರಗೊಂಡು ಒಬ್ಬ ಶ್ರೀಮಂತನ ಬಳಿಗೆ ಹೋಗಿ ಸಾವಿರ ಹಣ ಬಡ್ಡಿಗೆ ಕೊಡಲು ಬೇಡಿದರು. "ನೀವು ಸತ್ಯಸಂಧಾನಿ, ಕೊಡುವ ಅವಧಿ ಹೇಳಿದರೆ ಹಣ ನೀಡುವೆ" ನೆಂದು ಹೇಳಿದನು. "ಚಿತ್ರಜಾಂತಕ ಕೊಟ್ಟ ಹೊತ್ತು ಕೊಡುವೆ." ನೆಂದು ಪತ್ರದಲ್ಲಿ ಬರೆಸಿ ಹಣತಂದು ಜಂಗಮನಿಗೆ ಕೊಟ್ಟರು. ಬಹಳ ದಿನಗಳು ಸಂದರೂ ಋಣ ಸಂದಾಯ ವಾಗದಿರಲು ಹಣಕೊಟ್ಟ ಧನಿಕ ಶರಣರ ಮನೆಗೆ ಆಳು( ರಾಮಜಿದಾದಾನ)ನ್ನು ಕಳಿಸಿದರು. ಅಂದು ರಾತ್ರಿ ಶಿವನು ಧನಿಕನ ಕನಸಿನಲ್ಲಿ ಬಂದು "ಶಿವನು ಕೊಟ್ಟೆಂದು ನಾ ನಿಮಗೆ ಕೊಡವ" ನಂದ ಅವನದು ತಪ್ಪಿಲ್ಲ;

ನಿನಗೆ ಸುವಿಚಾರವಿಲ್ಲ. ಲೆಕ್ಕವು ತೆಗೆಯೆಂದು ಬಡ್ಡಿ ಸಹಿತ ಹಣಕೊಟ್ಟು ವೋಹಿಯೊಳು ಜಮೆ ಹಿಡಿಸುತಲಿ ಕಾಗದವಕೊಂಡು ಹರಿದುಹಾಕಿ ತವಕದಿಂದ ಬಯಲಾದನು. ಕನಸಿನಿಂದ ಎಚ್ಚತ್ತ ಧನಿ ಹಣ ಜಮೆಗೆ ಹಚ್ಚಿ ದುದನ್ನು, ಪತ್ರ ನುಚ್ಚು ನೂರಾದುದನ್ನು, ಮುಚ್ಚಿಟ್ಟ ಹಣವನ್ನು ಕಂಡು ಆಶ್ಚರ್ಯಗೊಂಡನು. ಶರಣನ ಬಳಿಗೆ ಹೋಗಿ ಪಾದ ಕಮಲಗಳಿಗೆ ವಂದಿಸಿ ನಡೆದುದನ್ನು ವಿವರಿಸಿದನು. "ತಂದೆ ನೀ ಪೇಳಿದಂತೆ ಇಂದುಧರ ಹಣ ಕೊಟ್ಟು ನಿಸ್ಸಂದೇಹ–ನಂಬಿ ಮುದದಿಂದ ಪೊರೆ ದಯಾಸಿಂಧುವೆಂದು ಧನಿಕ ಶರಣರನ್ನು ಪರಿ ಪರಿಯಾಗಿ ಕೊಂಡಾಡಿದನು.

## ಹನ್ನೊಂದನೆಯ ಸಂಧಿ

ಇಂದುಧರನ ರೂಪಾದ ಚರರನ್ನು ಒಂದೂ ಊನವಿಲ್ಲದಂತೆ ತೃಪ್ತಿಪಡಿಸುತ್ತಿದ್ದರು. ಶರಣ ದಂಪತಿ ಗಳು. ಅವರು ಅಂದುದೆ ಹಸಾದವೆಂದು ತಿಳಿಯುತ್ತಿದ್ದರು. ಶರಣಸತಿ ಮಾದಮ್ಮ ಗರ್ಭವತಿಯಾದಳು. ಏಳು ತಿಂಗಳು ಕಳೆದವು. ಮನೆಗೆಲಸದಿಂದ ಬಳಲಿ ಮಾದಮ್ಮ ಒರಗಿರುವ ಸಮಯದಲ್ಲಿ ಜಂಗಮನೊಬ್ಬ ಬಂದನು. ಆಲಸಿಕೆಯಿಂದ ಚರಸೇವೆಗೈಯುವದನ್ನು ಬಿಟ್ಟು ಸುಮ್ಮನಿರಲು ಅದನ್ನು ತಿಳಿದ ಶರಣರು ತಡ ಮಾಡದಲೆ ಅವರಿಗೆ ಉಣಿಸಲು ಆಜ್ಞೆ ನೀಡಿದಂತೆ ಎದ್ದು ಉಣನೀಡಿ ಕಳಿಸಿದಳು. ಎಲೇ ನಿನಗಿನಿತೇತರೊಲವು ಜಂಗಮದೊಡನೆ ಛಲವೆ ಎಂದು ಕೋಪಿಸಿದರು. ಗರ್ಭವಾಂತಡಾಯಸಗೊಳ್ಳದೆ ಇರುವವರು ಯಾರು ? ಅದಕ್ಕೆ ನಸು ತಡೆದೆ ಸದಯಾನಿಧಿ ಪೊರೆಯೆಂದು ಬೇಡಲು, "ಬಸುರಿಯಿದ್ದಾಗ ಹಿಗೆಂದ ಮೇಲೆ ಹೆರಿಗೆಯಾದ ಬಳಿಕ ಹೇಗೆ ಏನೊ ! ಅದರಿಂದ ಕಂತುಹರನಾಣೆ ಹಡಿಯದಿರೆಂ" ದರು ಶರಣರು.

ಹೀಗೆ ಇಪ್ಪತ್ತೊಂದು ತಿಂಗಳುಗಳು ಕಳೆದವು. ಒಂದು ದಿನ ದೇಶಿಕನೊಬ್ಬ ಶರಣನ ಮನೆ ಕೇಳುತ್ತ ಬಂದನು. ಅವನಿಗೆ ನಮಸ್ಕರಿಸಿ ಶರಣೇಶನು ಒಳಗೆ ಹೋದನು. "ಮಾದಮ್ಮ ರಕ್ಷಿಸೆಂ" ದು ಎರಗಲು ಎಷ್ಟು ದಿವಸ ಗರ್ಭವೆಂದು ಜಂಗಮರು ಕೇಳಿದರು. ಅವರಿಗೆ ನಡೆದ ಸಮಾಚಾರ ತಿಳಿಸಿದಳು. ಶರಣರು "ಕರಣ" ಪಡೆಯುವ ಕಾಲದಲ್ಲಿ ಸಾಷ್ಟಾಂಗ ಬೀಳಲು, "ಜಂಗಮರು ಶರಣರಿಗೆ ಏಳೆನ್ನಲಿಲ್ಲ "ದಯಾಶಾಲಿ ತಪ್ಪೇನು" ಎನ್ನಲು, ಶಿವಶರಣರಿಗೆ ಗರ್ಭಹಾಳು ಮಾಡುವದು ಉಚಿತವಲ್ಲವೆಂ" ದು ನುಡಿದರು. 'ಜಂಗಮಕೆ ಉಣಿಸಲು ಆಲಸ್ಯ ಮಾಡುವದು ಶೀಲವೆ ಸತಿಗೆ' ಎನ್ನಲು ಹಿಡಿವವಸ ಕದ್ದವಗೆ ಬಡಿದೊಮ್ಮೆ ಗಲ್ಲಕ್ಕೆ ಬಿಡುವುದಲ್ಲದೆ ತಲೆಯ ಕಡಿಸುವರೆ" ಶಿವನು ದಯಪಾಲಿಸಿದ ಸಂಪದವನ್ನು ಮತಿಯುತರು ಕೆಡಿಸುವದು ತರವಲ್ಲ. 'ಹಡೆಯಲು ನಿರೂಪಕೊಡು' ಎಂದು ಜಂಗಮರು ತಿಳಿಹೇಳಿದಂತೆ ಶರಣರು ಆಣೆಯನ್ನು ಹಿಂದಕ್ಕೆ ಪಡೆದು ಹಡೆಯಲು ಅಪ್ಪಣೆ ಕೊಟ್ಟರು. ಕರಣವನ್ನು ಪಡೆಮಕೊಂಡು ಜಂಗಮ ಶೇಷಹೊಂದಿ ಸಡಗರದೊಳಿದ್ದರು.

ಅಂದೇ ರಾತ್ರಿ ಮಹಾದೇವಮ್ಮನವರು ಸುಕುಮಾರನನ್ನು ಪಡೆದರು. ತತ್‌ಕ್ಷಣ ಗುರುಗಳನ್ನು ಕರೆಸಿ ಲಿಂಗಧಾರಣ ಮಾಡಿಸಿದರು. ನಾಮಕರಣೋತ್ಸವ ಕಾಲದಲ್ಲಿ, ಚರಸಮೂಹಕ್ಕೆ ಭೂರಿ ದಕ್ಷಿಣೆಯಿತ್ತು, ಊರಿಗೆಲ್ಲ ಅಮೃತಾನ್ನವನ್ನುಣಿಸಿದರು. ಜನರೆಲ್ಲ ನಲಿದಾಡಿದರು, ಈ ಸಂಭ್ರಮದಲ್ಲಿ. "ಗುರುಲಿಂಗ ಜಂಗಮ" ವೆಂದು ಹೆಸರಿಟ್ಟರು. ಹರುಷದಿಂದ ದಾಸೋಹ ಮಾಡುತ್ತಿರಲೊಂದು ದಿನ ಇರುಳು ಪುರಹರನು ಕನಸಿನಲ್ಲಿ

"ಶರಣಪ್ಪ ಕೇಳು, ನಿನ್ನ ಸತಿ-ಸುತರನ್ನು ಕರೆದೊಯ್ಯುವೆ. ನೀನು ಕಲಬುರ್ಗಿಗೆ ಹೋಗು, ಅಲ್ಲಿ ಪರಿಪರಿ ಪವಾಡಗಳನ್ನು ಮೆರೆಸು" ಎಂದು ನಿರೂಪ ಕೊಟ್ಟನು. ಕನಸಿನ ಅಭಿಪ್ರಾಯ ತಿಳಿದ ಶರಣರು 'ಸಸಿನೆಯಾಯ್ತು' ಯೆಂದು ಸಂತಸದಿಂದ ದಾಸೋಹ ನಡೆಸುತ್ತಿದ್ದರು. ಒಂದು ದಿನ ಹೆಂಡತಿ, ಮಗ ಲಿಂಗ ವಶವಾದರು. ಜನ ಸಮೂಹ ನೆರೆದು ಬಹು ಪರಿಯಿಂದ ಗೋಳಾಡಿತು. ಇದನ್ನು ಕೇಳಿ ಅಸಮ ಶರಣನ ಭಕ್ತ ಶರಣಪ್ಪ ನಸು ಯೋಚನೆ ಸಹ ಮಾಡಲಿಲ್ಲ. ಅವನ ಧೈರ್ಯ ಕಂಡು ಇದು ಹೊಸದೆಂದು ಜನಸಮೂಹ ನುಡಿಯಿತು. ಸುತ ಸತಿಯರ ಸಾವಿಗೆ ಊರೆಲ್ಲ ಕಣ್ಣೀರಿಟ್ಟಿತು. ದುಃಖಿಸುವ ಜನಸಮೂಹಕ್ಕೆ ಶರಣರು "ಇಲ್ಲಿ ಶಾಶ್ವತ ಉಳಿಯು ವವರು ಯಾರು? ಸತಿ, ಸುತರು, ನಿಲಯ, ಹಯ, ಹಸು, ಕ್ಷೇತ್ರ, ಗಳಿಸಿದ ಧನ, ಸುಳಿಗಾಳಿದೀಪ, ಸಲ್ಲಲಿತ ಇಂದ್ರಚಾಪ (ಕಾಮನಬಿಲ್ಲು) ಹುಲ್ಲಿನ ಕೊನೆಯಲೊಸೆವ ಪನಿ, ಮೃಗಜಲ,-ಜಲದ ಲಿಪಿಯಂತೆ ಅಸ್ಥಿರವೆಂದರು. ಶಿವ ಕೊಟ್ಟುದನ್ನು ತಿರುಗಿ ತೆಗೆದುಕೊಂಡ, ಅದಕ್ಕೆ ಅತ್ತರೆ ಕೋವಿದರು ನಗುವರೆಂದು ಉಪದೇಶಿಸಿದರು. ತ್ರಿಣಯನಾಜ್ಞೆ ಮೀರಲು ಯಾರಿಂದ ಸಾಧ್ಯ? ಋಣ ಸಂದಾಯವಾದ ಬಳಿಕ, ಕ್ಷಣ ನಿಲ್ಲದಾಗದು. ಹೆಣಕೆ ಅತ್ತರೆ ವ್ಯರ್ಥ," ಇಂತು ಹೇಳಿ ತಮ್ಮ ದುಃಖದಲ್ಲಿ ಭಾಗಿಗಳಾದ ಜನರ ಶೋಕ ದೂರಮಾಡಿದರು. ನಿತ್ಯದಂತೆ ತ್ರಿಕಾಲ ಲಿಂಗಪೂಜೆ, ದಾಸೋಹ ಮಾಡುತಿರುವಷ್ಟರಲ್ಲಿ ಶಿವನು ಕನಸಿನಲ್ಲಿ ಆಡಿದುದನ್ನು ನೆನಪಿಗೆ ತಂದು ಕೊಂಡು ಆ ಗ್ರಾಮವನ್ನು ಬಿಡಲು ಯೋಚನೆ ಮಾಡಿದರು. ಕೈಯಲ್ಲೊಂದು ತಂಬಿಗೆ, ಕೊರಳಿಗೆ ರುದ್ರಾಕ್ಷಿಸರ ತಲೆಗೆ ಪಾವಡಸುತ್ತಿ, ನೊಸಲಲ್ಲಿ ವಿಭೂತಿ ಧರಿಸಿ, ಬಿಳಿಕಂಬಳಿ ಹೊತ್ತು, ಶಿವಮಂತ್ರ ಪಠಿಸುತ್ತ, ಶಿವಾನುಭವದ ಕೆಲ ಹೊತ್ತಿಗೆಗಳನ್ನು ತೆಗೆದುಕೊಂಡು, ಮನೆಯಲ್ಲಿ ಜ್ಯೋತಿಯನ್ನು ಬೆಳಗಿಸಿ, ಸಮಸ್ತರಿಗೆ ದಾನಧರ್ಮ ಮಾಡಿ ಕಲಬುರ್ಗಿಗೆ ಪ್ರಯಾಣವೆಂದು ಹೇಳಿ ನಡೆದರು. ಪರಿಶೋಭಿವೆತ್ತು ದಾರಿಗಡ್ಡವಾಗಿ ಹರಿವ ಭೀಮೆಯನ್ನು ಶರಣರು ಸಲೆ ಕೊಂಡಾಡಿದರು. ಪ್ರವಾಹದಿಂದ ತುಂಬಿ ಹರಿಯುವ ನದಿಯು ಶರಣರಿಗೆ ದಾರಿ ಮಾಡಿಕೊಟ್ಟಿತು ಈ ಆಶ್ಚರ್ಯವನ್ನು ನೋಡಿದ ಜನ ಮೂಗಿನ ಮೇಲೆ ಬೆರಳಿಟ್ಟು "ಆ ಮದನಾರಿ ಭಕ್ತಗಾವುದು ಗೈವುದೇಂ ಚೋದ್ಯ, ವಿಷವಮೃತವಹುದು, ಕಲ್ಮುಳ್ಳು ಮೃದುಳ ತಲ್ಪವಹುದು" ಎಂದು ಕೊಂಡಾಡಿದರು.

ನದಿ ದಾಟಿ ಅವರಾದಿಯ ಕಡೆ ನಡೆದರು. ಬೇಡನೊಬ್ಬ ಹೆದರಿಕೆಯಿಂದ ಓಡಿಬಂದು ಶರಣರಿಗೆ, ಕಾಪಾಡೆಂದು ಬೇಡಿಕೊಂಡನು. ಬೊಮ್ಮರಾಕ್ಷಸ ಅಷ್ಟರಲ್ಲಿ ಬಂದು ಕಿಸವಾಯಿ ಹೊರತೆಗೆದರಸನೆ, ಕೋರೆ ಹಲ್ಲು, ಹುರಿ ಹೊಸೆದ ಮೀಸೆ, ಕೆಂಪೆಸೆವ ಕಿಡುಗಣ್ಣು ಕರ, ಕರವಾಳ ಝುಳಪಿಸುತ್ತ ಖಗ, ಪಶು, ಮೃಗಗಳನ್ನು ತಿನ್ನುತ್ತ, ಹಸಿವೆಗಿಂದು ಇಬ್ಬರು ಸಿಕ್ಕರು ಲೇಸಾಯಿತೆಂದು, ತಿನ್ನಬೇಕೆಂದು ಶರಣರನ್ನು ಮುಟ್ಟಲು, ರಕ್ಕಸ ರೂಪ ಇಲ್ಲದಂತಾಗಿ ನರರೂಪ ತಾಳಿದನು. "ದೇವ, ನಾನು ಪೂರ್ವಜನ್ಮದಲ್ಲಿ ಅಡವಿಗೆ ಹೋಗಿ ಬೇಟೆಯಾಡು ತ್ತಿರುವಾಗ ಈ ವಿಧಿಯೊದಗಿತು. ಮೃಗ ಬೆನ್ನಟ್ಟಿ ಹೋಗುವಾಗ, ತಪಸ್ಸು ಮಾಡುತ್ತಿರುವ ಶಿವಯೋಗಿಗೆ, ಪಾದ ತಗಲಲು ಕೋಪದಿಂದ ದೈತ್ಯನಾಗೆಂದು ಶಾಪವಿತ್ತನು. ಸೆರಗೊಡ್ಡಿ ನಿಶ್ಶಾಪ ದಯಮಾಡೆಂದು ಬೇಡಿದೆ, ಕರುಣಿತನಾಗಿ "ಮುಂದೆ ಇಲ್ಲಿಗೆ ಶಿವ ಶರಣಬಸವಪ್ಪ ದಯಮಾಡಿಸುವರು ಅವರ ಪಾದಸ್ಪರ್ಶದಿಂದ ನಿನ್ನ ರಕ್ಕಸತನ ದೂರಾಗುವದೆಂದು ಹೇಳಿದರು. ಇಂತು ತಮ್ಮ ಕರುಣೆಯಿಂದ ಮುನ್ನಿನರೂಪ ಬಂದಿತು. ಧನ್ಯನಾದೆ. ಪಾದಕ್ಕೆ ಬಿದ್ದ ಬೇಡನನ್ನು ಎಬ್ಬಿಸಿ ತನಗೆ ಮೊರೆಹೊಕ್ಕ ಬೇಡನೊಡನೆ ಹೊರಡಲು ತಿಳಿಸಿದನು. ಆ ಪ್ರಕಾರ ಅವರು ಹೋದರು.

ಇತ್ತ ತಾವು ಅವರಾದಿಗೆ ನಡೆದು ಬಂದರು. ಅಲ್ಲಿಯ ದಂಡರಾಯ ಈ ಸಂಗತಿ ತಿಳಿದು, ಪುರ ಜನರನ್ನು ಕೂಡಿಕೊಂಡು ಬೀದಿ, ಬೀದಿಗಳಲ್ಲಿ ಶರಣರನ್ನು ಮೆರವಣಿಗೆಯಲ್ಲಿ ಕರೆತಂದರು. ಸಾದರದಿಂದ ಶರಣರನ್ನು ಸೌಧಾಗ್ರದಲ್ಲಿರಿಸಿ ಆರಾಧನೆ ಮಾಡಿದರು. ಅಲ್ಲಿ ಶರಣ ಮೂರುಹೊತ್ತು ಲಿಂಗಪೂಜೆಗೆ, ಭೂರಿ ದಾಸೋಹಕ್ಕೆ ಮನವಾರೆ ಸೇರಲಿತ್ತ ಔದಾರಿಯಾದ ದಂಡರಾಯನು ಸಂತೋಷದಿಂದ ಇದ್ದನು. ಈ ಸುದ್ದಿ ಎಲ್ಲ ಕಡೆಗೆ ಹಬ್ಬಿ ಜನ ತಂಡ ತಂಡವಾಗಿ ಬಂದು ಶರಣರ ಪುಣ್ಯದರ್ಶನ ಪಡೆದು ಧನ್ಯರಾದರು.

ವರ್ಷಾಋತು ಪ್ರಾರಂಭವಾಯಿತು. ಅನೇಕ ದಿನಗಳ ವರೆಗೆ ಮಳೆ ಧಾರಾಕಾರವಾಗಿ ಬಿಡದೆ ಸುರಿಯತು. ದಾಸೋಹಕ್ಕೆ ಕಟ್ಟಿಗೆಯಿಲ್ಲದಾಯತು. ದಾಸ ಜನ ಬಂದು ದಂಡರಾಯನಿಗೆ ತಿಳಿಸಲು ಅವನು ತನ್ನ ಮನೆಯ ತೊಲೆ, ಜಂತೆ, ಕಂಬಗಳನ್ನು ಕಿತ್ತು ದಾಸೋಹಕ್ಕೆ ಅರ್ಪಿಸಿ ದಾಸೋಹಕ್ಕೆ ಕುಂದಿಲ್ಲದಂತೆ ಮಾಡಿದನು. ದಂಡರಾಯನ ಈ ಭಕ್ತಿಗೆ ಶರಣರು ಸಂತುಷ್ಟರಾದರು.

ಹೈದರಾಬಾದಿನಿಂದ ಬೇದಾಡೆ ಪಡೆಯೊಂದಿಗೆ ಊರೂರುಗಳನ್ನು ಸುಲಿಯುತ್ತ, ಮಾನಹಾನಿ ಮಾಡುತ್ತ, ಜನರಿಗೆ ಕಷ್ಟಕೊಡುತ್ತ, ಅವರಾದಿ ಗ್ರಾಮದತ್ತ ನಡೆದು ಬರುವದನ್ನು ತಿಳಿದು ದಂಡರಾಯ ದುಃಖಿತನಾದ. ಶರಣರು ಆತನಿಗೆ ಅಭಯನೀಡಿ ಈದ ಆಕಳದಗಿಣ್ಣ, ಐದು ಹೋಳಿಗೆಗಳನ್ನು ಅವರಿಗುಣಿಸ ಹೋಗೆಂದು ಕಳಿಸಿದರು. ಉಂಡು ಸೈನಿಕರು ಆ ಸ್ವಾದಕ್ಕೆ ನೆರೆಮೆಚ್ಚಿದರು. ದಳಪತಿ ಬಂದು ಶರಣನ ಕಾಲಿಗೆರಗಿ "ನೌಲಿಯಾಸಾಚಾತು ಮೌಲಾಲಿ ನಿಜ"ವೆಂದು ದಯಶೀಲ, ಸುಗುಣ ಮಣಿಗಣಮಾಲನೆಂದು ಉರೆ ಪೊಗಳಿ ಶಾಲುಗಳ ಪೊರಿಸಿ, ಧನ, ಬಾಳೆ ಕಾಣಿಕೆಯಿತ್ತು ತಿರುಗಿದನು. ಊರವರೆಲ್ಲ, ಮಹಾತ್ಮ "ನಮ್ಮನುದ್ಧರಗೈದ"ನೆಂದು ಸ್ತುತಿಸಿದರು, ಅವರಾದಿಯಲ್ಲಿ ನಿತ್ಯ ಮನವಾರೆ ದಾಸೋಹಗೈದು ಷಟ್‌ಶಾಸ್ತ್ರ ಪ್ರಣವಾರ್ಥದನುಭವದಿ ದಿನಗಳೆದರು. ಶರಣನ ಕೀರ್ತಿಲತೆ ಬಹು ದೂರದವರೆಗೆ ಹಬ್ಬಿತು. ಭೂತ ಪಿಡಿದು ಒಕ್ಕಳನ್ನವನ್ನು ತಿನ್ನುವ ಜಂಗಮನೊಬ್ಬ ಬಂದು ದಯಪಾಲಿಸೆಂದು ಶರಣರಲ್ಲಿ ಬೇಡಿಕೊಂಡನು. ಪರಿತಿಳಿದ ಶರಣರು ಭಸ್ಮ ಧರಿಸಲು ಅಮೃತ ಸವಿದ ಸುರನಂತೆ ಹಸಿವೆ, ತೃಷೆಗಳೆರಡೂ ಅಡಗಿದವು. ಆ ಜಂಗಮನು ಶರಣರನ್ನು ಬಹುವಾಗಿ ಕೊಂಡಾಡಿದನು.

ಅವರಾದಿಯ ದಂಡರಾಯನ ಮನೆಯಲ್ಲಿ ಎರಡು ವರ್ಷ ಮುದದಿಂದಿರಲು, ಪುರಹರನ ನಿರೂಪಣೆಯಂತೆ ಕಲಬುರ್ಗಿಗೆ ಹೋಗುವದನ್ನು ತಿಳಿಸಲು ದಂಡರಾಯ ಮನನೊಂದುಕೊಂಡನು. "ಸುಹೃದಯ, ನಿನ್ನನ್ನಗಲುವುದಕೆ ಮನಬಾರದು." "ಮದನ ಹರನಪ್ಪಣೆ ಮೀರಬಾರದಲ್ಲ" ಎಂದು ಸಂತೈಸಿ ಮುಂದೆನಡೆದರು. ಭಕ್ತರ ಕೋರಿಕೆಯಂತೆ ಬೆಳಗುಂಪಿ ಪುರಕ್ಕೆ ನಡೆತರುವಾಗ ಕಬ್ಬಿಲರ ನಾಯಕನೊಬ್ಬ ಕಿವಿಶೂಲಿಯಿಂದ ಕಷ್ಟಪಟ್ಟು ಉಡಿಯಲ್ಲಿ ಕಲ್ಲುಕಟ್ಟಿಕೊಂಡು, ಹೊಳೆ ಬೀಳುವದರಲ್ಲಿದ್ದನು. ಶರಣರಾಗಮನವರಿತು "ರೋಗಿನತನಾಗಿ "ರೋಗವನು ಕಳೆದುಳುಹು" ಎಂದು ಬೇಡಿದನು. ಕಿವಿಯಲ್ಲಿ ಶರಣರು ಊದಲು ಕಿವಿಶೂಲಿ ಮಾಯವಾಯಿತು. ಜನರೆಲ್ಲ ''ಶರಣಬಸವನನುನ್ನತ ಮಹಿಮೆ" ದಿವ್ಯಚಾರಿತ, ಭಾಪುರೆ ಭಾಪು ಎನ್ನುತ ಶರಣರನ್ನು ಹೊಗಳಿದರು. ಬೆಳಗುಂಪಿ ಹಿರೇಮಠದಲ್ಲಿರಿಸಿ ಪರಿಚರ್ಯೆಗೈದರು ಭಕ್ತಜನರು. ಬೇಡರ ನಾಯಕ ನಿಧಿ, ದ್ರವ್ಯ ಶರಣಗೊಪ್ಪಿಸಲು

ಬೇಗ ಮನೆಗೆ ಹೋಗಿ ಹಣ ತರುವಾಗ ಭಾಗಾದಿ ಜನ ತಡೆದರು. ನಿಜ ಸಂಗತಿಯನ್ನು ಬ್ಳೇಡನಾಯಕ ಶರಣರಿಗೆ ಬಂದು ಹೇಳಲು, ಅತ್ತ ಮನೆಯವರಿಗೆಲ್ಲ ಕಿವಿಶೂಲೆ ಹೆಚ್ಚಾಗಲು, ತಾವೇ ಧನದ ಕೊಡ ಹೊತ್ತು ತಂದು ಶರಣನಡಿದಾವರೆಗಳಿಗೆ ಅರ್ಪಿಸಿದರು, ದಯಮಾಡೆಂದು ಬೇಡಿದರು, ಕರುಣೆಯಿಂದ ಅವರನ್ನು ನೋಡಲು ಕಿವಿಯೊಳಗೆ ಎಣ್ಣೆ ತೀಡಿದಂತಾಯಿತು. ನೆರೆದ ಜನವೆಲ್ಲ ಶರಣನ ಕರುಣೆಯನ್ನು ಕೊಂಡಾಡಿದರು.

ಒಂದು ದಿನ ಲಿಂಗಾರ್ಚನೆ, ಪದಾಂಬು ಮುಗಿದು ಶೇಷವನ್ನು ಸೇವಿಸಿ ವಿಶ್ರಾಂತಿಗೈಯ್ಯುತ್ತಿದ್ದರು. ಹಗಲು ಎರಡು ಗಂಟೆಯಾಗಿರಬಹುದು. ಆ ಊರ ಬಡವನ ಮಮತೆಯ ಹಸುವು ಸಾಯಲು ಮನೆಯವರೆಲ್ಲ ಗೋಳೋ ಎಂದು ಅಳತೊಡಗಿದರು. ಬಹಿರ್ದೆಶೆಗೆ ಹೋದ ಶರಣರು ಕರುವು ಅಂಬಾಯೆಂದು ಕರೆಯುವದನ್ನು ಕೇಳಿ ಕರುಣದಿಂದ ಕಳವಳಿಸಿದರು. ಅತ್ತಹೋಗಿ ಅಳುವವರನ್ನು ಮನ್ನಿಸಿ ಕೈಯಿಂದ ಆಕಳಿಗೆ ಸ್ಪರ್ಶಮಾಡಲು ಹರಣ ಮರಳಿಬಂದು ಆ ಹಸು ಕರುವಿಗೆ ಮೊಲೆಗೊಡತೊಡಗಿತು.

ಶಿವರಾತ್ರಿಯ ಮರುದಿನ ಶರಣರು ಕಲ್ಯಾಣದತ್ತ ಪ್ರಯಾಣ ಬೆಳೆಸಿದರು. ಎದುರಿಗೆ ಬರುವವನೊಬ್ಬ ನನ್ನು ಮಾತಾಡಿಸಿದರು. ಅವನು ಮೂಕನಾದ್ದರಿಂದ ಉತ್ತರ ಕೊಡಲಿಲ್ಲ. ಸುವಿವೇಕದಿಂದ ಅರಿದು ಅವನ ಕಿವಿಯಲ್ಲಿ ಊದಲು ಮೂಕತನವಿಲ್ಲವಾಯಿತು.

ಪರ್ವತಾಬಾದದ ಭಕ್ತ ಜನಸಮೂಹ ಸಾದರದಿಂದ ಬೀದಿ, ಬೀದಿಯಲ್ಲಿ ಶರಣರನ್ನು ಮೆರವಣಿಗೆಯಿಂದ ಕರೆತಂದು ಮಠದಲ್ಲಿ ಇಳಿಸಿದರು. ಸಮಸ್ತ ಭಕ್ತಜಾಲಕ್ಕೆ ಶಿವಾನುಭವ ಕೀಲವನ್ನು ಹೇಳಿದರು. ಪ್ರಸಾದ ಸೇವನೆಯ ಕಾಲದಲ್ಲಿ ಶರಣರಿಗೆ ಜಂಗಮರಿಲ್ಲದೆ ನಡೆಯುತ್ತಿದ್ದಿಲ್ಲ. ಒಂದು ದಿನ ಕ್ರಿಯಾಮೂರ್ತಿಗಳು ಬೇರೆ ಊರಿಗೆ ಹೋದಕಾರಣ ಮತ್ತೊಬ್ಬರನ್ನು ಕರೆತರಲು ಶರಣರು ಹೇಳಿದರು. ಅವರು "ಹಿಮತಾಪದಿಂದ ನವೆಯುತ್ತಿರುವೆ ನನ್ನಿಂದಾಗ" ದೆಂದು ಹೇಳಲು, ಕರೆಯಲು ಹೋದವನು ಹಾಗೆಯೇ ಹೇಳಲಾಗಿ ಶರಣರೆ ಅಲ್ಲಿಗೆ ದಯಮಾಡಿಸಿ, ಛಳಿಯನ್ನು ಹಾಸಿಗೆಗೆ ಸೇರಿಸಿದರು. ಜ್ವರಬಿದ್ದ ಜಂಗಮನನ್ನು ಕರೆತಂದು ಪಾದಾಂಬು ಪಡಕೊಂಡು ಒಕ್ಕದುಂಡು ಮರಳಿ ಅವನ ಮನೆಗೆ ಕಳಿಸಿದರು. ಅವನು ಹಾಸಿಗೆಯ ಮೇಲೆ ಪಾದವಿಡಲು ಛಳಿ ಮತ್ತೆ ಅಂಟಿಕೊಳ್ಳಲು ಬೆದರಿ ಓಡಿಬಂದು ಶರಣರಿಗೆ ತಿಳಿಸಲು ದಯಾಳು ಶರಣರು ಅವನ ಜ್ವರಕಳೆದರು. ಜಂಗಮನು ಮನವಾರೆ ಶರಣರನ್ನು ಕೊಂಡಾಡಿದನು.

ಪರುತಾಬಾದದಲ್ಲಿ ನಿತ್ಯ ಜಂಗಮಾರ್ಚನೆ, ಲಿಂಗಪೂಜೆ, ದಾಸೋಹ ಮಾಡುತ್ತಿರುವ ಕಾಲದಲ್ಲಿ ಮಳೆಹೋಗಿ ಬರಗಾಲ ತಲೆದೋರಿತು. ಜನರ ಗೋಳು ಹೇಳತೀರದಾಯಿತು, ಸಾಲ ದೊರೆಯದಾಯಿತು. ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನೇ ಅನ್ನಕ್ಕಾಗಿ ಜನ ಮಾರತೊಡಗಿದರು. ಇಂತಹ ಕರುಣಾಜನಕ ಸ್ಥಿತಿ ಕರುಳನ್ನು ಕತ್ತರಿಸುತ್ತಿತ್ತು. ಈ ದುಷ್ಕಾಲದಲ್ಲಿ ಬಡಜನ ಶರಣ ದಾಸೋಹಕ್ಕೆ ಬಂದುಣತೊಡಗಿದರು. ದಾಸೋಹಕ್ಕೆ ಜೋಳದ ಕೊರತೆಯಾಯಿತು. ಧನಿಕನೊಬ್ಬನ ಬಳಿಹೋಗಿ ಎರಡು ಚೀಲ ಜೋಳ ಋಣ ಪಡೆದು ದಾಸೋಹ ನಡೆಸುವ ಕಾಲದಲ್ಲಿ ಒಂದು ದಿನ ಕಲಬುರ್ಗಿಯ ಪ್ರಸಿದ್ಧ ಮನೆತನದ ದೊಡ್ಡಪ್ಪಗೌಡರು ವ್ಯಾಪಾರ ಮಾಡುತ್ತ, ಜೋಳ ತರಲೆಂದು ಪರ್ವತಾಬಾದದಲ್ಲಿಳಿದರು. ದಾಸೋಹದಲ್ಲಿ ಪರಮೇಶ ಶರಣರಿಗೆ

ವಂದಿಸಿ ತಮ್ಮ ಊರಿಗೆ ಆಗಮಿಸಲು ಬಿನ್ನೈಸಿಕೊಂಡರು. "ಹೇರೊಂದು ಜೋಳ ಋಣವಿದೆ, ಅದನ್ನು ಮುಟ್ಟಿಸಬೇಕೆ"ನ್ನಲು, ದೊಡ್ಡಪ್ಪಗೌಡರು ತಮ್ಮ ಹೇರೊಂದನ್ನು ಆ ಧನಿಕನಿಗೆ ಒಪ್ಪಿಸಿದರು. ಇನ್ನಾದರೂ ನಡೆ ಕಲಬುರ್ಗಿಗೆನಲು "ಇನ್ನು ಮೂರು ದಿನಗಳಲ್ಲಿ ನಿಮ್ಮಲ್ಲಿಗೆ ಬರುವೆ" ನೆಂದು ಭರವಸೆನೀಡಿ ಕಳಿಸಿದರು. ಇತ್ತ ದೊಡ್ಡಪ್ಪಗೌಡರು ಎತ್ತಿನ ಮೇಲೆ ಬರಿಗೋಣಿಯಿರಿಸಿ ಮನೆಗೆ ನಡೆತಂದು ಬಳಿಕ ಆ ಎತ್ತನ್ನು ಮಾರಿ ಧನ ತಂದು ಶರಣರ ಬರುವನು ಹಾರೈಸಿ ಮನೆಯನ್ನು ಶೃಂಗಾರಗೊಳಿಸಿದರು.

ಶರಣರಾಗಮನದ ಸಂತಸ ಸುದ್ದಿಯನ್ನು ಪುರದವರೆಲ್ಲ ಕೇಳಿ ಆನಂದಸಾಗರದಲ್ಲಿ ಮುಳುಗೆದ್ದರು. ಶೈಲಬಾದಿಯ ಜನರ ಬೀಳ್ಕೊಂಡು, ಉಪಲಪುರಕ್ಕೆ (ಕಲಬುರ್ಗಿಗೆ) ಶಿವಶರಣ ಹೊರಟು ಬರುವದನ್ನು ತಿಳಿದ, ಕವಿ, ಗಮಕಿ, ವಂಧಿ, ಮಾಗಧರು ಬೀದಿ, ಬೀದಿಗಳಲ್ಲಿ ನೆರೆದು ಇಂದುಧರ ಪರಾಕೆಂದು ಸ್ತುತಿಸಿದರು. ಊದಿಸುತ್ತ, ಬಾರಿಸುತ್ತ ಸಂತೋಷದಿಂದ ಶರಣರನ್ನು ಕರೆತರಲು ಬೀದಿ ಬೀದಿಗಳೆಲ್ಲ ತಳಿರು, ತೋರಣಗಳಿಂದ ಅಲಂಕೃತವಾಗಿದ್ದವು. ಅಖಿಳ ವಾದ್ಯಗಳು, ಕೊಡೆ, ಛತ್ರ, ಚಾಮರ ಹಿಡಿದು ಶರಣರನ್ನು ಮೆರೆಸುತ್ತ ಅತಿ ಸಡಗರದಿಂದ ಕರೆತಂದರು. ಪುರದ ಸ್ತ್ರೀಯರಿಂದ ಮಾಳಿಗೆಗಳು ತುಂಬಿದವು. ಹರದೆಯರ ಸಂಭ್ರಮ ಹೇಳ ತೀರದು. ಶಿವಶರಣನನ್ನು ಕಾಣಲು ಬಗಲಲ್ಲಿ ಎತ್ತಿದ ಮಕ್ಕಳ ಬಗ್ಗೆ ಎಚ್ಚರವಿಲ್ಲದೆ ನಾ ಮುಂದು, ತಾ ಮುಂದು ಎಂದೋಡಿ ಬಂದು ನಾರಿಯರು ಸೇರಿದರು. ಗುಣಶೀಲ ಶಿವಶರಣನನ್ನು ಕಾಣಲೆಂದು ಒಬ್ಬ ಬಾಲೆ ಅವಸರದಲ್ಲಿ "ಆಲಿಗಲಲೆಯು ಹಚ್ಚಿ, ಕಾಲಿಗಂಜನವಿಟ್ಟು, ತೋಳು ಬಂದಿಯು ಪದದ ಮೇಲಿನೊಳು, ಪೈಜಣಂ ತೋಳಿನೊಳು, ಕೊರಳ ಜೋಮಾಲಿಕಟ್ಟಿ, ಒಡ್ಯಾಣ ಮೇಳವಿಸಿ ಕಂಠದೊಳಗೆ, ವಾಲಿ ಮೂಗಿನೊಳು, ಕಿವಿಯಾಲಿಯೊಳು ನತ್ತಿಟ್ಟು, ಶಾಲುಟ್ಟು ಸೀರೆ ತಲೆ ಮೇಲಿಂದೆ ಪೊತ್ತು" ಬಂದಳು. ಗರತಿಯರೆಲ್ಲ ತಾಣ, ತಾಣದಿ ನಿಂದು ಶರಣನನ್ನು ಧ್ಯಾನಿಸುತ್ತ ಇವನು ಎರಡನೆಯ ಶಿವನೆನ್ನುತ್ತ ಸುಮಗಳನ್ನು ಸುರಿದು ಜಯಕಾರ ಮಾಡಿ ನಮಸ್ಕರಿಸಿದರು. ಎಲ್ಲರೂ ಶರಣರ ಕೃಪಾಳು ಗುಣವನ್ನು ಕೊಂಡಾಡಿದರು. ದ್ವಾರದ ಬಳಿ ಶರಣೇಶ ಬರಲು ನಾರಿಯರು ಆರುತಿ ಬೆಳಗಿದರು. ಬಹು ಸಂತೋಷದಿಂದ ಅವರ ದಾಸೋಹಕ್ಕೆ ಅಪಾರ ಸೇವೆ ಮಾಡತೊಡಗಿದರು. ದೊಡ್ಡಪ್ಪಗೌಡರ ಸತಿ ನೀಲಮ್ಮನವರು ಬಂದು ಕಾಲೆಗೆರಗಲು ಆಲೋಕಿಸಿ "ತಂಗಿ ಬಾಳೆಂ"ದು ಹರಸಿದರು. ದೊಡ್ಡಪ್ಪಗೌಡರ ಮನೆಯಲ್ಲಿ ನಿತ್ಯ ಲಿಂಗಾರ್ಚನೆ, ಚರಪೂಜೆ ಮಾಡುತ್ತ, ಪಾದೋದಕ, ಜಂಗಮ ಪ್ರಸಾದ ಸೇವಿಸುತ್ತ ಭವಹಿಂಗಿಪ ಶಿವಾನುಭವದ ಲಿಂಗಾಂಗ ಸಾಮರಸ್ಯಗಳ ಸಕೀಲ ವಚನಂಗಳೋದುತ, ಎಂದಿನಂತೆ ದಾಸೋಹ ಮಾಡುತ್ತ ಮಂಗಳಕರನಾದ ಶರಣೇಶನಿದ್ದನು.

## ಹನ್ನೆರಡನೆಯ ಸಂಧಿ

ಶ್ರದ್ಧೆಯಿಂದ ದೊಡ್ಡಪ್ಪಗೌಡರ ಮನೆಯಲ್ಲಿ ದಾಸೋಹವೆಸಗುತ್ತಿರಲು, ಬಹು ರೋಗ ಭರಿತ ಜನರು ಬಂದು ಲೇಸು ಹೊಂದಿ ಮರಳುತ್ತಿದ್ದರು. ಹೀಗಿರಲೊಂದು ದಿನ ಹುಟ್ಟುಗುರುಡನೊಬ್ಬ ಬಂದು ಚರಣಗಳಿಗೆರಗಿ "ಕಲಿಯುಗದ ಶಿವನೆ, ಅಂಧ ನಾನು ಜ್ಯೋತಿ ದಯಪಾಲಿಸೆಂ"ದು ಬೇಡಿದನು. ಅವನಿಗೆ ಭಸ್ಮ

ಲೇಪಿಸಿ, ಚರರ ಧೂಳಪಾದ ಸಿಂಪಡಿಸಲು ಕ್ಷಣದಲ್ಲಿ ಕಣ್ಣು ಬಂದವು. ಕಣ್ಣಿತ್ತು ಪೊರೆದ ಮಂಗಳ ಮಹಿಮ ಶರಣನನ್ನು ಕೊಂಡಾಡಿದನು.

ಮತ್ತೊಮ್ಮೆ ರಾಜಶೇಖರನೆಂಬ ಹುಟ್ಟುಗುರುಡ ತನ್ನ ಅಕ್ಕ ಗಂಗಾದೇವಿಯೊಂದಿಗೆ ಶರಣನ ದರ್ಶನಕ್ಕೆ ಬಂದನು. ಅವನನ್ನು ಕಂಡ ಜನ ಕುರುಡಾದವನಿಗೆ ಕನ್ಯೆ ಕೊಡುವವರಾರೆಂದು, ಕಾರಣ ನಿನ್ನ ಮಗಳನ್ನೇ ಕೊಟ್ಟು ಮದುವೆ ಮಾಡೆಂದು ಗಂಗಾದೇವಿಗೆನ್ನಲು ಆಕೆ ನಿರಾಕರಿಸಿದಳು. ಮನೆಗೆ ಬರುವಷ್ಟರಲ್ಲಿ ಮಗಳ ಕಣ್ಣುಗಳು ಇಂಗಿ ಹೋಗಿದ್ದವು. ದುಃಖಿತಳಾದ ಗಂಗಾದೇವಿ ಅವರೀರ್ವರನ್ನು ಕರೆತಂದು ಶರಣನ ಪಾದಕ್ಕೆ ಕೆಡವಿ "ನಿನ್ನ ಪಾದಕೊಪ್ಪಿದ ಮಕ್ಕಳು, ಮನಬಂದ ಪರಿ ಮಾಳ್ಪುದು'' ಎಂದು ಪ್ರಾರ್ಥಿಸಿದಳು. ಕರುಣೆಯಿಂದ ಶರಣ ಅವರಿಗೆ ಕಣ್ಣಿತ್ತನು. ಜನವೆಲ್ಲ ಶರಣನನ್ನು ಹೊಗಳಿ ಮನೆಗೆ ಹೋದರು. ಇವರಿಬ್ಬರಿಗೂ ಕೇವಲ ಬಾಹ್ಯಚಕ್ಷು ನೀಡಿದ್ದಲ್ಲದೆ, ಜ್ಞಾನಚಕ್ಷುವನ್ನು ದಯಪಾಲಿಸಿದರು.

ಒಮ್ಮೆ ಶರಣನನ್ನು ಪರೀಕ್ಷಿಸಲೆಂದು ಅನ್ಯ ಮತದವನೊಬ್ಬ ಕುರುಡನಂತೆ ವೇಷಧರಿಸಿ "ಪೂರ್ವದೋಷ ದಿಂದ ಅಂಧನಾದೆ, ಕಣ್ಣಿತ್ತು ರಕ್ಷಿಸೆ'' ನಲು "ಈಶಗೈದುದ ಬಿಡಿಸಲೇಸರವರ್ಕೆ ನಾವು ವಾಸಕ್ಕೆ ಪೋಗು" ಎನಲು ಕಣ್ದೆರೆದು ನೋಡಲು ಅವನ ಕಾಂತಿ ಹಿಂಗಿತ್ತು. ಪಶ್ಚಾತ್ತಾಪದಿಂದ ನೊಂದು ಬೇಡಿದನು. ಕರುಣಾಮೂರ್ತಿ ಅವನಿಗೆ ಅಕ್ಷಿದಾನ ಮಾಡಿ ಕಳಿಸಿದನು.

ಈಶ ಶರಣನು ದಾಸೋಹಗೈಯುತ್ತಿರಲು ಎಷ್ಟು ಧನ ಬಂದರೂ ಸಾಲದಾಯಿತು. ಆ ಸಮಯದಲ್ಲಿ ''ಇಶೆಯಿಂದ ಬೇಡಿದರೆ ಜನಕದರಿಂದ ಆಯಾಸ ಮತ್ತು ನನಗೆ ದೋಷ; ಪರಮೇಶ ಗತಿ ಏನು! ಎಂದು ಚಿಂತಿಸಿದನು. "ಮಾದಿಗನ ಸಂಗಡ ಉಂಡೆ, ಬೇಡನ ಎಂಜಲ ತಿಂದೆ, ಸತ್ಯವ್ವ ಹುಟ್ಟಲೆ ಹೊಡೆದಳು. ಅವರಿಗೆ ಕರುಣಿಸಿದೆ. ನನ್ನನೇಕೆ ಮರೆತೆ, ಮೇದಿನಿಗೆ ಏಕೆ ಬರಲೊಲ್ಲೆ? ಎಂದು ಯೋಚನೆಯಲ್ಲಿ ಶರಣಪ್ಪ ನಿರಲು ಕನಸಿನಲ್ಲಿ ಚರರೂಪಿನಿಂದ ಮನ್ಮಥಾರಿಯು "ಏತರೆಣಿಕೆ ಬಿಡುಯಿಂದಿನಿಂದ, ಹಣ ಸಹಸ್ರಕೊಂ ದೊಂದು ತನುಜನಂ ಕೊಡು ಮತ್ತೆ, ಧನಿಕರಿಂ ಕೊಂಡು, ಬಡಜನರಿಗಿಡು, ದಾಸೋಹನನುದಿನ ನಡೆಸು'' ಎಂದು ಹೇಳಿದ್ದನ್ನು ಶರಣರು ಕೇಳಿ ಹರುಷ ತಾಳಿದರು. ಹರ ನಿರೂಪದಂತೆ ಶರಣರು ಸಾವಿರ ಹಣ ತೆಗೆದುಕೊಂಡು ಬಹುಜನರಿಗೆ ಸಂತಾನ ಕರುಣಿಸಿ ದಾಸೋಹ ನಿರುತೆಸಗಲು ನಾಡಿನ ಸಿರಿ ಹೆಚ್ಚಿತು; ಬರಡಾದ ಹಸುಗಳು ಹಾಲು ಕರೆದುವು. ಕೆರೆ, ತೊರೆ ತುಂಬಿ ಹರಿದವು.

ಒಮ್ಮೆ ಚನ್ನಪ್ಪನೆಂಬ ವೀರಶೈವ ವರ್ತಕನು ಸಾವಿರ ಹಣ ತಂದು ಈಗಲೇ ಮಗನನ್ನು ಕರುಣಿಸೆಂದು ಪ್ರಾರ್ಥಿಸಲು, ಶರಣೇಶ ದೊಡ್ಡಪ್ಪಗೌಡರ ತೊಟ್ಟಿಲಲ್ಲಿದ್ದ ಕೂಸನ್ನು ತಂದು ಸಂತೋಷದಿಂದ ಆತನಿಗೆ ಕೊಟ್ಟರು. ಸಾವಿರ ಹಣ ತೆಗೆದುಕೊಂಡು ದಾಸೋಹ ನಡೆಸಿದರು. ಈ ಸುದ್ದಿ ತಿಳಿದು ಸಾಧು ದೊಡ್ಡಪ್ಪ, ಸಾಧ್ವಿ ನೀಲಮ್ಮ ನಸುಕ್ಲೇಶ ತಾಳಲಿಲ್ಲ. ಈ ಪುಣ್ಯ ದಂಪತಿಗಳು ಮಾಡಿದ ದೃಢವನೋಡಿ ''ಹೋಲಿಸಲಿವರ ಜೋಡಿಗಾರುಂಟು'' ಎಂದು ಜನ ತಮ್ಮ ತಮ್ಮೊಳು ಕೊಂಡಾಡಿದರು. ಶರಣರು ದೊಡ್ಡಪ್ಪಗೌಡ, ನೀಲಮ್ಮನವರ ಭಕ್ತಿಪರೀಕ್ಷೆ ಮಾಡಿದ್ದು ಇಲ್ಲಿ ಕಾಣುತ್ತದೆ. ಏಕೆಂದರೆ "ನಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ತಲೆಮಾರುವೋದೆ

ನೆಂದರೆ ತನುವನಲ್ಲಾಡಿಸಿ ನೋಡವೆ ನೀನು, ಧನವನಲ್ಲಾಡಿಸಿ ನೋಡುವೆ ನೀನು, ಇದಕ್ಕೆಲ್ಲ ಅಂಜದಿದ್ದರೆ ಭಕ್ತಕಂಪಿತ ನಮ್ಮ ಕೂಡಲಸಂಗಮದೇವಾ" ತಮ್ಮ ಮಗುವನ್ನು ಎತ್ತಿ ಕೊಟ್ಟಪ್ಪನ್ನು ನೋಡಿ ಶರಣರಿಗೆ ಸರ್ವಾರ್ಪಣೆಗೈದ ದೊಡ್ಡಪ್ಪಗೌಡ ನೀಲಮ್ಮನವರು ಕೊರಗಲಿಲ್ಲ, ಕಳವಳಪಡಲಿಲ್ಲ.

"ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ, ಮನ ನಿಮ್ಮದೆಂದ ಬಳಿಕ ಎನಗೆ ಬೇರೆ ಮನವಿಲ್ಲ, ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ, ಇಂತೀ ತ್ರಿವಿಧವೂ ನಿಮ್ಮದೆಂದ ಬಳಿಕ ಎನಗೆ ಬೇರೆ ವಿಚಾರ ವುಂಟೆ? ಕೂಡಲಸಂಗಮದೇವಾ" ಎಂಬ ವಚನದಂತೆ ನಡೆದಿದ್ದ ಈ ದಂಪತಿಗಳು ಶರಣರು ತಮ್ಮದಾದುದನ್ನೇ ತಾವು ದಾನ ಮಾಡಿದ್ದಾರೆಂದು ಮತ್ತು ತಮ್ಮ ಪುತ್ರ ಶರಣರ ಸತ್ಕಾರ್ಯಕ್ಕೆ ಸಲ್ಲಿದ್ದಕ್ಕೆ ಸಂತೋಷಚಿತ್ತರಾದರು. ಕಲ್ಯಾಣಕ್ಕೆ ಹೋಗಬೇಕೆಂದಿದ್ದ ಶರಣರು ಈ ದಂಪತಿಗಳ ನಿಷ್ಕಾಮ ಭಕ್ತಿಯಲ್ಲಿಯೇ ನಿಜ ಕಲ್ಯಾಣವನ್ನು ಕಂಡು ಕಲಬುರ್ಗಿಯಲ್ಲಿಯೇ ಉಳಿದು ಬಿಟ್ಟರು. ಶರಣರು ಮೆಟ್ಟಿದ ನೆಲವೇ ಪಾವನವೆಂಬಂತೆ ಕಲ್ಯಾಣದ ಮಹಾದ್ವಾರವೆನಿಸಿದ ಕಲಬುರ್ಗಿಯೇ ಕಲ್ಯಾಣವಾಯಿತು. ಇದರಿಂದ ಜನತೆ ಹರ್ಷಗೊಂಡಿತು.

ಬಂದೇನವಾಜನ ದರ್ಗಾದೊಳಗೆ ಕಡವಿಕ್ಕಿ ಗಂಧ ಲೇಪಿಸುವಾಗ ಶರಣರು ಅಲ್ಲಿಗೆ ಹೋಗಿ, ಅವರು ಗಂಧ ಲೇಪಿಸದೆ ಬಿಟ್ಟ ಸಂದಿಯನ್ನು ತೋರಿಸಿದರು. "ತು ಹಿಂದು ಕೆಂ ಆಯೆ?" ಎಂದು ಶರಣರನ್ನು ಹೊರ ಗಟ್ಟಿದರು. ಶರಣರು ಮತ್ತೆ, ಮತ್ತೆ ಬಂದು ಛಿದ್ರಕ್ಕೆ ಗಂಧ ಲೇಪಿಸುವಂತೆ ಹೇಳಿದರು. ಅದನ್ನು ಅವರು ಕಾಣದಾಗಲು ತಾವೇ ರಂಧ್ರಕ್ಕೆ ಗಂಧ ಲೇಪಿಸಿದರು. ನೆರೆದ ಜನ ಮಹಾನುಭಾವನೆಂದು ಹೊಗಳಿದರು.

ದರ್ಗಾದಿಂದ ತಿರುಗಿ ಬರುವಾಗ ಚಾರುಶರಣನ ಕಣ್ಣಿಗೆ, ಸೋರುತಿಹ ರಕ್ತ, ಬಲು ನಾರುತಿಹಮಾಂಸ. ನೆರೆ ಹಾರುತಿಹ ನೊಣ, ಪಶು, ಕುರಿಗಳನ್ನು ಕಡಿದೊಗೆದ ಹಸಿ ತಲೆಗಳನ್ನು ಕಂಡು ವ್ಯಸನಭರಿತರಾದರು, ಮುಂದೆ ಒಬ್ಬ ಕಟುಕ ಆಕಳವೊಂದನ್ನು ಕಾಲುಕಟ್ಟಿ ಕಡಿಯುವನಿದ್ದನು. ಅಲ್ಲಿಗೆ ಕರುಣಾನಿಧಿ ಶರಣರು ಹೋಗಿ ಅದಕ್ಕೆ ಎರಡರಷ್ಟು ಬೆಲೆಕೊಟ್ಟು ಕೊಲೆಗಡುಕನಿಂದ ಬಿಡಿಸಿದರು. ಅವನಿಗೆ ಅಹಿಂಸಾ ವ್ರತದಿಂದಿರಲು ಬೋಧಿಸಿದರು. ಗೋಮಾತೆಯ ಉಪಯುಕ್ತತೆಯನ್ನು ನೆರೆ ಕೊಂಡಾಡಿದರು. ಅಂತಹ ಸಾಧುಜೀವಿಗೆ ಜನರು ಗೈವ ಹೀನ ಕೃತ್ಯಗಳನ್ನು ನೆನಿಸಿ "ಮಾನವರೆಷ್ಟು ಕೃತಘ್ನರೆಂ" ದು ನೆರೆ ನೊಂದರು. 'ಅಹಿಂಸಾ ಪರಮೋ ಧರ್ಮ' ಎಂದು ಕಟುಕನಿಗೆ ಬೋಧಿಸಿ, ಕಟುಕವೃತ್ತಿ ತ್ಯಜಿಸಲು ಒತ್ತಾಯಿಸಿದರು. ಜೀವನೋಪಾಯಕ್ಕೆ ದವಸದಂಗಡಿಯಿಡುಶ ವ್ಯಾಪಾರ ಕೈಗೊಂಡು ವೈಭವ ಭೋಗಿಸೆಂದು ಹರಿಸಿದರು. ಯುವನರೂ ಸಹ ಶರಣ ಬಸವನ ಮಹಿಮೆಯನ್ನು "ಯಾ ಇಲಾಹೀ ತೋಬ" (ದೇವರೆ ತಪ್ಪಾಯಿತು) ದೇವನಿವನಲ್ಲದಿರನೆಂದು ಕೊಂಡಾಡಿದರು.

ಬ್ರಹ್ಮಪುರದ ಹಿರಿಯ ದೇಶಮುಖ ಸುಂದರದೇವರಾಯರ ಧರ್ಮಪತ್ನಿ ಉರಿ, ದಮ್ಮು, ಕೆಮ್ಮು, ಉದರಶೂಲಿಯಿಂದ ಜರ್ಜರಿತಳಾಗಿದ್ದಳು. ವೈದ್ಯರಿಂದ, ಮಾಂತ್ರಿಕರಿಂದ ನಾನಾ ಪ್ರಕಾರದ ಚಿಕಿತ್ಸೆ ಮಾಡಿ ಸಿದರಲಾ ರೋಗ ಗುಣಮುಖವಾಗಲಿಲ್ಲ; ಮತ್ತೆ ಅದು ಉಲ್ಬಣವಾಗತೊಡಗಿತು. ಶರಣನ ಮಹಿಮೆ ತಿಳಿದ ಜನರು ಸುಂದರದೇವರಾಯರರಿಗೆ ಪುಣ್ಯಾತ್ಮನನ್ನು ಕಂಡು ಕೇಳಿರೆನ್ನಲು, ಶಿವಯೋಗಿಯ ಬಳಿಗೆ ಅವನು ಬಂದು

ಪಾದಕ್ಕೆರಗಿದನು. 'ಭೋಗಮಷ್ಟೈಶ್ವರ್ಯಮಾಗ' ಲೆನುತ ಶರಣರು ಅವನನ್ನು ಹರಿಸಿದರು. ಆಗಮನದ ಕಾರಣ ತಿಳಿಸಬೇಕೆಂದಾಗ, ದೇಶಮುಖರು "ಎನ್ನ ಸತಿ ಬಹುರೋಗದಿಂದ ನವೆದು ದಿನ ದಿನಂ ಬನ್ನ ಬಡುತಿರುವಳು, ನೀ ಮನಬಂದುದೆನ್ನೆಸಗಿ ವಿಪನ್ನ ಪರಿಹರಿಸೆಂದು" ಪ್ರಾರ್ಥಿಸಿದನು. "ಚಿಂತೆ ಬಿಡಿರಿ, ನಿನ್ನ ಕಾಂತೆಯನ್ನು ಕರೆದುತಂದರೆ ಎಂತಹುದೊ ಕಂತುಹರವಿರುವ ನೋಡುವೆ" ನೆಂದು ಹೇಳಿದರು. ಸಂತೋಷದಿಂದ ದೇಶಮುಖರು ಮನೆಗೆ ಬಂದು ಮೇನೆಯನ್ನು ತರಿಸಿ ಪ್ರಾಣ ಸಂದೇಹಿಯಾದ ಮಾನಿನಿಯನ್ನು ಒಳಗಿರಿಸಿ, ಅವಳೊಡನೆ ಶರಣನ ಕಡೆ ನಡೆದರು. "ನೀನೆ ಬಲ್ಲೆ, ಇಹಲೋಕದ ಶಿವನೆ, ಇವಳಂಗದೊಳಗೇನೇನೂ ಇಲ್ಲ, ದಯಾನಿಧಿ ಪೊರೆ" ಯೆಂದು ನಮಸ್ಕರಿಸಿ, ಅವಳನ್ನು ಮೇನೆಯಿಂದ ಹೊರತೆಗಿಸಿದರು. ಶರಣರ ಮುಂದೆ ಇಳುಹಲು ಸಂತೋಷ ದಿಂದ ವಿಭೂತಿಯಿಂದ ಮೈಮೇಲೆ ಎಳೆವುತ್ತ 'ಏಳಮ್ಮ, ನಿನ್ನುರುಜೆಯಿಂದ ದೇಶಮುಖರು ಬಲು ನೊಂದಿರು ವರು' ಎಂದೆನ್ನಲು ಕೇಳಿ ಜಗ್ಗನೆಯೆದ್ದು ಶರಣರಿಗೆ ವಂದಿಸಿ, ಭಕ್ತಜನ ಬಂಧು, ನೀ ಕಂದನನ್ನು ಪಾಲಿಸು, ಎನ್ನ ಬಂಜೆತನ ಕಳೆ" ಎಂದು ಬೇಡಿದಳು. ಜನರೆಲ್ಲ ಬೆರಗಾಗಿ ಕೊಂಡಾಡಿದರು. "ಹಡದವ್ವ, ಎನಗಿರಲು ಸ್ಥಳ ಕೊಡುವಿಯಾದರೆ, ಸುಂದರ ಮಗನನ್ನು ಪಡೆಯುವೆ" ಎಂಬ ಶರಣರ ನುಡಿಗೆ, ದೇಶಮುಖರ ಧರ್ಮ ಪತ್ನಿಯು ಸಡಗರದಿಂದ "ನೀವು ಇಷ್ಟ ಪಡೆವನಿತು ಕೊಡುವೆ, ಲಿಂಗ ಮುದ್ರೆಯನ್ನು ನಡಿಸು" ಎಂದಳು. ದೇಶಮುಖರೂ ಅದಕ್ಕೆ ಸಂಪೂರ್ಣ ಒಪ್ಪಿಗೆಕೊಟ್ಟರು. ಶರಣರು ಕೆರೆಯ ತಡೆಯವರೆಗೆ ಲಿಂಗಮುದ್ರೆಯ ಕಲ್ಲನ್ನು ನಡಿಸಿದರು. ಯಾವಾವ ಕಾಲದಲ್ಲಾದರೂ ಭಾವಶುದ್ಧಿಯಿಂದ ಭಕ್ತಿಗೈವೆವು ಎಡೆಬಿಡದೆಂದು ದೇಶಮುಖರು ಭರವಸೆ ನೀಡಿದರು. ಶರಣರು ದೇಶಾಯಿಯಳಿಗೆ ಅತ್ಯಂತ ಆನಂದದಿಂದ ಕರೆದು ಹರಿಸಿ, ಖರ್ಜೂರಕೊಟ್ಟು, ವರ್ಷದೊಳಗೆ ಮಗನನ್ನು ಪಡೆವೆ' ಯೆಂದು ತಿಳಿಸಿದರು. ಅವರು ಪರಮಾನುರಾಗದಿಂದ ಮನೆಗೆ ಬಂದೊಂದು ವರ್ಷದೊಳಗಾಗಿ ಸುಂದರ ಮಗುವನ್ನು ಹೆತ್ತಳು. ಶರಣರ ಗುಣವನ್ನು ಪರಿಪರಿ ಕೊಂಡಾ ಡಿದರು. ಶುದ್ಧಭಾವದಿಂದ ಶರಣರು ದಾಸೋಹಮಾಡಿ, ಕುರುಡ, ಕುಂಟರ ರೋಗವನ್ನು ಕಳೆಯುತ್ತ, ಶಂಕರನಾಮಭಜಿಸುತ್ತ ಸುಖವಾಗಿದ್ದರು.

## ಹದಿಮೂರನೆಯ ಸಂಧಿ

ಕರುಣಾನಿಧಿ ಶರಣರನ್ನು ಧಾತ್ರಿಜನ ಕೊಂಡಾಡಿ ಪರಿತಾಪ ಪರಿಹರಿಸಿಕೊಳ್ಳುತ್ತಿದ್ದರು. ಹಿರೇಬಾಜಾರಿ ನಲ್ಲಿ ಒಬ್ಬ ಚಿತ್ರಕಾರನಿದ್ದನು. ಅವನ ಧರ್ಮಪತ್ನಿಗೆ ಗರಪಿಡಿದು ವಿಚಿತ್ರವಾಗಿ ಕುಣಿದಾಡುತ್ತಿದ್ದಳು. ನೇತ್ರ ತೆರೆದು ಜನರನ್ನು ಅಂಜಿಸುತ್ತ, ಶತ್ರು, ಪುತ್ರರೆಂಬುದನ್ನು ತಿಳಿಯದೆ ಹತ್ತಿರ ಬಂದವರ ಅಂಗಿ, ಧೋತ್ರ, ಸೀರೆ ಗಳನ್ನು ಹರಿದು, ಬೆದರಿಸುತ್ತಿದ್ದಳು. ಒಮ್ಮೊಮ್ಮೆ ಅಳುತ್ತ, ಮತ್ತೊಮ್ಮೆ ಕುಲು,ಕುಲು ನಗುತ್ತ, ಮಗುದೊಮ್ಮೆ ಹಲ್ಲು ಕಚ್ಚಿಕೊಳ್ಳುತ್ತ, ಸಮೀಪದಲ್ಲಿ ಸುಳಿದವರನ್ನು ಬಡೆಯುತ್ತ, ಮನಬಂದಂತೆ ಚಲಿಸಿ, ಘಳಿಗೆಯೊಳು ನೂರು ಚೇಷ್ಟೆಗಳನ್ನೆಸಗಿ ಜನನಿಕರವನ್ನು ಅಳಕಿಸುತ್ತಿದ್ದಳು. ಒಮ್ಮೆ ಏನೇನೊ ಹುಡುಕುತ್ತ, ಕೈಬಡೆದು ಕೊಳ್ಳುತ್ತ ಉಡಿಗೆ ಕಳೆದೊಗೆದು, ಮತ್ತೆ ನಿಂತಲ್ಲಿ ನಿಲ್ಲದೆ, ದಂತದಿಂದ ಕಡಿದು, ತಡವಿದರ ಹಿಡಿದು ಜನರು 'ಇಂತಾಯಿತೇಕೆನ್ನಲು' ತಾನೂ ಇಂತಾಯಿತೇಕೆಂದು ಅಣಕಿಸುತ್ತಿದ್ದಳು. "ಮುನ್ನ ಮಾಡಿದ ಕರ್ಮವೆಂದು

ಅವಳ ಪತಿ ಚಿಂತಿಸುತ ಅನೇಕ ಜನ ಮಾಂತ್ರಿಕರನ್ನು ಕರೆಸಿ, ಮಂತರಿಸಿ, ಯಂತ್ರ ಜಂತ್ರಗಳೆಲ್ಲವನ್ನು ಕಟ್ಟಿ ಸಿದನು. ಹಣಹೋದರೂ ಗುಣವಾಗದಿರಲು ಚಿತ್ರಕಾರನು ದುಃಖಿತನಾದನು. ಓಣಿಯ ಜನರೆಲ್ಲ ಸೇರಿ "ಶ್ರೇಷ್ಠ ಶಿವಶರಣ ಈ ಪಟ್ಟಣದಲ್ಲಿರುವದನ್ನು ಮರೆತೆಯಾ? ಅವನು ಮಹಿಮಾಪುರುಷ, ಕಲಿಯುಗದ ಸಾಕ್ಷಾತ್ ಶಿವನವನು. ಅವನ ಪದ ಪಂಕಜದ ಬಳಿ ಇವಳನ್ನು ಕೆಡಹು, ಲೇಸಪ್ಪುದು" ಎಂದು ಹೇಳಿದರು. "ಸಾವಿರಹಣ ತರಲಿ ಎಲ್ಲಿಂದ" ಎಂದು ಚಿತ್ರಕಾರ ಚಿಂತಾತುರನಾದನು. "ಹಣ ನಿನ್ನ ಹತ್ತಿರ ಇದ್ದುದನ್ನು, ಇಲ್ಲದುದನ್ನು ಸರ್ವವ್ಯಾಪ್ತನಾದ ಅನಘನು ತಿಳಿಯನೆ? ಎಣಿಕೆ ಬೇಡ, ಬಡವರಿಂದ ಏನೂ ಕೊಳ್ಳನು, ತನಗೆ ನಿರ್ವಂಚನದಲ್ಲಿನತರಾದವರನ್ನು ಖಂಡಿತ ರಕ್ಷಿಸುವ ಅನುಮಾನವಿಲ್ಲ" ಎಂದು ಜನರಾಡಿದುದನ್ನು ಕೇಳಿ, ನಂಬು ಗೆಯು ಬಲಿದು ಶರಣರನ್ನು ಕಾಣುವ ಕುತೂಹಲ ಮಿಗಿಲಾಯಿತು. ಜನರಿಂದ ಬಿಗಿಸಿ ಹೊತ್ತುತಂದು ಶರಣರ ಮುಂದೆ ಅವಳನ್ನು ಇಳಿಸಿ, ಭಕ್ತಿಯಿಂದ ಚಿತ್ರಕಾರನು ಬಾಗಿದನು. ದೇವ, ದೇವಾ, "ನನ್ನ ಸತಿಗೆ ಭೂತ ಬಡಿದಿದೆ ಏತರಿಂದಲೂ, ಯಾರಿಂದಲೂ ಗುಣವಾಗದಿರಲು ನಿನ್ನ ಬಳಿಗೆ ಬಂದೆನು" ಶರಣೇಶ ನಿನ್ನ ಕೀರ್ತಿ ದೇವ ಗಂಗೆಯಲ್ಲಿ ಸುಳಿವ ಜಲಚರಗಳಂತೆ ಎದುರೇರುತಿದೆ ಇಂದು (ಬಲ್ಪಿಂದೆ) ತರುಣಿಯೊಂದಿಗೆ ಇಲ್ಲಿ ಬಂದಿರುವೆ, ಕರುಣದಿಂದ ಉದ್ಧರಿಸೆಂ" ದು ಪರಿಪರಿ ಪ್ರಾರ್ಥಿಸಿದನು. ಕೃಪಾಕರನು ನಯನದಿಂದ ನೋಡುವಷ್ಟರಲ್ಲಿ ಆರೆ ನಿಮಿಷದೊಳು ಭೂತ ಬಿಟ್ಟೋಡಿತು. ಮುನ್ನಿನಂತೆ ಚೇತನಹೊಂದಿ ಸಂಪ್ರೀತಿಯಿಂದ ಶರಣನಪದಸರಸಿಜಗಳಿ ಗೆರಗಿದಳು ಚಿತ್ರಕಾರನ ಸತಿ. "ನೀನೇ ನಿಜಕೆ ಅನಾಥ ನಾಥ, ಪತಿತಪಾವನ, ಸದ್ಯೋಜಾತ, ಸನ್ನಿಭರೂಪ, ಮೇದಿನಿಯ ಎರಡನೆಯ ಮಹಾದೇವ ಎಂದು ಹಾಡಿ ಹರಿಸಿದಳು. ಮತ್ತೆ ''ಅಖಿಳ ವ್ಯಾಧಿಗೆ ಔಷಧವು ಕರುಣೋದಧಿ ನಿಜ'' ನಿನ್ನ ಪಾದಭಜಕರಿಗೆ ಖೇದವಿಲ್ಲ'' ಎಂದು ಸಂತೋಷದಿಂದ ಸ್ತುತಿಸಿದಳು. ಪಾದಾವ ನತರಾದ ಸತಿ ಪತಿಗಳನ್ನು ಎತ್ತುತ್ತ, 'ಸುಖಿಯಾಗಿರೆಂ' ದು ಹರಿಸಿ ಕಳಿಸಿದನವರನು ಶರಣೇಶ. ಚಿತ್ರಕಾರ ಸತಿಯೊಂದಿಗೆ ಸೌಖ್ಯದಿಂದಿದ್ದನು.

ನಿತ್ಯ ದಾಸೋಹಗೆಸಗೆ ಪರಮಾನುರಾಗದಿಂದ ಶರಣರು ಇರುತ್ತಿರಲು ಮುಂದೆ ಒಂದು ದಿನ "ಬ್ರಹ್ಮಪುರ ದಲ್ಲಿರುವ ಯುವಕ ಬ್ರಾಹ್ಮಣನೊಬ್ಬ ಘನರೋಗದಿಂದ ಸತ್ತನು. ಹೆಣವನ್ನು ಸದಗಿಯೊಳಗೆ ಮಲಗಿಸಿ, ಹೊಸ ಹುರಿಯಿಂದ ಕಟ್ಟಿ ಮಸಣದ ಕಡೆಗೆ ಒಯ್ಯುತ್ತಿದ್ದರು. ಆಪ್ತೇಷ್ಟರು ಬಹು ವಿಧದಿಂದ ಗೋಳಿಡುತ್ತಿದ್ದರು. ಅವನ ಸತಿಯ ಸಂಕಟವನ್ನು ಹೇಳಬಾರದು; ಅವಳ ದುಃಖ ಜಲಧಿಯಲ್ಲಿ ಎಲ್ಲರೂ ಈಸಾಡಿದರು, ಮರುಕಪಡೆದರು "ಸಾಖ್ಯ ಸಡಿಲಿತು ಇಂದಿಗೆ, ಪೊಡವಿಯೊಳಗಿನ್ನಾರುಂಟು? ಒಡೆಯರುಂಟೆ? ಮಕ್ಕಳುಂಟೆ"? ಎಂದು ಮಿಡು ಕುತ್ತ, ಎದೆ, ಹಣೆಗಳನ್ನು ಬಡಿದುಕೊಳ್ಳುತ್ತ ಅತಿ ಕಷ್ಟದಿಂದ ಅವನ ಸತಿ ಗೋಳಿಡುತ್ತಿದ್ದಳು. 'ವೈಧವ್ಯ ಕೈಪಿಡಿಯಿತೆ, ಹಾ ಶಿವ ಶಿವಾ' ಎಂದು ಅಳುತ್ತ ಹೋಗುವಷ್ಟರಲ್ಲಿ ಬಾಗಿಲ ಹೊರಕ್ಕೆ ಸದಯಾಳು ಶರಣೇಶ ಬಂದುದನ್ನು ಕಂಡು; ಶೋಕ ಮರೆತು 'ಶಿವಯೋಗಿಗಳ ಕಂಡು ಬಾಗದಲೆ ಪೋಗುವದು ದುಷ್ಕೃತ' ವೆಂದು ಬೇಗನೈತಂದು ಅವನತಾದಳು. "ಅಷ್ಟಪುತ್ರ ಸೌಭಾಗ್ಯವತಿ ಭವ" ಎಂದು ತಲೆ ಕೈಗಳಂ ಮುಟ್ಟಿ ಶಿವಯೋಗಿ ಆಶೀರ್ವದಿಸಿದರು. ಜನರೆಲ್ಲ ಹೀಗೆ ನುಡಿದುದನ್ನು ಕೇಳಿ ಬೆರಗಾದರು. ಈ ಶರಣ ಕಲ್ಪಿತ ಕಲ್ಪತರುವು, ಸುರಭಿ, ಚಿಂತಾರತ್ನ, ಮರುಜವಣೆ, ಪರುಷೋಪಲವೆಂದೆಂದು ಪೊಗಳುತ್ತ ನಡೆದಳು ಹರಣದಿಂದೆದ್ದು ತನ್ನ

ಸತಿ ಕರ ಹಿಡವನೆಳೆದ ಉರಿ ತೋಷದಿಂದ ಬಂದಳು. ಶವವನ್ನು ಚಿತೆಯಲ್ಲಿಟ್ಟು ಹೋಗಬೇಕೆನ್ನುವಷ್ಟರಲ್ಲಿ ಪಾರ್ವನ ದಿಟ್ಟಿಗಳು ತೆರೆದುವು. ಥಟ್ಟನೆ ಎದ್ದು ಕುಳಿತುದನ್ನು ನೋಡಿ ಬಂಧು ಜನರೆಲ್ಲ ಓಡಿಹೋದರು. ಸತಿಯು ನಲಿದಾಡುತ್ತ ಅವರನ್ನೆಲ್ಲ ಕರೆಯತೊಡಗಿದಳು. ಶರಣೇಶ ಶುಭವಾಕ್ಯಆಡುತ್ತ ಆಶೀರ್ವಾದ ಮಾಡಿದನು; ಅದು ಕೈಗೂಡಿತು. ಅವನ ಮಹಿಮೆ ರೂಢಿಯೊಳು ಹೊಸತೆಂದು ವಿಪ್ರರೆಲ್ಲಾ ಕೊಂಡಾಡಿದರು. ಇಂದುಮುಖಿ ಪತಿಸಹಿತ ಬಂದು ಶರಣನಿಗೆ ಸಾಷ್ಟಾಂಗವೆರಗಿ ಆನಂದಬಾಷ್ಪ ಕಂಗಳಿಂದೊಸರೆಗೆಳ ಗದ್ಗದಂದಳಿಯೆ ಸಲೆ ಪ್ರೇಮದಿಂದ ಕೊಂಡಾಡಿದರು. 'ಸೂತಕದಲ್ಲಿದ್ದನೆಂ' ದು ಪಾತಕಿ ನಾನು ನಮಿಸಿದೆ. ಈ ತೆರನಾಯಿತು. ನಿತ್ಯ ಸ್ನಾತನೇಮಿಗಳು ಸಲೆ ಪ್ರೀತಿಯಿಂದ ನಮಿಸಿ ಭಜಿಸಿದರೆ ಓತು ಪಡೆಯುವದೇನು ? ಮಹಾತ್ಮನೇ ಬಲ್ಲ. ಶರಣಪ್ಪ ಸಾಕ್ಷಾತ್ತ್ರಿರಡನೆಯ ಭೂತನಾಥ ಎನ್ನುತ್ತ ಪತಿಯೊಂದಿಗೆ ಮನೆಗೆ ಹೋದರು. ಅಪಾರ ಮಹಿಮನ ದಿವ್ಯ ಚಾರಿತ್ರವನ್ನು ನೆನೆಯುತ್ತ ಗೃಹದಲ್ಲಿ ಸಂಸಾರ ಸುಖದಲ್ಲಿರಲು ಪುರಜನರೆಲ್ಲ ಕೊಂಡಾಡಿದರು.

ಇನ್ನೊಮ್ಮೆ ಶರಣನನ್ನು ಅಣಕ ಮಾಡಲೆಂದು ಸದಗಿಯೊಂದರಲ್ಲಿ ಕಪಟ ಶವ ಮನುಜನನ್ನು ಒಳಗಿರಿಸಿ ಸತ್ತವನ ಗುಣಗಾನ ಮಾಡುತ್ತ, ಗೋಳಿಡುತ್ತ ನಾಟಕದ ಜನರಂತೆ ಹೆಗಲಿನ ಮೇಲೆ ಹೊತ್ತು ತಂದು ಶರಣರ ಮುಂದೆ ಹೆಣ ಇಳುಹಿ "ಉಳಿಸಿಕೊಡಿರಿವನನ್ನು, ನೀವು ಮಹಿಮರು' ಎಂದು ಕಪಟ ಶೋಕ ಮಾಡುವದನ್ನು ತಿಳಿದು 'ಕೊಲಲೀಶ ಕಾಯ್ವ' ನಾನರಿಯೆ ಎಂದು ನುಡಿದರು. ವಿಪ್ರರು ತಮ್ಮ ತಮ್ಮೊಳಗೆ 'ಶಂಕರನೆಂದು ಪೊಗಳುಹುದು ಬರಿಭ್ರಮೆ, ಇವನಲ್ಲಿ ಏನೂ ಹುರುಳಿಲ್ಲ; ಸರಸಿಜೋದ್ಭವ ಪಣೆಗೆ ಬರೆದುದನ್ನು ತಪ್ಪಿಸುವುದು ಹರಹರಿಗಾಗದು' ಎಂದುಕೊಂಡು ಹರಣ ಉಳಿಸಲು ಪರಿಪರಿ ಬೇಡಿದರು. 'ಹರಣವುಳಿಸದಿದ್ದರೆ ಕುಂದು ಈ ಪುರಕ್ಕೆ ಬರುವು' ದೆಂದು ಇನ್ನು ನಾವೆ ಹರಣವುಳಿಸುವೆವೆಂ' ದು 'ನರಹರಿಯೆ ಏಳೆಂದು' ಕರೆಕರೆದು ದಣಿದರು ನರಹರಿ ಏಳಲಿಲ್ಲ. ತಣ್ಣೀರು ಸುರುವಿದಂತಿರುವ ಶರೀರವನ್ನು ನೋಡಿ ಗಾಬರಿಯಾದರು. ಅಷ್ಟರಲ್ಲಿ ಸುದ್ದಿ ಎಲ್ಲೆಡೆಗೂ ಹಬ್ಬಿತು. ತಂದೆ, ತಾಯಂದಿರು ಬಂದು ದುಃಖಿಸತೊಡಗಿದರು. "ಮೊದಲೆ ಫಾಲ್ಗುಣಮಾಸ ಅದರೊಳೀವರುಲ್ಲಾಸ" ಕೇಳುವದೇನು ? ನೀಚಜನ ಶರಣನ ಅಭ್ಯುದಯಕ್ಕೆ ಸೈರಿಸದೆ ತಮ್ಮ ಪಾದಕ್ಕೆ ತಾನೇ ಕಲ್ಲಿಟ್ಟುಕೊಂಡರೆಂದು ಪುರ ಜನರೆಲ್ಲ ಬೈದರು. ಅವರಲ್ಲೊಬ್ಬ ಶರಣನ ಬಳಿಗೆ ಹೋಗಿ ಬೇಡಿದರೆ ಒಳಿಬಂದು ಸೂಚಿಸಿದರು. ದಯಾಳುಮೂರ್ತಿ, ಕೋಪ ಬಿಟ್ಟು ತಾಪ ಪರಿಹರಿಸುವನು' ವಿಪ್ರರೆಲ್ಲರೂ ಸೇರಿ "ಕರುಣಾವಲೋಕನೆ ಕಾಪಾಡೆಂದು" ಬೇಡಿದರು. "ದೋಷ ನಿಮ್ಮದಾದುದರಿಂದ ಸಾಸಿರ ಹಣ ತಂದು ದಾಸೋಹಕ್ಕೆ ಕೊಟ್ಟರೆ ಲೇಸಪ್ಪುದೆಂ"ಮ ಅಭಯ ನುಡಿದರು. ಅಂತೆಗೈದಬಳಿಕ ಚರಣೋದಕವನ್ನು ನೆರೆ ತಳಿಯಲು ಅವನು ಮೈಮುರಿದು ತಕಳಿಸುತ ಕಣ್ದೆರೆದೆದ್ದು ಬಂದವರ ಪಾದಕ್ಕೆ ಚರಣಾವತನಾದನು. ಮಡಿದೆದ್ದವನು ಶರಣ ನಡಿಯೊಳು ಹೊರಳಾಡಿದನು. "ಬ್ರಹ್ಮ ಬರೆಹ ತಪ್ಪಿಸಲು, ಕಾಯಲು ನಿನ್ನಿಂದ ಸಾಧ್ಯವಾದಂತೆ ಮತ್ತೆ ಯಾರಿಂದಲೂ ಸಾಧ್ಯವಿಲ್ಲ. ಪಡೆದವರು ಸುಳ್ಳು ನೀನು ಹಡೆದುದೆ ದಿಟ, ದೇವ" ಎಂದು ಕೊಂಡಾಡಿದರು.

ಎಂದಿನಂತೆ ಶರಣಬಸವನು ಲಿಂಗ, ಜಂಗಮಾರ್ಚನೆ, ದಾಸೋಹ ಮಾಡುತ್ತಿರುವಾಗ ಒಂದು ದಿನ ವೈಷ್ಣವ ಮತದ ಒಬ್ಬ ಹಾರುವನ ಹೆಂಡತಿ ಬಂದು ನಮಸ್ಕರಿಸಿ, "ದಯವಂತ ಸಂತತಿಯನ್ನು ಕರುಣಿಸೆಂದು ಬೇಡಿದಳು.' "ಶುದ್ಧಾತ್ಮಳೆ, ಸುತನು ಬೇಕಾದರೆ, ಸಾವಿರ ಹಣ ಕೊಡಬೇಕು. ಇದಕ್ಕೆ ಯಾವ ಉಪಾಯ

ಮಾಡುವೆ ಹೇಳು'' ಎನಲು, "ದೇವ ನಾನು ಅಬಲೆ, ಸಾವಿರ ಹಣ ಎಲ್ಲಿಂದ ತರಲಿ, ನೀವು ಕರುಣಿಸಿದರೆ ನನ್ನ ಎಲ್ಲ ಆಭರಣಗಳನ್ನು ಕೊಡುವೆ ಇದು ನಿಶ್ಚಯ" "ಇಂದಿನಿಂದ ಒಡವೆಗಳನ್ನು ಧರಿಸದೆ ಮುಡುಪು ಕಟ್ಟಿಟ್ಟು, ನೀನು ಹಡೆದ ಕೂಡಲೆ ಕಳಿಸಿಕೊಡು" ಎಂದು ಶರಣರು ಆಶೀರ್ವದಿಸಿ ಖರ್ಜೂರ ಕೊಟ್ಟು ಕಳಿಸಿದರು. ಶರಣೇಶ ಹೇಳಿದಂತೆ ಒಡವೆಗಳನ್ನು ತೆಗೆದು ಮುಡುಪು ಕಟ್ಟಿಟ್ಟಳು. ಗರ್ಭವತಿಯಾದಳು; ಒಂಬತ್ತು ತಿಂಗಳು ಕಳೆದವು. ಒಂದು ದಿನ ಆಕೆಯ ಪತಿ ಹೆಂಡತಿಯನ್ನು ಮುಂದಿರಿಸಿಕೊಂಡು "ನಿನ್ನ ಬಸಿರು ಕಂಡು ಕಣ್ಣಿಗೆ ಹಬ್ಬವಾಯಿತು" ಕಡೆಗೆ ರಂಗಯ್ಯ ಕರುಣಿಸಿದನು. ಆದರೆ ಗರ್ಭವತಿಯಾದಂದಿನಿಂದ ಒಂದು ಅಲಂಕಾರ ವನ್ನೇಕೆ ಧರಿಸಿಲ್ಲ" ನಿಜ ಸಂಗತಿಯನ್ನು ತಿಳಿಸಲು, ಗಂಡ ಏನು ಮಾಡುವನೋ ಎಂದು ಹೆದರಿದಳು. ಧೈರ್ಯ ತಂದುಕೊಂಡು ಒಂದುಳಿಯದಂತೆ ಗಂಡನಿಗೆ ಹೇಳಿದಳು. ಕೋಪಾಂಧನಾದ ಗಂಡ ಸತಿಗೆ ಮನವಾರೆ ಬೈಯ್ದು ಶರಣರನ್ನು ನಿಂದಿಸಿ. ಮನೆಯಿಂದ ಹೊರದಬ್ಬಿದನು. "ನಾರಿಜನ್ಮವೆ ಕಷ್ಟ, ವೈರಿಗಾದರು ಬೇಡ" ವೆಂದು ಶೋಕಿಸುತ್ತ ಭೂಮಿಯ ಮೇಲೆ ಹೊರಳಾಡಿ ಸಮಾಧಾನ ತಂದುಕೊಂಡಳು. ಅಷ್ಟರಲ್ಲಿ ಹೊತ್ತು ಮುಳುಗಿತ.. ಸಿಟ್ಟಿನಲ್ಲಿ ಹೆಂಡತಿಯನ್ನು ಬೈದು ಹೊರಗೆ ಅಟ್ಟಿದ್ದಕ್ಕೆ ಪ್ರಾಯಶ್ಚಿತ್ತವಾಗತೊಡಗಿತು. ಬೆಳಗಿನಲ್ಲಿ ತನ್ನ ಹೆಂಡತಿಯ ಗರ್ಭ ಇಳಿದುದನ್ನು ತಿಳಿದು ಆಶ್ಚರ್ಯವಾಯಿತು. ಶರಣೇಶನ ಪಾದಕ್ಕೆ ಬಿದ್ದು "ಒಡವೆ, ಸಾಸಿರ ಹೊನ್ನು ತಂದುಕೊಡುವೆ; ಹೆಂಡತಿಯ ಗರ್ಭಕ್ಕೆ ಲೇಸು ಉಸುನು" ಎಂದು ಪರಿಪರಿ ಬೇಡಿಕೊಂಡನು. ಆಭರಣ ಸಹಿತ ಸಾವಿರಹಣ ತಂದು ಶರಣರ ಮುಂದೆ ಇಟ್ಟನು. ಸುದತಿಯ ಗರ್ಭ ಪೂರ್ಣೈಸಿರುವುದನ್ನು ನೋಡಿ ಸಂತೋಷದಿಂದ ಮನೆಗೆ ಬಂದನು.

ಅಣಿವೀರಪ್ಪ–ಶಿವಕುಮಾರ, ಸದ್ಭಕ್ತಜನ ಮಂದಾರ, ಮಹಿಮಾಪಾವನ ಅವನಿಗೆ ಸಂತತ ಸದ್ಭಕ್ತಜನ ನಡಕೊಳ್ಳುತ್ತಿದ್ದರು. ಕೋರವಾರ ಗ್ರಾಮದ ಅಡವಿಯಲ್ಲಿ ಅವನಿಗೊಂದು ದೇವಾಲಯ ಕಟ್ಟಿಸಲು ಅವನ ಭಕ್ತಶ್ರೇಷ್ಠ ಕಲಬುರ್ಗಿಯ ನವಣಿ ರುದ್ರಪ್ಪ ಇಚ್ಛಿಸಿದನು. ಗುಡಿ ರಚಿಸುವದಕ್ಕೆ ದೂರದೂರದ ಒಡ್ಡರು ನೆರೆದಿದ್ದರು. ಒಂದು ಕಲ್ಲು ಏಳದಿರಲು ರುದ್ರಪ್ಪ ಚಿಂತಾತುರನಾದನು. ಸಹಸ್ರ ಜಂಗಮರಿಗೆ ಮೃಷ್ಟಾನ್ನ ಉಣಿಸಿ, ದಕ್ಷಿಣೆಕೊಟ್ಟು ತೃಪ್ತಿಪಡಿಸಿದನು ರುದ್ರಪ್ಪ. ಅಗ್ಗಳ ಶರಣನನ್ನು ಧ್ಯಾನಿಸುತ್ತ ಕೂಡಿದವರೆಲ್ಲ ಕಲ್ಲನ್ನು ಎತ್ತಲು ಅರಳಿಯಂತೆ ಹಗುರಾಗಿ ಗೋಡೆಗೆ ಹೊಂದಿಕೊಂಡಿತು. ಕಲಬುರ್ಗಿಯಲ್ಲಂದು ಶರಣರು ಆಗ ಕೈಗಳನ್ನು ಮೇಲಕ್ಕೆತ್ತಿದ್ದನ್ನು ಬಳಿ ಕುಳಿತವರು ಕೇಳಲು ಕೋರವಾರದಲ್ಲಿ ನಡೆದುದನ್ನು ವಿವರಿಸಿದರು, ಅಣವೀರನಾಲ ಯಕ್ಕೆ ಹೋಗಿ ಕೇಳಲು ಕಲ್ಲು ಹೆರಳೆಯಂತೆ ಹದುನಾದ ಸಂಗತಿ ತಿಳಿದು ಭಕ್ತಜನ ಶರಣರನ್ನು ಹೊಗಳಿದರು.

ಭಾಪುರಾಯನೆಂಬ ಬ್ರಾಹ್ಮಣನ ಸೊಸೆ ಸುಕುಮಾರನನ್ನು ಬಯಸಿ ಶರಣರ ಪಾದವಾರಿಜಕ್ಕೆರಗಿ ಬಯಕೆ ಪೂರೈಸಲು ಚಿನ್ನ ಸರಗಿಯನ್ನು ಕೊಡಲೊಪ್ಪಿದಳು. "ಹಣ್ಣು ಕಾರಿಕ ಪಡೆಮು ಶರಣೆಂದು ಶರಣ" ರಿಗೆ ಮನೆಗೆಬಂದು ಭಕ್ತಿಯಿಂದ ಫಲವನ್ನು ಸೇವಿಸಿದಳು. ಗರ್ಭ ತೋರಿತು. ನವಮಾಸ ತುಂಬಿದವು. ಒಂದು ದಿನ ಅವಳಿಗೆ ಹೊಟ್ಟೆಯಲ್ಲಿ ಕಡಿತ ಪ್ರಾರಂಭವಾಯಿತು. ನೋವು ತಾಳಲಾರದೆ ಭೂಮಿಯಲ್ಲಿ ಗಡಗಡನೆ ಹೊರಳಾ ಡಿದಳು. ನೆರೆಹೊರೆಯವರು ನಾನಾ ಪ್ರಕಾರದ ಮದ್ದು ಮಾಡಿದರು ಗುಣವಾಗಲಿಲ್ಲ. ಕಡೆಗೆ ಅತ್ತೆಮಾವಂದಿರು "ಯಾವ ದೇವರಿಗಾದರೂ ಹರಕೆ ಹೊತ್ತಿರುವೆಯಾ" ಎಂದು ಕೇಳಲು, ಮಗುವನ್ನು ಕರುಣಿಸಿದರೆ ಶರಣರರಿಗೆ

ಚಿನ್ನ ಸರಗಿ ಕೊಡುವೆನೆಂದು ಬೇಡಿಕೊಂಡುದನ್ನು ತಿಳಿಸಿ, ಸರಗಿ ಕೊಟ್ಟುಬರಲು ಬೇಡಿದಳು. ಮಾವ ಭಾವು ರಾಯ ಹರಕೆಯ ಸರಗಿಯನ್ನು ಮನೆಯಲ್ಲಿರಿಸಿ ಕಿರಿಯ ಸರಗಿಯನ್ನು ಶರಣೇಶನಿಗೆ ಒಪ್ಪಿಸಲು "ಇದು ಹರಕೆಯ ಸರಿಗೆಯಲ್ಲ" ಕಿರಿಯ ಸರಿಗೆ, ಇದಕ್ಕೆ ಹೆಣ್ಣುಮಗು ಹುಟ್ಟುವದೆನ್ನಲು, ಸೊಸೆ ಮೊದಲು ಬೇಡಿಕೊಂಡ ಸರಿಗೆ ಯನ್ನೇ ತಂದುಕೊಟ್ಟು ಅಪರಾಧ ಮನ್ನಿಸೆಂದು ವಿಜ್ಞಾಪಿಸಿಕೊಂಡಳು. ಹೆರಿಗೆ ಸುಸೂತ್ರವಾಗಿ ಆ ಸ್ತ್ರೀ ಗಂಡು ಮಗುವನ್ನು ಪಡೆದಳು.

ನಾರಾಯಣಪೇಟೆಯ ಭೋಗೋಜಿಯ ಆಳುಗಳು ಎತ್ತುಗಳ ಮೇಲೆ ರೇಶ್ಮೆ ಅರಿವೆಯ ಗಂಟುಗಳನ್ನು ಹೇರಿಕೊಂಡು ವ್ಯಾಪಾರಕ್ಕೆಂದು ಸೊಲ್ಲಾಪುರಕ್ಕೆ ನಡೆದಿದ್ದರು. ಯೋಗಿ ಶರಣರು ಬಾಗಿಲ ಹೊರಗಿನ ಕಟ್ಟೆಯ ಮೇಲೆ ಕುಳಿತಿದ್ದರು. "ಎತ್ತುಗಳ ಮೇಲಿರುವದೇನೆಂ" ದು ಪ್ರೇಮದಿಂದ ಕೇಳಿದರು. 'ಕಂಬಳಿ ಗಂಟುಗಳು' ಎಂದು ಆಳುಗಳು ಉತ್ತರಿಸಿದರು. 'ನಿಮ್ಮ ಮಾತುಗಳು ದಿಟವಾಗಲಿ ಅಣ್ಣಗಳೆ ಸಾಗಿ' ರೆಂದು ಶರಣರು ನುಡಿ ದರು. ಸೊಲ್ಲಾಪೂರಕ್ಕೆ ಹೋಗಿ ಬಿಚ್ಚಿ ನೋಡಲು ರೇಶ್ಮೆ ಬಟ್ಟೆಗಳೆಲ್ಲ ಕಂಬಳಿಗಳಾಗಿದ್ದವು. ತಮ್ಮ ಅವಿವೇ ಕಕ್ಕೆ ಕಡು ನೊಂದುಕೊಂಡು ಒಬ್ಬ ಆಳು ಭೋಗೋಜಿ ಬಳಿ ಹೋಗಿ ನಡೆದುದನ್ನು ತಿಳಿಸಿದನು. ಕಲಬುರ್ಗಿಗೆ ಭೋಗೋಜಿ ಬಂದು ಶರಣರ ದರ್ಶನ ಮಾಡಿಕೊಂಡು "ಒಂದು ಬಂಡಿ ರೇಶ್ಮೆ ಅಂಬರವನ್ನು ತಂದಿಡುವೆ" ಕೃಪೆ ಮಾಡೆಂದು ಬೇಡಿದ ಬಳಿಕ ಚರಣೋದಕವನ್ನು ಕರುಣಿಸಿದರು. ಅದನ್ನು ಒಯ್ದು ಗಂಟುಗಳಿಗೆಲ್ಲ ಸಿಂಪಡಿಸಲು ಮೊದಲಿನಂತೆ ರೇಶ್ಮೆ ಮಡಿಗಳಾದವು. ಹುಮ್ಮನಸ್ಸಿನಿಂದ ವ್ಯಾಪಾರ ಮಾಡಲು ಇಮ್ಮಡಿ ಲಾಭವಾಯಿತು. ಭೋಗೋಜಿ ಬೇಗ ಕಲಬುರ್ಗಿಗೆ ಬಂದು, ಶರಣಪದ ಕಂಡು ವಚನ ಕೊಟ್ಟಂತೆ ರೇಶ್ಮೆ ಬಟ್ಟೆಗಂಟನ್ನು ಸಮರ್ಪಿ ಸಿದನು. ಶರಣರ ಹರಕೆಗೆ ಪಾತ್ರನಾದನು.

## ಹದಿನಾಲ್ಕನೆಯ ಸಂಧಿ

ಎಂದಿನಂತೆ ಶರಣರು ದಾಸೋಹಗೈಯುತ್ತ ಆನಂದದಿಂದಿದ್ದರು. ಆಗ ರೋಜಾದಲ್ಲಿ ಮುಲ್ಲನೆಂದೊಬ್ಬ ಸಜ್ಜಾದಿಯಿದ್ದನು. ಲಗ್ನಕ್ಕೆಂದು ಧನಿಕರಿಂದ ಹಣ ಪಡೆದು, ಅವಧಿ ಮುಗಿದರೂ ಋಣ ಮುಟ್ಟಿಸಲಾಗಲಿಲ್ಲ. ಸಾಲ ಕೊಟ್ಟವರ ಕಾಟ ಹೆಚ್ಚಲು ಶಾದಿಖಾನನಿಂದ ಸಾಲಪಡೆದು ಶ್ರೀಮಂತರ ಋಣ ಮುಟ್ಟಿಸಿದನು, ಶಾದಿಖಾನನಿಗೆ ದಂಡೋತಿ ಗ್ರಾಮದಲ್ಲಿಯ ಆಸ್ತಿ ಮರಳಿ ಬಿಡಬೇಕೆಂದು ಕರಾರುಪತ್ರ ಕಾರಕೂನರಿಂದ ಬರೆಸಿ ಕೊಟ್ಟನು. ಇದು ಆದ ೬೮ ದಿನಗಳಲ್ಲಿ ಮುಲ್ಲಾಗೆ ಜ್ವರಬಂದು ಅಲ್ಲಾನನ್ನು ಸೇರಿದನು. ಹೆಂಡತಿ ಮಕ್ಕಳು ದುಃಖಿತರಾದರು. ಬರಬರುತ್ತ ಶಾದಿಖಾನನ ಕಾಟ ವಿಶೇಷವಾಯಿತು. ಕಾರಣ ಕಲ್ಯಾಣದ ಯದುಲ್ಲಾ ನವಾಬನು, ಮುಲ್ಲಾನ ಸಂಬಂಧಿಕನಾದುದರಿಂದ ಇವರು ಅಲ್ಲಿ ಹೋಗಿ ಆಶ್ರಯ ಪಡೆದರು. ಇತ್ತ ಶಾದಿಖಾನ ಉಲ್ಲಾಸದಿಂದ ಹಬೀಬುಲ್ಲನೆಂಬವನ ಮಗನಿಗೆ ರಾಜ್ಯದ ಪಟ್ಟವನ್ನು ಕಟ್ಟಿ, ಆದರ ಕಾರಭಾರ ತನ್ನ ವಶದಲ್ಲಿಟ್ಟು ಕೊಂಡು ಮೆರೆಯುತ್ತಿದ್ದನು. ಯದುಲ್ಲಾಖಾನ ಇದನ್ನು ತಿಳಿದು ಕಲಬುರ್ಗಿಗೆ ಬಂದನು. ಮಂತ್ರಿಯೊಂದಿಗೆ ಯುಕ್ತಿಯೇನೆಂದು ವಿಚಾರಿಸಿದನು. "ಶರಣಪ್ಪನಾ ಪಾದ ಕಂಡರಪ್ಪುದಭ್ಯುದಯ" ಎನ್ನಲು ಕುಲಮದದಿಂದ ಮಂತ್ರಿಗೆ ನೀನೇ ಹೋಗೆಂದು ತಿಳಿಸಿದನು. ಅರಸನಪ್ಪಣೆಯಂತೆ ಮಂತ್ರಿ ಶರಣರನ್ನು ಕಂಡು ದೊರೆಗೆ ಬಂದ

ಸಂಕಟ ದೂರ ಮಾಡೆಂದು ಬೇಡಿದನು. "ನಿನ್ನೊಡೆಯನ ಮನಬಂದಂತೆ ಅಪ್ಪುದು" ಬೇಗ ಪೋಗೆಂದು ಶರಣರು ಕಳಿಸಿ ಕೊಟ್ಟರು. ದಂಡೋತಿ ಪುರಕ್ಕೆ ದಾಳಿಯಿಡಲು ನವಾಬ ಸೋತು ಹಿಂದಿರುಗಬೇಕಾಯಿತು. ನವಾಬ ಮಂತ್ರಿಗೆ "ನೀನೇಕೆ ಸುಳ್ಳಾಡಿದೆ" ಯೆನ್ನಲು ಸಚಿವನು ಅಳುಕದೆ "ದೊರೆಯೆ ಶರಣರನ್ನು ಸಮಾನರಂತೆ ಭಾವಿಸಿ ನನ್ನನ್ನು ಕಳಿಸಿದ್ದರಿಂದ ನಿಮಗೆ ಅಪಜಯವಾಯಿತು. ಗುರುವಿನ, ಸಜ್ಜನರ, ನೆರೆವಿಯೊಳು ತಾಯ್ತಂದೆ, ಹಿರಿಯರೊಳು ನಾಡೆ ಶಿವಶರಣರೊಳು, ದೇವರೊಳು, ವರಭಕ್ತ ಸಾಧು, ಸತ್ಪುರುಷ ರೊಳು ತನ್ನ ಹಿರಿತನ ತೋರಬಾರದು; ಗರ್ವ ಯಾರಿಗೂ ತರವಲ್ಲ" ವೆಂದು ನುಡಿದನು. "ಮತಿ ಹೇಳುವೆ ನೆಂದು ಖತಿಗೊಳ್ಳಬೇಡ. ಶತವರುಷ ವೃದ್ಧಾಗಿ ಮಿತಿಯಿಂದ ಧರ್ಮಪದ್ಧತಿ ತಿಳಿಯದವನು, ತಾನತಿ ಕಿರಿಯನಿಂ ಕಿರಿಯು ಮತಿಯುಳ್ಳವಾರಾದೊಡಂ ಕ್ಷಿತಿಗೆಲ್ಲ ಪಿರಿಯನೆಂ" ದು ತಿಳಿಸಲು ಮಿತ್ರರೊಂದಿಗೆ ನವಾಬನು ಬ್ರಹ್ಮಪುರಿಗೆ ಬಂದು ಶರಣನ ಪಾದಕ್ಕೆ ವಂದಿಸಿ "ಪೊರೆ ದಯಾನಿಧಿ, ಅಪರಾಧ ಕ್ಷಮಿಸಿ" ಎಂದು ಬೇಡಿದನು. "ಸಂದೇಹ ತ್ಯಜಿಸು, ನಿನ್ನ ಮನದಂದು ಶಿವಗೈವ ನಿಶ್ಚಯ" ಪೋಗೆನಲು ನಮಸ್ಕರಿಸುತ್ತ ಐವರು ಬೇಡರೊಂದಿಗೆ ಹೋಗಿ ದಂಡೋತಿ ಗ್ರಾಮ ಮುತ್ತಿ ಶಾದಿಖಾನನ್ನು ಜಯಿಸಿ ಪಟ್ಟವನ್ನು ಸಂಪಾದಿಸಿದನು ಯದುಲ್ಲಾ ನವಾಬನು.

ಶೇಖರೋಜಾದಲ್ಲಿ ಮಶಾಖನೆಂಬ ಫಕೀರನೊಬ್ಬನಿದ್ದನು. ಮಹಿಮಾಕರ ಶರಣೇಶನ ಅನೇಕ ಮಹತ್ವ ಗಳನ್ನು ಸಹಿಸದಾಗಿ ವ್ಯಾಕುಲ ಭರಿತನಾದನು. ಶರಣರ ಸತ್ವಪರೀಕ್ಷೆಗೆಂದು, ಏಳುನೂರು ಜನ ಫಕೀರರನ್ನು ಅನ್ನಬೇಡಲು ಕಳಿಸಿಕೊಟ್ಟನು. ಮಧ್ಯರಾತ್ರಿಗೆ ಅವರೆಲ್ಲ ಶರಣನ ನಿಲಯದ ಬಾಗಿಲಿಗೆ ಬಂದು "ಕಡು ಹಸಿದೆವು, ಅನ್ನವನ್ನು ಇತ್ತು ಕಳುಹು" ಎಂದು ಕೂಗಾಡಿದರು. ಶರಣನು ಎಚ್ಚತ್ತು, ಅಡಿಗೆ ಮನೆಗೆ ಹೋಗಿ ನೋಡಲು, ತಳಗಿಯಲ್ಲಿ ಪಿಡಿನುಚ್ಚು ಉಳಿದಿರಲು ಶಿವನನ್ನು ಸ್ತುತಿಸಿ, ಅದನ್ನೇ ತಂದು ಒಂದೊಂದು ಖಿಸ್ತನ್ನ ತುಂಬುತ್ತ ಉಣಿಸಿದರು. "ಇಂಥ ದಿವ್ಯಾನ್ನವನ್ನು ಈ ಹಿಂದೆ ನಾವೆಂದೂ ಸವೆದಿಲ್ಲ" ವೆಂದು ತೋಷದಿ ಪೊಗಳಿ ಶರಣರನ್ನು ವಂದಿಸುತ್ತ ಜಯವಾಗಲೆಂದು ಹರಸಿ ತೀವ್ರ ನಡೆದು ಬಂದು ತಮ್ಮ ಸಾಹೇಬರಿಗೆ ಎಲ್ಲ ಸಂಗತಿ ತಿಳಿಸಿದರು.

ಇನ್ನೊಮ್ಮೆ ಸಾತಖೇಡದ ವಿಪ್ರರು ಶರಣನ ಸತ್ವಪರೀಕ್ಷೆಗೆಂದು "ಹುಡುಗನೊಬ್ಬನಿಗೆ ಸೀರೆ ಉಡಿಸಿ, ಇವಳಿಗೆ ಸಂತತಿ ದಯಪಾಲಿಸು ಸಾವಿರ ಹೊನ್ನು ಕೊಡುವೆವು" ಎಂದು ನಿವೇದಿಸಿದರು. ಮೂಢರಾದ ಅವರ ಕಪಟ ತಿಳಿದು "ಖರ್ಜೂರ ತಿನಿಸಿ, ಹಡೆವಳು ಹೋಗಿರಿ" ಎಂದರು. ಅತ್ತ ಬಾಲಕನ ಹೊಟ್ಟೆ ಬೆಳೆಯತೊಡ ಗಿದ್ದನ್ನು ತಂದೆ, ತಾಯಿಗಳು ಕಂಡು 'ಇದೇನು ಸಂಕಟ' ವೆನಲು ನಡೆದುದನ್ನು ಆ ಹುಡುಗನು ಹೇಳಿದನು. ತಂದೆ, ತಾಯಿಗಳು ನಡುಗುತ್ತ ಓಡಿಬಂದು "ಸದಯಾಳ ಪೊರೆ ಸಾವಿರ ಹಣ ತಂದಿಡುವೆ" ವೆನಲು ಭಸ್ಮವನ್ನು ತಳೆವರು, ಹೊಟ್ಟೆಕರಗಿ ಹೋಯಿತು. ಸರಡಗಿಯ ವಿಪ್ರರು ಯೌವ್ವನ ಮದದಲ್ಲಿ ಇಂತಹ ಕುಚೇಷ್ಟೆ ಎಸಗಿದ್ದ ರಿಂದ ಅವರಿಗೂ ಪ್ರಾಯಶ್ಚಿತ್ತವಾಯಿತು. "ಶರಣರೊಡನೆ ಸರಸಾಟ" ಹಾವಿನ ಹೆಡೆಯಿಂದ ಕಣ್ಣ ತುರಿಸಿ ಕೊಂಡಂತೆ ಎಂಬುದು ಅವರೆಲ್ಲರಿಗೆ ಮನನವಾಯಿತು.

ಒಮ್ಮೆ ಅನ್ನಸಂತರ್ಪಣೆ ಮಾಡಿಸುವಾಗ ತುಪ್ಪ ಕಡಿಮೆ ಬಿದ್ದುದನ್ನು ತಿಳಿದು ಗಂಗಾಂಬಿಕೆಗೆ ಕೇಳಿ ಕೈಗಡ ತನ್ನಿರೆನ್ನಲು, ಭಕ್ತಜನ ಕೊಡ ತಂದು ಬಾವಿನೀರಿನಲ್ಲಿ ಅದ್ದಿ ಮೇಲೆತ್ತಲು ತುಪ್ಪವಾಗಿರುವ ನನ್ನು ಅರಿತು

ಆಶ್ಚರ್ಯ ಹೊಂದಿದರು. ಸಹಸ್ರ ಚರರೆಲ್ಲ ತುಪ್ಪದಗುಣ ಹೊಗಳಿದರು. ನಂತರ ಸಹಸ್ರಾರು ಹರಕೆಯ ತುಪ್ಪದ ಕೊಡಗಳು ಬರಲು ಬಾವಿಯಲ್ಲಿ ಸುರಿದರು. ತುಪ್ಪ ನೀರಲ್ಲಿ ಕರಗಿ ಏಕಾದುದನ್ನು ಕಂಡು ಶರಣರನ್ನು ಭಾಪು, ಭಾಪು ಎಂದು ಸ್ತುತಿಸಿದರು.

ಷಟ್‌ಸ್ಥಲಾ ಚರಣೆಯಿಂದ ನಿತ್ಯ ದಾಸೋಹವೆಸಗುತ್ತಿರುವ ಸಮಯದಲ್ಲಿ ಒಂದುದಿನ ಸರಡಿಗಿ ಶ್ರೀಮಂತರ ಸೊಸೆ ಕರಿ, ಕರಿಗೆ ತಾಳದಲೆ ಗಂಡನ ಮನೆಯಿಂದ, ತವರೂರಾದ ಹಾಗರಗಿಗೆ ಹೋಗುವಾಗ ದಾರಿಯಲ್ಲಿ ಒಬ್ಬ ದುರುಳ ಕೈಹಿಡಿದು ರತಿಕ್ರೀಡೆಗೆ ಬಲತ್ಕರಿಸಲು, ಸಾಧ್ವಿ ಶಿವನಾಣೆಯಿಟ್ಟಳು. ಅವನು ತತ್‌ಕ್ಷಣ ಶಕ್ತಿಹೀನನಾದನು. ಅತ್ತ ಆ ಸ್ತ್ರೀ ತವರೂರಿಗೆ ಹೋಗಿ ಸುಖದಿಂದಿದ್ದಳು. ಇತ್ತ ಆ ಪುರುಷನು ಪುನಃ ಪುರುಷತ್ವ ಪಡೆಯಲು ಒಂದೊತ್ತು ವ್ರತ, ಹಲವಾರು ಗುಳಿಗೆ, ಔಷಧ ಸೇವಿಸಿದರೂ ಬಯಕೆ ಈಡೇರಲಿಲ್ಲ; ಫಲವಾಗಲಿಲ್ಲ. ಕಡೆಗೆ ಪ್ರಾಣ ಕಳೆದುಕೊಳ್ಳಬೇಕೆಂದು ನಿರ್ಧರಿಸಿದನು. ಹಡೆದವರು, ನೆರೆಯವರು ತಿಳಿದು ಶರಣೇಶನ ಕಡೆಗೆ ಬಂದರು. ಅವನು ತನ್ನ ತಪ್ಪನ್ನು ಒಪ್ಪಿಕೊಂಡನು. ಪಾದೋದಕ ಸಿಂಪಡಿಸಿ, ಮೈಗೆ ಭಸ್ಮ ಲೇಪಿಸಿ ಪುರುಷತ್ವ ದಯಪಾಲಿಸಿದರು.

ಒಕ್ಕಲಗೇರಿಯಲ್ಲಿಯ ವೀರಶೈವ ಮನೆತನದ ಸ್ತ್ರೀ, ಮಹಾಭಕ್ತೆ, ಪತಿವ್ರತೆ ಪರಮಾತ್ಮ ಕೊಟ್ಟುದರಲ್ಲಿಯೇ ತೃಪ್ತಿಪಡೆದು ಗುರು, ಲಿಂಗ, ಜಂಗಮರನ್ನು ಭಜಿಸುತ್ತ ಸಂತೋಷದಿಂದಿದ್ದಳು. ಅದೇ ಓಣಿಯಲ್ಲಿಯ ಹಜಾರಿ ಮನೆತನದ ಯುವಕ ಈ ಸ್ತ್ರೀಯನ್ನು ಪದೇ, ಪದೆ ಕಾಡುತ್ತಿದ್ದನು. "ಪರನಾರಿಯನ್ನು ಕೆಣಕಿ, ನರಕಕ್ಕೆ ಹೋಗುವದು ತರವಲ್ಲ; ತಂಗಿ ಸರಿಯೆಂದು ತಿಳಿ' ನೆರೆ ವಿಚಾರಿಸಲು, ಕಸವರ, ರಜತ, ಕಬ್ಬಿಣಗಳಾ ನಿರುತ, ಹಿತ್ತಾಳಿ, ತಾಂಬರ, ಮಣ್ಣ ಪಾತ್ರೆಯೊಳಗಿರುವ ಹಾಲಿನ ರುಚಿಮುಂದೆ ಪಾತ್ರೆ ಭಿನ್ನವಾದರೂ ದುರುಳತನ ಕೆಳಿಸದೆ ನಿನ್ನ ಹರದಿಯೊಡಗೂಡಿ ಬಾಳು'' ಎಂಬ ಉಪದೇಶ ಹಿಡಿಸದಾಯಿತು ಅವನಿಗೆ. ಒಮ್ಮೆ ಅವಳು ಗಂಡನಿಗೆ ಬುತ್ತಿ ತೆಗೆದುಕೊಂಡು ಹೊಲಕ್ಕೆ ಹೋಗುವ ಹೊತ್ತನ್ನು ಸಾಧಿಸಿ, ಮಧ್ಯ ಮಾರ್ಗದಲ್ಲಿ ಬಲಾತ್ಕರಿಸಲು "ಶರಣಪ್ಪನಾ ಪದದಾಣೆ" ಎನಲು "ಶರಣಪ್ಪ ಶಪ್ಪದ ಮೇಲೆ ಕ್ರುಳ್ಳಿತ್ತು'' ನೆಂದು ಗಗನದಿಂದ ನುಡಿದು ರತಿಗೈಯಲ್ಕೆ ಒತ್ತಾಯಿಸುವಷ್ಟರಲ್ಲಿ ಉದಕ ಶತಕುಂಭ ಸುರವಿದೊಂಗೆ ನಾಚಿ ತಲೆಕೆಳಗೆ ಹಾಕಿದನು. ನೂರು ಕೊಡ ತಣ್ಣೀರು ಎರಚಿದರು. ಸಾಧ್ವಿಮಣಿ ಮನೆಗೆ ಹೋಗಿ ಮಡಿಯಾಗಿ ಬುತ್ತಿ ಒಯ್ದುಣಿಸಿದಳು ಪತಿಗೆ.

ಹಜಾರಿ ಹುಡುಗನ ಪುರುಷತ್ವ ಹೀನಾಗಲು ಅವನ ಸತಿ ಹಾದರಕ್ಕೆ ಇಳಿದಳು. ತಾಯಿ ಸಂಗತಿ ತಿಳಿದು ಹುಡುಗನನ್ನು ಶರಣರ ಬಳಿಗೆ ಸಾವಿರ ಹಣ ಸುರುವಿ "ಪೊರೆ ಕೃಪಾಕರ" ಎಂದು ಬೇಡಿದಳು. ಹುಡುಗ ಪಶ್ಚಾತ್ತಾಪದಿಂದ ದಗ್ಧನಾದನು. ವೀರಶೈವ ಸ್ತ್ರೀಯನ್ನು ಕರೆಸಿ ಅವಳ ಪಾದದ ಮೇಲೆ ಕೆಡವಿಸಿದನು. ಆಣೆ ಹಿಂತೆಗೆದುಕೊಳ್ಳಲು ಅವನಿಗೆ ಪುರುಷತ್ವ ಮರುಕಳಿಸಿತು.

ರಟಗಲ್ ಕೋಮಟಿ ಶೆಟ್ಟಿಯ ಮಗ ಪೂರ್ವದೋಷದಿಂದ ಶಿಖಂಡಿಯಿದ್ದರೂ, ಸುದ್ದಿ ತಿಳಿಯದೆ ಹೀರಾಪುರದ ವೈಶ್ಯ, ಮಗಳನ್ನು ಕೊಟ್ಟಿದ್ದನು. ಮಗಳು ದೊಡ್ಡವಳಾದ ಬಳಿಕ ಗಂಡನಿಗಿರುವ ಕೊರತೆ ತಿಳಿದು ಯಾರಿಗೂ ಉಸುರದಂತೆ ಸುಮ್ಮನಿದ್ದಳು. ಪಂಚಮಿಗೆ ತವರವರು ಕರೆದೊಯ್ದರು. ಆಗ ಆ ಹುಡುಗಿ

ಶರಣರ ಪಾದಕ್ಕೆ ಬಿದ್ದು, ಗಂಡನಿಗೆ ಪುರುಷತ್ವ ಕರುಣಿಸಲು ಬೇಡಿ ತನ್ನೆಲ್ಲ ಒಡವೆ ಒಪ್ಪಿಸುವೆನೆಂದು ಹರಕೆ ಹೊತ್ತಳು. ಶರಣರು ಭಸ್ಮವನ್ನು ಉಡಿಯಲ್ಲಿ ಪಾಲಿಸುತ್ತ 'ತ್ರಿಕಾಲ ಧರಿಸೆಂ' ದು ಹೇಳಿದಂತೆ ಮಾಡಲು ಅವಳ ಪತಿಗೆ ಶಕ್ತಿ ಉಂಟಾಯಿತು. ದಂಪತಿಗಳಿಬ್ಬರು ಬಂದು ಒಡವೆಗಳನ್ನು ಒಪ್ಪಿಸಿ, ಶರಣನ ಕರುಣೆಗೆ ಪಾತ್ರರಾದರು.

ಮಗನ ಲಗ್ನಕ್ಕೆ ಸಾವಿರ ಹಣ ಬೇಕೆಂದು ಶರಣನಿಗೆ ದ್ವಿಜನೊಬ್ಬ ಬೇಡಲು ಒಪ್ಪಿ ಅವನನ್ನು ಕಿಲ್ಲೆ ಎಡಕಿರುವ ಕಬರಸ್ಥಾನಕ್ಕೆ ಕರೆದೊಯ್ದು ಹುತ್ತಿನಬಳಿ ನಿಂತು "ಭೋ ಕನಕ ಬಾರೆಂ" ದು ಕೂಗಲು, ಕಾಳೋರಗ ಹರಿದು ಬರುವುದನ್ನು ಕಂಡು ಆ ಬ್ರಾಹ್ಮಣನು ಓಡತೊಡಗಿದನು. ಮತ್ತೆ ಅವನಿಗೆ ಧೈರ್ಯಹೇಳಿ ಕರೆದು 'ಸರ್ಪ ಬಿಲ ಸೇರುವಾಗ ಬಾಲವನ್ನಾದರೂ ಮುಟ್ಟು ' ಎಂದೆನ್ನಲು ಅವನು ಹಾಗೇ ಮಾಡಿದನು. ಅದು ಬಂಗಾರವಾಯಿತು. ಹರಸೂರಿನ ದಿಗ್ಗಾವಿ ಗುರುಬಸವನು ಸಾವಿರ ಹಣ ಕೊಟ್ಟುದಕ್ಕೆ ಸಂತಾನಭಾಗ್ಯ ಪಡೆದನು. ಒಮ್ಮೆ ಒಬ್ಬ ವೈಶ್ಯ ಬಂದು, ಎರಡು ಸಾಸಿರ ಹಣಕೊಟ್ಟು ಎರಡು ಮಕ್ಕಳನ್ನು ದಯಪಾಲಿಸೆನ್ನಲು ಶರಣರು ಖರ್ಜೂರ ಕೊಟ್ಟು ಕಳಿಸಿದರು. ಗರ್ಭವತಿಯಾದ ಅವನ ಸತಿ ಕ್ಲೇಶವಾಗಿದೆಂದು ಹೇಳಿದಳು. ವೈಶ್ಯ ಹಣತಂದು ಒಪ್ಪಿಸಿ 'ಒಂದೆ ಮಗು ಸಾಕು, ಸತಿಗೆ ಆಯಾಸ' ಅದಕ್ಕೆ ಒಡಂಬಟ್ಟರು ಶರಣರು. ವೈಶ್ಯ ಮನೆಗೆ ಹೋಗುವದರೊಳಗೆ ಅರ್ಧ ಗರ್ಭವಾಗಿತ್ತು; ನವಮಾಸ ತುಂಬಿ ಮತ್ತೆ ಒಂದೇ ಮಗುವಿಗೆ ತಾಯಿಯಾದಳು

ಕಮಲಾಪುರದ ಭಕ್ತನೊಮ್ಮೆ ಶರಣರನ್ನು ವಂದಿಸಿ, ಎರಡು ಮಕ್ಕಳನ್ನು ಕರುಣಿಸು ಎರಡು ಸಾವಿರ, ಕೊಡುವೆನೆಂದು ಯಾಚಿಸಿದನು. ಎರಡು ಖರ್ಜೂರ ಕೊಟ್ಟು ಹಿರಿಯಳಿಗೊಂದು, ಕಿರಿಯಳಿಗೊಂದು ಕೊಡಲು ತಿಳಿಸಿದರು. ಕಿರಿಹೆಂಡತಿಗೆ ಕೈಯ್ಯಲ್ಲಿಟ್ಟು ಶರಣರು ಹೇಳಿದ್ದನ್ನು ತಿಳಿಸುವಷ್ಟರಲ್ಲಿ ಎರಡು ಕಾರಿಕ ತಿಂದು ಗರ್ಭವತಿಯಾದಳು. ನವಮಾಸ ತುಂಬಿರಲು ತುಂಬ ಕ್ಲೇಶಪಡುವದನ್ನು ಕಂಡು ಶರಣನೆಡೆ ಭಕ್ತಬಂದು ಬಿನ್ನೈಸಿದನು. "ಕಿರಿಹೆಂಡತಿ ಕಪಟ ತಿಳಿದಿದೆ ಎರಡು ಮಕ್ಕಳನ್ನು ಪಡೆಯುವಳು. ಒಂದನ್ನು ಹಿರಿಯಾಕೆಗೆ ಕೊಡಿಸಿದರೆ ಮಕ್ಕಳು ಬಾಳುವವು" ಎಂದು ಹೇಳಿ ಕಳಿಸಿಕೊಟ್ಟರು. ಬರುವಷ್ಟರಲ್ಲಿ ಹೆರಿಗೆಯಾಗಿತ್ತು, ಒಂದನ್ನು ಹಿರಿಯಾಕೆಗೆ ಕೊಡಿಸಿದನು.

ಬ್ರಹ್ಮಪುರದ ಒಬ್ಬ ವೈಷ್ಣವ ಮನೆತನದ ಹೆಣ್ಣುಮಗಳು ಶರಣನ ಬಳಿಬಂದು "ಸುತನನ್ನು ಕರುಣಿಸು ಸಾವಿರ ಕೊಡುವೆ" ನೆಂದು ಹೇಳಿ ಖರ್ಜೂರ ಪಡೆದು, ಸೇವಿಸಿ ಗರ್ಭವತಿಯಾದಳು. ನವಮಾಸ ತುಂಬಲು ಶರಣಪ್ಪನ ಹರಕೆಯನ್ನು ಗಂಡನೆದುರಿಗೆ ತಿಳಿಸಲು ಅವನು ಕೋಪಿಷ್ಟನಾದನು. ಮುಂದೆ ಮಗನನ್ನು ಹೆತ್ತಳು. ಕೆಲ ದಿನದನಂತರ ಹರಕೆಯನ್ನು ಮರೆತರು. ಒಮ್ಮೆ ನೀರಿಗೆ ಆ ಸ್ತ್ರೀ ಹೋದಾಗ, ತೊಟ್ಟಿಲಲ್ಲಿಯ ಕೂಸಿಗೆ ಪಕ್ಕಶೂಲಿ ಸುರುವಾಯಿತು; ವೈದ್ಯ ಔಷಧದಿಂದ ಏನೂ ಪ್ರಯೋಜನವಾಗಲಿಲ್ಲ. ವೆಂಕಟೇಶನು ಕನಸಿನಲ್ಲಿ "ಶರಣನ ಹರಕೆ ಮುಟ್ಟಲಿ, ಮೇಲೆ ಸಾವಿರ ತನಗೊಪ್ಪಿಸುವಂ" ತೆ ಆಜ್ಞೆ ಮಾಡಿದನು. ಸಾವಿರ ಒಯ್ದು ಶರಣರಿಗೆ ಒಪ್ಪಿಸಿದ ಬಳಿಕ ವಿಭೂತಿ, ಚರಣೋದಕ ಕೊಟ್ಟು ಮಗುವಿಗೆ ಕುಡಿಸು, ವೆಂಕಟೇಶನಿಗೆ ಸಾವಿರ ಹಣ ಕೊಡದಿರಲು ಮರೆಯದಿರೆಂದು ಹೇಳಿ ಕಳಿಸಿದರು. ಧೂಳೋದಕ, ಭಸಿತ ಕೊಟ್ಟ ಕ್ಷಣದಲ್ಲಿ ಮಗು ಹುಷಾರಾಯಿತು.

ಸ್ವಾರ್ತನೊಬ್ಬನಿಗೆ ಸುತರಿಲ್ಲದಿರಲು ಶರಣರಿಗೆ ಸಾವಿರ ಹಣ ಕೊಡಲೊಪ್ಪಿ, ಕರುಣಿಸಿದ ಖರ್ಜೂರ ಹೆಂಡತಿಗೆ ಕೊಡಲು ಆಕೆ ಬಸುರಿಯಾದಳು. ಶರಣನಿಗೆ ಹಣ ಕೊಡುವದು ಏಕೆಂದು, ಗಂಡ ಹುಗಿದಿಟ್ಟ ಸ್ಥಳ ಬದಲಿಸಿತ್ತು; ಒಲೆಯ ಮುಂದೆ ಹೂಳಿದಳು. ಒಂದು ರಾತ್ರಿ ಬೇನೆ ಬಂದು ಚಡಪಡಿಸುತ್ತಿರಲು ಶರಣರ ಬಳಿಹೋಗಿ ಪರಿಹಾರ ಕೇಳಿ ಬಾಯೆನ್ನಲು "ಒಲೆಯ ಮುಂದೆ ಹೂಳಿರುವ ಧನಕೊಟ್ಟರೆ ಮಗನ ಪಡೆಯುವ" ಳೆಂದು ತಿಳಿಸಿದಂತೆ ಹಣ ಒಯ್ದು ಕೊಟ್ಟು ವಂದಿಸಿದನು. ಚರಣೋದಕವನ್ನು ನೀಡಿ, ಬಾಳೆಂದು ಹರಿಸಿ ಕಳಿಸಿದರು ಶರಣರು. ಪಾದೋದಕ ಸೇವನೆಯಿಂದ ನಿರಾಯಾಸವಾಗಿ ಮಗುವನ್ನು ಹೆತ್ತಳು.

ಮತ್ತೊಮ್ಮೆ ಬ್ರಹ್ಮಪುರದ ಉಪ್ಪಾರನ ಹೆಂಡತಿ ಬಡವಿ ಶರಣನ ಬಳಿಗೆ ಬಂದು 'ಸುತನನ್ನು ಕೊಡು' ಎಂದು ಕೇಳಲು "ಸಾವಿರ ಹಣವಿಲ್ಲದೆ ಮಗನನ್ನು ಪಡೆಯಲಾರೆ" ಎಂದರು. ಕೈಯ್ಯಲ್ಲಿ ಕಾಸು ಸಹ ಇಲ್ಲ, ಸಾವಿರವೆಲ್ಲಿಂದ ತರಬೇಕೆಂದು ನಮಸ್ಕರಿಸಿ ಮನೆಗೆ ಹೋಗಿ ವ್ಯಸನದಿಂದ ಕೂಡಿ, ಶರಣೇಶನ ಧ್ಯಾನದೊಳಿದ್ದಳು. ಅವಳ ಚಿಂತೆ ದೂರ ಮಾಡಲು, ಈಶ್ವರನು ಬಿಟ್ಟೂ ಬಿಡದೆ ಮೂರು ತಿಂಗಳ ಮಳೆ ಕರೆಸಿದನು. ದಾಸೋಹಕ್ಕೆ ಕಟ್ಟಿಗೆ ದೊರೆಯದಾಯಿತು. ದಾಸೋಹ ನಿಲ್ಲುವ ಪ್ರಸಂಗ ಒದಗಿತು. "ಮನೆ ಮನೆಗೆ ಹೋಗಿ ಕುಳ್ಳು ತನ್ನಿ" ರೆಂದು ದಾಸಜನರಿಗೆ ಆಜ್ಞೆ ಮಾಡಿದರು ಶರಣರು. ಉಪ್ಪಾರವಳ ಮನೆಯ ಹೊರತಾಗಿ ಕುಳ್ಳು ಯಾರ ಮನೆ ಯಲ್ಲಿಯೂ ಇಲ್ಲ. "ಹಣಕೊಂದು ಕುಳ್ಳು" ಎನ್ನುವಳೆಂದರು. ಅವಳ ಅಂತರ್ಯವರಿತ ಶರಣ "ತರುಳೆ, ನಿನ್ನ ಇಚ್ಛೆ ಸಫಲವಾಗುವದು. ಕುಳ್ಳು ಕೊಡು ಬೇಗ" ಎಂದೆನ್ನಲು ಸಾವಿರ ಕುಳ್ಳುಕೊಂಡು ಮಗನನ್ನು ಪಡೆದು ಶರಣಬಸವಪ್ಪನೆಂದು ನಾಮಕರಣ ಮಾಡಿಸಿದಳು. "ಕರುಳು ಕೊಡುವರಿಘೊಟ್ಟೆ ಕರುಳ ಕೊಡುವನೆಂದುಸರವಾ ಜೋಗುಳವ ಪರಿಪರಿಯು ಪಾಡಿ" ಘನ ಹರುಷದಲಿ ಇರುತಿದ್ದಳು.

ಬೆರಣಿ ಸಾಸಿರಕ್ಕೆ ಮಗುವನ್ನು ದಯಪಾಲಿಸಿದ್ದನ್ನು ತಿಳಿದು ಮಹಾರೋಗಿಯೊಬ್ಬ "ಉದುರಿರ್ದ ಬೆರಳು, ದಪ್ಪಾದ ಮೂಗು, ಮಿರಿಮಿರಿ ಮಿಂಚುತಿರಲು, ಅರುಣಲೋಚನ ಮೂಗು ದೊಡ್ಡದಾಗಿರಲು, ಸರ ಬದಲು ಕೀವ್ರಕ್ತ ಸುರಿಯುತಿರಲಿದಕೆ ನೊಣ ನೊರಜು ಪಡಿರ್ಕ್ತಿ" ಬಂದು ಶರಣಬಸವನ ದಿವ್ಯಚರಣಗಳಿಗೆ ಪ್ರಣಾಮ ಮಾಡಿದನು. ಅವನ ಇಚ್ಛಿತ ಅರಿತು ದಯಹುಟ್ಟಿ, ಮುಂದಕ್ಕೆ ಕರೆದು ಅವನ ಅಂಗತಟ್ಟಿ ಧೂಳೋದಕ ಕೊಟ್ಟು ಕುಡಿಸಲು ರೋಗನಿವಾರಣೆಯಾಯಿತು. ಶರಣರ ನೂತನ ಮಹತ್ವಗಳನ್ನು ಕಂಡು ಭಕ್ತಜನ, ಮಹಿಮೋದಯನೆ, ದೀನ ಕರುಣೋದಧಿಯೆ ನೀನೆ ಘನ ಮಹಾದೇವ ಎಂದು ಸ್ತುತಿಸಿದರು.

## ಹದಿನೈದನೆಯ ಸಂಧಿ

ಈ ಲೋಕದ ಭಕ್ತಜನವೆಲ್ಲ ಬಹು ವಿಧದಿ ಶರಣರ ಸ್ತೋತ್ರಗೈದರು. ಈ ಧರಣಿ ಶಿವಶರಣಮಯ ವಾಯ್ತು. ಮಕ್ಕಳಿಗೆ ಶರಣಬಸವನ ಹೆಸರಿಟ್ಟು ಮಮತೆಯಿಂದ ಕರೆದರು. ಶರಣ ಹರ್ಷದ ಮೂರುತಿ, ಮರಣ ಭವರುಜೆ ನಾಶವೆಂದು ದೃಢ ಅರಿತರು.

ದಾಸೋಹಗೈಯುತ್ತ ಶಣರ ಎಂದಿನೋಲ್ ಆನಂದದಿಂದಿರುವ ಸಮಯದಲ್ಲಿ ಮಕ್ತಂಪುರದ ಒಬ್ಬ ಯುವತಿ ಸಟಿತ ಬೇಡಲು ಸ್ನಾನಮಾಡಿ ಬಹ್ಮಪುರಕ್ಕೆ ಬರುತ್ತಿದ್ದಳು. ಅಷ್ಟರಲ್ಲಿ ಇನ್ನೊಬ್ಬಾಕೆ ಮಗುವನ್ನೆತ್ತಿ

ಕೆರೆ, ಕಿಲ್ಲೆಯ ನಡುವಿನ ಮಾರ್ಗದಲ್ಲಿ ನಡೆದು ಬರುತ್ತಿದ್ದಳು. ಮಗು ಸೀರೆಯ ಮೇಲೆ ಮಲಬಿಡಲು "ತೊಳೆದುಕೊಂಡು ಬರುವೆ, ಕ್ಷಣಹೊತ್ತು ಹಿಡಿ' ಯೆನಲು "ಸಿರಿಗೇಡಿ, ಕರಿಯಾಡಿನಂತಿದೆ, ಸುಂಬಳ' ಜೊಲ್ಲು ಸುರಿಯುತ್ತಿದೆ; ನಾನೆತ್ತಿಕೊಳ್ಳಲಾರೆ' ಮಣ್ಣೊಳಗೆ ಇಳಿಸೆಂ"ದಳು. ಛಳಿಲನೆ ಮುಂದೆ ಹೊರಟಳು. ತಾಯಿ ವಸನ ತೊಳೆದುಕೊಂಡು, ಮಗುವನ್ನೆತ್ತಿಕೊಂಡು ಬರುವಷ್ಟರಲ್ಲಿ, ಶರಣನಡಿ ಮೇಲೆ ಬಿದ್ದು ಸುತನನ್ನು ದಯ ಪಾಲಿಸೆಂದು ಬೇಡಿದಳು. ದಾರಿಯಲ್ಲಿ ಮಗುವನ್ನು ಕೊಡಲು "ಮಣ್ಣಲ್ಲಿ ಇಳಿಸು" ಎಂದು ಹೇಳಿದೆ. ಎಂದು ಶರಣರು ಮಾತು ಮುಗಿಸುವದರೊಳಗೆ ಆ ಕೂಸಿನಾಕೆ ಬಂದಳು. ಈ ಕೂಸು ಕೊಟ್ಟರೆ ನಿರಾಕರಿಸಿದೆ. ಈ ಜನ್ಮದಲ್ಲಿ ನಿನಗೆ ಮಕ್ಕಳಾಗಲು ಅಜನರೇಖೆ ಅಡ್ಡವಾಗಿದೆ. ಈ ಬಯಕೆಯನ್ನು ದೂರುಮಾಡು, ಮನೆಗೆ ಹೋಗಿ ನಿಶ್ಚಿಂತಳಾಗಿರೆನ್ನಲು ಆಕೆಯು ಬಾಡಿದ ಮುಖದಿಂದ ಮನೆಕಡೆ ನಡೆದಳು.

ಇನ್ನೊಮ್ಮೆ ಕೊತ್ತಲಿ ಗ್ರಾಮದ ಯುವತಿ, ಅತ್ತಿಗೆಯೊಂದಿಗೆ ಪುತ್ರನನ್ನು ಪಡೆಯುವ ಸಲುವಾಗಿ ಬ್ರಹ್ಮಪುರಕ್ಕೆ ಹೊರಟಿದ್ದಳು. ಮಾರ್ಗದಲ್ಲಿ ಬುತ್ತಿ ಬಿಚ್ಚಿ ಉಂಡನಂತರ, ಅವಳ ಅತ್ತಿಗೆಯು ಉಣ್ಣುವ ಕಾಲಕ್ಕೆ ಕೂಸು ಕಾಡತೊಡಗಲು, ಎತ್ತಿಕೊ ಇವನನ್ನು ಎಂದಳು. "ಕಸಮೂಳ, ಎತ್ತಿಗೊಂಡರೆ ಸೀರೆ ಹೊಲ ಸಾಗುವದು" ಒಲ್ಲೆನೆಂದಳು. ನಂತರ ಬ್ರಹ್ಮಪುರಕ್ಕೆ ಬಂದು ಶರಣರನ್ನು ಕಂಡು, ಸಾಷ್ಟಾಂಗವೆರಗಿ "ಸಾವಿರ ಹಣ ಕೊಡುವೆ ಸುತನನ್ನು ಕರುಣಿಸೆಂದು ಕೇಳಿದಳು. "ಮಕ್ಕಳಿಂದ ಆಯಸ ಬಹಳ ನೆಟ್ಟಗಿರುವುದೊಳಿತು, ಹೋಗೆಂ'' ದರು ಶರಣರು. ಹಿಂದೆ ನಡೆದ ಪ್ರಸಂಗ ನೆನಸಿದರು. "ಜನರ ಪ್ರೀತಿಗಾಗಿ ಅನ್ಯರ ಮಕ್ಕಳನ್ನು ಕರೆದು, ಉಣಬಡಿಸಿ ಈ ಪಾಪಿ ತಿನ್ನುವದೆಷ್ಟವ್ವ, ಹಂದಿ ಮರಿಯಾಗಿದೆ'' ಎಂದು ಅಂದುಕೊಳ್ಳುವದು ತರವಲ್ಲ. ಅನ್ಯರ ಕೂಸೆಂದು ದ್ವೇಷ ಮಾಡುವದು ತರವಲ್ಲವೆಂದು ಬೋಧಿಸಿದರು.

ಎಂದಿನಂತೆ ಶರಣರು ಬ್ರಹ್ಮಪುರದಲ್ಲಿ ದಾಸೋಹ ನಡೆಸುತ್ತಿದ್ದರು. ಅಲ್ಲಿಯ ಹಜಾಮನ ಹೆಂಡತಿ, ಕಡು ರೂಪವತಿ, ಮತಿವಂತೆ, ಪತಿವ್ರತೆ, ಸಂತೋಷದಿಂದ ಸಂಸಾರ ಮಾಡುತ್ತಿದ್ದಳು. ಋಣಕೃತ ತಾತ, ಸುತ ಮೂಢಶತ್ರು, ಜಾರ ಪದ್ಧತಿ ತಾಯಿ ಸತಿ ರೂಪವತಿ ತನ್ನ ಪಗೆ'' ಎಂದು ಪಂಡಿತನೊಬ್ಬ ಹೇಳುತ್ತಿರುವ ದನ್ನು ಅವನು ಕೇಳಿ ಮನೆಗೆ ಬಂದು "ಹೆಂಡತಿ ರೂಪವತಿ, ಕೊಂದರೆ ಪಾಪ, ಯಾವದಾದರೊಂದು ಅಂಗಹೀನ ಮಾಡುವದು ಒಳಿತೆಂ" ದು ನಿರಪರಾಧಿಯಾದ ಸತಿ ಬೇಡಿಕೊಂಡರೂ ಕೇಳದೆ, ಮೂಗು ಕೊಯ್ಯಲು ಕುಡುಗೋಲು ತರುವಷ್ಟರಲ್ಲಿ ಓಡಿಬಂದು ಶರಣೇಶನ ಪಾದಕ್ಕೆ ಬಿದ್ದು ನಡೆದುದನ್ನು ತಿಳಿಸಿದಳು. ಅವಳನ್ನು ಕುಟ್ಟುವ, ಬೀಸುವ ಹೆಣ್ಣುಮಕ್ಕಳಲ್ಲಿ ಕೂಡಿಸಿದರು. ಕೋಪಿಷ್ಟನಾದ ಗಂಡ ಓಡಿಬಂದು ಅವಳೆಲ್ಲಿರುವಳು ತಂದು ಕೊಡಿ, ಇಲ್ಲದಿದ್ದಲ್ಲಿ ಇಲ್ಲಿಯೇ ತಲೆಯೊಡೆಮುಕೊಳ್ಳುವೆನೆಂದು ರಂಪು ಮಾಡಿದನು. "ಒಳಗೆ ಹೋಗಿ ಹುಡಿಕಿಕೋ" ಎಂದು ಶರಣರು ಆಜ್ಞೆ ಮಾಡಿದರು. ಹೋಗಿ ನೋಡಲು ಅಲ್ಲಿದ್ದ ಸ್ತ್ರೀಯರೆಲ್ಲ ತನ್ನ ಹೆಂಡತಿಯಂತೆಯೇ ಇರುವದನ್ನು ಕಂಡು ಸೋಜಿಗಗೊಂಡನು. ಅಲ್ಲಿರುವ ಸ್ತ್ರೀಯರಲ್ಲಿ ತನ್ನ ಹೆಂಡತಿ ಯಾರೆಂಬುದನ್ನು ಗುರುತಿ ಸುವದು ಸಾಧ್ಯವಿಲ್ಲ; 'ನೀನು ಕರುಣಿಸಬೇಕೆಂ' ದು ಪಾದಗಳಿಗೆರಗಿ ಬೇಡಿಕೊಂಡನು. "ತಪ್ಪು ವಚನಗಳನ್ನು ಕೇಳಿ ಮನಸಿಗೆ ತಂದು ವಿಚಾರಿಸದೆ ವರ್ತಿಸುವವನು ಮೂರ್ಖ; ನಿನ್ನ ಸತಿಯಗುಣ ನಾವು ಬಲ್ಲೆವು. ಪಾತಿವ್ರತ್ಯದಲ್ಲಿ ಸಾವಿತ್ರಿಗೆ ಸಮಾನಳು. ಅಂಥವಳ ಮೂಗು ಕೊಯ್ದರೆ, ಪುರುಷಾರ್ಥ ಸಾಧಿಸಿದಂತಾಗಲಿಲ್ಲ.

ದಡ್ಡತನವ ಪ್ರದರ್ಶನವಾದಂತೆ; ನಿನ್ನ ನೀಚ ವಿಚಾರ ಬಿಟ್ಟು ಸತಿಯೊಂದಿಗೆ ಸುಖವಾಗಿ ಬಾಳೆಂದು ಹಿತವಚನ ಹೇಳಿ ಅವನ ಹೆಡಂತಿಯನ್ನು ಕಳಿಸಿಕೊಟ್ಟರು. ಅಂದಿನಿಂದ ಅವನು ಆ ವಿಚಾರವನ್ನು ತೆಗೆದುಹಾಕಿ ಸತಿಯೊಂದಿಗೆ ಸುಖವಾಗಿದ್ದನು.

ದೊಡ್ಡಪ್ಪನವರ ಸಹಧರ್ಮಚಾರಿಣಿ, ಸುಶೀಲೆ, ನೀಲಮ್ಮನವರು ಶರಣರ ಅಪ್ಪಣೆಪಡೆದು ತವರೂರಿಗೆ ಹೋಗಿ ಕೆಲ ಕಾಲವಿದ್ದು, ಮರಳಿ ಕುದುರೆಯ ಮೇಲೆ ಬರುವಷ್ಟರಲ್ಲಿ ಕತ್ತಲಾಯಿತು. ಪ್ರಸಿದ್ಧ ಕಳ್ಳರಾದ ಜೇರಟಗಿ ದೇವಪ್ಪ, ಕೊಡಿರಾಯ ಇವರಿಬ್ಬರು ದಾರಿಯಲ್ಲಿ ಕಾದಿದ್ದು, ನೀಲಮ್ಮನವರ ಅಲಂಕಾರಗಳನ್ನೆಲ್ಲ ಒಯ್ದು ಬಿಟ್ಟರು. 'ಶರಣೇಶನಾಣೆ' ಎಂದು ಕೂಗಿ ಹೇಳಿದಳು, ನೀಲಮ್ಮ ಮನೆಗೆ ಬಂದು ಈ ಸುದ್ದಿಯನ್ನು ಶಿವಶರಣರಲ್ಲಿ ನಿವೇದಿಸಿದಳು. ಚಿಂತೆ ಬೇಡ, "ಬೆಳಗಾಗುವದರೊಳಗೆ ನಿನ್ನ ಒಡವೆಗಳು ಕೈಸೇರುವವೆಂದು" ಸಮಾಧಾನಗೊಳಿಸಿದರು. ಕಳ್ಳರು ತಮ್ಮ ಸ್ಥಳ ತಲ್ಪುವಷ್ಟರಲ್ಲಿ ಆಣೆಯಿತ್ತಿದ್ದರ ಫಲವಾಗಿ ಅವರ ಕಣ್ಣುಗಳು ಕಾಣದಾದವು. ಅವರು ಶರಣನಾಣೆಯನೆಸಗಿ ಬೆಳಗಾಗುವಷ್ಟರಲ್ಲಿ ಒಡವೆ ಒಪ್ಪಿಸುವೆವೆಂದು ಶರಣರ ಸ್ತೋತ್ರ ಮಾಡಲು ಕಣ್ಣು ಕಾಣಿಸತೊಡಗಿದವು. ಬ್ರಹ್ಮಪುರಕ್ಕೆ ಬಂದು, ಶರಣರನ್ನು ಕಂಡು ಒಡವೆ ಒಪ್ಪಿಸಿ ಕಾಪಾಡೆಂದು ಬೇಡಿದರು. ಅವರಿಗೆ ಹಿತವಚನ ಹೇಳಿದರು. ಅವರು ಚೋರತನವನ್ನು ಬಿಟ್ಟು ಒಕ್ಕಲುತನ ಮಾಡುತ್ತ ಸುಖವಾಗಿ ಬಾಳಿದರು.

ಸುರಪುರದ ಹೇಮಯ್ಯ ಆಗ ಪ್ರಸಿದ್ಧ ಕಳ್ಳನಾಗಿದ್ದನು. ಅವನ ಅಪರಾಧಕ್ಕೆ ಮರಣದಂಡನೆಯಾಯಿತು. ಶಿರಗಡಿಯಲು ತಂದು ದೇವರನಾಮ ಸ್ಮರಿಸಲು ಕೇಳಿದಾಗ, "ಶರಣ, ಶರಣಪ್ಪ, ಶರಣಬಸವೇಶ" ಎಂದು ಸ್ಮರಿಸಿದನು. ಖಡ್ಗದಿಂದ ಕುತ್ತಿಗೆಗೆ ಹೊಡೆಯಲು, ಕೊರಳಿಗೆ ಹೂಮಾಲೆ ಅಲಂಕೃತವಾಯಿತು. ಮರಣ ದಂಡನೆಯಿಂದ ಮುಕ್ತನಾದನು.

ಮತ್ತೊಮ್ಮೆ ಸುಲೇಪೇಟೆಯ ಚರಮೂರ್ತಿಗಳು ಬಂದು ಪುರಾಣ ನಡೆಸುವೆ, ಅದ್ದೂರಿ ದಾಸೋಹ ಮಾಡುವೆ, ತಾವು ಕೆಲಕಾಲ ಅಲ್ಲಿಗೆ ದಯಮಾಡಿಸ" ಬೇಕೆಂದು ಕೇಳಿದರು. "ಈಗ ಬೇಡ, ಕೆಲಕಾಲ ತಡೆ" ಯೆನ್ನಲು "ಇವನಿಗೇನು ತಿಳಿಯುವ" ದೆಂದು ಆ ಕಾರ್ಯ ಭರ್ಜರಿಯಾಗಿ ನಡೆಸಲು ಮನಸ್ಸುಮಾಡಿ ನೂರು ದಿನಗಳವರೆಗೆ ಪುರಾಣ ನಡೆಸಿ, ಗಣಾರಾಧನೆ ಮಾಡುವಾಗ ಶರಣನ ಮಾತು ಗಣಿಸದೆ ಮಾಡಿದೆ; ಎಲ್ಲ ಸಾಂಗವಾಗಿ ನೆರವೇರಿತೆಂದು ಗರ್ವದಿಂದ ನುಡಿದರು. ಅಂದೇ ಬೇದಾಡೆಯ ದಂಡುಬಂದು ಮುತ್ತಿ, ಕೈಗೆ ಸಿಕ್ಕುದನ್ನು ಒಯ್ದರು. ಚರಮೂರ್ತಿಗಳು ಶರಣರ ಬಳಿ ಬಂದು "ನಿಮ್ಮ ಮಾತು ಧಿಃಕ್ಕರಿಸಿ ಪುರಾಣ ನಡೆಸಿದ್ದಕ್ಕೆ ಹಾನಿಯಾಯಿತು, ಈಗಲಾದರೂ ಬಂದು ಉದ್ಧರಿಸಬೇಕೆಂದು ಬೇಡಿದರು. ಅವರೊಂದಿಗೆ ಶರಣರು ಸುಲೇಪೇಟೆಗೆ ದಯಮಾಡಿಸಿ, ಗೋದಿ ಹಿಟ್ಟನಿಂದ ಅಡಿಗೆ ಮಾಡಿಸಿ ಬೇದಾಡಿಯ (ಸೈನಿಕರಿಗೆ) ದಂಡಿನವರಿಗೆ ಉಣಬಡಿಸುವಾಗ ಬೇದಾಡೆ ಶರಣರನ್ನು (ಅವರಾದಿಯಲ್ಲಿ ಅವರನ್ನು ಕಂಡಿದ್ದನು) ಗುರುತಿಸಿ "ಹುಡುಕಿದರೂ ಸಿಗದ ಪಾದ ನಡೆದು ಬಂದುದು ತನ್ನ ಭಾಗ್ಯವೆನ್ನುತ್ತ ಹಿಗ್ಗಿ, ಅಸಂಖ್ಯಾತ ಧನ ಅವರ ಪಾದಕ್ಕೆ ಅರ್ಪಿಸಿ ಅಪ್ಪಣೆ ಪಡೆದು ಹೊರಟು ಹೋದನು. ಶರಣರು ಆ ಧನವನ್ನೆಲ್ಲ ಮೃಡರೂಪ ಚರನಿಗೆ ಕೊಟ್ಟು ಮರಳಿ ಬಂದರು.

ಸುರಪುರದ ವೆಂಕಟಪ್ಪ ನಾಯಕರು ಶರಣರಿಗೆ ಭಕ್ತಿಯಿಂದ ಸಾವಿರಹಣ, ಒಂದು ಮುತ್ತಿನ ಹಾರವನ್ನು ಅರ್ಪಿಸಿ ಬರಲು ಸೇವಕರನ್ನು ಕಳಿಸಿಕೊಟ್ಟರು. ಅವರು ಒಂದೇ ಸವನೆ ದಾರಿನಡೆಯುತ್ತ ಆಯಾಸ ಕಡಿಮೆ ಮಾಡಿಕೊಳ್ಳಲು ಮರದ ನೆರಳಲ್ಲಿ ಕುಳಿತು ಕಲಬುರ್ಗಿಯಲ್ಲಿ ಹೋಳಿಗೆ, ಎಗ್ಗಳ ತುಪ್ಪ ಉಂಡರೆ ಎಲ್ಲ ಶ್ರಮ ದೂರಾಗುವದೆಂದು ಮಾತಾಡಿಕೊಂಡರು. ಅವರು ಬಂದು ಶರಣರಿಗೆ ವಂದಿಸಿ ಹಾರ, ಹಣ ಅರ್ಪಿಸಿದರು. ಶರಣರು ಅವರು ಬಯಸಿದ್ದನ್ನು ಊಟ ಮಾಡಿಸಲು ಅವರಿಗೆ ಅತಿ ಆಶ್ಚರ್ಯವಾಯಿತು. ನೆರೆದವರ ಮುಂದೆ ತಾವು ದಾರಿಯಲ್ಲಿ ಆಡಿದ್ದನ್ನು ಹೇಳಿ ಶರಣರನ್ನು ಕೊಂಡಾಡಿದರು.

ಗ್ರೀಷ್ಮಋತು ತಲೆದೋರಿತು. ಜನಗಳೆಲ್ಲ ಮಾಳಿಗೆಯ ಮೇಲೆ ಕುಳಿತು ಶರಣನ ಮಹತ್ವಗಳನ್ನು (ಪವಾಡಗಳನ್ನು) ಹೇಳಿಕೊಳ್ಳುತ್ತಿದ್ದರು. ಅಷ್ಟರಲ್ಲಿ ಒಬ್ಬ "ಶರಣ ಬಲು ಶ್ರೇಷ್ಠನು; ಬೇಡಿದರೆ ಹುಲಿಗಿಣ್ಣ ವನ್ನಾದರೂ ಕೊಡಿಸಬಲ್ಲ"ನೆಂದು ಆಡಲು, ಸಹಿಸದ ವೈಷ್ಣವನೊಬ್ಬ ನಮಗೆ "ಹುಲಿಗಿಣ್ಣ ಬೇಡ, ಎಮ್ಮೆಯ ಗಿಣ್ಣಸಾಕು, ಕೊಡಿಸು ನಡೆ" ಯೆನ್ನಲು ಅವನು ಸಮ್ಮತಿಸಿ ಬಂದು ಶರಣರ ಪಾದಗಳಿಗೆ ವಂದಿಸಿ, ನಡೆದುದನ್ನು ಮಾಜದೆ ಹೇಳಿದನು. ಅಷ್ಟರಲ್ಲಿ ಒಬ್ಬ ಗೌಳಿಗ ಈದ ಎಮ್ಮೆಯ ಕರು ಹೊತ್ತು ಬಂದು ಅಲ್ಲಿ ಇಳುಹಿ, ಶರಣರಿಗೆ ನಮಸ್ಕಾರ ಮಾಡಿ "ಚಂಬು ಕೊಡಿಸು, ಹರಕೆಯಿದೆ. ಕಾರಣ ಕರಕ್ಕೆ ಮೊಲೆ ಕುಡಿಸಲೊಲ್ಲದೆಂದು" ತಂಬಿಗೆ ಹೊರಸೂಸುವಂತೆ ಹಾಲು ಹಿಂಡಿಕೊಟ್ಟನು. ಗಿಣ್ಣ ಮಾಡಿಸಿ ಉಣ್ಣಿಸಿದರು ಶರಣರು. ಆ ವೈಷ್ಣವನು ಗಿಣ್ಣದ ರುಚಿ ಸವಿದು ಪ್ರಾಯಶ್ಚಿತ್ತ ಹೊಂದಿ ಶರಣರನ್ನು ಕೊಂಡಾಡಿದನು.

ಪರಮ ಆಯಾಸದಿಂದ ಒಂದು ದಿನ ಶರಣರ ಕಡೆ ಒಬ್ಬ ಜಂಗಮ ಬಂದು ಕರವೂರಿ ಶರಣ ಜಯ, ಜಯವೆಂದು ಕುಳಿತನು. ಅವನಿಗೆ ನಮಸ್ಕರಿಸಿ ಬಂದ ಪರಿಕೇಳಲು "ದಮ್ಮು ಕಳಿಯೆಂಬುದನ್ನು ಮರೆತು 'ಕೊಳಿ' ಎನ್ನಲದಕ್ಕೆ 'ಗುರುವೆ' ಹಾಗೆ ಆಗಲಿ, "ದಮ್ಮು ತನಗಿರಲೆಂದು" ಅದನ್ನು ಕೊಂಡನು. ನೆರೆದ ಜನರೆಲ್ಲ ಆಶ್ಚರ್ಯ ಹೊಂದಿದರು. ಒಂದೇ ಕ್ಷಣದಲ್ಲಿ ಕೆಮ್ಮು ಬಂದು ಶರಣರ ಕಾಯದಲ್ಲಿ ಸೇರಿತು. ಜಂಗಮನು ಸದೃಢನಾಗಿ ಮನೆಗೆ ನಡೆದನು. ಅಂದಿನಿಂದ ಶರಣರ ತನು ಕಂದಿ ಕೊರಗತೊಡಗಿತು. ದೊಡ್ಡಪ್ಪನವರು ಬಂದು ವಂದಿಸಿ "ಈ ಹಿಂದೆ ಅನೇಕ ಮಹತ್ವಗಳನ್ನು ಮೆರೆದು ಕಾಪಾಡಿದೆ, ನಿನಗೆ ಈ ದಂಡುಗ ತರವೇ ದೇವ" ಎಂದು ಪ್ರಾರ್ಥಿಸಲು ಶರಣರು "ಶಿವನ ನಿರೂಪಣೆ ತಪ್ಪಿಸಬಾರದೆಂ"ದು ಸಮಾಧಾನ ಹೇಳಿದರು. "ಶ್ರೀಗುರುವಿನ ನಿರೂಪವನ್ನು ಅಲ್ಪ ಭೋಗಕ್ಕೆಳಸಿ ಮರೆಯಬಾರದು" ಫಾಲ್ಗುಣ ಮಾಸದ ಬಹುಳ ಪಂಚಮಿ ಸೋಮವಾರ ನಮಗೆ ಮುಕ್ತಿ ಕಾಲ" ಎನ್ನಲು, ದೊಡ್ಡಪ್ಪನವರು "ನಮ್ಮನ್ನು ಪಾಲಿಸುವವರಾರು ? ಸುಜನಾನುಕೂಲ, ಸದ್ಗುಣಶೀಲ ಈ ಸ್ಥಳ ಪಾಳಾಗದಿರಲಿ" ಎಂದು ಬೇಡಿದರು. "ದೊಡ್ಡಪ್ಪ, ನಿನಗದರ ಚಿಂತೆಬೇಡ; ಗೌಪ್ಯದಲ್ಲಿ ಜನರ ಕಣ್ಮರೆಯಾಗಿದ್ದು ಯಾವಾಗಲೂ ಶಿವನ ಮಹಿಮೆಗಳನ್ನು ತೋರುವೆನು, ಅನುಮಾನ ಬಿಡು; ದಿನದಿನಕ್ಕೆ ಜನರ ಸಂದಣಿ, ವಸನ, ಕನಕ, ಮಣಿಭೂಷಣಗಳು, ಐಶ್ವರ್ಯವೃದ್ಧಿಯಾಗಿ ಈ ಮನೆ ಮಹಾಮನೆಯಾಗಿ ಬೆಳಗಲಿ" ಎಂದು ಆಶೀರ್ವದಿಸಿದರು. ನಿನ್ನ ಸುಕುಮಾರರು ಉತ್ತರಾಧಿಕಾರಿಗಳಾಗಿ ನಿನ್ನ ಮುಂದಿನ ವಂಶ ಸುಕುಮಾರರೂ ಬೆಳಗಲಿ, "ಗೌಪ್ಯಸೇರಿ ಭೂರಿ ವರ ಮಹಿಮೆಗಳನ್ನು ನಡೆಸುವೆನು. "ಕ್ಲೇಶಬಿಡು, ಸ್ಥೈರಣೆಗೊಳ್ಳು" ಎಂದು ಆಶೀರ್ವದಿಸಿ ಭರವಸೆ ನೀಡಿದರು. "ಗುರುವೆ ನಿನ್ನನ್ನು ಅಗಲಿ ಹೇಗೆ ಇರಲಿ?" ಎನ್ನಲು "ತನಗಿರುವ ಮೂಗಳ

ಜೋಳಿಡ ಋಣ ತಪ್ಪಿಸಿ ಇಲ್ಲಿಗೆ ಕರೆತಂದುದಕ್ಕೆ ಮರೆಯಲ್ಲಿದ್ದರೂ, ನಿರುತ ನಿನ್ನಯ ಮನೆಯ ಆಧ್ಯಾತ್ಮ ಪರಂಪರೆ ವರ್ಧಿಸುವಂತೆ ಸಲಹುವೆ" ನೆಂದು ಅನುಗ್ರಹಿಸಿದರು. "ನಿನಗೆ ಋಣವಾರದು? ತ್ರಿಣಯ, ನೀನೆ ತ್ರಿಭುವನ ಪಾಲಿಸುವವನು, ಸರ್ವವ್ಯಾಪ್ತ, ಕೊಡುವವನಾರು? ಕೊಳ್ಳುವವನಾರು? ನಿನ್ನ ವಿನೋದ ನನಗೆ ತಿಳಿಯದು, ದೇವರ ದೇವನೆ; ನಾನು ಕೊಟ್ಟದನು ನೆನಪಿಟ್ಟರೆ, ಚಿನ್ಮಯನೆ, ನನಗೆ ರೌರವ, ಶುನಿ, ಗೂಗಿ ಜನ್ಮ ನಿಶ್ಚಿತವೆಂ"ದು ದೊಡ್ಡಪ್ಪನವರು ಆಡಿದರು. "ನೆರೆಕೊಟ್ಟ ಸದ್ಭಕ್ತ ಮಗೆವುದದೆ ಹಿತ, ಕೊಂಡವನು ಅರೆಮರೆಯ ಲಾಗದು" ಎಂಬ ಶಾಸ್ತ್ರಾರ್ಥ ಮಾತು ನೆನಪಿರಬೇಕು ನಿನಗೆ ದೊಡ್ಡಪ್ಪ! "ಮರೆಯದಿರೆ ಹರುವಾಗುವದು ಪುಣ್ಯ, ಮರೆದವಗೆ ಸಿರಿ, ಭೋಗ, ಸಂತತಿ ವರಮುಕ್ತಿ ನಿರುತಪ್ಪವು" ಆದುದರಿಂದ ನಾನು ಗೌಪ್ಯದಿ ಪರಿಪಾಲಿಸ ಲೇಬೇಕು" "ನಿನ್ನ ವಿಯೋಗ ತಾಳುವದೇ ಕಷ್ಟ" ವೆಂದು ದೊಡ್ಡಪ್ಪನವರು ಗೋಳಾಡಿದರು. ಅಷ್ಟರಲ್ಲಿ ನೀಲಮ್ಮನವರು ಬಂದು ಎರಗಿ "ಸದಯಾಳ, ಇದುವರೆಗೆ ನಮ್ಮನ್ನು ಪಾಲಿಸುತ್ತಿದ್ದು ಈಗ ನಮ್ಮ ಮೇಲೆ ಈ ನಿರ್ದಯವೇಕೆ? ನೀವೇ ತಾಯಿ, ತಂದೆ, ಬಂಧು, ಬಳಗ" ವೆಂದು ನೆರೆ ನಂಬಿದ ನಮ್ಮನ್ನು ಸಮಾಧಿ ಹೊಂದಿ ಯಾರ ಕೈಗೆ ಕೊಡುವೆ? ಎಂದು ದುಃಖಿಸಿದಳು. "ನಂದಿನಿಯೆ, ನಿನ್ನ ವಂಶಸಂಪನರಿಗೆ ಅನುಗ್ರಹಿಸಿ ಆನಂದ ದಿಂದವರ ಕಡೆಯಿಂದ ದಾಸೋಹವನ್ನು ಧರ್ಮಪರಂಪರೆಯಾಗಿ ಎಂದಿನಂತೆ ಎಸಗಿಸುತ್ತ, ಸಂತೋಷದಲ್ಲಿರುವೆ ಜನರ ಕಣ್ಣಿಗೆ ಕಾಣದ ಹಾಗೆ! ಚಿಂತೆ ಬಿಡು" ಎಂದು ಸಂತೈಸಿದರು, ಶರಣರು ನೀಲಮ್ಮನನ್ನು.

ಶರಣರು ಐಕ್ಯವಾಗುವ ದಿನ ಸಮೀಪಿಸಿತು. ಈ ಸುದ್ದಿ ಎಲ್ಲ ಕಡೆ ಹಬ್ಬಿತು. ಶರಣರ ಕೊನೆಯ ದರ್ಶನ ಪಡೆಯುವದಕ್ಕೆಂದು ಬಹು ದೂರ, ದೂರದಿಂದ ಜನರು, ಭಕ್ತರು, ಗೌಡ, ದೇಸಾಯಿಗಳು, ನಾಡೆ ಪಾಂಡೆಯರು, ಮಹಜನ ಶೆಟ್ಟಿಗಳು, ಬೇಡುವವರು, ದಾನ ಮಾಡುವರಿಂದ ಬ್ರಹ್ಮಪುರ ತುಂಬಿತು. ಪೌರಜನ ಬಂದು ಶರಣಪ್ಪಗೆ ವಂದಿಸಿದರು. ಪೌರಜನರಿಗೆ ಶರಣೇಶನು "ಇಂದು ಗೌಪ್ಯ ಸೇರುವೆನು; ಹಿತವಚನಗಳೆ ರಡನ್ನು ಸಾರುವೆ. ೧೮ ಪುರಾಣಗಳಲ್ಲಿ ನೆರೆ ವಿಚಾರಿಸಲು, ನೆನಪಿಡಲು ಯೋಗ್ಯವಾದುವು ಎರಡೇ ಮಾತುಗಳು "ಹೇರಳವಾಗಿ ಪರರಿಗೆ ಉಪಕಾರ ಗೈವುದೇ ಪುಣ್ಯ, ಕ್ರೂರತನದಿಂದ ಪರರಿಗೆ ಓರಿಸುವದೇ ಪಾಪ, ವೈರಾಗ್ಯ, ಪರಭಕ್ತಿ, ಮೂರು ಗುಣವುಳ್ಳವನು ಜಗದಲ್ಲಿ ಶ್ರೇಷ್ಠನೆಂದೆನಿಸುವದು. ಒಳ್ಳೇ ಆಚಾರವೇ ಪ್ರಥಮ ಧರ್ಮವೆಂದು ಶೃತಿಗಳು ಸಾರುತ್ತಿವೆ; ಇವನ್ನು ಮರೆಯದೆ ನಡೆದುಕೊಳ್ಳಬೇಕು. ಅಖಿಳಮತ ತಾರತಮ್ಯಗಳಲ್ಲಿ ವೀರಶೈವ ಅಧಿಕವಾದುದು. ಲಿಂಗಾರ್ಚನೆ ಮೀರದವನು, ಸದಾಚಾರ ಸಂಪನ್ನನು; ಆರು ವರಲಿಂಗಗಳಿಗೆ, ಆರು ವರ ಪ್ರಸಾದದಿಂ ತೃಪ್ತಿ ಬೀರಬೇಕು, ಆರು ಭಾವ ಪಣಗೈಯಬೇಕು; ಅಳಿಯಾಶೆಗೆ ಕೆಡಬೇಡಿರಿ, ಇವನ್ನೆಲ್ಲ ಮರೆ ಯದೆ ನಡಿಸಿದರೆ ಜೀವನ್ಮುಕ್ತರಾಗುವಿ" ರೆಂದು ಸಂಪ್ರೀತಿಯಿಂದ ಪೌರಜನರಿಗೆ ನುಡಿದರು. "ಶ್ರೇಷ್ಠ, ನಮ್ಮನ್ನೆಲ್ಲ ಬಿಟ್ಟು ಹೋಗುವದು ಉಚಿತವಲ್ಲ; ಪ್ರೇಮವಿಟ್ಟು, ಎಲ್ಲಿದ್ದರೂ ನಮ್ಮೆಲ್ಲರ ಅಭೀಷ್ಟವನ್ನು ದಯಪಾಲಿಸು" ಎಂದು ಬೇಡಿದರು ನೆರೆದ ಜನ ದುಃಖದಿಂದ. ಸರ್ವರಿಗೂ ಚಿಂತೆ ತ್ಯಜಿಸಲು ಹೇಳಿ, ಮಡಿಯಾಗಿ ಭಸ್ಮವನ್ನು ಧರಿಸಿಕೊಂಡು, ರುದ್ರಾಕ್ಷಿಮಾಲೆ ತೊಟ್ಟುಕೊಂಡು, ಚರಣೋದಕವನ್ನು ಪಡಕೊಂಡು, ಜಂಗಮರ ಶೇಷವನ್ನು ಸ್ವೀಕರಿಸಿ, ಗದ್ದುಗೆಗೆ ನಡೆತಂದು ಶಿವ, ಸಾಂಬಶಿವ, ಮೃಡ, ಭವಾನಿಧವ, ಜಗದೊಡೆಯ ಪಾಹಿ, ಯೆಂದೆಂದು ಶಿವನನ್ನು ಸ್ತುತಿಸಿ ಗಣತಿಂಥಿಣಿಗೆ ನಮಿಸಿ, ಷಡಾಕ್ಷರಿ ಮಂತ್ರವನ್ನು ಜಪಿಸುತ್ತ ಜಂಗಮ ಪಾದವನ್ನು ಮಸ್ತಕ

ದೊಳಿಟ್ಟು ಶರಣೇಶನಿರುತಿರಲು, ಜನರೆಲ್ಲ ಉಘೆ, ಪರಾಕು ಎನ್ನುತ್ತ ಶರಣನನ್ನು ಹೊಗಳುತ್ತ, ಅಗಣಿತ ಆರುತಿಗಳನ್ನೆತ್ತಿ ಬೆಳಗಿ, ತೆಂಗುಗಳನ್ನು ಒಡೆದು, ಪುಷ್ಪಗಳನ್ನು ಸುರಿದರು. ತೆಂಗೊಡೆದ ನೀರು ಹರಿದು ಕೆರೆ ಬೆರೆಯುತ್ತಿರುವಂತೆ, ಗುರುಬಸವ, ಶಿವಬಸವ, ಹರಬಸವನಾಮ ಉಚ್ಚರಿಸುತ್ತ ಅದರೊಳಗೆ ಶರಣರ ಆತ್ಮ ಪರಂಜ್ಯೋತಿ ಬೆರೆಯಿತು. ಜನರು ಹರ, ಹರ ಪರಾಕು ಹೇಳಿದರು. ದೈವದವರು ಗಣಾರಾಧನೆ ಮಾಡಿಸಿ, ಊದಿಸುತ್ತ, ಬಾರಿಸುತ್ತ ಸಾಧು ಶರಣರ ದಿವ್ಯ ದೇಹವನ್ನು ಶಾಸ್ತ್ರೀಯವಾಗಿ ಗೌಪ್ಯದಲ್ಲಿರಿಸಿದರು. ಶಾಸ್ತ್ರೋಕ್ತವಾಗಿ ಸುಮಾಂಜಲಿಗೈದರು. ಹರ, ಹರ, ಮಹಾದೇವ, ಶರಣ, ಜಯವೆಂದು, ಜಯಘೋಷ ಮಾಡಿದರು. ಹುಮನಾಬಾದಿನ ಹೇರತ್ತಿನವರು ಇದನ್ನು ಕೇಳಿ ಇಂದೇ ದಾರಿಯಲ್ಲಿ ಶರಣರು ದರ್ಶನವಿತ್ತು "ಉಳುವಿಗೆ ಹೋಗುವೆ" ವೆಂದು ತಿಳಿಸಿ ಈ ಹೇರು ಆಶೀರ್ವಾದ ರೂಪದಲ್ಲಿ ದೊಡ್ಡಪ್ಪನವರಿಗೆ ಕೊಡಿರೆಂದು ಹೇಳಿದರೆನ್ನುವಷ್ಟರಲ್ಲಿ ಜಂಗಮನೊಬ್ಬ ಬಂದು, ಆಶ್ಚರ್ಯಹೊಂದಿ ಹಳುವದಲ್ಲಿ ಭೆಟ್ಟಿಯಾಗಿ, "ಉಳುವಿಗೆ ಹೋಗುವೆ" ನಿನಗೆ ಬೆಳ್ಳಿ ಸರಗಿ ಕೊಡುವೆನೆಂದಿದ್ದೆನಷ್ಟೇ? ಅದನ್ನು ದೊಡ್ಡಪ್ಪನವರ ಮಹಾಮನೆಯ ಗೋಡೆಯೊಳಗಿನ ಉತ್ತರ ದಿಕ್ಕಿನ ಮಾಡದಲ್ಲಿರಿಸಿರುವೆ, ದೊಡ್ಡಪ್ಪಗೌಡರಿಗೆ ಹೇಳಿ ಪಡೆಯೆಂದು ಹೇಳಿದರು" ಎಂದು ತಿಳಿಸಿದನು. ಅಲ್ಲಿ ಹೋಗಿ ನೋಡಲು ಸರಗಿಯಿತ್ತು. ದೊಡ್ಡಪ್ಪಗೌಡರು ಆ ಸರಗಿಯನ್ನು ಜಂಗಮರಿಗೆ ಕೊಟ್ಟು ಕಳಿಸಿದರು. ಹಿಂದೆ ಸಾವಳಗಿ ಪುರ ಶಿವಲಿಂಗೇಶ್ವರರು ಒಮ್ಮೆಗೆ ಎರಡು ಸ್ಥಳದಲ್ಲಿ ಐಕ್ಯವಾದುದನ್ನು ಕೇಳಿದ್ದೆವು. ಇಂದಿನದು ಸಹ ಅಂತಹದೆ ಎಂದು ಕೊಂಡಾಡಿ, ಶರಣಪ್ಪ ಸರ್ವಮಯ, ಮಹಿಮೆಗಳನ್ನು ಸದಾ ಮೆರೆಸುವಲ್ಲಿ ಸಂದೇಹವಿಲ್ಲ ಎಂದು ಭಕ್ತ ಜನರೆಲ್ಲ ಸ್ತುತಿಸಿ ಹರುಷದಿಂದಿದ್ದರು.

ಪ್ರೊ. ಎಸ್. ಎಸ್. ಬಾಣದ
ಎಂ.ಎ. ಬಿ.ಇಡಿ.
ಶರಣಬಸವೇಶ್ವರ ವಿಜ್ಞಾನ ಮಹಾವಿದ್ಯಾಲಯ
ಗುಲಬರ್ಗಾ.

ಜೋಳದ ಋಣ ತಪ್ಪಿಸಿ ಇಲ್ಲಿಗೆ ಕರೆತಂದುದಕ್ಕೆ ಮರೆಪುಲ್ಲಿದ್ದರೂ, ನಿರುತ ನಿನ್ನಯ ಮನೆಯ ಆಧ್ಯಾತ್ಮ ಪರಂಪರೆ ವರ್ಧಿಸುವಂತೆ ಸಲಹುವೆ" ನೆಂದು ಅನುಗ್ರಹಿಸಿದರು. "ನಿನಗೆ ಋಣವಾರದು? ತ್ರಿಣಯ, ನೀನೆ ತ್ರಿಭುವನ ಪಾಲಿಸುವವನು, ಸರ್ವವ್ಯಾಪ್ತ, ಕೊಡುವವನಾರು? ಕೊಳ್ಳುವವನಾರು? ನಿನ್ನ ವಿನೋದ ನನಗೆ ತಿಳಿಯದು, ದೇವರ ದೇವನೆ; ನಾನು ಕೊಟ್ಟದನು ನೆನಪಿಟ್ಟರೆ, ಚಿನ್ಮಯನೆ, ನನಗೆ ರೌರವ, ಶುನಿ, ಗೂಗಿ ಜನ್ಮ ನಿಶ್ಚಿತವೆಂ" ದು ದೊಡ್ಡಪ್ಪನವರು ಆಡಿದರು. "ನೆರೆಕೊಟ್ಟ ಸದ್ಭಕ್ತ ಮಗೆವುದದೆ ಹಿತ, ಕೊಂಡವನು ಅರೆಮರೆಯ ಲಾಗದು'' ಎಂಬ ಶಾಸ್ತ್ರಾರ್ಥ ಮಾತು ನೆನಪಿರಬೇಕು ನಿನಗೆ ದೊಡ್ಡಪ್ಪ! "ಮರೆಯದಿರೆ ಹರುವಾಗುವದು ಪುಣ್ಯ, ಮರೆದವಗೆ ಸಿರಿ, ಭೋಗ, ಸಂತತಿ ವರಮುಕ್ತಿ ನಿರುತಪ್ಪವು'' ಆದುದರಿಂದ ನಾನು ಗೌಪ್ಯದಿ ಪರಿಪಾಲಿಸ ಲೇಬೇಕು" "ನಿನ್ನ ವಿಯೋಗ ತಾಳುವದೇ ಕಷ್ಟ" ವೆಂದು ದೊಡ್ಡಪ್ಪನವರು ಗೋಳಾಡಿದರು. ಅಷ್ಟರಲ್ಲಿ ನೀಲಮ್ಮನವರು ಬಂದು ಎರಗಿ "ಸದಯಾಳ, ಇದುವರೆಗೆ ನಮ್ಮನ್ನು ಪಾಲಿಸುತ್ತಿದ್ದು ಈಗ ನಮ್ಮ ಮೇಲೆ ಈ ನಿರ್ದಯವೇಕೆ? ನೀವೇ ತಾಯಿ, ತಂದೆ, ಬಂಧು, ಬಳಗ" ವೆಂದು ನೆರೆ ನಂಬಿದ ನಮ್ಮನ್ನು ಸಮಾಧಿ ಹೊಂದಿ ಯಾರ ಕೈಗೆ ಕೊಡುವೆ? ಎಂದು ದುಃಖಿಸಿದಳು. "ನಂದಿನಿಯೆ, ನಿನ್ನ ವಂಶನಂಪನರಿಗೆ ಅನುಗ್ರಹಿಸಿ ಆನಂದ ದಿಂದವರ ಕಡೆಯಿಂದ ದಾಸೋಹವನ್ನು ಧರ್ಮಪರಂಪರೆಯಾಗಿ ಎಂದಿನಂತೆ ಎಸಗಿಸುತ್ತ, ಸಂತೋಷದಲ್ಲಿರುವೆ ಜನರ ಕಣ್ಣಿಗೆ ಕಾಣದ ಹಾಗೆ! ಚಿಂತೆ ಬಿಡು'' ಎಂದು ಸಂತೈಸಿದರು, ಶರಣರು ನೀಲಮ್ಮನನ್ನು.

ಶರಣರು ಐಕ್ಯವಾಗುವ ದಿನ ಸಮೀಪಿಸಿತು. ಈ ಸುದ್ದಿ ಎಲ್ಲ ಕಡೆ ಹಬ್ಬಿತು. ಶರಣರ ಕೊನೆಯ ದರ್ಶನ ಪಡೆಯುವದಕ್ಕೆಂದು ಬಹು ದೂರ, ದೂರದಿಂದ ಜನರು, ಭಕ್ತರು, ಗೌಡ, ದೇಸಾಯಿಗಳು, ನಾಡೆ ಪಾಂಡೆಯರು, ಮಹಜನ ಶೆಟ್ಟಿಗಳು, ಬೇಡುವವರು, ದಾನ ಮಾಡುವರಿಂದ ಬ್ರಹ್ಮಪುರ ತುಂಬಿತು. ಪೌರಜನ ಬಂದು ಶರಣಪ್ಪಗೆ ವಂದಿಸಿದರು. ಪೌರಜನರಿಗೆ ಶರಣೇಶನು "ಇಂದು ಗೌಪ್ಯ ಸೇರುವೆನು; ಹಿತವಚನಗಳೆ ರಡನ್ನು ಸಾರುವೆ. ೧೮ ಪುರಾಣಗಳಲ್ಲಿ ನೆರೆ ವಿಚಾರಿಸಲು, ನೆನಪಿಡಲು ಯೋಗ್ಯವಾದುವು ಎರಡೇ ಮಾತುಗಳು "ಹೇರಳವಾಗಿ ಪರರಿಗೆ ಉಪಕಾರ ಗೈವುದೇ ಪುಣ್ಯ, ಕ್ರೂರತನದಿಂದ ಪರರಿಗೆ ಓರಿಸುವದೇ ಪಾಪ, ವೈರಾಗ್ಯ, ವರಭಕ್ತಿ, ಮೂರು ಗುಣವುಳ್ಳವನು ಜಗದಲ್ಲಿ ಶ್ರೇಷ್ಠನೆಂದೆನಿಸುವದು. ಒಳ್ಳೇ ಆಚಾರವೇ ಪ್ರಥಮ ಧರ್ಮವೆಂದು ಶ್ರುತಿಗಳು ಸಾರುತ್ತಿವೆ; ಇವನ್ನು ಮರೆಯದೆ ನಡೆದುಕೊಳ್ಳಬೇಕು. ಅಖಿಳಮತ ತಾರತಮ್ಯಗಳಲ್ಲಿ ವೀರಶೈವ ಅಧಿಕವಾದುದು. ಲಿಂಗಾರ್ಚನೆ ಮೀರದವನು, ಸದಾಚಾರ ಸಂಪನ್ನನು; ಆರು ವರಲಿಂಗಗಳಿಗೆ, ಆರು ವರ ಪ್ರಸಾದದಿಂ ತೃಪ್ತಿ ಬೀರಬೇಕು, ಆರು ಭಾವ ಪಣಗೈಯಬೇಕು; ಅಳಿಯಾಶೆಗೆ ಕೆಡಬೇಡಿರಿ, ಇವನ್ನೆಲ್ಲ ಮರೆ ಯದೆ ನಡಿಸಿದರೆ ಜೀವನ್ಮುಕ್ತರಾಗುವಿ" ರೆಂದು ಸಂಪ್ರೀತಿಯಿಂದ ಪೌರಜನರಿಗೆ ನುಡಿದರು. "ಶ್ರೇಷ್ಠ, ನಮ್ಮನ್ನೆಲ್ಲ ಬಿಟ್ಟು ಹೋಗುವದು ಉಚಿತವಲ್ಲ; ಪ್ರೇಮವಿಟ್ಟು, ಎಲ್ಲಿದ್ದರೂ ನಮ್ಮೆಲ್ಲರ ಅಭೀಷ್ಟವನ್ನು ದಯಪಾಲಿಸು" ಎಂದು ಬೇಡಿದರು ನೆರೆದ ಜನ ದುಃಖದಿಂದ. ಸರ್ವರಿಗೂ ಚಿಂತೆ ತ್ಯಜಿಸಲು ಹೇಳಿ, ಮಡಿಯಾಗಿ ಭಸ್ಮವನ್ನು ಧರಿಸಿಕೊಂಡು, ರುದ್ರಾಕ್ಷಿಮಾಲೆ ತೊಟ್ಟುಕೊಂಡು, ಚರಣೋದಕವನ್ನು ಪಡಕೊಂಡು, ಜಂಗಮರ ಶೇಷವನ್ನು ಸ್ವೀಕರಿಸಿ, ಗದ್ದುಗೆಗೆ ನಡೆತಂದು ಶಿವ, ಸಾಂಬಶಿವ, ಮೃಡ, ಭವಾನಿಧವ, ಜಗದೊಡೆಯ ಪಾಹಿ, ಯೆಂದೆಂದು ಶಿವನನ್ನು ಸ್ತುತಿಸಿ ಗಣತಿಂಥಿಣಿಗೆ ನಮಿಸಿ, ಷಡಾಕ್ಷರಿ ಮಂತ್ರವನ್ನು ಜಪಿಸುತ್ತ ಜಂಗಮ ಪಾದವನ್ನು ಮಸ್ತಕ

ದೊಳಿಟ್ಟು ಶರಣೇಶನಿರುತಿರಲು, ಜನರೆಲ್ಲ ಉಘೆ, ಪರಾಕು ಎನ್ನುತ್ತ ಶರಣನನ್ನು ಹೊಗಳುತ್ತ, ಅಗಣಿತ ಆರುತಿಗಳನ್ನೆತ್ತಿ ಬೆಳಗಿ, ತೆಂಗುಗಳನ್ನು ಒಡೆದು, ಪುಷ್ಪಗಳನ್ನು ಸುರಿದರು. ತೆಂಗೊಡೆದ ನೀರು ಹರಿದು ಕೆರೆ ಬೆರೆಯುತ್ತಿರುವಂತೆ, ಗುರುಬಸವ, ಶಿವಬಸವ, ಹರಬಸವನಾಮ ಉಚ್ಚರಿಸುತ್ತ ಅದರೊಳಗೆ ಶರಣರ ಆತ್ಮ ಪರಂಜ್ಯೋತಿ ಬೆರೆಯಿತು. ಜನರು ಹರ, ಹರ ಪರಾಕು ಹೇಳಿದರು. ದೈವದವರು ಗಣಾರಾಧನೆ ಮಾಡಿಸಿ, ಊದಿಸುತ್ತ, ಬಾರಿಸುತ್ತ ಸಾಧು ಶರಣರ ದಿವ್ಯ ದೇಹವನ್ನು ಶಾಸ್ತ್ರೀಯವಾಗಿ ಗೌಪ್ಯದಲ್ಲಿರಿಸಿದರು. ಶಾಸ್ತ್ರೋಕ್ತವಾಗಿ ಸುಮಾಂಜಲಿಗೈದರು. ಹರ, ಹರ, ಮಹಾದೇವ, ಶರಣ, ಜಯವೆಂದು, ಜಯಘೋಷ ಮಾಡಿದರು. ಹುಮನಾಬಾದಿನ ಹೇರತ್ತಿನವರು ಇದನ್ನು ಕೇಳಿ ಇಂದೇ ದಾರಿಯಲ್ಲಿ ಶರಣರು ದರ್ಶನವಿತ್ತು "ಉಳುವಿಗೆ ಹೋಗುವೆ" ವೆಂದು ತಿಳಿಸಿ ಈ ಹೇರು ಆಶೀರ್ವಾದ ರೂಪದಲ್ಲಿ ದೊಡ್ಡಪ್ಪನವರಿಗೆ ಕೊಡಿರೆಂದು ಹೇಳಿವರೆನ್ನುವಷ್ಟರಲ್ಲಿ ಜಂಗಮನೊಬ್ಬ ಬಂದು, ಆಶ್ಚರ್ಯಹೊಂದಿ ಹಳುವದಲ್ಲಿ ಭೆಟ್ಟಿಯಾಗಿ, "ಉಳುವಿಗೆ ಹೋಗುವೆ" ನಿನಗೆ ಬೆಳ್ಳಿ ಸರಗಿ ಕೊಡುವೆನೆಂದಿದ್ದೆನಷ್ಟೇ? ಅದನ್ನು ದೊಡ್ಡಪ್ಪನವರ ಮಹಾಮನೆಯ ಗೋಡೆಯೊಳಗಿನ ಉತ್ತರ ದಿಕ್ಕಿನ ಮಾಡದಲ್ಲಿರಿಸಿರುವೆ, ದೊಡ್ಡಪ್ಪಗೌಡರಿಗೆ ಹೇಳಿ ಪಡೆಯೆಂದು ಹೇಳಿದರು" ಎಂದು ತಿಳಿಸಿದನು. ಅಲ್ಲಿ ಹೋಗಿ ನೋಡಲು ಸರಗಿಯಿತ್ತು. ದೊಡ್ಡಪ್ಪಗೌಡರು ಆ ಸರಗಿಯನ್ನು ಜಂಗಮರಿಗೆ ಕೊಟ್ಟು ಕಳಿಸಿದರು. ಹಿಂದೆ ಸಾವಳಿಗೆ ಪುರ ಶಿವಲಿಂಗೇಶ್ವರರು ಒಮ್ಮೆಗೆ ಎರಡು ಸ್ಥಳದಲ್ಲಿ ಐಕ್ಯವಾದುದನ್ನು ಕೇಳಿದ್ದೆವು. ಇಂದಿನದು ಸಹ ಅಂತಹದೆ ಎಂದು ಕೊಂಡಾಡಿ, ಶರಣಪ್ಪ ಸರ್ವಮಯ, ಮಹಿಮೆಗಳನ್ನು ಸದಾ ಮೆರೆಸುವಲ್ಲಿ ಸಂದೇಹವಿಲ್ಲ ಎಂದು ಭಕ್ತ ಜನರೆಲ್ಲ ಸ್ತುತಿಸಿ ಹರುಷದಿಂದಿದ್ದರು.

**ಪ್ರೊ. ಎಸ್. ಎಸ್. ಬಾಣದ**
ಎಂ.ಎ. ಬಿ.ಇಡಿ.
ಶರಣಬಸವೇಶ್ವರ ವಿಜ್ಞಾನ ಮಹಾವಿದ್ಯಾಲಯ
ಗುಲಬರ್ಗಾ.

ಶ್ರೀ ಶರಣಬಸವೇಶ್ವರ ಪ್ರಸನ್ನ

# ಶ್ರೀ ಶರಣಬಸವೇಶ್ವರ ಪುರಾಣವು

ಸೂಚನೆ॥ ಸಾಂಬನನುಪಮನಪ್ಪಣೆಯು ಶಿರದೊಳಾಂತು ಘನ ।
ತಾಂ ಬಂದು ಮರ್ತ್ಯದೊಳಗುದಿಸಿ ಗುರು ಲಿಂಗ ಚರ ।
ನಂಬಿ ಭಜಿಸುತ್ತೆ ಶಿವನೋಳ್ ಬೆರೆದನ್ನೆ ಶರಣಬಸವೇಶ ಭಕ್ತಿಕೋಶಾ ॥

ವಾರ್ಧಕ ಷಟ್ಪದಿ

## ಮೊದಲನೆಯ ಸಂಧಿ

೧

ಶ್ರೀಗುರುವೆ ಸಚ್ಚಿದಾನಂದಪರತರಪಾವ ।
ನಾಗರವೆ ನಾಮರೂಪ ಕ್ರಿಯಾತೀತ ದಯ ।
ಸಾಗರವೆ ಸಕಲ ಜನಮನದೇಷ್ಟದಾಯಕನೆ
ಭೋಗಿ ಭೂಷಣರೂಪನೆ ॥
ಶ್ರೀಗುರುವೆ ಶಾಶ್ವಿತಾಂಗನೆ ಭಾಸ ಮಾನ ನಿಗ ।
ಮಾಗಮಜ್ಞನೆ ಮಾಯರಹಿತಮುದ್ಗುರುಶಾಂತ ।
ಯೋಗಿಪಾಲಿಸುನಿಮ್ಮ ಅಡಿದಾವರೆಗಳಿಗಾರಡಿ
ಯಾಗಿ ಪೊಡಮಡುವೆಸು ॥

೨

ಶ್ರೀಶಜಿವರಾಮರಾಸುರವಿನುತ ಸಂಪದ ಕು ।
ಶೇಶಯಬಿಲಾಶಯ ವಿಭೂಷಭವನಾಶಮುರ ।
ಶಾಶನಾಕ್ಷಾಂಕಿ ತವದಾಂಬುಜವರೇಶ ಪಾಂಡುರ
ಗಾತ್ರ ಪಾರ್ವತೀಶಾ ॥
ಭಾಸಮಾನ ಶಾರ್ವರೀಶ ರೋಚಿಷ್ಕೇಶ ।
ಭಾಸುರಾಂಗ ವಿನಯನಕೇಶ ಸುರಪದ ಶಂಭು ।
ಸೇ ಸಲಹಿ ಮಮತೆಯಿಂ ಬಿಡಿಸೆನ್ನಕುಮತಿಯಂ
ಕೊಡಿಸೆನ್ನಗತಿ ಸುಮತಿಯು ॥

೩

ಗುರುವೆ ಪರತರ ಮೂರ್ತಿ ಗುರುವೆ ಸದ್ಗುಣ ಕೀರ್ತಿ ।
ಗುರುವೆ ಮುಕ್ತಿಸ್ಫೂರ್ತಿ ಗುರುವೆ ಶಿಷ್ಯನ ವಾರ್ತೆ ।
ಗುರುಭಕ್ತ ಜನಕರ್ತೆ ಗುರುಭಜಕ ಜನರರ್ತೆ
ಪರಿಹರಿಪ ಬಿರುದಾಂಕನು ॥
ಗುರುಮೂರ್ತಿಧ್ಯಾನ ಸದ್ಗುರುಪಾದ ಪೂಜನಂ ।
ಗುರುವಾಕ್ಯ ಮಂತ್ರ ನಿಜ ಗುರುಕೃಪೆಯೆ ಮೋಕ್ಷಕ್ಕೆ ।
ನಿರುತ ಮೂಲೆಂದಾಗಮವುಮದರಿಂದ ನಗುರೋರ
ಧಿಕಮೆಂದು ಪೊಗೊಳ್ವೆಂ ॥

೪

ಮೇದಿನಿಯೆ ಪಾದಮಾಕಾಶವೇನಿಜ ಶಿರಸ ।
ಮೀದಶದಿಶಂ ವಸನಮಾದಿವ್ಯನಚ್ಛೇತ್ರ ।
ಮಾದಕುಸುಮಾವಳಿ ಸುಧಾಕರ ದಿನೇಶದೀಪಾರತಿ ।
ಗಳಾಗಿರುತಿರೆ ॥
ವೇದಮಡುಲಿಂಗ ಬಾಹ್ಯಂ ನಾಸ್ತಿಪರವೆನ್ನು ।
ತೋದಿತದರಿಂದೆಖಿಳ ಜಗದಾದಿಲಿಂಗವೆಂ ।
ದಾದೆನಾನತ ದಿವ್ಯಗುರುಲಿಂಗ ಶಿವಲಿಂಗ
ನಿಜಲಿಂಗವೆಂದು ನಂಬೀ ॥

೫

ಜಂಗಮನೆ ಜಗದಾದಿದೇವನ್ನೈ ನಿಶ್ಶೂನ್ಯ ।
ಜಂಗಮಜಕಾರ ಜಗದುತ್ಪತ್ತಿಗೇಕಾರ ।
ಣಂ ಗಕಾರಂ ರಕ್ಷಿಸುತ್ತಿಹುದು ಮಕಾರಮದು ಲಯ
ಕಾರಣಮದಾಗಿ ॥
ಹಾಂಗೇ ಜಕಾರಜನನಂನಾಸ್ತಿವರ ಗಕಾ ।
ರಂ ಗಮನನಾಸ್ತಿ ಮರಣಂ ನಹಿಮಕಾರಮೆಂ ।
ದಂಗಜಾರಾತಿ ಪೇಳಿದರಿಂದ ಚರವರನ
ಚರಣಕಾನತನಪ್ಪೆನು ॥

೬

ಶ್ರೀ ತುಹಿನಗಿರಿತನಯೆ ಶಾಂಕರಿಯೆ ಶರ್ವಾಣಿ ।
ಭೂತನಾಥನರಾಣಿ ಭಾವೆ ಭೈರವೆಬಾಲೆ ।
ಪೂತೆಮದದಾನವಾರಾತೆ ವಿನಮಿತಸುರವ್ರಾತೆ
ಗುಹಗಣಪಮಾತೆ ॥
ಶೀತಕರಧರೆದುರಿತಭೀತೆ ಭವಭೀಮೆನಿಗ ।
ಮಾತೀತೆ ವಿಖ್ಯಾತಿ ವಿಮಲೆ ವಿಜಯಾನ್ವಿತೆ ಸ।
ದಾತೆ ಧಾರ್ಮಿಕಜನರಪ್ರೀತೆ ನೀಂ ಕಾಯದಲೆ
ಕಾಯೆನ್ನ ಕಾತ್ಯಾಯನೀ ॥

೭

ಸಾಮಜವರಾನನ ಸದಾಮರಾರ್ಚಿತಪಾದ ।
ತಾಮರಸತರಣಿ ಶತಲಕ್ಷಸನ್ನಿಭಗಾತ್ರ ।
ಶಾಮಕಂಧರಗಮನ ಬಂಧುಬಂಧುರ ವಿದ್ಯದಾಯಕನೆ
ವಿಘ್ನಹರನೆ ॥
ಸೋಮಮದಹರ ಸೂರ್ಪಕರ್ನದ್ವಿಗು ಕರ್ನಧರ ।
ಧಾಮಮಣಿ ಮಕುಟನೀನೀಮಹಾಚರಿತೆಗೆ ಸು।
ಧಾಮಯದ ವಾಕ್ಪಟುತ್ವವನಿತ್ತು ಪಾಲಿಸೈ ವರದ
ಪಾರ್ವತಿಕುಮಾರಾ ॥

೮

ಮಾರಹರಕೋಪದವತಾರನೆಂದೆನಿಸಿಕ್ರತು ।
ಮಾರಣಕೆಬಂದಸುರವಾರಮಂಜೈಸಿ ಮುರ ।
ವೈರಿಮೃಗರೂಪವಂ ವಧಿಸಿ ಸೂರನದಶನ
ಗೆಡಹಿ ಶಶಿಯಂ ಭಂಗಿಸಿ ॥
ಶಾರದೆಯ ನಾಶಿಕಂದೇಶಿಕೆಂದೆನಿಸಿ ಶಿರ ।
ಪಾರಿಸುತದಕ್ಷಗಜಶಿರವಿತ್ತ ಶೌರಿಘನ ।
ವೀರಭದ್ರನೆ ಭೀತಿ ತೋರಿಸುತ ಶಾರದೆಯ
ನಿರಿಸೆನ್ನ ನಾಲಗೆಯಲಿ ॥

೯

ಭಾಳನಯನನ ಗೋಪ್ಯಮುಖಮದೊಂದಖಿಳಜಗ ।
ದಾಲಿಗಾಶ್ಚರ್ಯಮೆನೆ ತಾಳಿ ಷಣ್ಮುಖ ಜನಿಸಿ ।
ದೇಳನೆಯ ದಿವಸದೋಳ್ತಾರಕನ ತಲೆಗಡಿದು
ಕ್ರೌಂಚ ನಗಮಂ ಕೀಳುತೆ ॥
ಪಾಲಿಸಿದೆ ಸುರವರನೀಲಗಳಗಮನ ಕರು ।
ಣಾಳು ಓಂಕಾರಕ್ಕೆ ಕೋಟಿವೆನ್ನರಡರ್ಥ ।
ಪೇಳಿದನೆ ಆಲಿಸುತೆ ಸನ್ನುತಿಯ ಪಾಲಿಸುತೆ
ಮತ್ಕೃತಿಗೆ ಮಂಗಳವನೂ ॥

೧೦

ಮೇದಿನಿಗೆ ಭಕ್ತಿಯಂಬೋಧಿಸಲ್ಕೆಂದುವರ ।
ಮಾದರಸ ಮಾದಲಾಂಬಿಯರಿಂದ ಜನಿಸಿ ಸಂ ।
ಪಾದಿಸುತ ವರವೀರಶೈವಮಂ ಪರ
ಸಮಯ ಬೇಧಿಸುತೆ ಸದ್ಭಾವದಿಂ ॥
ಮೋದವಂ ಬೀರುತಂತಗಣಿತ ಪವಾಡಮಂ ।
ಸಾಧಿಸುತ ಕಪ್ಪಡಿಯ ಸಂಗಮೇಶನೊಳೈಕ್ಯ ।
ಮಾದಗುರು ಬಸವರಾಜರ ಪಾದಮಿರಲೆನ್ನ
ಹೃದಯ ಪದ್ಮದೊಳು ನಿರುತಾ ॥

೧೧

ತಾರಕನವಧೆಗಾಗಿ ಆರು ಮೊಗವಂತಾಳ್ದು ।
ತಾರಕನಮೂಲಪ್ರಣವಂಜಗಕೆ ತಿಳುಹಲವ ।
ತಾರಕೆನಿಸುತೆ ಪಿಳ್ಳೆ ನಾಯನಾರಾಖ್ಯದಿಂ
ಮತ್ತೆ ಕಲ್ಯಾಣದೊಳಗೆ ॥
ಮಾರಹರ ಬಸವಸುಕುಮಾರಂಗಳಿಯನಾಗಿ ।
ಕ್ರೂರಜೈನರ ಗರ್ವವಾರಿಸುತೆ ಪ್ರಮಥಗಣ ।
ವಾರಕರುಹಿದ ವೀರಶೈವದ ಸದಾಚಾರ
ಚನ್ನಬಸವೇಶ ಸಲಹೊ ॥

೧೨

ಘೋರತಪಸ್ಗೈವ ಗೋರಕ್ಷನ ಕುಗರ್ವವಂ ।
ವಾರಿಸುತಲನುಮಿಷಯ್ಯಂಗೆ ನಿಜಪದದೊಳಗೆ ।
ಸೇರಿಸುತೆ ಮಾಯೆಯಂ ನಾಯಿಯಿಂಕಡೆಯೆನಿಸಿ
ನಿಷ್ಕಾಮ್ಯದಿಂ ಚರಿಸುತೆ ॥
ತೋರಿಸುತೆ ಬಸವಣ್ಣ ಮೊದಲಾದ ಮಹಿಮರಿಗ ।
ಪಾರಮಹಿಮೆಗಳಖಿಳ ಜೀವವ್ಯಾಪ್ತಿತ್ವವಂ ।
ಬೀರಿಸಿದ ಅಲ್ಲಮಪ್ರಭುರಾಯ ಕೊಡುಯೆನಗೆ
ಸಲ್ಲಲಿತ ವಿರತಿ ಸುಖವಂ ॥

೧೩

ಸೊನ್ನಲಿಗೆ ಸುಗ್ಗಲಿಗೆ ಮಗನಾಗಿ ಸಿರಿಗಿರಿಯ |
ಚನ್ನಮಲ್ಲನತಂದು ತನ್ನ ಪುರದೊಳಗಿಟ್ಟು |
ಪುಣ್ಯತೀರ್ಥಂಗಳಷ್ಟಾಸಷ್ಟಿ ನಿರ್ಮಿಸುತಲಾದಿ
ಲಿಂಗವನು ಬರಿಸಿ ||
ಕಣ್ಣುಮೂರವನಪುರಕ್ಹೋಗಿಬರುತಲು ನಿತ್ಯ |
ಚನ್ನಬಸವಣ್ಣನಿಂ ಲಿಂಗವನು ಪಡೆದಾಗ್ರ |
ಗಣ್ಯಗುರುಸಿದ್ಧರಾಮಯ್ಯನುದ್ಧರಿಸೆನ್ನ
ಬುದ್ಧಿಗತಿಸಿದ್ಧಿಯಿತ್ತು ||

೧೪

ಮರುಳನೋಲೇಳ್ನೂರು ಬರಿಸವರಿದೇಳ್ನೂರು |
ಬರಿಸಚರಿಸುತೆ ಮಾಸನೂರ ಕೆರೆಯೊಳಗಿರ್ಪ |
ಸುರಗಿಗಳ ಪಿಡಿದರಸಗೊಲಿದು ಕನ್ಯಾಜನದ
ಸೆರೆ ಬಿಡಿಸಗಸ್ತ್ಯ ಮುನಿಗೆ ||
ಗುರುವಾಗಿ ವೀರಶೈವಾಚಾರವಂತಿಳುಹಿ |
ವರವಿಭೀಷಣನಿಂದ ಲಿಂಗಗಳ ಸ್ಥಾಪಿಸುವ |
ಭರದಿಂದಲಾಚಾರ್ಯನಾದ ಗುರುರೇವಣಸಿದ್ಧೇಶ |
ಸಲಹು ಸತತಂ ||

೧೫

ತುರುಕಾರಣ್ಯ ರಾಜ್ಯದೊಳು ಮಳೆಬರಿಸಿ ಬರನಳಿಸಿ |
ಸುರಸ ಶಿವಗಂಗೆ ಬೆಟ್ಟದೊಳಂದು ತಪನಿಂದು |
ವರ ತಪೋಬಲದಿಂದ ಬಿಡಿಸಿ ಪೊನ್ನಾಂಬಿಕೆಯ
ಉಗ್ರವಂ ಸಸೌಮ್ಯದಿರಿಸಿ ||
ಧರಣಿಯೊಳು ವೀರಶೈವಾಚಾರ ಸ್ಥಾಪಿಸಿದ |
ಗುರುವೆ ಭಕ್ತರ ಕಲ್ಪತರುವೆ ನೀನಖಿಳರಂ |
ಪೊರೆವೆ ಮತ್ತುಂಲವರಂ ವರವೆ ವರಗುರುವೆ
ಮರುಳಾರ್ಯ ಹೃತ್ಕುಂಜಸೂರ್ಯ ||

೧೬

ಚಂಡಕರನಯುನನಪ್ಪಣೆಯಿಂದ ಬಂದು ಭೂ |
ಮಂಡಲದನಂತ ಸುರನರರ ಪೂರ್ವಂನಳಿದು |
ಖಂಡೇಂದುಧರ ಲಿಂಗವಂ ಧರಿಸಿ ಭಕ್ತರಂಮೆರಸಿ
ಭವಿತತ್ವ ಮರಸಿ ||
ಪುಂಡರೀಕಾಕ್ಷಮುಖ ಸುರರಿಂದನುತಿಗೊಂಬ |
ಪಂಡಿತಾರಾಧ್ಯ ವಿಶ್ವಾರಾಧ್ಯ ಸತ್ಯಗುಣ |
ಮಂಡಿತರು ಏಕೋರಾಮರಾಧ್ಯರಡಿಗಳಂ
ಕಂಡು ಕೃತಕೃತ್ಯನಾದೆನು ||

೧೭

ಸಾವಳಿಗೆ ಪುರವಾಸ ಸಾವಗಾನವಿತೋಷ |
ಭಾವಿತಜನೇಪ್ಸಿತಂ ನೀವನಘವನದಾವ |
ಭೂವಿನುತ ಘನಚರಿತ ಭೂಗಗನ ದಿಗ್ಭರಿತ
ಭಾವಜಮದಾಂಗಭಂಗ ||
ದೇವಮನು ಮುನಿವ್ರಾತ ಸೇವಿತಂ ಸಲೆಪೂತ |
ಮೂವತಂಸಂ ಭಸಿತ ಮಾಮವಸದಾಹಸಿತ |
ಪಾವನಂ ಶಿವಲಿಂಗ ಧವಳಾಂಗ ಸಮನಾಂಗ
ಚರಪುಂಗ ಶರಣಸಂಗಾ ||

೧೮

ಧರೆಯೊಳಗೆ ಮೆರೆವ ಕಡಗಂಚಿಪುಟ ಭೇದನದ |
ಹಿರೆಮಠದ ಶಾಂತೇಶದೇವಕರ ಜಾತರೆಂ |
ದಿರುವ ತಡಕಲ್ಲ ಪುರವರ ಮಠದ ಗುರು
ರೇವಣಾರ್ಯನಂ ಭಜಿಕರಿಷ್ಟಾ ||
ವರಪಾತನಂ ಭಕ್ತಮಾನಸ ವಿಜೇತನಂ |
ಸುರಸೇವ್ಯನಂ ಸೂರಿ ಜನದೇವನಡಿಗಳಂ |
ಯಿರಲೆನ್ನ ಶಿರದೊಳಗೆ ಒರೆನೆಂದು ಭವದೊಳಗೆ
ನಿರುತಮಿದು ಗುರುವೆ ದೈವಂ ||

೧೯

ಧರೆಯಪ್ರಾಂತದಿ ಮೆರೆವ ವರಬಸವ ತೀರ್ಥಕ್ಕೆ |
ಮರುತ ದೆಶೆಯೊಳಗಿರುವ ಗಡವಂತಿ ಪುರವರದ |
ಹಿರೆಮಠದ ಪಟ್ಟಚರ ವರದೇವ ಮಜ್ಜೀವ
ಭಕ್ತಾಘಶರಣ್ಯ ದಾವಾ ||
ಸ್ಥಿರಚಿತ್ತ ಶಿವಲಿಂಗ ಪರಮ ಪಾವನ ತುಂಗ |
ವರ ಬಸವಣಾರ್ಯರಂ ವಿಜಿತ ಕಲಿಶೌರ್ಯರಂ |
ಗುರುದೇವ ಪರನಾಸ್ತಿ ಎಂದೆಂದು ಭಜಸಿಂದು
ಚರಣಕಾನತನಪ್ಪೆನು ||

೨೦

ಭೀಮನಂ ಕುಕವಿಕುಲ ಭೀಮನಂ ಸುಕವಿಕಲ |
ಸೋಮನಂ ಪಾಲ್ಕುರಿಕೆ ಸೋಮನಂ ಬುಧಕಮಲ |
ಭಾಮನಂ ಹರಿಹರ ಸುನಾಮನಂ ಬಾಣನಂ
ಸರಸಭಾಷಿತ ಜಾಣನಂ ||
ಧಾಮ ಕೆರೆಪದ್ಮಪುರಹರ ಭಕ್ತಿಸದ್ಮ ನಿ |
ಸ್ಸೀಮ ನಿಜಗುಣಿಯ ಶಿವಭಕ್ತಿ ಸದನದ ತೆನೆಯ |
ನಾಮನುಧ್ಭಟದೇವ ರಾಘವನ ಬುಧವಿನುತ |
ಲಾಘವನನುತಿಪೆ ನಾನು ||

೨೧

ಗೂಗಿಗಳಸಂಖ್ಯ ಬೈದೇನು ಗೈವವು ಗಗನ |
ಭಾಗದೊಳು ಬರ್ಪರವಿಯಂ ಪಿಕನ ಸುಸ್ವರಕೆ |
ಕಾಗಿಗಳು ಸುಯಿದೇನು ಮಾಳ್ಪವೈ ರೋಗಿ
ಯಮೃತಂ ಕುರಡ ಕನ್ನಡಿಯನೂ ||
ಮೂಗಿಲ್ಲದವ ಗಂಧವನ್ನಿಂದಿಸಲ್ಕೊರತೆ |
ಯಾಗುವದೆ ಒಂದಕ್ಷರಂ ಕುಕ್ಷಿತಾಗದವ |
ನಾಗದೆಮಗೀ ಕೃತಿಯದೆಂದಡೇ ನಾಗುವದು
ಒಲುಮೆ ಸಾಕ್ಕೆ ಸುಜನರ ||

೨೨

ಕೂಸು ನುಡಿವಂದು ತೊದಲಾಡಿದರೆ ಕೇಳಿಸಂ |
ತೋಷಿಸುವ ಜನಕ ಜನನಿಯರಂತೆ ತಾವೆನ್ನ |
ದೋಷವೆತ್ತಾಡದಲೆ ನೋಡುವರು ಹಾಡುವರು
ಗಾಢದಿಂ ರಸಿಕ ಜನರು ||
ದೋಷವಿರದಿರ್ದೊಡಂ ಕಲ್ಪಿಸುತೆ ಖಳನು ದು |
ರ್ಭಾಷೆಗಳುಹಿದರೆ ಕುಂದೇನು ಸುಕವೀಂದ್ರಂಗೆ |
ಈಶ ಶರಣನ ಕೃತಿಯು ಶಾಸನಂ ಜಗದೊಳಗೆ
ದೋಷವೆಂಬರೆ ಭಕ್ತರು ||

೨೩

ಛಂದಮರಿಯದ ಕಾವ್ಯಮಿಂದೆಮ್ಮಗಶ್ರಾವ್ಯ |
ಮೆಂದಸೂಯದಿ ನುಡಿವ ಕುಂದೊಂದು ತಂದಿಡುವ |
ಪಂದಿಯೆಂದದ ನೀಚಮನುಜರಂ ಮರನೀಚ
ಲೆಂದರೇಂ ಸಂದೇಹವೈ ||
ಕುಂದು ಪೇರ್ಚುಗಳೆಲ್ಲ ತಂದೆ ಶರಣನೆ ಬಲ್ಲ |
ನೊಂದೆನಗೆ ವಶವಿಲ್ಲ ಮುಂದಕರಿದವನಲ್ಲ |
ಮಂದಮತಿ ನಿಂದಿಸಲ್ ಬಲ್ಲನಂತಿರೆ
ಕೃತಿಯೊಂದು ರಚಿಸಲ್ಬಲ್ಲನೆ |

೨೪

ಕೋಡಗವು ಪೂಮಾಲೆ ಪರಿವದಂತಿರಲೇನು |
ಮಾಡಬಲ್ಲದೆ ಹೆಗ್ಗಣಂ ಬಲಿದು ಕಟ್ಟಿಸಿದ |
ಗೋಡೆಕೆಡಹಲ್ಬಲ್ಲದಿಲಿಬಟ್ಟಿ ಕೊಡಲಿ ಮರ
ಕೆಡಿಸಲೊಂದೇ ಬಲ್ಲವು ||
ಬೇಡ ಬಲ್ಲೊಲ್ಲೋಭಿ ನಾಡೆ ಕೊಡಬಲ್ಲನೇ |
ನಾಡ ಬಲ್ಲೋಲ್ಮೂಢ ಮಾಡಬಲ್ಲನೆ ಕೃತಿಯ |
ಖೋಡಿ ಖಲರಂ ಬೈದು ಸುಯ್ದೇನು ಮಾಡುವದು
ಕಾಡಿಗಿಡು ಕಾಡ ಚರರಾ ||

೨೫

ಸಲ್ಲಲಿತ ಶೋಭಿವೆತ್ತೆಸೆವ ಕರ್ನಾಟ ನಾ |
ಡೆಲ್ಲ ದೇಶದೊಳು ಮಿಗಿಲೆಂದೆನಿಸಿ ಮೆರೆವ ಶ್ರೀ |
ಕಲ್ಯಾಣ ಕಲಬುರಗಿ ಮಧ್ಯ ಪ್ರಾಂತದೊಳಿರುವ
ವರಪುರೆಂಬುವ ನಾಮವ ||
ನ್ನುಳ್ಳ ಮಹಾಗಾಂವಿ ಪುರದಲ್ಲಿರುವ ಸದ್ವಂಶ |
ದಲ್ಲಿ ಪುಟ್ಟದನು ಗುರುಲಿಂಗೋಪ ನಾಮ ತಡ |
ಕಲ್ಲ ಪಾರಂಪರಿಯ ವಂಶ ಮೆಂತೆನಲದನು
ಬಣ್ಣಿಸುವೆನೀಪರಿಯಲಿ ||

೨೬

ದಾರುಕನ ಮತ್ತೆ ವೃಷಭನ ಗೋತ್ರ ಕಾಲಾರಿ |
ವೀರಶೈವರು ಶಿವ ರಹಸ್ಯ ವೃಷ್ಟಿಸೂತ್ರವ |
ಕಾರ ಬೀಜಕ್ಷರ ಹರಿತ್ಕಂಥೆ ಬೃಹತ್ಕಂಥೆ
ಯತಿವರ್ಣ ವತ್ಯಾಶ್ರಮ ||
ಆರು ಸಾವಿರ ಚರವರೌದುಂಬರದ ದಂಡ |
ಚಾರುಕುಂಡಲ ಸುವರ್ಣದ ಕಲಶ ದಿಕ್ಪೂರ್ವ |
ಯೊರೈದರೊಂದು ಜಡೆ ಶಾಖ ನಾಲ್ಕನೆ ವೇದಹಂಸ
ಜಪ ಗುರುರಾಯನಾ ||

೨೭

ಚಾರು ಸೂತ್ರಗಳು ತಮಗಿರುತಿರುವ ಸಲೆ ಶಿವಾ |
ಚಾರ ಸಂಪನ್ನ ಶಿವಲಿಂಗಪ್ಪನಾತ್ಮಜನು |
ದಾರಮತಿ ಸಿದ್ಧಪ್ಪನಾತ್ಮವಧು ವೀರಮ್ಮ
ಸಾಧ್ವಿಯಳಗರ್ಭವೆಂಬಾ ||
ಕ್ಷೀರಾಂಬು ನಿಧಿಗೆ ಚಂದಿರನಂತೊಗೆದ ಗಂ |
ಭೀರ ಮತಿ ಗುರುಲಿಂಗ ಗುರುಲಿಂಗ ಸೇವಕ ಗ |
ಪಾರ ಕಲೆಗಳು ಕಲೆಯದಲೆ ಬಂದು ಕೈಗೂಡಿದವು
ಶಿವನ ಕರುಣದಿಂದಾ ||

೨೮

ಚಾರುತರ ವರ್ಣದಿಂ ಸತ್ಕರ್ಮ ಪೂರ್ಣದಿಂ |
ಮೂರು ಲಿಂಗಗಳಿಂ ಕ್ರೀಯಾಪದಗಳಿಂ |
ದಾರು ಸಂಪದದಿಂದ ಭೂರಿ ನವರಸದಿಂದ
ಯತಿಪದ ವಿಭಕ್ತಿಯಿಂದಾ ||
ರಾರಾಜಿಸುವದಿಂತು ಗಣ ಮಾತ್ರಿಯೊಳಗಾಂತು |
ವೀರಶೈವನ ಸದಾಚಾರ ಸಂಪನ್ನಿತಿಯು |
ತಾರತಮ್ಯಗಳುಳ್ಳ ಮತ್ಕೃತಿಗೆ ಶಿವಲಿಂಗ
ಧಾರಿಗಳು ಪಾಲಿಪರಲೈ ||

೨೯

ಯೋಗಿಗಳಿಗೀಡು ಸಂಭೋಗಿಗಳ ನಾಡು ಸಲೆ |
ಚಾಗಿಗಳ ಬೀಡು ತವೆರಾಗಿಗಳ ಜೋಡು ವ್ರತ |
ತ್ಯಾಗಿಗಳ ಕೇಡು ಮೇಣ್ ಪಾಗಿಗಳ
ತೋಡು ಭವರೋಗಿಗಳ ಪಾಡು ಮತ್ತೆ |
ಪೂಗಣೆ ವಿಲಾಸ ವರವಾಗಿ ಗತಿ ಭೂಷಗುಣ |
ಪೂಗಕೆ ನಿವಾಸ ಸುಕೈತಾಗಮದ ತೋಷಕಿರು |
ವಾಗಿ ಪರಮತವಾದ ಗೂಗಿಗಳ ನಾಶ ಮೊದಲಾಗಿ
ರುವದೀ ಕೃತಿಯೊಳ್ ||

೩೦

ಸೂರಿಗಳ ತೋಷ ರಣಶೂರ ವಿಲಾಸ ಸಲೆ |
ಧಾರುಣೀಶರ ನೀತಿ ವೀರಶೈವರ ಪ್ರೀತಿ |
ಚಾರು ಷಟಸ್ಥಲವು ಸಂಸಾರಿಗೊಲವಾಗಮು
ವಿಚಾರಿಗಳ ಮನನಿಲಯವು ||
ವೈರಿಗಳ ಜಯವು ಸೊಂಬೇರಿಗಳ ಭಯವು |
ಮೂರಾರು ಲಕ್ಷಣದಿಂದ ಸಾರಿದ ಪ್ರಬಂಧ ಮಿದು |
ಆರಿಗಾದರು ತನ್ನ ಸೇರಿಸದೆ ಬಿಡದೊಲ್ದ ವಾರಿಜಾಕ್ಷಿಯ
ನೋಟದೋಲ್ ||

೩೧

ಈ ಶರಣನ ಕೃತಿಯು ಶಾಸನಿಳೆಯೊಳ್ನಟ್ಟ |
ಪಾಷಾಣಮಲ್ಲ ತಾರೇಶನೋಲೊಪ್ಪೆ ನಿಜ |
ದೋಷಕಾರಕಮಲ್ಲವಾ ಶಾರದೆಯೊಲೆಸಿಯೆ
ನಾಸಿಕದ ಕೊರತಿಲ್ಲವು ||
ಭಾಸಾಂತ ತೇಜವತಿ ಬೇಸಿಗೆಯ ಬಿಸಿಲಲ್ಲ |
ಪೂಶರನ ಪೆಂಪುತನುನಾಶಕತೆಯಿಲ್ಲಾತ್ಮ |
ಕೂಸು ನುಡಿವಮೃತ ಸಮ ಭಾಷೆಯಂತೆಲ್ಲ
ರಂ ತೋಷದೊಡಗೂಡಿಸುವದು ||

೩೨

ಶಿವನನುತಿಯಲ್ಲ ಶಾಂಭವಿಯ ತುತಿಯಲ್ಲ ಮಾ |
ಧವನ ಶರಣರ ಪುಣ್ಯ ಕಥೆಯಲ್ಲ ಮತಿಯಿಲ್ಲ |
ದವಿವೇಕಿಗಳು ಪಾಳಗವಿಗೆ ಸಮವೆತ್ತಿರ್ದ ಪೊಟ್ಟೆ
ತುಂಬುವ ನೆವನದಿ ||
ಭವಿಗಳಂದದಲಿ ದುರ್ಭವಿ ದೇವರುಗಳ ಮಾ |
ನವರ ಚಾರಿತ್ರಿಗಳ ಜೊತೆಗೊಳಿಪ ನರಕಾನು |
ಭವಿಭಕ್ತ ನಪ್ಪನೇನುಬ್ಬಿ ಕಬ್ಬಂ ಪೇಳೆ
ಕಬ್ಬಿಗನ ಕಬ್ಬಿಗನಲೈ ||

೩೩

ಹಿಂದೆ ಕವಿಗಳು ಪೇಳಿದೊಂದೆರಡು ಶರಣ ಪ್ರ |
ಬಂಧಮಿರಲಾಗಿ ಬೇರೊಂದ್ಯಾಕೆ ರಚಿಸಿದನೊ |
ಎಂದೆನ್ನ ಬೇಡಿ ಕರುಣದಿ ನೋಡಿ ಕಾರಣವ
ತಿಳಿದಿನ್ನು ಕೃಪೆಯ ಮಾಡಿ ||
ಒಂದರೊಳು ಶರಣಬಸವನ ಮಹಾತ್ಮೆ ಸಂಪೂರ್ಣ |
ಬಂದಿಲ್ಲ ಮುಂದಾದರೆನ್ನಿಂದ ಕೊನೆಗಾಂಬ |
ದೆಂದೆಂಬಗರ್ವಲ್ಲ ಕಲಬುರಗಿ ಭಕ್ತಚರ ವೃಂದ
ಹೇಳಿದ ಮಹಿಮೆಯಂ ||

೩೪

ಕೇಳಿಯುವಗಳನೆಲ್ಲ ಸೇರಿಸುತ ಗೈದೆನೀ |
ಶೀಲಸಂಪನ್ನ ಶರಣನ ಚರಿತೆಯೆನಿತೆಂದು |
ಹೇಳುವಡದೆನ್ನಳವೆ ತಿಳಿದಷ್ಟು ಪೇಳಿದೆನು
ಉಳಿದವಕೆ ಹೊಣೆ ಶರಣನು ||
ಪೇಳಲಾನೆನಿತರವನ್ನೆ ಶರಣ ಚಾರಿತ್ರ |
ಪೇಳಿಸಿದ ತಾನೆನ್ನ ಹೃದಯ ವಾಸದೊಳಿರ್ದು |
ಕೀಲವಿಡಿದೊತ್ತಿದರೆ ನುಡಿವ ಯಂತ್ರದೋಲೆನ್ನ
ನಾಲಗೆಯ ಕಾರಣದಲೀ ||

೩೫

ಶ್ರೀ ಶರಣಬಸವ ಚರಿತೆಗೆ ಮೊದಲದೆಂತೆನಲು |
ಪೂಸರಲ ಮತ್ತೆ ಕಮಲಾಸನರ್ವೊ ಮೃಕ್ತ |
ಳಾಸುರನ್ನಗಳೆಲ್ಲ ನಾಂ ಪೆತ್ತೆ ಮುದದಿತ್ತೆ ನಾ
ಸುರಪಮುಖ್ಯಸುರರಿಗೆ ||
ಕೂಸನೊಂದಖಿಳ ಜಗದೀಶನ ಶಿರೋಭಾಗ |
ಭೂಷಣವು ಗೈದು ಮುರಶಾಸನಗೆ ಮಗಳಿತ್ತೆ |
ನೇಸು ಸಿರಿಪಡೆದ ಘನ ತೋಷದಿಂದಾ ಶರಧಿ
ಘೋಷಿಸುತ್ತಾ ಸುರದೊಳೂ ||

೩೬

ಸುರಪ ಸಭೆಯಂತನುಮಿಷಾನಿತ್ವಂ ರಣದಂತೆ |
ಶರಮಯಂ ಪುಂಡರೀಕಾನ್ವಿತಂ ವನದಂತೆ |
ಸುರಪದ ಸಮಾನ ಹಿಮಕರ ಶೋಭಿತಂ ಮಾರಹರನಂತೆ
ಭುವನಕುಕ್ಷಿ ||
ಗಿರಿಧರಂ ಹರಿಯಂತೆ ಹರಿವಾಸ ವೈಕುಂಠ |
ಪುರಿಯಂತೆ ಕರಿಯಂತೆ ಹರಿಯಂತೆ ವರಗಜಾ |
ಸುರ ವದನದಂತೆ ಪುಷ್ಕರಮಯಂ ಪುರಮಯಂ
ತಾನೆನಿಸಿ ಕಡಲೆಸೆಮದು ||

೩೭

ಮುನಿಸತಿಗೆ ಸಲಹಿದೆನು ಮುನಿದೆನ್ನ ಕುಡಿದನವ |
ಘನ ಘನಂ ಸಿರಿಗೊಂಡು ಮರಳೆನ್ನ ಕಡೆದನವ |
ದನುಜಾರಿಗೊಂದು ಮಗಳಿತ್ತರದು ಗೊಂಡೆನ್ನ ಕಟ್ಟಿ
ಕಾಡಿದನು ಕಡೆಗೆ ||
ಘನಕೆ ನೀರ್ಗೊಟ್ಟಡದು ತಿರುಗಿತ್ತು ತಣಿಸಿದುದು |
ಖಣಿಗಳ್ದರಿಯಖಣಿ ಘನಶಿವನ ಖುಣವಧಿಕ |
ತನಗೆ ವಿಷಗೊಟ್ಟಡಂ ಬಗಲೊಳಿತ್ತಿದವನೆಂದು
ಪೊಗಳ್ವುದಾವನಧಿಯು ||

೩೮

ಢಡ ಢಡನೆ ಪಾಯ್ವ ಪೇರ್ದೆರೆಗಳಿಂ ಕರಿಗಳಿಂ |
ದಡಿಗಡಿಗೆ ಸುಳಿವಖಿಳ ಮೀನದಿಂ ಫೇನದಿಂ |
ಮಡು ಮಡಿವಿನೋಳ್ಚರ್ಪ ನಕ್ರದಿಂ ಚಕ್ರದಿಂ
ಚಕ್ರವಾಕಂಗಳಿಂದಾ ||
ಇಡಿಕಿರಿದ ಪವಳಲತೆ ಕುಡಿಗಳಿಂ ತಡಿಗಳಿಂ |
ಬಿಡ ಬಿಡದೆ ಪರಿವ ಘನ ಗೋತ್ರಗಳ ಛೈತ್ರಗಳ |
ಒಡಲಿಡಿದ ವಡಬಾಗ್ನಿನೊಳಗೊಂಡು ಖತಿ
ಗೊಂಡು ಬಡವಾಗಿ ಕಡಲಿರ್ದುದು ||

೩೯

ಆ ಮಹಾಕಡಲ ಮಧ್ಯದೊಳಪ್ಪುತಿರುತಿಹುದು |
ಚಾಮೀಕರಾದ್ರಿ ಘನರಾಮಣೀಯಕವಾಗಿ |
ಹೇಮಗರ್ಭನು ಶಿವನ ಪ್ರೇಮ ಪಡೆಯಲು ವಿಶ್ವ
ಕರ್ಮನಿಂ ಕಾರಂಜಿಯಂ ||
ತಾ ಮಾಡಿಸಿರಲು ಮೇಲಖಿಳ ತಾರಕಿಗಳೆ |
ಲ್ಲ ಮನೋಹರವಾಗೆ ಪುಟಿವ ಕಂಕಣದಂತೇ |
ತಾಮರಸ ಜಾಂಡಕ್ಕೆ ಕೌತುಕವನಿತ್ತು ಸಲೆ
ಮೆರದಿತ್ತು ಗಿರಿವರಮೆನೆ ||

೪೦

ನೀಲಗಳ ಬಿರುದಿಗೆಂದೆತ್ತಿ ಪಿಡಿಸಿದ ನಂದಿ |
ಕೋಲವೋ ಸೋಮವ್ವೆಯಕ್ಕ ಬಯಸಿದ ಸೊಡರ |
ಗೋಲವೋ ಭೂ ಗಗನ ಕೀಲವೋ ಶಿವನ ಮುಂದೆಸೆ
ಯೊಳತಿ ಶೋಭೆಯಿಂ ||
ಮೇಲಕೆತ್ತಿದ ಚಂದ್ರನ ಜ್ಯೋತಿ ಮದ್ದಿನ ದಿವ್ಯ |
ಗೋಲವೋ ಸುರ ಸತಿಯರಲಿ ಸುಖದ ಮೂಲವೋ |
ಶೈಲವೋ ಖಚರ ಖಗದಾಲವೋ
ತಾನೆಂಬವೋಲೆಸೆದುದಾ ಗಿರಿವರಂ ||

೪೧

ಆ ಗಿರಿಯ ಕಂಠದೊಳು ಭೋಗಿಸಲ್ನೆರದ ಮರ |
ಸೋಗೆನಯನೆಯರ ಕಣ್ಗಡೆ ಮಿಂಚೊ ನೈದಲೆಯು |
ಪೂಗೆಳೆಯನಂ ಕರಗಿದೆರಕವೋ ತಾರೆಗಳ
ಮೇಳವೋ ಗೋವಿಂದನಾ ||
ಆಗಾರವೇ ಮೇರೆದಪ್ಪಿತಾ ಗಗನಕ್ಕೆ |
ಪೋಗಿ ಮುಟ್ಟಿತು ಶಿವನ ಮಂದಹಾಸವೆ ಬಲಿದು |
ಹೀಗಾಯಿತೋಯೆಂಬ ಯೋಚನೆಗೆಗೋಚರೆನೆ
ರೌಪ್ಯಾದ್ರಿ ಸಲೆವಪ್ಪಿತು ||

೪೨

ಆ ರಜತಗಿರಿ ಸುತ್ತ ಮುನಿಗಳಾಶ್ರಮ ವೊತ್ತ |
ಚಾರಣರ ಚಾವಡಿಯು ಬಳಸಿರ್ದುದೆಲ್ಲ ಕಡೆ |
ಚಾರು ಸುರಗಂಧರ್ವರಾಗಾರ ರಂಭಾದಿಸತಿ
ಭೋಗರರಮನೆಗಳು ||
ಪಾರಿಜಾತಾದಿಸುರ ಭೋಜಗಳರಾಜಿ ಮಂ |
ದಾರ ಮಾಲೂರ ಮಾಧವಿ ಮೊಲ್ಲಿಲತೆಯು ಕರ |
ವೀರ ಮುಖ ತರುಗಳಿಂ ಸುರಧೇನು ಕರುಗಳಿಂ
ರಾರಾಜಿಸಿತು ಸಿತನಗಂ ||

೪೩

ಇಂತೊಪ್ಪುತಿಪ್ಪ ಗಿರಿಪ್ರಾಂತದುಪರಿ ಭಾಗ |
ಮಂತಳ ಕಂತುಹರನ ರಮನೆಯ ಬಣ್ಣಿ ಪೊಡ |
ನಂತ ಪತಿಗಾಗದೆನ್ನಂತ ಪಾಮರ ರಸನೆಗೆಂತು
ಮುಗಿವದು ತಿಳಿವಡೆ ||
ಎಂತಾದೊಡೇನೆನ್ನ ಅಲ್ಪಮತಿಗೆಂತು ತಿಳಿ |
ದಂತೆ ಬಣ್ಣಿಪೆ ಸದಾ ಶಿವನೆನ್ನಯೆದೆಯೊಳಗೆ |
ಕುಂತು ನುಡಿಸಿದ ತೆರದಿ ಯನಗೇಂ ಸ್ವತಂತ್ರವೇ
ಯಿಲ್ಲೆಂದು ಬಲ್ಲುದುದರಿಂ ||

೪೪

ಶ್ರೀ ಮದಗಜಾ ನಾಥಪುರವೇಷ್ಟಿಸಿದ ಕೋಟೆ |
ಸೋಮ ರವಿಕಾಂತದ ಸುಶಿಲೆಗಳಿಂ ಸಮೆದ ಚಿಂ |
ತಾಮಣಿಯ ರನ್ನದೆನೆಗಳು ನಾಲ್ಕು ವೇದಗಳೆ
ನಾಲ್ಕುದ್ವಾರಮದಾಗಿರಲ್ ||
ಆ ಮಹಾ ಕೊತ್ತಳದ ಸುತ್ತದಗಳ ಸುರ |
ಸ್ತೋಮ ಸೇವಿತ ಸಿದ್ಧರಸ ದಿಪ್ಪೆ ತತ್ಪುರದ |
ಸೋಮಾದಿ ಬೀದಿ ಚತುರ್ವಿಧ ಪದಂ ಧರ್ಮಾರ್ಥ
ಕಾಮ ಮೋಕ್ಷಗಳೆಂಬವು ||

೪೫

ಇಷ್ಟೊಪ್ಪುತಿಹ ಪುರದ ಅಷ್ಟದಿಕ್ಕನ ಕಾವ ।
ಲಷ್ಟಭೈರವರು ಮರುದೇಷ್ಟಿಸಮಶೌರ್ಯನತಿ ।
ರಿಷ್ಟಪಾಲಿಪರು ತಂತಮ್ಮವಾಹನಶಕ್ತಿ
ಪರಿವಾರದೊಡೆಕಾಯ್ವರೂ ॥
ಶ್ರೇಷ್ಠಮುನಿಪ್ರಮಥಗಣರಷ್ಟು ಭುವನಗಳುಚಾ ।
ಷಷ್ಟಿಯೋಗಿಸಿ ನಿರ್ಮಲಷ್ಟಸಿದ್ಧಿಯರ ಗೃಹ ।
ವೇಷ್ಟಿಸಿರೆ ಭವನಭವನದ ಸುತ್ತುಮುತ್ತ
ಮತ್ಯುತ್ಕೃಷ್ಟಶೋಭೆವೆತ್ತು ॥

೪೬

ಆ ಸದನಗಳ ನಡುವೆ ಭಾಸಯುತ ನಾಗಲ್ಸ ।
ದಾಶಿವನಸದನಪ್ರಕಾಶಪರುಷದ ಗೋಡೆ ।
ಯಾಸುರನ್ನದ ಕುಂಬಿಯಾಸಮಂತದೊಳೊಪ್ಪಲಾ
ಸರ ಕುಪಚ್ಚೆ ಪವಳಂ ॥
ಭಾಸುರದ ಗೋಮೇಧಿಕಂ ಪುಷ್ಯರಾಗದಿಂ ।
ದೇ ಸಮೆದಕಂಬ ತೊಲೆ ಜಂತೆ ಬೋದುಗೆಗಳು ವಿ ।
ಲಾಸದಿಂದೊಪ್ಪಿರಲುಮೇಶನರಮನೆ ಸೊಬಗ
ಶೇಷಂಗೆ ಪೊಗಳಲರಿದು ॥

೪೭

ಆ ಮನೆಯ ಮಧ್ಯದೊಳು ಚಂದ್ರಶಾಲೆಯದೊಂದು ।
ರಾಮಣೀಯಕಮಾಗಿ ರಂಜಿಸಲು ನವರತ್ನ ।
ಸ್ತೋಮ ಶೋಭಿತ ಸಿಂಹವಿಷ್ಟರದಮೇಲೆ
ಗುಹಗಣಪ ನಗಜಾತೆ ಸಹಿತಾ ॥
ಶ್ರೀ ಮನೋಹರನ ಪರಮೋಹಿನಿ ಸುರುಪಾಂಗ ।
ನಾ ಮನೋಹರ ರೂಪವಾಮದೇವನಮಿತ ।
ಹೇಮಗರ್ಭಾದಿಸುರ ಸ್ತೋಮಭವಭೀಮ
ವಿನುತಾಮರಂ ಶೋಭಿಸಿದನು ॥

೪೮

ದಶಭುಜಂ ಪಂಚಮುಖ ವಿಷಗಳಂ ಗಾನಸುಖ ।
ಭಸಿತಭೂಷಿತ ತುಂಗಶಶಿಧರಂ ಧವಳಾಂಗ ।
ದಶ ಪಂಚನಯನ ವರವಸನ ಗಜಚರ್ಮಸು
ರವಿಸರ ನತಪದ ಪಂಕಜಾ ॥
ವೃಷಭಸಂಯುತ ಮಂದಹಸಿತ ನತಗೋವಿಂದ ।
ಕಸವರೋದರ ಮಸ್ತಕ ಸಮವರಕನ್ಯಸ್ತ ।
ಕುಸುಮಶರ ಮದಜೈತ್ರ ರಸಜಾಕ್ಷವರಮಿತ್ರ
ನಸಮಾಕ್ಷನೊಪ್ಪಿ ಮೆರೆದಂ ॥

೪೯

ಖಂಡೇಂದುಧರ ವಾಮಚಂಡಿಕಾನ್ವಿತ ಶಿ ।
ರೋಮಂಡಿತಾಪಗೆ ದೈತ್ಯರುಂಡಮಾಲಾಧರಂ ।
ಶೌಂಡಷಡುವದನ ಖೇಲಾಲೀಲ ವಿಜಿತಖಲ
ಪುಂಡರೀಕಾಜಿನಧರಂ ॥
ಕುಂಡಲೀಶಯನಾಕ್ಷ ಮಂಡಿತಪದಾಂಭೋಜ ।
ಚಂಡಖಟ್ವಾಂಗ ತ್ರಿಶೂಲ ಪರಶುಧರ ದೋ ।
ರ್ದಂಡನತದನುಜಸುರತಂಡನೊಪ್ಪಿದ
ನಖಿಳಜಾಂಡನೊಳಕೊಂಡಳ್ಕರಿಂ ॥

೫೦

ಬಾರಲೆ ಮುರಾರಿ ಬಲುಚೀರದಿರು ಬೊಮ್ಮನೀಂ ।
ಮಾರಾರಿಗೊಂದಿಸೆಲೆ ಸುರಪತಿಯೆಯನಲನೀಂ ।
ದೂರಕಿರು ಯಮ ನಿಲ್ಲು ನಿರುತಿತಡೆ ವರುಣ ನೀಮಾರುತ
ಮಣಿ ಪಾದಕೆ ॥
ಭೂರಿಕಪ್ಪವನಿಡು ಕುಬೇರನೀಂ ಮುಂದಕ್ಕೆ ।
ಬಾರೈಯಿಶಾನಸುರರೆ ಸುಮ್ಮನಿರಿಯೆಂದು ।
ಬಾರಿಬಾರಿಗೆ ಭರಾಭಾರಿಗೈವರುನಂದಿ
ಮಾಕಾಳರಾಕಾಲದೋಳ್ ॥

೫೧

ಸಿದ್ಧರಿರೆ ಶೀಘ್ರದಿಂ ಶಿರಗಳಂಬಾಗಿಕೃತ ।
ಬದ್ಧಾಂಜಲಿಗಳಾಗಿರೈ ದಾನವಾಮರರೆ ।
ಸಾಧ್ಯರೇ ಸಾಷ್ಟಾಂಗ ವೆರಗಿರೈ ಸಾರಮನುಮುನಿ ।
ಜನರುಗಳೆ ಪಾದಕೆ ॥
ಬಿದ್ದು ಕೃತಕೃತ್ಯರಾಗಿರಿ ಗರುಡ ಗಂಧರರೆ ।
ಬುದ್ಧಿಂಹಸಾದವೆನ್ನಿರಿ ಚಾರಣರೆ ಯೆಂದು ।
ವೃದ್ಧಮುನಿಗಳು ಗಣಕೆಬುದ್ಧಿಯಂಕಲಿಸಿದರು
ಸದ್ಯಜೀವನ್ಮುಕ್ತರು ॥

೫೨

ಸಾಲೋಕ್ಯ ಸಾಯುಜ್ಯ ಸಾಮಿಪ್ಯಸಾರುಪ್ಯ ।
ದಾ ಲಲಿತಪದದವರ ಸಾಲು ಸಾಲುಗಳಿಂದ ।
ಲೋಲರಿಂದ್ರ ಪ್ರಮಥ ಗಣದಿಂದ ನಿಜಮೂರ್ತಿ
ವೆತ್ತೊಪ್ಪುವಾ ॥
ಮೂಲಪ್ರಣವಂಶಾಸ್ತ್ರ ನಿಗಮಾಗಮಗಳಿಂ ।
ಭೀಳಗಣ ವೀರರಿಂ ಭೂತಪರಿವಾರದಿಂ ।
ಕಾಲಹರನೋಲಗದ ಶಾಲೆಯೊಪ್ಪಿತು
ಸಕಲರಾಲೋಕಕಾಶ್ಚರ್ಯದಿಂದ ॥

೫೩

ವಾರಿಸಂಭವಜಾತ ವಾರಿಜಾಭಕ್ಷಾದಿಸುರ ।
ವಾರಸಂಭಾವಿತಸದಾನಂದ ನೆಂದು ಕೈ ।
ವಾರಿಸಲು ಸುರರೆಲ್ಲ ಭೃಂಗೀಶನೃತ್ಯವಂ
ಬೀರುತಿರಲಾನಂದದಿಂ ॥
ಚಾರುವೀಣಾನಾದ ಸಾರ ಶೃತಿ ಗೊಳಿಸಿತುಂ ।
ಬುರ ಗಾನವಂ ಮಾಡೆ ಶಾರದೆಯು ನಲಿದಾಡೆ ।
ಮಾರಾರಿ ಮಾಮವಪರಾಕೆಂದು ಮುದವಂದು
ಕೊಂಡಾಡಿದರು ಸಭೆಯೊಳು ॥

೫೪

ಚಾಚಿ ಮೈ ಕೈಗಳನು ಗಾತ್ರ ಮೂದೆರನಾಗಿ ।
ಸಾಚಿ ಕಾಲುಂಗುಟದಿ ಪಿರ್‍ರೆಂದು ತಿರುವಿದ ।
ಲ್ರೋಚಿಯುಣ್ಮೆಲ್ಲುಕ್ಕುಚಕ್ಕನರಿದಂತ್ಹಿಂದಕಿಕ್ಕಿ
ಯಡಿತಡೆಬಡಿಸುತಾ ॥
ಬಾಚಿಕೈಯಿಂ ಮೈ ಪಿಶಾಚಿಗಳ ನಗಿಸುತ್ತ ।
ನಾಚಿದಂತೆಸಗಿ ನಾಲ್ದೆಸೆ ನೋಡಿ ಬೆರಳಿನಿಂ ।
ಗೀಚಿನೆಲ ಭೃಂಗಿ ನಾಟ್ಯವನಾಡಿದನು ನಾಟ್ಯಪ್ರಿಯನ
ಸಮ್ಮುಖದೊಳಂದು ॥

೫೫

ಆ ಪೊಳ್ತಿನಲಿ ಬಂದನಾ ಪರಮಶಿವ ಭಜನ ।
ನೈಪುಣ್ಯ ಸಿತಕಾಯ ಪಾಪಹರ ಜಿತಮಾಯ ।
ತಾಪ ಸೋತ್ತಮ ತಾಮರಸಜಾತ ಜಾತಭವ ।
ಲೋಪ ವೀಣಾಕರಧರಂ ॥
ಕೋಪವಿರಹಿತ ರಮ್ಯಮಾಪ ಸಖಧ್ಯಾನ ಸ ।
ಲ್ಲಾಪ ಸದ್ಗುಣಗೇಹ ತಾಪಹರ ಗತಮೋಹ ।
ಶ್ರೀ ಪರಮ ನಾರದಂ ಕಲಹಾ ವಿಶಾರದಂ
ಸಾರಸಭೆ ಗೈತಂದನು ॥

೫೬

ಬಂದು ಶಂಕರನ ಪದಕಂದುನತನಾಗಿ ಗೋ ।
ವಿಂದ ಪರಮೇಷ್ಟಿ ಸುರವೃಂದ ವಿನಿಮಿತನೆ ಸುಪು ।
ರಂದರಾತ್ಮಜ ಶರದ ಸಿಂಧು ತೂಣನೆ ಭಕ್ತಬಂಧು
ಭಾವಜಮಾರಣಾ ॥
ನಂದಿವಾಹನನಾಗ ಬಂಧಕರ ನಾಕಜನ ।
ನಂದಿತನೆ ರವಿಯಗ್ನಿಯಿಂದುಲೋಚನನೆ ಜಯ ।
ತೆಂದು ಪೊಡಮಟ್ಟು ಫಣೆ ಪಾದದೊಳಗಿಟ್ಟು ಸುಖ
ಬಿಟ್ಟು ಮುಂದೆದ್ದು ನಿಂದು ॥

೫೭

ದೇವ ದೇವನೆ ಸಪಾದಾವನತ ಭಕ್ತಸಂ ।
ಜೀವ ಜೀವನ ಪಾಹಿ ಪಾಪನಾತ್ಮಕನೆ ಅಘ ।
ದಾವದಾವನದಾನವಾರಾತಿ ನೇತ್ರಕಮ
ಲಾಂಕಿತ ಪದಾಂಭೋಜನೆ ॥
ಕಾವಕಾವನೆ ಕಾಲ ಕಾಲ ಕಂಧರಕಾಲ ।
ಭಾವ ಭಾವಾತೀತ ಭಾಳಾಕ್ಷ ಭವದೂತ ।
ಶೈವ ಸೇವಕ ಜೀಯ ಜಯತುಮಾನಾಥ ಧವನವಧಾನನ
ವಧಾನಭೋ ॥

೫೮

ವಾಮ ವಾಮನವಿನುತ ವಾಮ ವಾಮನ ನಿರುತ ।
ಸೋಮ ಸೋಮಾಕ್ಷಸುರ ಸೋಮ ಸೋಮಾ ಸುಪಕ್ಷ ।
ಭೀಮ ಭೀಮಾಘಹರ ಭೀಮಾನು ಜಾತವರ ದಾಸ
ತಾಚಲಪಾಲಕ ॥
ಕಾಮ ಕಾಮಾಂತ ನರ ಕಾಮ ಕಾಲಾಂತ ಗಳ ।
ಶಾಮ ಶಾಮಾಂಗಿಧವ ಶಾಮುಗಳ ಗಪಿತನಗ ।
ಧಾಮ ಧಾಮಕ ರಾಕ್ಷಸದಾನವರ ಶಿರವಕ್ಷ
ಸ್ವಾಮಿ ಪಾಲಿಸು ಶಂಕರಾ ॥

೫೯

ಎಲ್ಲಿಂದ ಬಂದಿ ನಾರದಾ ಮರ್ತ್ಯಲೋಕ ದಿಂ ।
ದಲ್ಲಿಯ ವಿಶೇಷವೇಂ ಪೇಳಲಾರೆನು ಮಾರ ।
ದಲ್ಲಣನದೇಂಕಾರಣ ಪವಿತ್ರ ನುಡಿಯಲಂಜುವೆ ।
ನಂಜುಗಳನೆಂದನು ॥
ಬಲ್ಲಹನೆ ಮರ್ತ್ಯದೊಳಗೇನೇನು ಗೈವರದ ।
ನೆಲ್ಲವಿನಿತುಳಿಯದಂತುಸುರಂಜಬೇಡೆನಲು ।
ಸೊಲ್ಲಿದನು ಕಣ್ಗಂಡದೆಲ್ಲವಂ ಖುಲ್ಲರಘಮಲ್ಲರ
ದುರಾಚಾರವಂ ॥

೬೦

ಗುರುಲಿಂಗ ನಿಂದ್ಯ ಗುರುಲಿಂಗ ಭಜಕರ ನಿಂದ್ಯ ।
ಚರವರ ನಿಂದ್ಯ ಚರಚರಣ ಭಜಕರ ನಿಂದ್ಯ ।
ವರಭೂತಿ ರುದ್ರಾಕ್ಷಿ ನಿಂದ್ಯಮವು ಧರಿಸಿ ಚರಿಪರ
ನಿಂದ್ಯ ಶಿವ ಮನು ನಿಂದ್ಯವು ॥
ಚರಪದೋದಕದ ಮೇಣ್ವರ ಪ್ರಸಾದದ ನಿಂದ್ಯ ।
ನಿರುತಮವು ಕೊಳ್ಳುತಿರುವರ ನಿಂದ್ಯವಂ ಬಿಡದೆ ।
ದುರುಳರೀಪರಿಯಷ್ಟವರ್ಣ ಪಂಚಾಚಾರ
ನಿಂದಿಪರು ಪುರಮಾರಣಾ ॥

೬೧

ಮಾಡಿಯರಿಂಪುದು ಲಿಂಗಪೂಜೆ ನಿನ್ನಯ ನಾಮು ।
ಹಾಡಿಯರಿಂಪುರು ಭೂತಿ ರುದ್ರಾಕ್ಷಿ ಭಕುತಿಯಿಂ ।
ಸೂಡಿಯಣ್ಣಿನಪರು ದಿವ್ಯ ಗುರುಚರಣ ಕೊಂಡಾಡಿ
ಅರಿಯರಾ ಮೂಢರುಗಳು ॥
ಮಾಡಬಲ್ಲರು ಮಾರಿ ಮಸಣೆಗಳ ಪೂಜೆ ಕೊಂ ।
ಡಾಡಬಲ್ಲರು ಮೂರ್ಖ ಧನಿಕ ಸೂಳೆಯರ ಗುಣ ।
ಹಾಡಬಲ್ಲರು ಹಾಳರಗಳೆಪದ ಲಿಂಗ ವೀಡಾಡ
ಬಲ್ಲರು ಖೋಡಿಗಳ್ ॥

೬೨

ಸ್ಥಾಣುವೇ ನಿನ್ನ ಪದಪಾಣತಿಯುಮೀರಿ ಬಲು ।
ಕೇಣಮಂ ತೋರೆದು ಲಕುಮಿಯ ಕಾರ್ಯಗೈದುಬಲು ।
ಕೋಣ ಕುರಿಪೋತು ಕೋಳಿಗಳಿಗತಿದಯದೊರೆದು
ಗೋಣ ಗೊಯ್ವರು ದುರುಳರು ॥
ಜಾಣ ಬಸವೆಯ ಪೋತರಾಜರಿಗೆ ಭಕುತಿಯಿಂ ।
ಗೋಣ ಬಾಗುವ ಕೈ ಸದಾಚಾರದವಗೆ ಕುಲ ।
ಹೀನನೆಂದಾಡಿ ಅವಮಾನ ಮಾಡುವರೆಲ್ಲ ತಾಣದೊಳು
ಮದಿಸಿರ್ಪರ್ಕೈ ॥

೬೩

ಬೀರನಂಗವು ತುಂಬೆ ಬೀರ ಕುರುಬನಿಗೆರಗಿ ।
ಚಾರುಕುಲದೈವ ನಿವನಸಮುಗೆಂಪು ಸುಡಿದು ರವಿ ।
ವಾರ ಮೈದೊಳೆದು ಮೈಲಾರ ದೇವರ ಭಜಿಸಿ
ಪೀರನೇಸರಿ ಬಣ್ಣದಾ ॥
ದಾರಗಳು ಕೊರಳಿನೊಳು ಸೇರಿಸುತೆ ಬಿಗೆ ಮುಳ್ಗ ।
ಳೂರಿ ಬೆನ್ನಿಗೆ ಭಂಡಿಸಿಡಿಯಾಡಿ ಭಾನುಸುತ ।
ವಾರನೊಪ್ಪತ್ತುಣ್ಣುವಾಚಾರ ಹೀನರಿಂ ಭೂಚಕ್ರ ।
ತುಂಬಿರ್ಪುದೈ ॥

೬೪

ಹೊಳೆ ನದಿಯ ಕಲ್ಲುಗಳು ತೊಲೆ ಜಂತೆ ಕಂಬಗಳು ।
ಮಲ ಬಿಡುವ ಕೇರಿಯೊಳು ನೆಲೆಸಿರ್ಪ ಶಿಂಧುರದ ।
ಶಿಲೆಗಳನು ಮಡಕೆ ಮುಚ್ಚಳಗಳನು ಪಾಳಡವಿ
ಬಿಲಗಳೊಳಗಣ ಹುಳಗಳು ॥
ಇಲಿಗಳು ಹೊಸ್ತಲ ತ್ರೋಳು ಶಿಲೆಕಾಷ್ಟ ಬಹು ಧಾತು ।
ಗಳ ಮೂರ್ತಿಗಳನೆಲ್ಲ ಕುಲದೇವರೆಂದ್ದೋಳಿ ।
ಮಲಹರನೆ ಕೇಳೆನ್ನ ಹೊಲಬರಿಯದರ್ಚಿಸುವ
ಹೊಲೆಯರತಿ ಮಲೆತಿರ್ಪರ್ಕೈ ॥

೬೫

ವೇದಾಂತ ಶಾಸ್ತ್ರವಂ ಬೋಧಿಸುವೆವೆಂದು ದು ।
ರ್ವಾದದಿಂ ಗುರು ಚರ ಪಾದ ಪೂಜೆಯ ತಡಿಸಿ ।
ಆದಿ ಲಿಂಗವ ಬಿಡಿಸಿ ಸಾಧು ಸತ್ಪಥ ಕೆಡಿಸಿ ಮಾಧಕ
ಪದಾರ್ಥ ಗುಡಿಸಿ ॥
ಮೋದದಿಂ ಜಂಗಮಕೆ ಹಾದಿಯಿದು ಹಿಡಿದು ತಾವ್ ।
ಸಾಧಿಸುವರ್ಕೈ ಪರರ ಕನಕ ಕಾಮಿನಿಯಿಂಥ ।
ಮಾದಿಗರ ಕಾಣದಿಹ ಮೇದಿನಿಯ ತಳಮಿಲ್ಲ
ಭೂಧರಾತ್ಮಜೆಯೊಲ್ಲಭಾ ॥

೬೬

ಕ್ರೂರ ಕರ್ಮರು ಸದಾಚಾರ ಹೀನರು ಪರರ ।
ದಾರ ಲಂಪಟರು ಬಲು ಶೌರ್ಯ ನೈಪುಣ್ಯರುಪ ।
ಕಾರವರಿಯದ ದುರಾಚಾರಿಗಳು ಪೊಲೆಯಂತ್ರ
ಧಾರಿಗಳು ದಯ ರಹಿತರೂ ॥
ಮಾರಹರ ಭಕ್ತರೊಳು ವೈರಗೈವರು ದುರುಳ ।
ಮಾರನಾಳಾದವರ ಪಾರಿತೋಷ ಕದಿಯುಪ ।
ಚಾರವಂ ಗೈವರ್ಕೈ ಧಾರುಣಿಯ ತುಂಬಿಹರು
ಮಾರ ಮಾರಣ ಲಾಲಿಸೈ ॥

೬೭

ದೇವ ಚಿತ್ತೈಸುವದು ಗಾವಿಲರು ತಾ ವೀರ ।
ಶೈವರೆಂದ್ಹೇಳುವರು ನಡತೆಯೊಳು ಕಿರುಕೂಳ ।
ದೈವನರ್ಚಿಪರು ಗುರುದೇವ ಜಂಗಮಲಿಂಗ
ಭಾವಿಸರು ಬಲುದುರುಳರು ॥
ಬೇವಿನುಡಿಗೆಯನುಟ್ಟು ದೇವಿಬಳಿಗ್ಹೋಗುವರು ।
ದೇವರೆಂದೇ ಭಾವಿಸುವರೊಗ್ಗ ಜೋಗಿಣಿಯ ।
ರಾವಾವ ತಾವಿನೊಳು ತೀವಿರ್ಪವರ್ಗೆಂದು
ಸಾವು ಬಾರದು ಶಂಕರ ॥

೬೮

ಒಂದೊತ್ತಮಾಳ್ಪರ್ಕೈ ಚಂದಿರನ ವ್ರತ ವಿಂದಿ ।
ನೆಂದು ಜಟ್ಟಿಗ ಜಕ್ಕಣೆ ಮತ್ತೇ ಜಲಮಾರಿ ।
ಯೆಂದು ಯಲ್ಲಕ್ಕ ಯಕಲಾತಿ ಮಾಪುರೆ ಮರಗೆ
ಚಂದಮ್ಮ ಮುಖ್ಯಮಾದಾ ॥
ಗೊಂದಲವು ದೇವರೆಂದೆಂದು ಕೆಟ್ಟರು ನಿರುತ ।
ಗೊಂದೆ ಪಳುವಿಗೆ ದೇವನಾಲಿಸೈ ಭಕ್ತಿಯಿಂ ।
ಗೊಂದಲೀಗರ ಕಾಲಿಗೆರಗುವರು ಮೀಸಲಡಿಗೆಯ
ಮಾಡಿ ನೀಡಿಪಾಡಿ ॥

೬೯

ಪಗಲಿಗಾವಳು ತಾಯಿ ನಿಶೆಯೊಳವಳೇ ಜಾಯಿ ।
ಪಗಲೊಳಾವಳು ತಂಗಿ ನಿಶೆಯೊಳವಳರ್ಧಾಂಗಿ ।
ಪಗಲಾವ ಸತಿಸುತೆಯು ನಿಶೆಯೊಳವಳೆ ಸತಿಯು
ಕೃತಕರ್ಮವು ಪಾತಕರಿಗೆ ॥
ಪಗಲಾವಳಕ್ಕ ನಿಶಿಗವಳೆ ಭೋಗಿಸತಕ್ಕ ।
ಮುಗುವೆಯವಳೇ ಸತ್ಯಮುಗಳ ಶರ ನಿಜಭೃತ್ಯ ।
ರಗಣಿತರು ಜಗದಲ್ಲಿ ಬಿದ್ದಿಹರು ಭಗದಲ್ಲಿ
ಪೊಗಳಲರಿಯರು ನಿನ್ನನು ॥

೭೦

ಗೋತ್ರವರಿಯರು ಚಾರುಸೂತ್ರವರಿಯರು ತಮ್ಮ ।
ಗೋತ್ರವಧೆ ಗೈದು ನಿಜಗೋತ್ರ ಕನ್ಯೆಯರೊಡನೆ ।
ಶಾಸ್ತ್ರ ಸಮ್ಮತವೆಂದು ಲಗ್ನವಾಗುವರ್ಗೈದೆ ನೀಚರಾ
ಭೂ ಚಕ್ರದೋಳ್ ॥
ಮಿತ್ರರೊಡನಾಡ್ಯವರಿಗೆತ್ತಿ ದೂರಿಡುವರಪ ।
ಮಿತ್ರಕರ್ಮರು ರಾಜಗುರು ಸ್ವಾಮಿದ್ರೋಹಕರು ।
ಧಾತ್ರಿಯೊಳು ಮದಿಸಿರ್ಪರತ್ತ ನೋಡನು ಮಿತ್ರಜಾತ
ತಾ ನೇತ್ರ ತೆರೆದು ॥

೭೧

ಏಳು ಹೇಳುವೆನಿಂಥ ಹೀನಮನುಜರ ನಡತೆ ।
ನೀನರಿಯ ದಿರ್ದುದೇಂ ಮೌನಿಜನ ವಂದಿತನೆ ।
ನಾನುಡಿಯಲೇಕೆ ತಾವಾಗಲೀ ತಮ್ಮ ನಂದೀಶ
ನಾಗಲಿ ಮರ್ತ್ಯಕೆ ॥
ಸ್ವಾನುಭಾವರೆ ತೆರೆಳಿದರೆ ತಾನೆ ತಿಳಿವದೈ ।
ದೀನ ರಕ್ಷಕನೆ ತಡ ಮಾಡಿದರೆ ನಿಮ್ಮ ಮತ ।
ವೇನೇನು ಉಳಿಯದಾಲಸ್ಯವಮೃತಂ ವಿಷಂ
ಶುಭಕೆ ಶೀಘ್ರೆಂದರಿಯಿರೇ ॥

೭೨

ಆಗಲೈ ದೇವಲನೆ ಪೋಗು ನೀ ಕುಟಿಗೆಂದು ।
ನಾಗಾರಿಗಮನ ಮುಖ್ಯರ ಕಳುಪಿ ತನ್ನ ಹೃದ ।
ಯಾಗಸದ ರವಿಯಂತೆ ಶೋಭಿಸುವ ಸದ್ಧರ್ಮ
ನಂದಿ ಧರ್ಮವನೆ ನಿಯಲೂ ॥
ಆಗಲದು ಸದ್ರೂಪವೆತ್ತು ಮಾಧವನ ಮುಂ ।
ಭಾಗದೊಳು ಕೈಮುಗಿದು ಇಂದೇಕೆ ಪುಟ್ಟಿಸಿದೀ ।
ನಾಗಕಂಕಣ ಪೇಳ್ವುದೆಂದು ಮನಬಂದು
ಬಲಪೆಂದೆರಗಿ ಮುಂದೆ ನಿಂದು ॥

೭೩

ಕೇಳಿದರೆ ಪ್ರೇಮದಿಂ ಪೇಳಿದನು ಬಾಲಶಶಿ ।
ಮೌಳಿ ಮರ್ತ್ಯಕೆ ಪೋಗುವೆಂದದೇಂ ಕಾರಣವು ।
ಹೇಳಲೆ ನಿನ್ನಮತ ಮೆರೆಸಲೆಳೆಸಿದರೆ ಸಲೆ[illegible]
ಬಿಟ್ಟಾರಿರುವರು ॥
ಕಾಳು ಮಾನವರೊಡನೆ ಬಾಳುವೆನೆ ನರಲೋಕ ।
ಧಾಳಿಗೀಡಾಗುವೆನೆ ಖೂಳರುಪಟಳಕೆ ನಾಂ ।
ತಾಳುವೆನೆ ಕಾಲಿಹರ ಪೇಳೆಂದು ನುಡಿಯಲ್ಕೆ
ಬೋಳೈಸಿ ಬೋಳೇಶನು ॥

೭೪

ಎಣಿಕೆ ಬೇಡೈ ಮಗನೆ ತೃಣವು ಕೂಡಿಸಿ ದೊಡ್ಡ ।
ಬಣವೆಯೊಟ್ಟಿದರಗ್ನಿಕಣ ಮದಕೆ ಸಾಲದೇಂ ।
ಬಣಗು ಕಲಿಗೈವದೇಂ ನಿನಗೆ ಕರಿ ಹರಿಗೀಡೆ
ಗರುಡಹೀ ಸರಿಯೆ ಕೇಳು ಮತ್ತೆ ॥
ದಿನಕರಗೆ ಕತ್ತಲೆಯು ವನಕಿಗಾನ್ವವೆ ಮಡಕೆ ।
ಮುನಿದಿನಜನೊಡನೆ ತಾಪೆಣವೇನು ಗೈವುದೈ ।
ಗುಣಕೀರ್ತಿ ಕೆಡಿಸಲವಗುಣಿಯೇನು ಮಾಳ್ಪ
ನೀನಳುಕದಿರು ನಡೆ ತಳುವದೆ ॥

೭೫

ಪೇಳಲೇನೈ ಶಿವನೆ ಪಾಲಿನೊಳು ಪುಳಿಯಿಡಲು ।
ಕಾಳುಗೆಡದಿರುವದೇಂ ಭಾಳಲೋಚನ ನಿಮ್ಮ ।
ಊಳಿಗವನಿತ್ತೆನ್ನ ರಕ್ಷಿಸದುಪೇಕ್ಷಿಸರೆ ನೋಡು
ದಯಮಾಡು ಹರನೆ ॥
ಬಾಲಕನ ಮೇಲೆ ಸಿರಿಶೈಲವಂ ಪೊರಿಸಿದರೆ ।
ಬಾಳುವನೆ ದೀವಿಗೆಯು ಗಾಳಿಗಿಟ್ಟರೆನಿಮಿಷ ।
ತಾಳಬುಲ್ಲುದೆ ತ್ವರದಿ ಹೇಳೆನಗೆ ನೀ ಸದಯಾಳ
ಯಾಳಾಜಿನಧರಾ ॥

೭೬

ಬಿಡುಮಗನೆ ಚಿಂತೆ ನಿನಗೇತಕೀ ಭ್ರಾಂತಿ ನೀ ।
ಪಿಡಿದದನು ಪಿಡಿವೆ ಬಿಟ್ಟುದ ಬಿಡುವೆನೈಸೆ ಮೇಣ್ ।
ನುಡಿದಂತೆ ನುಡಿವೆ ನಡೆದಂತೆ ನಡೆವೆನಾ ತಡೆಯದಲೆ
ಕೇಳು ಮಗನೇಮ ॥
ಪಿಡಿದುಕೈಯೆತ್ತಿ ಮೈದಡವಿ ಕೂಡಿಸಿಕೊಂಡು ।
ತೊಡೆಯೊಳಗೆ ಮುಂಡಾಡಿ ಕೊಂಡಾಡಿ ತರ್ಕೈಸು ।
ತಡಿಗಡಿಗೆ ತುಟಿ ಗಲ್ಲ ಪಿಡಿದು ಬುದ್ಧಿಯ ಕಲಿಸಿ
ಮೃಡಗಡನೆ ಸಂತೈಸಲೂ ॥

೭೭

ಆದಡೆ ತವಾಜ್ಞೆಯಿಂ ಪೋದಪೆನು ತಾತನೆನ ।
ಗಾದ ಹಾನಿಯು ಲಾಭ ನಿಮ್ಮಮೈ ಸಲೆ ನಿಮ್ಮ ।
ಪಾದವೆಂತಿಡುವದಂತಿರುವೆನಲ್ಲದೆ ಬೇರೆ ಸ್ವಾತಂತ್ರ್ಯ
ವೆನಗಿರುವದೆ ॥
ಮೇದಿನಿಯ ಭೋಗದೊಳು ಮೈಮರಿಸದಲೆ ಯನ್ನ ।
ನೀ ದಯದಿ ಕರೆದುಕೊಂಬುದು ಜಡದಿಯೆಂಬುದಕೆ ।
ತಾ ದಯದಿ ನೀರ್ಗೊಟ್ಟು ಮರಳಿ ಕೈಗೊಂಬಂತೆ
ಮಾಳ್ಪುದೈ ಮಾರಹನನೆ ॥

೭೮

ಚೆದರ ಬೇಡೆಲಿ ಮಗನೆ ಪೋಗೆನಲಾವ ನಾ ।
ಡದೊಳಾವ ಪುಟ ಭೇಧನದೊಳಾರ ಪೊಟ್ಟೆಯೊಳ ।
ಗುದಭವಿಸುವೆನು ದೇವ ಎನಲದಕೆ ಪೇಳಿದನು
ಮದನಾರಿ ಸಮ್ಮುದದೊಳು ॥
ಚದುರ ಕೇಳೈ ಜಂಬೂದ್ವೀಪವದರೊಳಗೆ ಭಾ ।
ರತ ಖಂಡ ಮದರೊಳಗೆ ಕರ್ನಾಟ ದೇಶ ಮ ।
ತ್ತದರೊಳಗೆ ಸಗರ ನಾಡದ ಸುಮನಗರಡಿಗೆಯು
ಪುರದಿ ಸಾಲೋಕ್ಯೆಂಬುವಾ ॥

೭೯

ಪರ ವಂಶದೊಳಗಿರುವ ಪುರಹರನಭಕ್ತ ಶಿವ ।
ಶರಣನಾದಯ್ಯ ಪರತರ ಪಾವನಾಂಗ ಸುಂ ।
ದರನವನ ಸತಿ ರೂಪವತಿ ರತಿಸಮಾಂಗಿ ಪತಿವ್ರತೆಯು
ಪಾವನ ಚರಿತೆಯು ॥
ವರಗುಣ ವಿಶಾಲೆ ಶಂಕರ ಧ್ಯಾನಲೀಲೆ ಚರ ।
ಚರಣ ಪೂಜಿತೆ ಮನೋಹರ ಚರಿತೆ ಮಡಿಯಮ್ಮ ।
ಗಿರದೆ ಮಗನಾಗಿ ಅವತರಿಸಲಿಕೆ ಧರಣಿಯೊಳು
ಭರದಿಂದ ಪೋಗೆಂದನು ॥

೮೦

ಪೂಗರಡಿಗೆಯ ಪುರದ ಸಾಲೋಕ್ಯ ವಂಶದೊಳ ।
ಗಾಗಲವತಾರ ನಂಬಲೆ ನಂಬು ಪೋಗಲೇಂ ।
ಪೋಗು ನಡೆ ಎರಡಿಲ್ಲಲೆ ಇಲ್ಲ ತಡೆಯದಿರು
ಮಗನೆ ಕೇಳೈ ಮರ್ತ್ಯದಾ ॥
ಭೋಗ ತೀರ್ಚಿದ ಬಳಿಕ ಸಾಗಿಸುವೆ ನೆನ್ನ ಬಳಿ ।
ಗಾಗಿ ಸತ್ಯವೇ ಸತ್ಯ ನಿಶ್ಚಯವೆ ನಿಶ್ಚಯ ।
ಬೇಗ ನಡಿಯನೆ ಗೋಣು ಬಾಗಿ ಬಂದನು ಗಗನ
ಭಾಗದಿಂ ಭೂ ಲೋಕಕೆ ॥

೮೧

ವರ ಪುರದ ಶಿವಲಿಂಗ ಶರಣ ಬಸವನ ಚರಿತೆ ।
ಗುರುಬಸವಣಾರ್ಯ ಚರಣಂಭೋಜ ಲೀನ ಮಧು ।
ಕರನು ಗುರುಲಿಂಗ ಚರ ಸೇವಕಂ ಗುರುಲಿಂಗ ಕವಿ
ರಸಿಕ ಸಖ ಭಕ್ತಿಯಿಂ ॥
ವಿರಚಿಸಿದನೋದಿಸುವ ಬರೆವಗೋದುವಗೆ ಪರ ।
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ ।
ದೊರಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ಶಶಿ ಸಂಧಿ ಸದ್ಬಂಧಿಯು ॥

ಸಂಧಿ ೧ ಕ್ಕೆ ಪದ ೮೧ ಕ್ಕಂ ಮಂಗಳಂ.



ಶ್ರೀ ಶರಣಬಸವೇಶ್ವರ ಪ್ರಸನ್ನ

ಸೂಚನೆ॥ ಜನಪದವನೋಡುತ್ತೈತರುತೆ ಶರಣಪ್ಪತಾ ।
ವಿನುತ ಸಾಲೋಕ್ಯ ಕುಲಜಲಧಿ ಹಿಮಕರನಂತೆ ।
ಜನಿಸಿ ಶೈಶವಕಳೆಯುತಕ್ಷರಭ್ಯಾಸವಂ ಗೈದು ಪದುಳದೊಳಿರ್ದನು ॥

ವಾರ್ಧಕ ಷಟ್ಪದಿ

## ಎರಡನೆಯ ಸಂಧಿ

೧

ಐದುಸಾಸಿರ ವದನ ವೈದೆನೇತ್ರಗಳು ಮೂ ।
ರೈದುಸಾಸಿರವು ಶೈಲಾದಿ ಸಾಸಿರರುಯಿ ।
ರೈದುಸಾಸಿರ ಭುಜಗಳೈದು ಸಾಸಿರ ಶತಗಂಗೆಯಾದ
ಶಿವ ಸಭೆಗೆ ಬಂದು ॥
ಆದಿಶೇಷನೆ ಛತ್ರಮಾದ ದೇವನ ಕಂಡು ।
ಮಾದೇವಿ ಬೆರಗಾಗಲವಳ ಮುಗ್ಧತ್ವಕ್ಕೆ ।
ಮೋದದಾಳ್ದುರೆನಕ್ಕ ಶಿವಲಿಂಗ ಸಲಹು ನೀಂ
ಮೇದಿನಿಯ ಭಕ್ತಜನರಾ ॥

೨

ಆ ರಜತ ಗಿರಿಯಿಂದ ಬರುತ ಕಂಡನು ಶರಣ ।
ಮಾರುತಧ್ವಾದಿ ಧ್ರುವ ಮುನಿ ಲೋಕಗಳು ದಾಂಟಿ ।
ಚಾರು ಗಿರಿ ವನ ಸಪ್ತಶರಧಿ ದ್ವೀಪವು ನೋಡುತ್ತೈ
ತರಲ್ಕದರ ನಡುವೆ ॥
ಸಾರಜಂಬೂದ್ವೀಪ ಮೆರೆವದದರೊಳತಿ ಗಂ ।
ಭೀರತೆಯ ವೆತ್ತೆಸೆವ ಕರ್ನಾಟದೇಶ ಮದ ।
ನಾರಿ ಭಕ್ತಿಯಬೀಡು ಸೂರಿ ಸುಖದೀಡು ಸುಕೃತದ
ಜೋಡು ಸಗರನಾಡು ॥

೩

ಅಲ್ಲೆಲ್ಲಿಗೆಸೆವ ನಂದನದಿಂದ ಬನದಿಂದ ।
ಮೊಲ್ಲೆ ಕಂಕಲ್ಲೆ ಸುಮಕುಜದಿಂದ ಗಜದಿಂದ ।
ಲೆಲ್ಲೆಡೆಯೊಳಿಕಿರಿಪ ಖಗದಿಂದ ಮೃಗದಿಂದ
ಬಗೆ ಬಗೆಯ ರನ್ನದಿಂದಾ ॥
ಸಲ್ಲಲಿತ ಸೌಖ್ಯ ಸಂಪದದಿಂದ ಪದದಿಂದ ।
ಲೆಲ್ಲೆಲ್ಲಿನೋಡಲಗ ಕುಲದಿಂದ ಛಲದಿಂದ ।
ಸೊಲ್ಲು ಸೊಲ್ಲಿಗೆ ಶಿವನ ನಾಮದಿಂ ನೇಮದಿಂ
ನುಡಿಪರೆಲ್ಲಾ ನಾಡೊಳು ॥

೪

ಬಾಗಿ ಬಳಕುವ ಬಾಳೆ ಗೊನೆಗಳಿಂ ನೆನೆಗಳಿಂ ।
ತೂಗಿ ತೆನೆಯುವ ನೆಲ್ಲು ತೆನೆಗಳಿಂದೆಣೆಗಳಿಂ ।
ಸೋಗಿ ಸೋಗೆಯ ಪಚ್ಚ ರಂಗದಿಂ ಭೃಂಗದಿಂ
ಪೂತಕೇತಕಿ ಬನಗಳಿಂ ॥
ಪೂಗೊಳದಸಿರಿಯಿಂದ ನಿರ್ಝರದ ಝರಿಯಿಂದ ।
ಭೋಗಿಗಳ ಸಂತಿಯಿಂ ದ್ಯೋಗಿಗಳ ಪಂತಿಯಿಂ ।
ದಾಗಾಸಕೆತ್ತಿದ ನಿಕೇತನದ ಕೇತನಗಳಿಂದೆಸೆಯಿ
ತಾ ಜನಪದಂ ॥

೫

ಎತ್ತ ನೋಡಿದತ್ತ ಕಳಮ ಕ್ಷೇತ್ರಂಗಳಿಂ ।
ದೆತ್ತ ನೋಡಿದಡತ್ತಲನ್ನ ಛತ್ರಂಗಳಿಂ ।
ದೆತ್ತ ನೋಡಿದಡತ್ತ ರನ್ನ ಗೋತ್ರಂಗಳಿಂದೆ
ತ್ತೆತ್ತಲುಂ ಪರಿಯುವಾ ॥
ಅತ್ಯಧಿಕ ಕೃಷ್ಣೆ ಭೀಮಾಯೆಂಬ ನದಿಗಳಿಂ ।
ಚಿತ್ತ ತೋಷಿಪ ತಳಿರ ಕುಸುಮ ಫಳಗುದಿಗಳಿಂ ।
ಮುತ್ತು ಮಾಣಿಕರನ್ನ ಮಣಿ ಕಣಿಗಳಿಂದ ಪ್ರಭೆವೆತ್ತು
ಮೆರೆದುದು ಜನಪದಂ ॥

೬

ಮರುತನೊಡ ತಿರುಗದಿರುವಾರಡಿಗಳಿಲ್ಲವಾ ।
ಪರಮೆ ವರಿಗಳನುರೆ ಕರೆದು ಮಧು ಕೊಡದಿರುವ ।
ಅರಲಿಲ್ಲ ವರಲಲಿತಗಾಶ್ರಯಂ ಗೊಡದ ಮಾಮರ
ವಿಲ್ಲವಾತರುಗಳಾ ॥
ನೆರಳೊಳಗೆ ಕೂಡದಿಹ ನರರಿಲ್ಲ ವರ ತೃಷಿಗೆ ।
ನೆರೆಯದಿಹ ಕೆರೆಯಿಲ್ಲ ಕೆರೆಗೆ ನೀರ್ಗೊಡದಿರುವ ।
ಝರೆಯಿಲ್ಲವೆನೆ ಶಾಲಿಗರಿದೆನಿಸಿ ಮೆರೆದಿತ್ತು
ಸಿರಿಬೀಡು ಸಗರನಾಡು ॥

೭

ಶಾಲಿದೆನಿಗಳಿಗೆರಗುವಳಿ ಗಿಳಿಗಳಂದು ಕೈ ।
ನೂಲಿನಿಂ ಪಾಮರಿಯರೋಡಿಸಲ್ಕೆಂದ್ಹೋಡದ ।
ರೇಳದಿರಲಾಸಯ ಕಾಲ್ಗಳಿಗೆ ಬುದ್ಧಿಯಂ ಪೇಳಿ
ಕೈ ಪೆರೆಗುಟ್ಟುತಾ ॥
ತೋಳು ಮೇಲೆತ್ತಲ್ಕೆ ಮೇಲುದಂ ಜಾರಲದ ।
ನಾಲೋಕಿಸಿದ ಪಾಂಥರಾಲಿ ಕಾಲುಗಳಲ್ಲಿ ।
ಕೀಲಸಿರಲದನೀಕ್ಷಿಸವಂತೆ ಸಂಚರಿಪ ಬಾಲೆ
ಯರೆದೇಗಳೇಂ ಕಠಿಣವೋ ॥

೮

ದಾರಿ ದಾರಿಗಳೆರಡು ಕಡೆಯೊಳಗೆ ಶೋಭಿಸುವ ।
ನೀರನರವಟ್ಟಿಗೆಯ ಕುಳಿರ್ಗಲ್ಲು ಕಟ್ಟೆಗಳ ।
ನೀರಜದ ತೋರಣವು ಚಾರು ಕದಳಿಯ ಕಂಭ
ದ್ವಾರದಿಂ ಮುಡಿವಾಳದಿಂ ॥
ಬೇರುಗಳ ತೆರೆಗಳಿಂದಾರು ಧವಳೇಕ್ಷುಗಳ ।
ಪಾತ ಪೊದಕಿಗಳಿಂದ ಯಾಲತವರಾಜ ಜಂ ।
ಬೀರ ರಸಮಿಶ್ರದಿಂದಾರು ರಸಧಿಃಕರಿಪ ನೀರಿನಿಂ
ರಾಜಿಸಿದವು ॥

೯

ಅಂಬುವೆರದಂಜುಳದಿ ಕಾಂಬ ಮುಖ ಬಿಂಬಕ್ಕೆ ।
ಪಂಬಲಿಸುತಧ್ವಗಂ ಬಿಂಬಿದುಟಿಪೀರ್ವ ನೆವ ।
ದಿಂ ಬಿಡದೆ ಕುಡಿಯಲದನಂಬುಜಾಯ ತನಯನೆ
ಕಂಡವನ ಭಾವಮರಿದು ॥
ಕಂಬು ಕಂಧರವೈದೆ ಹಿಂಬಾಗಿಸಲ್ಕೆ ಶಶಿ ।
ಬಿಂಬಾನನಂ ಬರಿದೆ ಕುಡಿದು ಕೆಡಿಸಿದೆ ನಕ್ಕ ।
ಟೆಂಬ ಶಂಕಿಲಿ ದೆಶೆಗಳಂ ನೋಡಿ ಶೋಕಿಪನ
ಕಂಡು ನಕ್ಕರು ಸಕಲರು ॥

೧೦

ಮತ್ತೊಂದು ತಾಣದೊಳು ಮತ್ತ ಕಾಸಿನಿಯು ಕೈ ।
ಯೆತ್ತಿ ನೀರೆರೆವುತಿರೆ ನೆತ್ತಿ ಮೇಲಿನ ಪದರ ।
ಕಿತ್ತಲದು ಪೊದಿಯಲ್ಕೆ ಕತ್ತು ತಿರವಲ್ಕುಡತೆಯೊಳ್ಕುಚ
ಛಾಯ ಮೂಡಲ್ ॥
ಕತ್ತಲೆಯ ತೆರೆದೋರಲೆತ್ತಣದ್ಭುತ ಪಗ ।
ಲ್ಗತ್ತಲೆಯಿಂದಂದಂದು ಕೌತುಕಂದಾಳ್ದು ಮುಖ ।
ವೆತ್ತಿನೋಳ್ಪನ ಚಿತ್ತದನುವರಿದು ತೋರಿದಳು
ತಾಟಂಕ ಸೋಜಿಗವದೇಂ ॥

೧೧

ದಾರಿಗರು ತಮಗೆನಸು ನೀರಡಿಕೆಯೆಲ್ಲದಿರೆ ।
ಚಾರು ಸೌಂದರ್ಯ ವಾರಾಶಿಯರ ನೋಡಲುಪ ।
ಚಾರ ನುಡಿಗಳು ಕೇಳ್ವ ನೆವದಿಂದ ನೆಲದ ಹುಡಿ
ಸಾರಿಸುತೆ ತುಟಿವದನಕೆ ॥
ನೀರಡಿಕೆಯಿಂದ ಬಾಯಾರಿದವರೆನೆ ಬಂದು ।
ನಾರಿಯರ ನೋಡಿ ಸವಿನುಡಿಗೇಳಿ ನುಡಿಸಿ ಮುದ ।
ಮೀರಿ ಗುಧಮೂರುವರು ಬೇರೆ ಬೇರಾದಖಿಳ ।
ನೀರಿನರವಟ್ಟಿಗೆಯೊಳು ॥

೧೨

ವಿಷಧಾರಿ ಶಿವನಂತೆ ದಶರಥನ ಸುತನಂತೆ ।
ಕುಶ ಜನ್ಮಕಾರಿ ವರಶಶಿಯಂತೆ ಕಮಲಯತೆ ।
ಶಿಶುಪಾಲರಿಯಂತೆ ಸಮುಚಕ್ರಾನ್ವಿತೆಯು ದೆಸೆಯಂತೆ
ಹರಿಯಾನ್ವಿತೆ ॥
ಕಸವರೋದರನಂತೆ ಜಿವೋಪಕಾರಿ ವರ ।
ಬಸವನಾಮದ ತೆರದಿ ಪಾಪಾಪಹಾರಿ ಮೇ ।
ಣ್ಸಮಾಕ್ಷಸತಿಯೊಲೆಸದಿತ್ತು ಭೀಮೆ ನಾಮಾಘ
ಭೀಮೇ ಭೀಮಾರತಿ ॥

೧೩

ಏಂ ಚೆಲ್ವನಾಳ್ದುದೀನಾಡ ಮಿಲ್ಲರು ತಿರ್ಪ ।
ಚೆಂಚಲಾಕ್ಷಿಯರೆಲ್ಲ ಚಾರಣಾಂಗನೆಯರ್ಕೈ ।
ಪಂಚಶರಗೈದಿಹ ಪ್ರಪಂಚಮಿದು ನಿಜವೆನಲು
ಸಂಚರಿಪಕಿಲ್ಲೆಡೆಯೊಳು ॥
ಅಂಚೆಗಳು ಬೊಮ್ಮ ನರಸಂಚೆಯಿಂ ಗಿರಿಸಾನು ।
ಮಿಂಚುರನ್ನಗಳು ವರರೋಹಣಾಚಲಗಾನ ।
ದಿಂಚರಂಗಾಂಧರರ ಕಂಚಾರ ಮುಖ್ಯತರು ಪಂಚ
ಸುರಕುಲ ತರುಗಳಾ ॥

೧೪

ನಿಂದಿಸಲು ನೋಡಲ್ಕೆ ತಂದನಾಸದ್ಧರ್ಮ ।
ಕಂದಮಾಕಂದ ಮದಕಂದ ಜಂಝಾಮರುತ ।
ನಂದು ಪುರಪಳ್ಳಿ ಪಟ್ಟಣ ಪಟ್ಟಣಗಳು ನದಿ ಕಂದಕವು
ಝುರೆ ಕೆರೆಗಳೂ ॥
ಒಂದಕೊಂದಗಲದೊಲು ಕೈ ಕೈಗಳಂ ಕಲಿಸಿ ।
ನಿಂದವೆನೆ ಗಂಧಶಾಲಿಂಗಳುಪವನವನುರೆ ।
ನಂದನಂಗಳು ಬಳಿಸುತಂದವದೇಂ ಕಂಗಳಿಗೆ
ಬಂದಿತ್ತು ಸಗರನಾಡು ॥

೧೫

ನೋಡಿದತ್ತೆಲ್ಲ ನಲಿದಾಡುವರು ಪಾಡುವರು ।
ಬೇಡಿದವರ್ಗೇನಾದಡಾಡದಲೆ ನೀಡುವರು ।
ಸೂಡುವರು ಸುಮುಗಂಧ ಮಾಡುವರು ಸುಕೃತ
ವಂದಾಡುವರು ಸತ್ಯಬಿಡದೇ ॥
ನಾಡನಿದು ನಾಳ್ವದೊರೆ ಬೇಡನಾದುದರಿಂದ ।
ಬೇಡಿದಲೆ ಭಾಗ್ಯ ಕೈಗೂಡಿತೆಂತಿವಗೆ ಶಶಿ ।
ಚೂಡನಣುಗನು ಜಗದಿ ಮೂಡಲಿಂತಾಯ್ತಿದನು
ಬೇಡದಲೆ ಬರಲಾಪುದೆ ॥

೧೬

ಇನಿತೆಲ್ಲ ನೋಡುತ್ತೈತರಲಾಗ ಮುಂದೆ ಶಿವ ।
ನಣುಗ ಕಂಡನು ಚಂದ್ರಕಾಂತ ಶಿಲೆಕೋಟೆ ತೆನೆ ।
ಕನಕದೊಲ್ಪೊಳೆವಡೆಂಕಿಣಿ ಸಾಲ್ಗಳಂ ವಜ್ರದೋಲೆ
ಸವಕಠಿಣ ಕವಾಟಂ ॥
ಘನ ಘನನವುರದ ಸಿರಿತನಗುಳ್ಳದೆಂಬ ಪೆಂ ।
ಪಿನಲಂಪಿನಿಂ ಮೆರೆವ ಸುಮನ ಕರಡಿಗೆಯಪುರ ।
ಮನೆ ಮನೆಗಳಂ ತಳ್ತು ದಿನ ದಿನಕೆ ಪೆರ್ಚ್ಚಿಸುತ
ಲನುವಿನಿಂದಿರುತಿರ್ದನು ॥

೧೭

ಅರಳಗುಂಡಿಗೆಯ ಪುರವರಳಗಂಧವು ಸುರಿಯ ।
ದಿರುತಿರ್ದ್ದಿಡಿದರೊಳಗೆ ಮೆರೆವಷ್ಟ ಭೋಗಿಗಗಳು ।
ಇರನೇನು ಚಾರಣವು ವರಸುಮನಸಕರಂಡ
ನೆರೆನಾಮು ಪುಸಿಯಾದೊಡೆ ॥
ಬರಿದೆ ಈ ಪುರದೊಳಗೆಯಿರುವರೇಂ ಸುಮನಸರು ।
ಸುರಸಗಾಂಧರರು ಪರತರ ಚಾರಣರು ವಿದ್ಯ ।
ಧರರಿಂದ ಸದ್ಧರ್ಮ ಪರರಿಂದ ವರಸುಧೋಧರ
ರಿಂದ ಪುರ ಮೆರೆದುದು ॥

೧೮

ಆ ಪುರದ ಕಾಂತಿ ನಿಜರೂಪಮೋ ಮೇಣದರ ।
ಸ್ವೈಪಮೋ ಶಿವನ ಸದ್ರೂಪಮೋ ರಜತಗಿರಿ ।
ರೂಪಮೋ ವರಸುಧಾರೋಪಮೋ ಇಂಗಡಲ
ತೆರೆಗಟ್ಟಿದಾಟೋಪಮೋ ॥
ಕಾಪಾಲಧರನ ಕರ ಚಾಪಗೊನೆಗಳೊ ಜಾತ ।
ರೂಪ ಕಳಸಂಗಳೋ ಸಾಕುತೆಗೆ ಸಾಸಿರಾ ।
ಕಾಪಮೇಂ ಸಾಲೋಕ್ಯದರ ಸಂತತಿಯು ನಿಜ
ಗೋಪುರವೆಯಿದು ತಥ್ಯವೈ ॥

೧೯

ಇಂತೊಪ್ಪುತಿಪ್ಪ ಹೃದಂತರದೊಳಿರುವನಾ ।
ಕಂತುಹರ ಭಕ್ತ ಗುರುಲಿಂಗ ಚರಪೂಜಕನ ।
ನಂತಗುಣನಿಧಿ ಕಲಾಕೋವಿದಂ ವೀರಶೈವಾಚಾರ
ಸಂಪನ್ನನೂ ॥
ಭ್ರಾಂತಿರಹಿತಂ ಭಾವ ಭಾವ ಜಾಹಿತ ಭರಿತ ।
ಸಂತತಂ ಸಚ್ಚರಿತ ಸಕುಟುಂಬ ಪರಿವಾರ ।
ವಾಂತಿರುವನಾದಯ್ಯ ನಿಜವಲ್ಲದೇಂ ಬರಿದೆ
ಭ್ರಾಂತಿಗೇನಾದೈಯ್ಯನೇ ॥

೨೦

ಅವನಸತಿ ಮಡಿಯಮ್ಮ ಭುವನ ಪಾವನ ಚರಿತೆ ।
ಶಿವಲಿಂಗ ಗುರುಚರಾರ್ಚಿತೆ ಸುಗುಣ ಜನಮಿತ್ರೆ ।
ಕುವಲಯಾಯತನೇತ್ರೆ ಕವಿ ವಿವರ್ಣಿತ ಪಾತ್ರೆ
ಮೃದುಲತರ ಮಂಜುಗಾತ್ರೆ ॥
ಸುವಿಚಾರ ಚಾರುತರ ತರುಣಿಮಣಿ ತನ್ನಾತ್ಮ ।
ಧವನ ವ್ರತನಿರುತೆ ನಿರಜಗಂಧೆ ನಿಜಗುಣದಿ ।
ಯುವತಿ ಜನಗುರುವೆನಿಸಿ ಭವನ ಮಂತ್ರವು
ಜಪಿಸಿಕೊಳ್ಗೊಂಡಳರ ಭಕ್ತಿಯಂ ॥

೨೧

ಒಂದು ದಿನ ಮಡಿಯಮ್ಮ ಬಂದಾತ್ಮ ಪತಿಯು ಪದ ।
ಕೊಂದಿಸುತ ನುಡಿದಳೇನೆಂದು ಪೇಳುವೆರಮಣ ।
ಕಂದನಿಲ್ಲದ ಸಂಸ್ಸ್ರತಿ ಕಾನನದ ವಸತಿ ಇಂದುಯಿಲ್ಲದ
ನಿಶಿಯೊ ಮೇಣ್ ॥
ಚಂದಳಿರ ಬಂಧಿಸದ ಹಂದರದ ಮನೆಯೊಲರ ।
ವಿಂದ ಬಾಂಧವನಿಲ್ಲದ್ದ ಗಲಂತೆ ಕುಲನಾಶ ।
ವಂಧೆಯರ ಜನ್ಮವ್ಯರ್ಥೆಂದು ನುಡಿದಳು ಚಾರು
ಪೂರ್ಣೇಂದು ಮುಖಿಕಾಂತಿಗೆ ॥

೨೨

ವೀರಶೈವವಿಲ್ಲದ ಆಚಾರಂ ವರಪದಕ ।
ಸೇರಿಸದಲಿರುವ ಗಳಹಾರವಂ ಜೋಗುಳದ ।
ಚಾರುಸರವಿಲ್ಲದ ಮಹಾರ ವಂಕಿ ವಿಗತಿ ಕಠೋರವಂ
ಕೇಳು ಮತ್ತೆ ॥
ಶೂರರಿಲ್ಲದ ರಣ ವಿಚಾರವಂ ಮದಧಾರಿ ।
ಸೋರದಿರುತಿರುವ ಗಜ ತೇಜವಿಲ್ಲದ ತೇಜ ।
ಬೇರುವಿಲ್ಲದ ತರು ಕುಮಾರರಿಲ್ಲದಿರುವ
ಸಂಸಾರವೇಂ ಸಾರಪ್ಪುದೋ ॥

೨೩

ಕಾಡಿಗಚ್ಚದ ಕಣ್ಣು ಕಾಲುಗುರ್ಗಣ್ಣೋಗು ।
ಛಾಡಿ ಹರಸದ ಬಾಯಿ ಬಿಲಿದಬಾಯ್ದಾಚಿನವು ।
ತೀಡಿ ತಿದ್ದದ ಹಲ್ಲು ಕಾಡುಮಿಗದಲ್ಲು ಬಲು
ಬೆಂಕಿ ಕಾಸದ ಟೊಂಕವು ॥
ಖೋಡಿ ಶುನಕನ ಟೊಂಕಕಾಡಿಕೊಳ್ಳದ ಹೆಣ್ಣು ।
ಕಾಡಯಿಟ್ಟೆಯ ಹಣ್ಣು ಎಣ್ಣೆಯರಷಿನ ನೀರು ।
ಪೂಡಿಕೊಳ್ಳದ ನಾರಿಯುಭತರ ಕುಲಕೇ ಹೆಮ್ಮಾರಿ
ಎಂದರೆ ಬಾರದೇ ॥

೨೪

ಕಿಬ್ಬೆರಳ ಪಿಡಿದು ತೊನೆಯುತಲಿ ಹಿಂದಕೆ ಮುಂದ ।
ಕಬ್ಬೆದಾದಾ ಬೂವ್ವವುಕ್ಕ ಅಚ್ಚೆಂದೆನ್ನ ।
ನಿಬ್ಬರದಿ ಕಾಡಿ ಶಿವಶಂಕರೆಂದೆನಲದಕೆತಿಬ
ತೆಂಕರೆಂದು ಪಾಡಿ ॥
ತಬ್ಬೆ ಕೊರಳಿಗೆ ಬಿದ್ದರಪ್ಪಿ ಗಲ್ಲಕೆ ಕರಗ ।
ಳೆಬ್ಬುಲೀ ಭಾಪು ಬಾಯೆಂದು ಮುದ್ದಾಡಿ ಮಸಿ ।
ದುಬ್ಬುಸುದಿನೊಳಿಟ್ಟುಬ್ಬರದಲಾಡಿಸುವ ಸಂಭ್ರಮುವ
ನಾ ಕಾಂಬೆನೇನು ॥

೨೫

ಏಕೆ ಯೋಚನೆ ಸತಿಯೆ ಸಾಕು ಬಿಡು ಬೇಡಖಿಳ ।
ಲೋಕಪಾಲಗೆ ನಿನ್ನ ಬಯಕೆಯುಮೃಕಂಡು ಮುನಿ ।
ಶೋಕ ಪರಿಹರಿಸಿ ಸತ್ಸುತನ ದಯಗೈಸಿದ
ಪಿನಾಕಿಯಿಂದೇ ನಿಲ್ಲವೆ ॥
ಬೇಕಾದ ಪದವಿ ಭಕ್ತರಿಗೆ ಕೊಡುವನೆ ಸತ್ಯ ।
ಮಾ ಕುವರಹರ ನಮ್ಮ ಮನೆ ದೈವಯಿರಲಾಗಿ ।
ವ್ಯಾಕುಲವು ಬಿಟ್ಟು ಗುರುಲಿಂಗ ಜಂಗಮ ಭಜಿಸಿ
ದಾಸೋಹ ಮಾಡು ನಿರುತಾ ॥

೨೬

ವರನ ನುಡಿಕೇಳಿ ಪದಕೆರಗಿ ಮುದವೆರಸಿ ಪುರ ।
ಹರನ ನೆನೆವುತ್ತಂದಿನಿರುಳು ಮಲಗಿರಲು ಶಂ ।
ಕರನು ತಾ ಬಂದು ವಧುವರರ ಕನಸಿನೊಳಂದು
ಚರರೂಪದಿಂದೆ ನಿಂದು ॥
ಮರುಗದಿರು ಮಗ ನಿನ್ನ ಕಿರಿತಮ್ಮನರಸಿ ಸುಂ ।
ದರಗಾತ್ರಿ ಸಂಗಮ್ಮನುದರದೊಳು ಜನಿಸಿ ಶಿವ ।
ಶರಣರೊಳಗಧಿಕನಹ ವರನಾಮ ಶರಣಬಸವಪ್ಪ
ನೆಂದಿಡು ಮರೆಯದೇ ॥

೨೭

ಜನಿಸಿದಾಗಳೆ ನಿಮಗೆ ತನುಜನಾದಪನವರು ।
ಮನಮುಟ್ಟ ನಿಮಗೊಪ್ಪಿಸುವರೆಣಿಸರೆರಡೆಂದು ।
ಸನುಮತದಿ ಕೊಂಡವಗೆ ಜನಕ ಜನನಿಯರಪ್ಪಿ
ರೈದೆನೀವ್ನೋವಿಲ್ಲದೆ ॥
ಎನೆ ಕೇಳುತೆಚ್ಚೆತ್ತು ಕನಸಿದೊಳ್ಳಿತು ಕಾಲ ।
ಹನನನೀಚರ ರೂಪದಿಂದ ಪೇಳಿದನೆಂದು ।
ಘನತೋಷದಿಂದಿರಲಿಕನುಜನರಸಿಗೆ ಗರ್ಭ
ಕನುವಾಯಿತಂದಿನಿಂದ ॥

೨೮

ಶಶಿಮಂಡಲವದಂದು ಬಿಸಿಗದಿರನಂತಾಯ್ತು ।
ಮಿಸುನಿಗಿರಿ ಯುಗಶಿರಕೆ ಮಸಿಯೊರಸಿ ।
ದಂತಾಯ್ತು ಬಸುರ ಬಲಬಾಗಿ ಕಾಲ್ದೊಸಿಯಲ್ಕೆ
ಮೊದಲಾಯ್ತು ಬಾಸೆವರಂ ॥
ಕಸವರದಿ ಪಚ್ಚ ಸಂಧಿಸದಂತೆ ತನುವಾಯ್ತು ।
ವೃಶಕೆ ತಾರಾಪಥವು ವಶವಾಯ್ತು ತ್ರಯತಾಪ ।
ನಶಿದಂತೆ ವಳಿತ್ರಯುವ ದೃಶವಾಯ್ತು ಬಸಿರಾಂತ
ಶರಣಬಸವನ ಮಾತೆಗೆ ॥

೨೯

ಬಸಿರಾಂತ ಭಕ್ತತಾಂ ಭಸಿತಪ್ರಿಯನೆಂದು ಸತಿ ।
ಭಸಿತತಿನತೊಡಗಿದಳು ಕುಷಡಾರಿ ವೈರಿಯನೆ ।
ರಸಷಡುಗಳಂದೋಕರಿಸ ತೊಡಗಿದಳು ತರುಣ
ಶಶಿಧಾರ ಭಕ್ತನೆಂದು ॥
ಶಶಿಕಲಾಪೋಲ್ವವರವಸನ ವುಟ್ಟಿಸೆದಳ್ಳೆ ।
ಬಸವನೇ ಬಸಿರಿನಲಿ ಯೋಗ ನಿದ್ರೆಯೊಳು ಪರ ।
ವಶವಾದನೆಂಬೊಲಾಕಳಿಸ ತೊಡಗಿದಳಬಲೆ
ಬಸಿರ ಬಲೆಯುವ ಕಾಲದೋಳ್ ॥

೩೦

ದಿವಸ ದಿವಸಕೆ ಗರ್ಭ ಬೆಳೆಯುತಿರಲಾಯ್ತದಕೆ ।
ನವಮಾಸಮೊಂದಿರಳು ಸತಿ–ಪತಿಯ ಕನಸಿನಲಿ ।
ನಿವಸು ಚರರೂಪನಿಂದವತರಿಸಿ ನುಡಿದನೆಲೆ
ಮಕ್ಕಳಿರಾ ಕೇಳಿರಿನ್ನೂ ॥
ನಿವಗೆ ವರಸುತನಪ್ಪನವನನಾದಯ್ಯಂಗೆ ।
ಯುವತಿ ಮಡಿಯಮ್ಮಂಗೆ ಕೊಡಿ ತಡಿಯಬೇಡೆಂದು ।
ತವೆ ಪೇಳಿ ಪೋಗಲೆಚ್ಚತ್ತು ಕನಸನು ನೆನಸಿ
ತೋಷಮಾನಸರಾವರು ॥

೩೧

ಆನಿತರೊಳಗೊಂದು ಶುಭದಿನದಿ ಪಡೆದಳು ಮಗನ |
ಸನುಮತದಿ ಮಡಿವಳಮ್ಮನ ಕರೆದು ಮಮತೆಯಿಂ |
ವನಜಮುಖಿ ಕೊಟ್ಟಳಿವನನಿನ್ನ ಮಗನಕ್ಕ ಹಿಡಿಯೆಂದು
ಕಡುತೋಷದಿಂದ ||
ಮಿನುಗೆ ಮುಗುಳುನಗೆ ಶಿವ ತನಗೆ ಪೇಳಿದ ಕನಸಿ |
ನನುವ ತಿಳುಹಲ್ಕೆ ಶಿವಶಿವ ಚೋದ್ಯ ಚೋದ್ಯವೆಂ|
ದೆನಗೆನ್ನ ಪತಿ ಪೇಳಿದ ತೆರಪೇಳಿದನಲಾಯೆಂದು
ಮಗನೆತ್ತಿಕೊಂಡಾಡಿ ||

೩೨

ಉಕ್ಕೇರಿದವು ಶರಧಿ ನಲಿದಾಡಿತಖಿಳ ಜಗ |
ದಿಕ್ಕೆಂಟಕಾನಂದ ಮಾಯ್ತು ಬಲು ತೋಷದಿಂ |
ನಕ್ಕಳೈ ಭೂದೇವಿ ಮೇಣ್ಶಿವನ ಭಕ್ತರಿಗೆ
ಬಲತೋಳು ನೇತ್ರಂಗಳು ||
ಚಕ್ಕನತಿ ಪಾರಿದವು ಕೇರಿ ಕೇರಿಯ ಜನರು |
ಉಕ್ಕುವಾನಂದದಿಂ ಸಕ್ಕರಿಯ ಬೀರಿದರು |
ಮುಕ್ಕಣ್ಣನಣುಗನುದ್ಭವಿಸಲಿಂತಾಯ್ತಖಿಳ
ಜಗಕೆಲ್ಲ ಸಮ್ಮೋದವು ||

೩೩

ಹುಟ್ಟಿದಾಗಳೆ ಕಲಶವಿಟ್ಟು ಪಂಚಾಚಾರ್ಯ |
ರಷ್ಟು ಜನ ಕೂಡಿತಂದೈದು ಸೂತ್ರದ ಭಕ್ತ |
ರಿಷ್ಟ ಪಾಲಿಪವಿಷ್ಟಲಿಂಗಕಭಿಷೇಕವಂ
ಮಾಡಿಸುತಲಾ ಕೂಸಿಗೆ ||
ಕಟ್ಟಿ ಪಾದೋದಕವ ಕೊಟ್ಟವನ ಭವಿತನವ |
ನಟ್ಟ ಚರಮುಖ್ಯರಿಗೆ ಕೊಟ್ಟರಗಣಿತದಾನ |
ತುಷ್ಟಿಯಿಂ ಯಾಚಕರು ಶ್ರೇಷ್ಠರಿವರೆಂದು
ಕೊಂಡಾಡಿದರು ಕೌತುಕದೊಳು ||

೩೪

ಇಂದುಧರನೆಮಗೆ ದಯದಿಂದ ಕರುಣಿಸಿದ ಮಗ |
ನೆಂದು ಕೊಂಡಾಡಿ ಮುಂಡಾಡಿ ಮೊಲೆಯೂಡಿ ಬಾ |
ಲೇಂದು ನಿಭನಿಟಲೆ ಮುದ ಪೊಂದಿಯಿರಲಾಗ ಕೈತಂದ
ವ್ಹನ್ನೆರಡು ದಿವಸಾ ||
ನಂದನಗೆ ನಾಮವಿಡಲೆಂದು ಮಣಿದೊಟ್ಟಿಲವ |
ನಂದು ಶೃಂಗರಿಸುತಲಿ ಬಾಗಿನಕೆ ಕರೆದರೈ |
ತಂದರಂಗಜನ ಪರಿವಾರ ಮುನಿಬಳಗ ತಾವಂದು
ಗೆಲಿಯಲ್ಕೆಂಬಿನಿಂ ||

೩೫

ಅಂಬುಜಾಸನೆಯರರವಿಂದದಳ ಲೋಚನೆಯ |
ರಂಬುಜದ ಪರಿವಾಸ ನಾಂಗಿಯರು ತುಂಬಿ ಕಚ |
ಬಿಂಬಸಮನಧರ ವರಕುಂಭಿ ಕುಂಭಾಭಕುಚ
ಬಿಂಬ ಜಘನದ ಸತಿಯರು ||
ಕಂಬು ಕಂಧರಿಯರರುಣಾಂಬು ಜಾಂಘ್ರಿಯರು ವರ |
ನಿಂಬದಳ ಪೂರ್ಬಿಯರು ರಂಭೆರತಿಸಮರೂಪ |
ಗಂಭೀರ ನಾಭಿಯರು ಜಂಬೀರಕಾಂತಿಯಂ
ನಾಂತಿಯರು ಸಲೆ ಬಂದರು ||

೩೬

ಕಲಕೀರ ವಾಣಿಯರು ಕಮಲ ಸಮ ಪಾಣಿಯರು |
ಕಲ ಪಿಕದ ಗಾನಿಯರು ಕಕುದ ಸನ್ಮಾನಿಯರು |
ಕಲಭಮದಯಾನೆಯರು ಕಾಳಾಹಿ ವೇಣಿಯರು
ಕಲೆವೆತ್ತ ಕಾಮಿನಿಯರೂ ||
ನಳಿನಾರಿ ವದನೆಯರು ನೆರೆ ಸುಖದ ಸದನೆಯರು |
ತಳಿರಸಮನಧರಿಯರು ದಾಡಿಂಬರದನೆಯರು |
ಕಲಧೌತಕಾಂತೆಯರು ಸಲೆರೂಪನಾಂತಿಹರು
ಸುಲಭನುತ್ಸವಕ್ಕೈದರು ||

೩೭

ನಾರಿಯರು ವರ ಸದಾಚಾರಿಯರು ಶಿವಲಿಂಗ |
ದಾರಿಯರು ದಾನಗುಣ ಪೂರಿಯರು ಸನ್ಮುಕ್ತಿ |
ದಾರಿಯರು ದುರಿತಕ್ಕೆ ಮ್ಮಾರಿಯರು ಪರರಿಗುಪ
ಕಾರಿಯರು ವೀರಶೈವಾ ||
ಚಾರಿಯರು ಚಾರುಗುಣಕಾರಿಯರು ಕೀರ್ತಿಗಾಂ |
ಭೀರಿಯರು ಅಪವಾದ ಭೀರಿಯರು ಆಗಮ ವಿ |
ಚಾರಿಯರು ಮಿಸುಪಸುಕುಮಾರಿಯರು ಬಾಗಿನಕೆ
ಬಂದರಾಸುಕುಮಾರನಾ ||

೩೮

ಇಷ್ಟಾನುಭಾವವರ ನೈಷ್ಠಾ ಸುಶೀಲೆಯರು |
ಶ್ರೇಷ್ಠ ಗುಣಭರಣಿಯರರಿಷ್ಟಗುಣ ಹರಣಿಯರು |
ದುಷ್ಟಜನ ದೂರಿಯರು ತುಷ್ಟಮನ ಪೂರಿಯರು
ಥಟ್ಟನೈತಂದು ಮಗನಾ ||
ಇಟ್ಟು ಕೈಯಿಂದ ಮಣಿದೊಟ್ಟಿಲಲಿ ತೂಗಿ ಪರ |
ಪುಟ್ಟದಂದದೊಳು ಧನಿಗೊಟ್ಟು ಪಾಡಿದರು ಮನ |
ಮುಟ್ಟ ಜೋ ಜಯತಥೆಥಿರಟ್ಟ ಜೋ ಜೋ
ಶರಣ ಪಟ್ಟದೊರೆ ಜೋ ಎಂದುಮೇಣ್ ||

೩೯

ಬಾಲ ಜೋ ಜೋ ವಿಜಿತಕಾಲ ಜೋ ಜೋ ಕರುಣ ।
ಶಾಲಿ ಜೋ ಜೋ ವರದಯಾಲ ಜೋ ಜೋ ಭಕ್ತಿ ।
ಲೀಲ ಜೋಜೋ ಭಕ್ತಪಾಲ ಜೋ ಜೋ ಸುಗುಣಶೀಲ
ಜೋ ಜೋ ಶಾಂತಿಯಾ ॥
ಮೂಲ ಜೋಜೋ ಮಹಿಮಾ ವಿಶಾಲ ಜೋ ।
ಜೋ ಲಿಂಗಾಂಗ ಕೀಲ ಜೋ ಕಲಿ ಹೃದಯ ।
ಶೂಲ ಜೋ ಜೋ ಎಂದು ಬಾಲೆಯರ ನೆರೆದಂದು
ಬಾಲಕನ ತೂಗಿ ಮತ್ತೆ ॥

೪೦

ಕಂದ ಜೋ ಜೋ ಭಕ್ತಿಕಂದ ಜೋ ಜೋ ಚರರ ।
ಬಂಧು ಜೋ ಜೋ ಭವದ ಕಂದು ಜೋಜೋ ವದನ ।
ವಿಂದು ಜೋ ಜೋ ಸುಗುಣ ವೃಂದ ಜೋ ಜೋ
ಕಮಲಗಂಧ ಜೋ ಕಾರುಣ್ಯದ ॥
ಸಿಂಧು ಜೋ ಸಜ್ಜನಾನಂದ ಜೋ ವಿನುತ ಸ ।
ಕ್ರಂದ ಜೋ ನಯನಾರವಿಂದ ಜೋ ಪೂರ್ಣದಯ ।
ತುಂದ ಜೋ ಜೋ ನಂದ ನಂದನ ವಿನುತ ನೆಂದು
ಜೋಗುಳ ಪಾಡಿದರ್ ॥

೪೧

ಬಾಗಿನಕೆ ಬಂದ ಮದನಾಗಗಮನೆಯರೆಲ್ಲ ।
ಜೋಗುಳದ ಪಾಡ ಪಾಡಿ ತೂಗಿ ಮಣಿದೊಟ್ಟಿಲವು ।
ಬಾಗಿ ಕೂಸಿನ ನೋಡಿ ಆಗ ತೋಷದಿಗೂಡಿ
ನಾಮಕೇಳ್ದರು ಗುರುವಿಗೆ ॥
ನಾಗಭೂಷಣ ಸ್ವಪ್ನಭಾಗದೊಳಗರಹಿದುದೆ ।
ಆಗವೇಳ್ಕುದು ನಾಮವೆಂದಡಾಗಲಿ ಎಂದು ।
ಕೂಗಿದಳು ಮೂರ್ಪೊಳ್ತು ಶರಣಬಸವಪ್ಪ
ನೆಂದಾಗವನ ಸೋದರತ್ತೆ ॥

೪೨

ನೆರೆದ ನಾರಿಯರೆಲ್ಲ ಭರದಿ ಬಾಗಿನಕೊಂಡು ।
ತಿರುಗಿ ಪೋಗಲ್ಕಿತ್ತ ಚರರಿಗೌತುಣದಿಂದ ।
ಕರಸಿ ಕಾಲ್ತೊಳೆದು ಪರಿಪರಿಯ ಪರಮಾನ್ನ
ಮೇಣ್ಪಕ್ವಾನ್ನದಿಂ ತಣಿಸುತೆ ॥
ವರ ವಸ್ತ್ರತಾಂಬೂಲಾಭರಣ ದಕ್ಷಣೆಗಳನು
ನೆರೆದಣಿವರೆದಿತ್ತು ಪರಕೆಗಳವೆತ್ತು ಪದ ।
ಕೆರಗಿ ಕಳುಹಿಸಿಕೊಟ್ಟು ಶರಣಬಸವನ ನೋಡಿ
ಪರಮ ಹರುಷಿತರಾಗುತೆ ॥

೪೩

ಅರಳೆಯು ಬಿಂದುಲಿಯು ಕೊರಳತಾಯಿತಗೆಜ್ಜೆ ।
ಸರಸಣ್ಣಲೇವಳವು ಸರಗಿ ಮಾಗಾಯಿ ಕಾ ।
ಲ್ಸರಪಳಿಯು ಹಾಲ್ಗಡಗ ಮುರುವು ಮುದ್ದುಂಗರ
ಗಳುಡುದಾರ ಕಡಗರಳಿಯು ॥
ಹರಡಿಕಂಕಣ ನಾಗಮುರಿಗಿ ಲಿಂಗದಕಾಯಿ ।
ಸುರಳಿ ಕಾಲ್ಗಡಗ ಹುಲಿಯುಗುರ ಪದಕಗಳು ಸುಂ ।
ದರಗಿಟ್ಟು ತೊಡಿಸಿ ಪರಿ ಪರಿ ವಸ್ತ್ರ ಕಣ್ಣಿನಕ್ಕರ
ಪೂರ್ಣಪಡಕೊಂಡರು ॥

೪೪

ಊಡಿ ಪಾಲ್ಬೆಣ್ಣೆ ಮುಖ ನೋಡಿ ಮುದ್ದಿಸಿ ಮೋಹ ।
ಮಾಡಿ ಸಲೆಜೋಗುಳಂ ಪಾಡಿ ಪೊನ್ತೊಂಬೆಯಂ ।
ದಾಡಿ ಜಕ್ಕುಲಿಸಿ ನಗೆಗೂಡಿದಾನನಕೆ ನಲಿದಾಡಿ
ಮುಂದಲೆ ಘ್ರಾಣಿಸಿ ॥
ಮೂಡೆ ಲಾಲಾಜಲಮು ಸೂಸುತಿರೆ ಕೈಗಳಿಂ ।
ತೀಡಿ ಕೊರಳೊರಸಿ ಮೊಲೆಯೂಡಿ ಘನತೋಷದೋ ।
ಳ್ಕೂಡಿ ಕಂದನದಿವ್ಯಗಾಡಿ ಗತಿನಲವೇರಿ ಪದುಳಿದರು
ದಂಪತಿಗಳು ॥

೪೫

ಹಿಡಿದ ವ್ರತವನ್ನು ತಾ ಬಿಡುವವನು ಬಿಟ್ಟದನು ।
ಹಿಡಿವವನು ಸಚ್ಚರಣರೊಡನವನು ಸರಿಬಾರ ।
ಗಡನೆಂದು ಕೈತಳಗಳಿಡಿದು ಬಿರ್ಚಾಡಿದನಭಿ
ನೈಸಿ ತೋರುವಂತೆ ॥
ಮೃಡನು ದೈವಲ್ಲೆಂದು ನುಡಿವನೆದೆಗೊದೆವುದೀ ।
ಪಡಿಯೆಂದು ತೋರಿಸುವ ತೆರದಿಂದ ತೊಟ್ಟಲ್ಲಿ ।
ಮೃಡದಿಂದೊಲಿದಿಯೆ ಘಿಲ್ಲೆಂದುದರಿವರ್ಗದೆದೆ
ಝುಲ್ಲೆಂಬ ಮಾಳ್ಕೆಯಿಂದಾ ॥

೪೬

ಬಾಲಕೇಯೊಳಂಬೆಗಾಲಿಟ್ಟು ನಡೆದು ತಾ ।
ನೇಳುತಂ ಬೀಳುತಂ ಗೋಡೆಗಾನುತೆ ನಡಿದು ।
ಕೇಳಿದೊಡನಾನಂದ ಬಪ್ಪ ತೊದಲ್ನಾತಾಡಿ ಮೊಳೆವಲ್ಲು
ಮಿನುಗೆ ನಕ್ಕು ॥
ಕಾಲಿಂದ ನಡೆಗಲ್ತು ಧೂಳಾಟನೋರಿಗೆಯ ।
ಬಾಲರೊಳಗಾಡಿ ಕೆಲಕಾಲ ಸಮೆದ್ಹೋಗಲಾ ।
ಮೇಲಾಗಲೇಳಬ್ದ ಬಾಲಕನಿಗೋದಿಸುವ ಕಾಲ
ಮೊದಗಲ್ಕರಿವುತೇ ॥

೪೭

ಓದಿಸುವ ಗುರುವರನ ಮತಕೆ ಮುದದಿಂದ ಕರ ।
ದೊಯ್ದು ತವಶಿಷ್ಯನಿಗೆ ಓದುಕಲಿಸುವದೆಂದು ।
ಪಾದಕವನತನಾಗಿಸಲ್ಕಂಡು ಮುದವೆಂದು ನಾದ
ದೊಳಗಖಿಳಕಲೆಗೆ ॥

ಆದಿ ಆದೋಂಕಾರ ಬರಿಸಲಿದರರ್ಥವೇ ।
ನೈ ದಯಾನಿಧಿ ಪೇಳಿಯೆಂದರಿದುರಿಸು ಪೇಳ್ವಡಾ ।
ಆದಿಶೇಷಗಶೇಷ ಹರಿಗರಿದು ಅಜನು ನಿಜ ಕಜ
ನಾದನೆನೆ ತಿಳಿವರಾರ್ ॥

೪೮

ಇದು ವೇದದಾದಿಸಲೆ ಯಿದು ಮಂತ್ರನಧಿದೈವ ।
ಇದು ಸಕಲಸಿದ್ಧಿ ಶಿವಸಾನಿಧ್ಯ ಮಾಳ್ಪವಂ ।
ತಿದು ಕಾಮಧುಗೆ ಕಲ್ಪಿತದ ಕಲ್ಪತರು ಸಚ್ಚಿಂತೆ
ಚಿಂತಾಮಣಿ ॥

ಇದು ಸುರ ಮುರಾರಿಯಜದನುಜ ಕುಲಗುರುವು ಮ ।
ತ್ತಿದು ಮದನವೈರಿಯಂತನ್ನೊಳಗೆ ಕೂಡಿಸುವ ।
ಸುದತೆ ಸಕಲೇಪ್ಸಾರ್ಥ ಸದ್ದಾತೆ ಮೌನಿಜನಮಾತೆ
ಇಹಪರ ಮಾನಿತೆ ॥

೪೯

ಪ್ರೀತಿಯಿಂ ಕೇಳ್ಮೊದಲು ಭೂತನಾಥನು ಕಮಲ ।
ಜಾತನಂ ಕರೆದಾರುವೊಗದ ಮಗನಿಗೆ ವಿದ್ಯೆ ।
ನೀ ತಿಳುಹಿಸೆಂದೊಡೆ ಹಸಾದವೆಂದೋಂಕಾರ ಬರೆದು
ಕಲೆಯೆಂದ್ಹೇಳಲು ॥

ಆತನಿದರರ್ಥವೇನೆಂದು ಕೇಳಲು ಬೊಮ್ಮ ।
ನೀ ತರುಣ ಸಾಮಾನ್ಯ ಮೊದಲ್ಗೇಳ್ವದೆನಲು ಜಡ ।
ಜಾತ ಜಾತನೆ ನಿನ್ನ ವಂಶಜಡನುದರಿಂದ ಬುದ್ಧಿ
ಜಡಸೂಪ್ತುಂಪನು ॥

೫೦

ಎನ್ನಲಂಜುತೆ ಬೊಮ್ಮ ಪನ್ನೆರಡುಸಾವಿರಂ ।
ಸನ್ನುತೋಂಕಾರಕ್ಕೆಯರ್ಥವಂ ಪೇಳಲವ ।
ಕಿನ್ನು ಬಹಳುಂಟು ನೀನೇಂ ಬಲ್ಲಿ ಜಡಜಜನೆ
ನಡಿಯೆಂದು ಜಡಿದು ನುಡಿದು ॥

ಪನ್ನಂಗ ಭೂಷನಂದಜನ ಮೊರೆಕೇಳ್ದದಕೆ ।
ಪನ್ನೆರಡು ಲಕ್ಷ ಪೇಳಲ್ಕೆ ಸರಿಯಿಲ್ಲ ವೆನ ।
ಲಿನ್ನು ನೀನೇಂ ಬಲ್ಲೆಯೆಂದು ಪೇಳಲ್ಕೋಟಿ ಪನ್ನೆರಡು
ಅರ್ಥುಂಟೆನೆ ॥

೫೧

ಇದ್ದರೊಳಿತಾಯ್ತದನು ಪೇಳಿ ನೀನೆಂತೆನಲು ।
ಬುದ್ಧಿ ತಾವರಿಯರೆ ಪೇಳ್ಕೆಳ್ವರಂತರಂ ।
ಗದ್ದುಗೆಯ ಬಿಟ್ಟೇಳ್ವದೆಂದು ಷಡುವದನ
ನುಡಿಯಲ್ಕದನು ಕೇಳಿ ಗಡನೆ ॥

ಕೃದ್ಧನಾಗುತೆನಾಗಬದ್ಧಕರ ನುಡಿವನಿತ ।
ಕೆದ್ದು ವಾರಿಜಜಾತ ಬಿದ್ದುಪಾದಕೆ ತನ್ನ ।
ನುದ್ಧರಿಸಲೇಳಿ ನಾಸಿದ್ಧಸಿಹೆ ಪೇಳ್ಕೇಳ್ವ ಪದ್ಧತಿಗೆ
ಯೆಂದಾಡುತೆ ॥

೫೨

ನೋಡು ನೀ ದಯದಿಂದ ಮಾಡು ಕೃಪೆ ಮಗ ।
ಶಶಿಚೂಡ ನಿಮಗನ್ಯನೇ ನಾಡಿದಕೆ ಪರಿಭವಣಿ ।
ಗೀಡು ಮಾಡನೆ ಸಲಹಬೇಕೆಂದು ಬೇಡಲದಕಾ
ಡಿದನು ಅಘದಮನನು ॥

ಮೂಡಿ ಮುಗುಳ್ನಗೆಯಾಗುವಾಗೀಶನೆಂದಜಗೆ ।
ನಾಡೆ ತಿರುಪಿಳ್ಳೆ ನಾಯ್ನಾರಾಖ್ಯದಿಂದವಗೆ ।
ಮಾಡು ನೀನೋಂಕಾರದುಪದೇಶ ಜಗವ ಕಾಪಾ
ಡೆಂದ ಶಿಖಿಗಮನಗೆ ॥

೫೩

ಆದೊಡೆ ತವಾಜ್ಞೆಯಿಂ ಪೋದಪೆನು ಪೊರೆಯೆಂದು ।
ಪಾದಕೆರಗುತೆ ಮರ್ತ್ಯದೋಳ್ಬಂದು ಮಾಹೇಶ ।
ಮಾದೇವಿಯರಿಗೆ ಮಗನಾಗುತಗಜಾತೆಯಿಂ ಬೋಧೆ
ವೆಮೃತಪಾನಂ ॥

ಗೈದೀಶನಿಂ ದಿವ್ಯ ತಿರುಪಾಡಿನಿಂ ಪಾಡಿ ।
ಮೋದದಿ ಸುವರ್ಣ ತಾಳಗಳು ಪಡೆದುದು ।
ವಾದಿಜನ ತರುಮೂಲ ಭೇದಕ ಕುಠಾರನೆಂಬೀ
ಬಿರಿದನಾಂತು ಮತ್ತೆ ॥

೫೪

ಜ್ಞಾನಸಂಬಂಧಿ ಸನ್ಯಾಸಿವಂದಿತಗೆ ಶಿವ ।
ಸೂನು ಪ್ರೇಮದಿ ಮೌಕ್ತಿಕದ ಮಂಟಪಂ ಕೊಡಲು ।
ತಾನೇರುತೈತಂದು ಸಕಲ ಭೂಮಂಡಲದಿ ಶಿವ
ನಿಂದೆಯಂ ಗೈಯುವಾ ॥

ಜೈನಕುಲ ಕಮಲಾಕರಕ್ಕೆ ಮದಕರಿಯೆನಿಸಿ ।
ಕೂನಪಾಂಡ್ಯನ ಸೇನೆಯಂ ಪುತ್ತನಂದಿಯಂ ।
ಭಾನುಸುತನರಮನೆಗೆ ಸಾನುರಾಗದಿ ಶಿವನ
ಚಕ್ರದಿಂದಲಿ ಕಳುಹಿಸಿ ॥

೫೫

ಕಪಟ ಸವಣರುಗೈದು ಕೃತ್ತಿಮಾನಲನ ಘನ |
ಉಪಟಳವು ತಿರುಗಿ ತಾಕಲ್ಕರಸನಂಗದೊಳ |
ಗಪರಿಮಿತ ಸಂತಾಪ ಪೆಚ್ಚಲರಸಿ ಮಂಗಾಯಕ್ಕ
ಕುಲಚರಿಯರಾಗಾ ||
ಕ್ಷಪಕಲಾಧರ ಸುತನನುಪಚಾರದಿಂ ಬರಿಸಿ |
ನೃಪನಂಗದುರಿನಿಲಿಸಿ ಕೂನಳಿದುಚೆಲ್ವೆನಿಸಿ |
ಕುಪಥವಂ ಬಿಡಿಸಿ ಪನ್ನೆರಡು ಸಾಸಿರ ಜಿನರ
ಶೂಲದಿಂ ಕಾಲಗೃಹಕೆ ||

೫೬

ನಡೆಸಿ ಬರುವಾಗ ತನ್ನೊಡನೆ ಬಂದರಿಗೆಲ್ಲ |
ಕೊಡಿಸಿ ನಿಜಲೋಕವಂ ಬಿಡಿಸಿ ಭವಪಾಶವಂ |
ಪಡೆದನೈ ಗುಹ ನೃಡನ ತೊಡೆಯೊಳಾಡುವ ಭಾಗ್ಯ
ಪಡಗರದಿ ಲಗ್ನದೆಡೆಂಯೊಳ್ ||
ನೃಡನ ಮಂತ್ರದ ಘನತೆ ನುಡಿವಡಾಗದು ನಾಗ |
ರೊಡೆಯನಿಗೆಯಿದನೊಮ್ಮೆ ನುಡಿದರಾದಪ ಮುಕ್ತ |
ಬಿಡು ಮನದ ಸಂದೇಹ ಗಡನೆ ಕಲಿಯೆನಲಾಗ
ಕಲಿತನೆಲ್ಲಾ ಕಲೆಗಳ್ ||

೫೭

ಅಷ್ಟವತ್ಸರಮಾಗಲಾಗ ಮಗನಿಗೆ ದೀಕ್ಷೆ |
ಕಟ್ಟಬೇಕೆಂದರಿದು ಗುರುವರಗೆ ಬಿನ್ನಹಂ |
ಕೊಟ್ಟು ಕರೆತಂದು ಪದಕಷ್ಟಾಂಗದಿನ್ನಮಿಸುತಾ
ದಯ್ಯ ಭಕ್ತಿಯಿಂದ ||
ಇಟ್ಟುಪದದೊಳಗೆ ಫಣೆ ಗುರುವೆ ಸಕಲರ ಮನದ |
ಭಿಷ್ಟ ಪಾಲಿಪ ಮಂತ್ರದೀಕ್ಷೆಯಂ ತವಸುತಗೆ |
ಕೊಟ್ಟು ಕಾಪಾಡೆಂದು ಶರಣಬಸವಪ್ಪನಂತಂದು
ಮುಂದೆಶೆಗೆಡಹಲು ||

೫೮

ವರಪುರದ ಶಿವಲಿಂಗ ಶರಣಬಸವನ ಚರಿತೆ |
ಗುರುಬಸವಣಾರ್ಯ ಚರಣಾಂಭೋಜಲೀನಮಧು |
ಕರನು ಗುರಲಿಂಗ ಚರಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ||
ವಿರಚಿಸಿದ ನೋದಿಸುವ ಬರೆವಗೋದುವಗೆ ಪರ |
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ |
ದೊರೆಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ವ್ವಯ ಸಂಧಿನಯಬಂಧಿಯು ||

ಸಂಧಿ ೨ ಕ್ಕೆ ಪದ ೫೮ ಕ್ಕಂ ಮಂಗಳಂ.



ಶ್ರೀ ಶರಣಬಸವೇಶ್ವರ ಪ್ರಸನ್ನ

# ಮೂರನೆಯ ಸಂಧಿ

ಸೂಚನೆ॥ ಗುರುವಿನಿಂ ದೀಕ್ಷೆಯಂ ಪಡೆದು ವರ ಶರಣಾಪ್ತ ।
ವರಣದೊಳು ಗುರುಮಹಾತ್ಮೆಯಂ ಕೇಳಿತೋಷದಿಂ ।
ಪರಮ ಪಾವನನಾದ ಗುರುವರನ ಚರಣಗಳ ಕೊಂಡಾಡಿ ಪದುಳಿರ್ದನು ॥

೧

ಪೊಡವಿಸುತನನುವಾರದೊಡಿಯಪಿತನಾತ್ಮ ಸುತಿ ।
ಗೊಡಿಯ ಸುತ ಸತಿ ಪಿತನ ದೃಢಕೊಲಿದು ವೇತ್ರವಂ ।
ಪಿಡಿದು ಬಾಗಿಲಕಾಯ್ದ ಭಕ್ತ ಬಂಧುವೆ ಕೃಪಾಜಡಧಿ
ಜಡಜಾರಿ ಚೂಡಾ ॥
ಮೃಡಮಹಾದೇವ ಶಿವಷಡುವದನ ವೀರಪಿತ ।
ಜಡಜಬಾಂಧವನಯನನೊಡಬಲಿಯವನೆಯ ಜಗ ।
ದೊಡೆಯ ಪಾಲಿಸು ಪಾರ್ವತೀಶ ಶಿವಲಿಂಗೇಶ
ಜಡಜಭವ ವಿನುತ ಜಗವಾ ॥

೨

ಅಕ್ಕಟಾ ನಿನಗೇನು ಮರುಳು ಪಿಡಿಯಿತೆ ಶರಣ ।
ಚಿಕ್ಕತನದೊಳಗೆನೀನಿನಿತೆಣಿಸುವದು ಗಿಳಿಯು ।
ಬೆಕ್ಕಿಗಾದರದಿ ಕರದೌತಣವ ಕೊಟ್ಟಂತೆ ಹಕ್ಕಿ
ಬೇಡನ ಬಲೆಗೆ ತಾಂ ॥
ಸಿಕ್ಕು ಸುಖಿಯಪ್ಪೆ ನೆಂದೆಂಬಂತೆ ಸರ್ವಸುಖ ।
ಕಕ್ಕಸದರುಜೆಯುಂಟಿ ನೆಂಬಂತೆ ಮತ್ತೆ ಜಗ ।
ದಕ್ಕಿರಾಪುವಿನಾಗಮನ ಬಯಸಿದಂತೆ ನೀ ದಿಕ್ಕಸದ
ಮತಿ ನೆನಿವರೆ ॥

೩

ಗುರುವರನು ಸಾಷ್ಟಾಂಗವೆರಗಿರ್ದ ಶಿಷ್ಯನಂ ।
ಕರದಿಂದೆ ಮೈದಡವಿ ಶಿರವ ಪಿಡಿದೆತ್ತಿ ಕು ।
ಳ್ಳಿರಿಸಿ ಪೇಳ್ಗನೆ ನಿನ್ನಿಚ್ಛೆಯೇನೆಂದು ಬಲು
ಕರುಣದಿಂ ಕೇಳಲಾಗ ॥
ಕರಗಳಂ ಮುಗಿದು ಸದ್ಗುರುವಿಂಗೆ ಪೇಳಿದನು ।
ಶರಣಬಸವಪ್ಪ ದೀಕ್ಷೆಯನಿತ್ತು ಪೊರೆ ಕೃಪಾ ।
ಕರನೆಂದು ಭಕ್ತ ಸುರತರುವೆಂದು ದುರಿತ
ಸಂಹರನೆಂದು ಕೊಂಡಾಡುತೆ ॥

೪

ಮಂಡೂಕ ಬಯಸುವದೇ ಪುಂಡರೀಕನ ವೃದ್ಧಿ ।
ಚಂಡಕರ ಕಿರಣ ಹಿಮಷಂಡಕಾಗುವದೇ ಕೋ ।
ದಂಡ ಕೆಡಲೆಳಿಸುವನೆ ಚಂಡ ವಿಕ್ರಮಿ ರಣದಿ
ಶೌಂಡಲಾಮಾಸಿಂಗನ ॥
ಕಂಡು ಸುಖಿಯಪ್ಪುದೇನುಂಡು ಬಾಳುವನು ವಿಷ ।
ಗೊಂಡು ಸಾಯ್ವದು ಹಿತವೇ ಕೆಂಡಬಯಸುವದೆ ನದಿ ।
ಪಂಡಿತನು ಸನ್ಮಾನ ಖಂಡನಿಗೆಯಳಿಸುವನೇ ಬಿಡು
ನಿನ್ನ ಮೂಢತನವು

೫

ಕಾದಂಬ ಬಯಸುವದೇ ಕಾದಿಂಬಿನಿಯ ಬರವು ।
ಚಾದಗೆಯು ಬೇಸಿಗೆಯ ವೃದ್ಧಿಂಗೆ ಸಹಿಸುವದೇ ।
ಆದರಿಸುವದೇ ಕಾಳರಾತ್ರಿಯಂ ಸೂರ್ಯನ ಚಕೋರ
ಕಂ ಕೋಕಮಿಥುನಂ ॥
ಮೋದದಿಂ ಚಂದ್ರಕಲೆಂಗಳೆಳಿಸುವದೇ ಸಕಲಸುಮ ।
ನಾದಕೆರಗುವ ದುಂಬೆ ಸಂಪಿಗೆಯ ಸುಮುಗಂಧ ।
ಸೇದುವದೆ ಸಾಕುಬಿಡು ಬೋಧೆಗೊಳೆ ಸಂಸ್ಕೃತಿಯ
ಹಾದಿ ಕೆಡುವದು ನಿಶ್ಚಯಂ ॥

೬

ಗುರುವೆ ನೀವು ಪೇಳ್ವದಿದು ಸರಿಯೇ ಮರುಳಂಗೆ ಧ ।
ತ್ತುರಿಯ ಮೆಲುಗೊಡುವಂತೆ ವಿರಹವಿಷ್ಟಪಗೆ ಸಲೆ ।
ಆರಳಪಾಶಿಕೆ ಮಾಡುತೊರಗಿಸುವದೊಳಿತೆ ಬಲು
ದುರುಳಗೆ ದುರಾಚಾರವಂ ॥
ನೊರೆವಂತೆ ದಿಗ್ಭ್ರಮೆಗೆ ಕರವಿಡಿದು ಗರಗರನೆ ।
ತಿರುಗಿಬಿಟ್ಟಂತಹನಿಕರಕೆ ಪಕ್ವವು ಗೈವ ।
ತೆರದಿ ತಾವೆನಗೆಯೀಪರಿ ಬೋಧಿಸುವದೊಳಿತೆ
ಗುರುರಾಮ ಪೇಳೆಂದನು ॥

೭

ಎಂಟುವತ್ಸರದಲ್ಲಿ ದೀಕ್ಷೆಯಾಗದಮನುಜ ।
ಗಂಟುವದು ದುರಿತಂದ ಗುರುವೆ ನೀವೇಳಿರ್ದ ।
ದುಂಟಲೈಯದು ಮರೆವೆಂತಕಟ ಶಿವ ಶಿವಾ
ಸಾಕಿದೇತಕೆ ಸುಮ್ಮನೆ ॥
ದಾಂಟಸುವೀ ಪೊಳ್ಕು ಭವದಾಂಟಿಸಲು ಬೋಧ ಸುಧೆ ।
ನೀಂಟಿಸುವದೆನಗೆ ವೈಕುಂಠ ಸಖ ಸನ್ನಿಭನೆ ।
ಕಂಟಕವು ಘನಸೈಪ ತುಂಟಿವಿಮ್ಮೀಸಂಸ್ಮೃತಿಯು ।
ತಂಟಿಯೊಲ್ಲೆನು ಗುರುವರಾ ॥

೮

ಎಂದರೆಲೆ ಶರಣ ನೀನಂದಂತೆ ಗೈಯಲೇಂ ।
ಸಂದೇಹವಿಲ್ಲೊಕ್ಕಲಿಗನು ಹದಬೆದೆನೋಡು ।
ನಂದದೊಳು ನಿನ್ನ ಮನ ಶೋಧಿಸಲು ನೀನೊರೆಗೆ
ಬಂದಿಯಾದುದರಿಂದಲೆ ॥
ಇಂದೆ ದೀಕ್ಷೆಯ ಮಾಳ್ಪೆನೆಂದಾಡುತಾತನಾ ।
ತಂದೆಯಂ ಕರೆದು ಭೂ ಶೋಧನೆಯ ಮಾಡಿಸುತೆ ।
ಹಂದರದ ಸರಕು ಮೊದಲೊಂದುಳಿಯದೆಲ್ಲನೆರುಹೆಂದು
ಪೇಳಿದ ಗುರುವರಾ ॥

೯

ಅಗಿದು ಆಕಳದೊಂದು ತೊಗಲಳತೆ ಭೂಮಿಯಂ ।
ತೆಗೆದು ಹರಳ್ದಂಚಲ ಬುಭಗಟ ಮಾಡುತ್ತಲಿದ್ದ ।
ಲಿಗಳು ಇಟ್ಟಂಗಿ ಮೊದಲಾದವಂ ಮಣ್ಸೋಸಿ
ಕುಣಿಯೊಳಗೆ ತೆಂಗೊಂದು ಮೇಣ್ ॥
ಪೊಗರ್ಸೈದು ರನ್ನಬಾಳದ ಬೇರು ಸಹಿತೊಳಗೆ ।
ಹುಗಿದು ಷಟ್ಸಾಸಮಾರ್ಜ್ಜನಂ ಗೈದು ಪೊಳಿವ ಕದ ।
ಳಿಗಳ ಕಂಬಂಗಳಿಂ ಬಿಳಿಗಬ್ಬಿನ್ನೊದಕೆಯಿಂ ಥಳ
ಥಳಿಸಿದುದು ಮಂಟಪಂ ॥

೧೦

ಭಿತ್ತಿಯೊಳು ಲೇಖಿಸಿದ ಚಿತ್ರಗಳು ನೋಡುಲುರೆ ।
ಚಿತ್ರಜಾತನು ಕಳ್ಗ ಳಿತ್ತಿತ್ತಿ ನೋಡದೊಲು ।
ಕೃತ್ತಿವಾಸನನಲ್ಲಮನ ಚನ್ನಬಸವನಂ ಭೃಂಗಿ
ಗುಹರಾಮಯ್ಯನ ॥
ಪುತ್ಥಳಿಗಳಂ ಬರೆದರೆನೆರಾಜಿಸಿತ್ತು ಮೇಣ್ ।
ಕತ್ತರಿಯ ಸಾರಣಿಯ ಕುಂಕುಮದ ಕಾರಣಿಯ ।
ಮುತ್ತು ಮಾಣಿಕ ವಜ್ರ ರತ್ನ ಸಾಲ್ಗು ದಿಗಳಿಂದೆಸ
ದಿತ್ತು ಶಿವಮಂಟಪಂ ॥

೧೧

ಮಕರದೋರಣ ರತ್ನನಿಕರದೋರಣ ದಿವ್ಯ ।
ಮುಕುರದೋರಣ ತಳಿರ ಸುಕರದೋರಣ ಕುಸುಮ ।
ಪ್ರಕರದೋರಣವಾರ ಸಕಲಜನ ಕಣ್ಮನಕೆ ಸುಖದೋರಿ
ನೆರೆದವಂದು ॥
ಭಕುತಮಾಹೇಶ್ವರರು ಕಕುವಗುಣ ಸಂಯುತರು ।
ಮುಕುತಿ ಸತಿ ಭೋಗಿಗಳು ಸುಕೃತ ಕೃತರಾಗಿಗಳು ।
ವಿಕಚ ಮುಖ ಕಮಲ ಶತಮುಖ ವಿನುತ ಶರಣ
ಜನನಿಕರ ನೆರೆಯಿತು ನಿಮಿಷದೊಳ್ ॥

೧೨

ಶೀಲ ಸಂಪನ್ನ ಸುಜ್ಞಾನಿಗಳ ಮಾನಿಗಳ ।
ಸಾಲ ಪಂಕ್ತಿಗಳಿಂದ ಜಾಣಜನ ಶ್ರೇಣಿ ಘನ ।
ಶೂಲಕರ ಭಕ್ತರಿಂಕಾಲಭಯ ಮುಕ್ತರಿಂದಾಲಿಗಾನಂದ
ಮಾಳ್ಪಾ ॥
ಶೈಲಸಮಧೀರರಿಂದಾನ ಗುಣುದಾರರಿಂ ।
ಲೋಕಕೃತಿರಹಿತರಿಂ ಲೋಲಕೃತಿಸಹಿತರಿಂ ।
ಶೀಲಕುಲ ಸುಜನಾನುಕೂಲರಿಂದೊಪ್ಪಿರ್ದುದಾಂ
ಲಲಿತತರಮಂಟಪಂ ॥

೧೩

ಪಂಚಪಲ್ಲವದಿಂದ ಪಂಚ ಕೊಲ್ಲಿಲೆಗಳಿಂದ ।
ಪಂಚ ಪತ್ರಗಳಿಂದ ಪಂಚ ವೇತ್ರಗಳಿಂದ ।
ಪಂಚರಸ ಫಲದಿಂದ ಪಂಚ ಸುಮುಕುಲದಿಂದ
ಪಂಚವರ್ಣದ ವಸ್ತ್ರದಿಂ ॥
ಪಂಚಾಮೃತಂ ಧ್ಯಾನ ಪಂಚ ಪಿಷ್ಟಗಳ ಸತಿ ।
ಪಂಚವಣ್ಣದ ವಲ್ಲಿ ಲಿಖಿಸುತಿಹ ಪಂಚರಿಂ ।
ಪಂಚಬಗೆ ಗುರುಗಳಿಂಮ್ಮಿಂಚಿ ತಾ ಮಂಟಪವು
ಪಂಚಮುಖನರಮನೆಯೊಲು ॥

೧೪

ಅಕ್ಷತಗಳಾರು ಪರಿಧೂಪ ದಶ ವಿಧದಿಂದ ।
ಯಕ್ಷಕರ್ದಮ ಗಂಧ ಗಂಧಗಟ್ಟಿಗಳಿಂದ ।
ಇಕ್ಷುಮುಖ ರಸದಿಂದೆ ದೀಕ್ಷಮುಖ ಫಲದಿಂದ
ಪ್ರೋಕ್ಷಿಸಿದಪಂ ನೀರಿನಿಂ ॥
ಅಕ್ಷಮಣಿಮಾಲೆಯಿಂ ಭಿಕ್ಷುಗಣಮಾಲೆಯಿಂ ।
ಭಕ್ಷನೆನಗಡಲಿ ತಂಬಿಟ್ಟೆಳ್ಳು ಚಿಗಳತಂ ।
ಅಕ್ಷಯದ ಪಾತ್ರೆಯಿಂ ದೀಕ್ಷಮಂಟಪಕೆ ಪೊಳೆ
ಯಿತಕ್ಷ ಗತಿರಮ್ಯಮಾಗಿ ॥

೧೫

ತಾ ದರ್ಭೆಗರುಕಿ ಸಲೆ ಶೋಧಿಸ್ಥೂಪತ್ರೆ ಚರ |
ಕಾದರದಿ ಕರೆತನ್ನಿಯೋದು ಶೈವಾಗಮಂ |
ತೇದು ತೆಗೆಗಂಧಮಾವೋದ ಸುಮಮಾಲೆಗಳು
ತೂಗು ಹಾಕೆಲ್ಲ ಕಡೆಗೆ ||
ಊದುಕರಣಿಯು ಭೇರಿನಾದಗೈ ದೇಶಿಕರ ||
ಪಾದಪಿಡಿ ಕುಶಮುದ್ರಿಗೈದಿಡುವದೆಂದೆಂಬ |
ನಾದ ತುಂಬಿರ್ದುದಾ ಬೋಧ ಮಂಟಪದೆಲ್ಲ
ದಿಕ್ಕಿನೊಳಗಕ್ಕರಿಂದ ||

೧೬

ವರಬ್ರಾಹ್ಮಿ ಮೂಹೂರ್ತದೊಳಗಿರದೈದು ಗುರುಬಗಿಯ|
ಚರವರರು ತಂತಮ್ಮ ಹರಿಭಾಗದೋಳ್ಕುಳಿತು |
ಹರಿಲೋಹ ತಾಮ್ರ ಕಂಚುರ ಜತದ ಕಲಶಂಗಳಿರಿಸಿ
ಗುಣವಂ ಸುತ್ತುತೆ ||
ಎರಡುಕಡೆಗೊಂದಂದು ದರಭೆಯುಂ ಗುರುಸುತ್ತಿ |
ಸುರವಿ ತಂಡುಲ ಮೇಲೆಯಿರಿಸಿ ನೀರಿನ ಕಲಶ |
ಗುರುಗದ್ದುಗೆಯ ಕೆಳಗೆ ಹರವಿಯುಪರಂತೆ ಮೇಲಿ
ರಿಸಿದರು ಹಚ್ಚಡವನು ||

೧೭

ಪಂಚಕಲಶಂಗಳಿಗೆ ಪಂಚಾಪಗಿಯ ಜಲವು |
ಪಂಚಪ್ರಣವಂಗಳಂ ಲಿಖಿಸಿ ತುಂಬಿರಿಸಿ ಮೇಣ್ |
ಪಂಚತಾಬತಿಯಿಂದ ಮುಚ್ಚಿರಿಸಿ ವರದಂಡ ಪಂಕ್ತಿ
ಪಲ್ಲವ ಕೊಲ್ಲಿಗಳ್ ||
ಪಂಚ ಪಂಚಗಳಿರಿಸಿ ಪಂಚ ಪಾತ್ರೆಗಳೊಳಗೆ |
ಪಂಚಾಮೃತಾರ್ಘ್ಯ ಪಾದ್ಯಾಚಮನೀಯಗಳಿರಿಸಿ |
ಪಂಚರತ್ನಂಗಳಂ ಪಂಚಗಣಸಿಯೊಳಿರಿಸಿ
ಪಂಚೋಪಚಾರ ನೆರಹಿ ||

೧೮

ಕಲಶಮೊಂದಂದಕ್ಕೈದೈದು ಪೊನ್ನಗಳಡಕಿ |
ಎಲೆ ಖರ್ಜುರಂ ಕದಳಿ ಕೊಬ್ಬರಿಯು ಬಾದಾಮಿ |
ಫಲವಿಟ್ಟು ತೊಳೆದುಮ್ಮೈ ಬಿಳಿದುಕೂಲವನುಡಿಸಿ
ತಲೆಗೊಂಡು ಸುತ್ತಿ ಮೈಯ್ಗೆ ||
ತಳೆದು ಭಸಿತಕ್ಷಸರ ಕರತಳದಿ ಬೆಳ್ಳಿ ಬ |
ಟ್ಟಲದೊಳಗೆ ಪೊನ್ನುಂಬಿನೆಲಕ್ಕೊಂದಿ ನಮಿಸಿ ಗುರು |
ತಿಲಕ ಬಿನ್ನಪವೆಂದ ಸುಲಭನಂ ನೋಡಿ ಮುಗುಳ್ನಗೆ
ಗೂಡಿ ಗುರುರಾಯನು ||

೧೯

ಏನು ಶರಣಪ್ಪ ಗುರುದೇವ ದೀಕ್ಷೆಯನಿತ್ತು |
ಹೀನತನುವಳಿದೆನ್ನ ಮಂತ್ರತನುವನ್ಮಾಡು |
ನೀ ನಡೆಯಬಲ್ಲೆ ನಾ ಪೇಳಿದೊಲು ನಡೆವೆಯಾದೊಡೆ
ಕೇಳು ಚಿತ್ತವಿಟ್ಟು ||
ಸೂನು ಗುರುವಿಂಗೆ ತನು ಮನ ಲಿಂಗಕಿತ್ತು ಚರ |
ರೇನು ಬೇಡಿದುದಿತ್ತು ಪರರಿಗುಪಕರಿಸಿ ಪರ |
ಮಾನಿನಿಗೆ ಪರಧನಕೆ ಮೋಹಿಸದಲಿರುವಿಯಾ
ಇರುವೆ ತಥ್ಯಮೆ ತಥ್ಯವು ||

೨೦

ಆದೊಡೊಳಿತೇಳೆನಲು ಪಾವಕಾನತನಾಗೆ |
ಪೇದಿಕೆಯ ಮೇಲಿರಿಸಿ ಕುಶ ಮುದ್ರಿ ಬೆರಳಿನೊಳು |
ವೇದಿಸುತ ಲಿಂಗ ಶಿರಕರ ತ್ರಿವಿಧ ಪೂಜಿಸುತಲೈದೆರಡು
ಪೊಳ್ತೊಂದನು ||
ವೇದಘೋಷಣೆಯು ಘನನಾದ ನಿಂದಿಸದಿವ್ಯ |
ವಾದ್ಯದಬ್ಬರವು ರುದ್ರಾದಿ ಶಿವಸೂಕ್ತಗಳ |
ನೋದುವೈಯ್ಯುಗಳ ಮಿಗಿಲಾದ ಸುಸ್ವರ ನಾರದಾದಿ
ಗಳ ಮಿಕ್ಕು ಮತ್ತೆ ||

೨೧

ನಿಗಮಾಗಮಜ್ಞ ಜನಜಾವಳಿಯ ಗಾವಳಿಯ |
ಮುಗುಳ ಶರಹರ ಭಕ್ತರಾವಳಿಯು ಭಾವಳಿಯ |
ರಗಣಿತರು ಪಾಡ್ವ ಶಿವಗೀತೆಗಳ ಜೋತೆಗಳ
ಝುಗ ಝುಗಿಸ ದಶ ಧೂಪದಾ ||
ಹೊಗೆ ಸುತ್ತ ಸುತ್ತೆ ಚಂಗಾಳಿಗಳ ಮಾಳಿಗಳ |
ಸೊಗಸ ತಮ್ಮಟೆ ಭೇರಿ ದಂಧಣದ ಗೊಂದಣದ |
ಮಿಗೆ ನಾದವೆಸಿಯೆ ಕುಸುಮುಗಳು ಮುಘ ಮುಘಿಸೆ
ಉಘೆ ಉಘೆ ಪರಾಕಂ ಘೋಷಿಸಲ್ ||

೨೨

ಶಿರಿದಿ ಘಂಟೆಯು ಬಾಜಿಸುತ್ತಿರದೆ ಭಸಿತವಂ |
ಗುರುತನ್ನ ಕರದಿ ಶಿಷ್ಯನಸರ್ವಶರೀರಕ್ಕೆ |
ಧರಿಸಿ ಕಳಪುತ್ತಲ್ಲಿ ನೆರೆದ ಜನರಂ ಮಂತ್ರನೊರೆ
ದನೇಕಾಂತದೊಳಗೆ ||
ಚರಪಾದ ಕರುಣವಂ ಸಲಿಸಿ ಗಳದೊಳು ಲಿಂಗ !
ಧರಿಸಿ ಪೇಳಿದನು ಸತಿಶರಣ ಪತಿಲಿಂಗವಿದು |
ಮರೆಯದಿರು ಮಗನೆ ಮರೆತಿರುವ ನರತಾ ನರಕ
ದೊರೆಗವನು ಕುರಿಯಾಪವಂ ||

೨೩

ಮರೆಯದಿರು ಗುರುಲಿಂಗ ಮರೆಯದಿರು ಚರಭಸಿತ ।
ಮರೆಯದಿರು ಹರನಾಕ್ಷಿ ಚರನ ಚರಣೋದಕ ।
ಮರೆಯದಿರು ಚರನೊಕ್ಕು ಮಿಕ್ಕುದಮ್ಮರಿಯದಿರು
ಪುರಹರನ ಮನುವನುದಿನಂ ॥
ಮರೆಯದಸಗಲೆ ಮಗನೆ ಪರರಿಗುಪಕಾರವಂ ।
ಮರವಿನೊಳು ಗೈಯದಿರು ಪರರಿಗಪಕಾರವಂ ।
ಮರೆಯದಿರು ಪರವನಿತೆ ಧನನಿಂದೆಗಳಿಗೆ ಮನ
ವೆರಗಿದರೆ ನರಕೆಂಬುದಂ ॥

೨೪

ಮಸ್ತಕದೊಳರ್ದ ನಿಜವಸ್ತುವಂ ಬಹಿಸ್ಕರಿಸಿ ।
ಹಸ್ತದೊಳಗಣ ಇಷ್ಟಲಿಂಗಕಾಕಳೆಯ ವಿ ।
ನ್ಯಸ್ತಂ ಗೈದು ಕರದಿಂದಕಂಠಕೆ ಧರಿಸಿ ಸ್ವಸ್ತ್ಯಸ್ತು
ಮೆಂದು ಮತ್ತೆ ॥
ಅಸ್ತಗೈದರಿವರ್ಗವರಿಜೀವ ಪರಬ್ರಮ್ಹ ।
ವಸ್ತುಮೇಕತ್ವದಳಕುಳ ನ್ಯಾಯವನ್ನರಿತು ।
ಅಸ್ತುಕಮಸೀವ ಪಂಚಾಕ್ಷರಿಯ ಮರ್ಮವಂ
ಬಿತ್ತದೊಳು ತಿಳಿಯೆಂದಸು ॥

೨೫

ಆರು ಚಕ್ರಂಗಳ್ಳೈದಾ᳚ರುತತ್ವಗಳು ।
ಆರು ಲಿಂಗಗಳಿಂ ನೂರರಿಮ್ಮೇಲೆ ಪದಿ ।
ನಾರು ಸಲ್ಕೆಸಕೀಲಗಳು ಆರು ಮುದ್ರಾದಿಗಳು
ಮೂರೇಳು ಸಾಸಿರದಾ ಸಾ ॥
ಆರು ಶತಜಪದ ವಿಸ್ತಾರವವರಿಮ್ಮೇಲೆ ।
ಮೂರು ಲಿಂಗಂಗಳ ವಿಚಾರಾತ್ಮ ಶೋಧನೆಯು ।
ಧೀರ ನೀ ತಿಳಿದಿನಿತು ತಾರತಮ್ಯದೊಳಗಾಚಾರ
ಗೈದರೆ ಮುಕ್ತನು ॥

೨೬

ಭೂಲತೆಯು ಮಧ್ಯದೊಳು ಕೀಲಿಸುತ ದಿಟ್ಟಿಸು ವಿ ।
ಶಾಲಮತಿ ಮೇಲೇರಿ ಪಶ್ಚಿಮದೊಳೆಸೆವ ಜಗ ।
ಮೂಲ ಮೂರುತಿ ಭಾವಲಿಂಗದಳ ಸಹಸ್ರ
ಸಲೀಲಜದ ಮಧ್ಯದಲ್ಲಿ ॥
ನೀಲಾದಿಮಣಿಪೊಗರು ಕೀಳೆನಿಸಿ ಭಾಸಿಸುವ ।
ಸಾಲುದೀವಿಗೆಯ ಬೆಳಗಿನೊಳಲ್ಲಿ ಸೂಸುತಿಹ ।
ಹಾಲು ಸವಿಸುಂಡು ಎಳೆಯ ಬಾಲಕನ ತೆರದಿ
ಲೋಲ್ಯಾಡೆಂದ ಗುರುರಾಯನು ॥

೨೭

ಈಡಪಿಂಗಳೆಯೊಂದು ಗೂಡಿದುದೆ ಸುಷುಮ್ನಾ ।
ನಾಡೆ ಸರಸ್ವತಿಯಮುನೆ ತುಂಗಭದ್ರೆಯ ಕೂಟ ।
ಮಾಡಲಿಕೆ ಸ್ನಾನ ಭವವೀಡಾಡುವದು ಮಗನೆ
ನೋಡಲ್ಲಿ ದಿಟ್ಟಯಿಟ್ಟು ॥
ಬೇಡದಲೆ ಮುಕ್ತಿ ಕೈಗೂಡುವದು ಹಲವು ಕಡೆ ।
ಗೋಡಿಸದೆ ಮನವು ನಲಿದಾಡಿದವಗೊಲಿವ ಶಶಿ ।
ಚೂಡ ನಿಶ್ಚಯ ಮಗನೆ ಬೇಡ ಹಲವಾಳಾಪ ಮಾ
ಡೊಂದೆ ಮನದ ದೃಢವ ॥

೨೮

ಆಲಿ ಬಲಿಯಲು ತನ್ನ ಗಾಳಿ ಬಲಿವುದು ಮಗನೆ ।
ಗಾಳಿ ಬಲಿದರೆ ಮನಸು ಹೇಳಿದೋಲ್ನಡಿವದೈ ।
ಕೇಳಿವರೆ ಮನ ಮಾತು ಪಾಳಾಗಿ ಇಂದ್ರಿಗಳು
ತಾವ್ಲಿಂಗವಾಗಿಪ್ಪವು ॥
ಮೂಲಕುಂಡಲಿ ಕೆಣಕಿ ಎಬ್ಬಿಸುತೆಲದರ ಮುಖ ।
ಮೇಲಕೆತ್ತಿರಲಲ್ಲಿ ಹಾಲುಸುರಿಯಲು ಕುಡಿವ ।
ಶೀಲಗುಣದವನು ದುರ್ಜಾಲ ಸಂಸಾರದೀ ಹಾಳು
ಕೂಪದಿ ಬೀಳನು ॥

೨೯

ಗುರುವೆ ನೀಪೇಳ್ದಷ್ಟವರಣವನ್ನಂಬಿ ಪರ ।
ತರ ಮುಕ್ತಿ ಪಡೆದವರ ಚರಿತೆಯಂ ಪೇಳುತು ।
ದ್ಧರಿಸಬೇಕೆಂದು ಪದಕೆರಗಿರ್ದ ಶಿಷ್ಯನಾ ಶಿರಮುಟ್ಟಿ
ಪರಕೆಯಿತ್ತು ॥
ಕರದಿ ಪಿಡಿದೆತ್ತಿ ಕುಳ್ಳಿರಿಸಿ ಮೈದಡವಿ ಕೇ ।
ಳ್ವರುಳ ಪೇಳುವೆನು ಘನಗುರು ಮಹಿಮೆ ನಿನಗೆಂದು ।
ಹರುಷದಿಂದದನು ವಿಸ್ತರಿಸತೊಡಗಿದನಾಗ ಗುರು
ರಾಯ ಜಿತಮಾಯನು ॥

೩೦

ಆದೊಡಲೆ ಮಗನೆ ಕೇಳ್ಗುರು ಮಹಿಮೆಯಂ ಪೇಳ್ವ ।
ಡಾದಿ ಶೇಷಂಗರಿದು ಕೇಳೆನ್ನರಸನೆಯಿಂದಾದ ।
ಪುದೆ ಆದನಿತು ಬೋಧಿಸುವೆನಾದರದಿ ಕೇಳ್ಮಗನೆ
ಪೌರಾಣದೋಳ್ ॥
ವೇದದೊಳು ವೇದಾಂತನಾದದೊಳು ಶಾಸ್ತ್ರದೊಳು ।
ಮಾದೇವನಾಗಮದ ಹಾದಿಯೋಳ್ಪೇಳ್ದಂ ಗು ।
ರೋರ್ದೈವ ಪರಂನಾಸ್ತಿ ಹರಮುನಿಯೆ ಕಾಯ್ವ ಗುರು
ಮುನಿಯ ಹರಕಾಯ್ವನೆಂದು ॥

೩೧

ಗುರು ಬೊಮ್ಮ ಗುರು ವಿಷ್ಣು ಗುರು ಸದಾಶಿವನು ಸ |
ದ್ಗುರು ರಕ್ಷಗುರು ಶೀಕ್ಷಗುರು ಮೋಕ್ಷದಾಯಕಂ |
ಗುರುತಾತ ಗುರುಮಾತೆ ಗುರು ಕಲುಷಧೂತ ವರ
ಗುರುಪೂತ ಗುರುದಾತನು ||
ಗುರು ಮರಣಕರಿಸಿಂಗ ಗುರು ದುರಿತರುಜೆಭಂಗ |
ಗುರು ಭವತಮಪತಂಗ ಗುರುಶರಣ ಜನಸಂಗ |
ಗುರು ಕರುಣಸಾಗರನು ಗುರುಮುಕ್ತಿಯಾಗರನು
ಗುರುಸರ್ವಮಯ ನಿಶ್ಚಯಂ ||

೩೨

ಗುರುದೇವ ದೇವ ಸದ್ಗುರು ಭಾವ ಭಾವವರ |
ಗುರುರಾಜ ರಾಜಪರ ಗುರುಭಕ್ತಿ ಬೀಜಘನ |
ಗುರುಶರಣ ಶರಣಷ್ಟವರಣ ಸುರವರಣ ಪರತರ
ಪಾವನಕೆ ಪಾವನಂ ||
ಗುರುವಿಲ್ಲದಾವಮತದಿರುವಿಲ್ಲ ಕೇಳ್ಮಗನೆ |
ಗುರುವಿಲ್ಲದಖಿಳ ಜಗಕರುವಿಲ್ಲವಂತಾಗಿ |
ಗುರುವಿನಂ ಪೊಗಳ್ದನಗುರೋರಧಿಕವೆಂದು ಪುರ
ಹರನೆ ಸದ್ಭಕ್ತಿಯಿಂದಾ ||

೩೩

ಇದಕೊಂದು ಪೂರ್ವಕಥೆ ಮುದದಿ ಪೇಳುವೆನು ಭೂ |
ಸುದತೆ ಕರ್ಣಾಭರಣ ಕರ್ಣಿಕಾರಂತೆಸೆವ |
ದದು ಕರ್ಣಿಕಾ ಪುರದ ಸದನದೊಳಗಾರಾಧ್ಯ
ಪುಂಗವಂ ಸುಜ್ಞಾನಿಯು ||
ಮದನ ಮದಹರ ಭಜಕ ಪದುಳ ವಿರೆ ಶು |
ಭದ ನಗರದಲಿಂದ ಬಂದವರ ಮುಖದಿ ಬಸವಣ್ಣನ |
ಭ್ಯುದಯ ಕೇಳುತಕಾಣ್ಬ ತವಕದಿಂದಂತೆ
ವಾಸಿಗಳ್ವೆರಸುತಂದು ||

೩೪

ಮುಂದಕೈತರುತ ಕಿಷ್ಕಿಂದ ನಾನಾತರುಗ |
ಳಿಂದ ಪಲತೆರಗುಲ್ಮದಿಂದರಿ ಭೋರಿ ಬಳಗ |
ದಿಂದ ಗಿರಿ ಗಿರಿ ಶಿಖರಕೆಂದರದ ಗುಂಪು ಸೊಬಗಿಂದ
ಕಂಟಕ ಕಲ್ಗಳಿಂ ||
ಪಂದಿ ಕಾಡ್ಕೋಣ ಗೋವೃಂದ ವನ ತುರಗಮದ |
ಶಿಂಧುರ ಬಿಡಾಲ ಚುಚ್ಚಂದರಿ ಸೃಗಾಲ ಮೊಲ |
ದಿಂದೆಸೆವ ಕಾನನದ ಅಂಧಕಾರಮು ಕಮಲ ಬಾಂಧ
ವನ ಕರಮರಸಿತು ||

೩೫

ಗಿರಿತರುಗಳೋಚ್ಚರಿಪ ಸಿಂಗಗಳ ಮಂಗಗಳ |
ಮರತಿಕ್ಕುತುರುಳಿಸುವ ಕೋಣಗಳ ಶ್ರೇಣಿಗಳ |
ವೆರಸಿಮುದಚರಿಸುತಿಹ ಭೂತಗಳ ಮರಿ ಕರಿಯು
ನರಿಬಳಗವಂ ||
ಕರುಗರಳ್ಗರಿವ ಕಾಡಾವುಗಳ ಪಾವುಗಳ |
ಗರಿಬಿರ್ಚಿಚಾರಿಪ ಕಪೋತಗಳ ಪೋತಗಳ |
ಜುಸುಳ ಖಗಮಿಗ ಜಾತಿಗಳ ಜಾತಿಗಳ ಗುಂಪಿಸಿಂ
ಪೆಂಪನಿಂ ಬನ ಮೆಸದುದು ||

೩೬

ಸೋಮಾರ್ಕ ಶೋಭಿಹರಿಪದದಂತೆ ಹರಿಮಯಂ |
ರಾಮಸೇನೆಯೊಲು ಪುಷ್ಕರಮಯಂ ರಣದಂತೆ |
ತಾಮರಸ ಜಾತನೆನೆ ಹೇಮಗರ್ಭಾನ್ವಿತಂ ಕಾಮಹರ
ನೆನೆ ಶಿವಮಯಂ ||
ಆ ಮಹಾರಾತ್ರಿಯೊಲು ರುಕ್ಷಗುಣ ವಿಲಸಿತೆ ಸು |
ಧಾಮಕರ ಜಾತದೊಲು ಮಹಿಷಗಮನಯುತೆ ಶರ
ಧಾಮದೊಲನಂತ ಖಡ್ಗಾನ್ವಿತೆ ಸುಧಾಮಯಂ
ಸ್ವರ್ಗದಂತೆಸೆದು ಮತ್ತೆ ||

೩೭

ಶರಮಯಂ ರುರುಮಯಂ ಹರಿಮಯಂ ನಾಡೆಗಂ |
ದರಮಯಂ ತುರುಮಯಂ ಸುರಮಯಂ ಮತ್ತೆ ಸೂ |
ಕರಮಯಂ ಮಾರ ಮದಮರಮಯ ರಣದಂತೆ
ರಾಮಾರಿಪುರದಂತೆ ಮೇಣ್ ||
ಶರಧಿವರಚಿತ್ರರಥಪುರದಂತೆ ಗೋಕುಲದ |
ಪರಿಯಂತೆ ಕೈಲಾಸಪುರಿಯಂತೆ ಬ್ರಹ್ಮಾಂಡ |
ವರ ಪಸರದಂತೆ ಶಿವಪುರದಂತೆ ಮೆರೆದುದಾ ದುರ್ಗಾ
ನನಂ ಕಾನನಂ ||

೩೮

ಕಾರೊಡಲ ಬಲಿದಂಧಕಾರ ಮಾದಂತೆಸೆವ |
ಘೋರಾಟವಿಯಲಿ ಮಾರಾರಿಯಂ ಸ್ಮರಿಸುತ್ತೆ |
ದಾರಿಯೊಳು ಬರುತಿರಲು ದೂರದಿಂದಿಗ್ವಸನ ಧಾರಿ
ಗಳು ಬಂದು ಪಾದ ||
ವಾರಿಜಕ್ಕೆರಗಿ ಬಾಯಾರಿ ತೊದಲಿಸಿ ಪೇಳ್ದ |
ರಾರಾಧ್ಯ ಪುಂಗವಗೆ ದೇದೇದೆದೇ ದೇವ |
ದಾರೀರಿ ರೀರಿ ಯಿದು ಘೋ ಘೋ ಘ ಘೋರಬಲು
ಪೋ ಪೋಪ ಪುಗದಿರೆಂದು ||

೩೯

ಕಾಡುಮಿದು ತಿಳಿವಡತಿ ಕೇಡಿಂಗೆ ಮುದವೀವ ।
ಬೀಡುಮಿದರೊಳಗಿರ್ಪ ಬೇಡನವನಾನಾರ್ಗೆ ।
ಬೇಡನವನವನ ಘನ ಮೂಢತನವನ್ನೆಣಕೆ ಮಾಡ
ಬಾರದರಸನಿಗೆ ॥
ಕಾಡಿಗೆಯ ಬೆಟ್ಟಕ್ಕೆ ನಾಡೆ ಚೊಚ್ಚಿಲ ಮಗನೊ ।
ಮೂಢಜನ ಗುರುಮುರಿದ ಮೀಸೆ ಕಿಡುಗಣ್ಣು ಕೊರೆ ।
ದಾಡಿವರದಾವಾನಳೋಪದಕೋಪಮದು ನೋಡಿ
ಸಹಿಸುವನಾವನೈ ॥

೪೦

ತಂದೆಯೇಂ ಪೇಳ್ವೆನವ ಕೊಂದ ಜನರಸ್ತಿಗಳು ।
ವಿಂಧ್ಯಾಚಲಕ್ಕೆ ಮಿಗಿಲೆಂದರತಿಯಶಮಲ್ಲ ।
ನಿಂದೆಂಟು ಮಂದಿಯ್ಯೆತಂದೆಮ್ಮ ನೋಡಿ ಪಲ್ದಿಂದು
ಮುಂದಕ್ಕೆ ಬಂದೂ ॥
ಒಂದುಳಿಯದಂತೆಲ್ಲ ಸುಲಿದುಕೊಂಡರು ವರಂ ।
ಕೊಂದು ಹಾಕಿದನು ನಾವೀರ್ವರೀಪದಕರುಣ ।
ದಿಂದವನ ಕಣ್ದಪ್ಪಿ ಬಂದೆವೈ ನೀವಡಿಯ ಮುಂದಿ
ಡದೆ ಹಿಂದಿರುಗಿರೈ ॥

೪೧

ಮಕ್ಕಳಿರಾ ನೀವ್ವೆಳ್ವುದೊಳಿತು ಶಿವಗುರು ದರುಶ ।
ನಕ್ಕೆ ಯಾತ್ರಿಗೆ ಪೋಪದಾರಿಯೊಳು ಸಂಕಟವು ।
ಪೆಕ್ಕಸವು ಬರಲಡಿಗಳಿಕ್ಕಬಾರದು ಹಿಂದಕಿಕ್ಕಿದರೆ
ಬಲುದೋಷವೈ ॥
ಮುಕ್ಕಣ್ಣ ಮಾಡಿದಂತಾಗಲೆಂಬುದ ಕೇಳು ।
ತಕ್ಕಟಕ್ಕಟ ಕೆಟ್ಟೆವೈ ಕೆಟ್ಟೆವೆಮಗ್ಧರಣ ।
ದಕ್ಕಿದುದೆಹಬ್ಬ ಪುಣ್ಯಕ್ಕೆ ಬಿಡಿಯೆಂದ್ದಾದಿ ಸಿಕ್ಕಕಡೆ
ಶಿಷ್ಯರೋಡಲ್ ॥

೪೨

ಸಸಿನೆಯಾಯ್ತೆಂದುದರ ಹಸಿತಮುಖನಾಗುತಲಿ ।
ಹಸುವಿಸಿಗೆಲೊಳ್ಪೊತ್ತ ಬಸವ ಭಯಹರನೆಂದು ।
ವೃಷಭನಾಮವ ನುಡಿಯುತಸಮ ಪಂಚಾಕ್ಷರಿಯನೆ
ದೆಯೊಳಗೆ ಪಿಡಿದು ನಡೆದು ॥
ಅಸವಸದಿ ಬರುವನಂಪಿಶಿತಶನ ಕಂಡು ಕರ ।
ದಸಿಯು ಝುಳುಪಿಸಿ ನಿಲ್ಲು ನಿಲ್ಲು ಹೋ ಕೊಡು ನಿನ್ನ
ವಶವಿರ್ದುದಂಕೊಂಡು ಅಸುಗೊಳದೆ ಬಿಡೆನೆಂದು
ಕಸಿದುಕೊಂಡ್ಡು ಸುಚಿಯದಿಗೆ ॥

೪೩

ಅನಿಸಲು ಖಡ್ಗನತಮೌನಿಜನ ಪಾಹಿ ಹರ ।
ಸೂನು ಸುತ ವಿನುತ ಸುರಧೇನು ಮಾಮುವಯೆಂದು
ಧೆನಿಸಲು ಕೇಳಿ ದಯಹೀನ ಬೇಡನಹೃದಯತಾನರಳಿತಾ
ಕ್ಷಣದೊಳು ॥
ಪ್ರಾಣಗೊಳ್ಳುವದರಿಂದೇನು ಫಲವೆಂದರಿದು ।
ಗೋಣಿಯೊಳಗಿರ್ದುದಂತೆಗೆದೊಗಿದು ತನ್ನ ಮನ ।
ಕ್ಷೀಣ ಮಾಗಲ್ಕೆನೆಗೆ ಬಾಣಸೂತ್ರದ ಲಿಂಗ
ಕಾಣುತಲಿವೇನೆನಲ್ಕೆ ॥

೪೪

ಇಷ್ಟಲಿಂಗಂಗಳಿವು ಕಟ್ಟಿಕೊಂಡರೆ ಮನದ ।
ಭೀಷ್ಟದೊರಕುವದೆನಲು ನಾನೊಂದು ಕೊರಳೂಳಗೆ ।
ಕಟ್ಟಿಕೊಂಬೆನೆ ಗುರುವು ಬಿಟ್ಟು ಧರಿಸಿದರವನು
ಥಟ್ಟನೇ ಸಾಯ್ವ ನಿರುತಂ ॥
ಒಟ್ಟಿಗಾಗುರು ನಿಮ್ಮೊಳುಂಟೆ ಲಿಂಗವನೆನಗೆ ।
ಕಟ್ಟುವರೆ ಪೇಳೆನಲು ನೀರ್ಮುಳಿಗಿ ಬರಲಭಯ ।
ಕೊಟ್ಟು ವನಚರಗೆ ಪೇಳ್ದರು ನಿಮ್ಮ ದೊರೆಗೆ ಬೆನ್ನ
ಟ್ಟ್ಯೊಯ್ದರರಸಾಳುಗಳ್ ॥

೪೫

ಸಿಕ್ಕಿರಾದರೆ ನಿಮಗೆ ಸಾವು ತಪ್ಪದು ಮಗನೆ ।
ಪಕ್ಕಣಕೆ ಪೋಗೆ ವನಸತಿ ಸುತರ ಕೊಂಡ್ಡಾದಿ ।
ಸಿಕ್ಕತ್ತ ಗಮಿಸಿ ಯಸುದಕ್ಕಿಸುವದೆನಲ್ಕವ
ನಂತೆಸಗಲನಿತರೊಳಗೆ ॥
ಉಕ್ಕುವಾನಂದದಿಂ ಸ್ನಾನವಂಗೈದು ಬಲು ।
ಚೆಕ್ಕನೈತಂದು ಪದಕಿಕ್ಕಿಹಣೆ ಲಿಂಗವೆನ ।
ಗಿಕ್ಕೆಂದು ಬೇಡಲಭಿಷೇಕಕ್ಕೆ ಪಾಲುದಧಿ ಸಕ್ಕರೆಯು
ಘೃತ ಮಧುಗಳಂ ॥

೪೬

ತರಿಸೆನಲು ಕಳುಹಲಾರಿರದಿರುವದಂ ಕಂಡು ।
ಚರ ಬಂದು ಪೇಳಲ್ಕೆ ಉರಿಸೂಸೆ ಕಣ್ಗಳಿಂ ।
ಗರ ಗರನೆ ಹಲ್ಗಡಿದು ವರ ಮೀಸೆ ಬೆರಳ್ಗಳಿಂದ್ದುರಿ
ಗೈದು ಭುಜ ತಟ್ಟುತೆ ॥
ಕರವಾಳ ಝುಳಪಿಸುತೆ ಸುರಲೋಕದೊಳಗಿರಲಿ ।
ತರುವೆ ನಿಚ್ಚಣಿಕೆಯಿಂದ್ಧರೆಯೊಳಗೆ ಮುಳುಗಿ ।
ದರೇಕರಗಳಿಂ ಪಿಡಿವೆಳೆವೆ ಬರಿನುಡಿಗಳೆಲ್ಲೆಂಬು
ತುರಿವೆದ್ದನಾ ಬೇಡನು ॥

೪೭

ತಾಮಸವ ಬಿಡು ಮಗನೆ ತಾಮರಸ ನಯನೆಯರ ।
ತಾಮರುಳಗೈವೆನೆಂಬುವ ಮರುಳನವರ ಹೃ ।
ತ್ತಾಮರಸ ವರಿವಡಾ ತಾಮರಸ ಭವಗಾಗದೀ
ಮಾನವರ ಮಹಿಮೆಯೇಂ ॥
ಶ್ರೀಮುನಿಪ ಜಮದಗ್ನಿ ಶಾಮಕಚ ರೇಣಕಿಯ ।
ಕಾಮವಶಳೆಂದವಳ ಪೊಟ್ಟೆಯೊಳಗಿಡಲಿಲ್ಲ ।
ಕಾಮಕೇಳಿಯು ಗೈದಳಾ ಮಹಾವಿಟನೊಳಗೆ
ಧಾಮವೆನಿಸಿತುಳಿದ ಸರರಾ ॥

೪೮

ಸಿಟ್ಟ ಬಿಟ್ಟರೆ ಪಾಪ ಸುಟ್ಟುಪೋಪುದು ಪಾಪ ।
ಸುಟ್ಟವಗೆ ಲಿಂಗವಂ ಕಟ್ಟದರೆ ಸರಿಚಿತ್ತ ।
ವಿಟ್ಟಾಲಿಸೆಂದವನ ಸಿಟ್ಟಳಿದು ಲಿಂಗವಂ
ಕೊಟ್ಟನಾ ಗುರುರಾಯನು ॥
ಅಷ್ಟರೊಳು ಮಾತಂಗ ತಮ್ಮನೆದೆಯೊಳಗೆರವಿ ।
ಪುಟ್ಟದುದು ಕಂಡು ಕಂಗೆಟ್ಟು ನಾಚಿಕೆಯಿಂದ ।
ಅಷ್ಟು ಸಿರಿಬಿಟ್ಟು ನೀರೊಟ್ಟಲೊಳು ಮುಳುಗಿದನು
ದಿಟ್ಟಜಗಕೊಂದಾದವಂ ॥

೪೯

ಆಸಮಯದೊಳಗೆ ಶಿವಧ್ಯಾನಪರರಾಗಿ ಪೂ ।
ಜಾ ಸರಕುಗಳನೆಲ್ಲ ಪೊತ್ತು ಪೆಗಲೊಳು ತನ್ನ ।
ದೇಸಿಕನ ಕರಕೊಂಡು ಕಲ್ಯಾಣಪುರಕೆಂದು ತೋಷ
ದಿಂ ನಡೆಯಲಾಗ ॥
ಆ ಸುರದ ಮಾರ್ಗವೆಲ್ಲ ಸಮಯಲನಿತರೊಳು ।
ಭಾಸುರದ ಘಂಟಾಪಾದಾಸರದ ತರುನೋಡಿ ।
ವಾಸಕಿದು ಯೋಗ್ಯವೆಂದಾಸನವನಿಕ್ಕಿ ಗುರು ಆಸರುಂ ।
ಗಳಿಯಲೆಂದು ॥

೫೦

ಕೂಡಿಸುತೆಪದಕೆ ಫಣಿ ನೀಡುತವರ್ಗಪ್ಪಣೆಯ ।
ಬೇಡಿ ಹೂ ಪತ್ರಿಗಳ ತರಪೋದರಿತ್ತಲಾ ।
ನಾಡದರಸನ ಮನೆಯ ಗೋಡೆ ಒಡೆದಿಹ ಕಳ್ಳರೋಡಿ
ಬರುತಿರೆ ಪಥದೊಳು ॥
ನೋಡಿರಾ ಮೋಸಿ ನಾಯ್ಕೋಡಿಗಳು ಬೆನ್ನಟ್ಟ ।
ಖೋಡಿಗಳೆ ನಿಮ್ಮ ಹತ ಮಾಡದಲೆ ಬಿಡೆನೆನಲು ।
ಬೇಡರಾಧನವ ನೀಡಾಡಿ ಗುರುವಿನ ಮುಂದೆ ಓಡಿ
ಪೋದರು ಕಾಡಿಗೆ ॥

೫೧

ಭರದಿ ಬೆನ್ನಟ್ಟದವರಿರದೆ ಬಂದಿವನು ತ ।
ಸ್ಕರರ ಗುರುವೆಂದರಿದು ಕರವಾಳದಿಂದವರ ।
ಕೊರಳರಿದರಿದನು ಪಾದದಿ ಪಾಪ ಪರಮ ಯತಿಗೆಂಬು
ದೇಂ ಬಂದಪ್ಪುದೇ ॥
ಸುರಿಧದನಮತ್ತೆ ಯಾಸಿರವಯ್ದು ತವ್ಮೊಳ್ವ ।
ದೊರೆಗೆ ತೋರಲ್ಕಾತ ಹರಹರನಿದೇಂ ಚೋದ್ಯ ।
ದುರಿತ ಭರಿತರೆ ಇಂಥ ಶಿರವರಿವರೇನೆಂದು ಕರದಿ
ಕಂಗಳ ಮುಚ್ಚುತೇ ॥

೫೨

ತನುಮರೆದು ರೋಮರುಝುಮ್ಮೆನೆ ಎದ್ದು ಗುಡಿಗಟ್ಟ ।
ಮನಸಿನತಿ ನೋವಿನಿಂದಿರಲನಘನಿವನು ಸ ।
ನ್ಮುನಿಯಲ್ಲ ಕೇಳ್ದೀವ ಧನ ಕನಕ ಲೋಭದಿಂ,
ಮುನಿವನಿವನಲ್ಲ ಜಗಕೆ ॥
ಎನೆಕೇಳುತ ತಲೆಯ್ಘು ಕಟ್ಟಿಸಿದನೂರ ಮುಂ ।
ದಿನ ಆಲವೃಕ್ಷದೊಳಗನಿತರೊಳಗಿತ್ತಲಾ ।
ತನ ಶಿಷ್ಯ ಬಂದು ಗುರುವಿನ ತಲೆಯ ಕಾಣದಿರ
ಲನುಸಮನ ಮುಂದೆ ಕೆಡೆದು ॥

೫೩

ದೋಷಯುತ ನಕಟಕಟ ನಾ ಶಿಷ್ಯನಾದ್ದರಿಂ ।
ದೀ ಸಂಪದನ್ನಿನಗೆ ಪ್ರಾಪ್ತಮಾಡುದೆ ಗುರು ಮ ।
ದೀಶನೆ ಮಹೇಶ ಜಗದೀಶ ನಿನ್ನ ಕಾಂಬೋದೇ
ಸುಜನ್ಮಕ್ಕಾಗುದೋ ॥
ದೇಶಿಕನನಗಲೆಂತು ವಾಸಿಸುವೆ ಮೀ ಜಗವಿ ।
ಹಾ ಶಿವ ಮಹಾದೇವ ಸಹಿಸಲೇಂತೀ ಶೋಕ ।
ನಾ ಸಾಯದೇತಕುಳಿದಿಪ್ಪೆನೆಂದಾಸುರದಿ ಸೂಸಿದನು
ನಯನವಾರಿ ॥

೫೪

ಮದ್ದು ನಾಸರಿದೆನಿದಕೆನ್ನ ಮೈಯೊಳಗೆ ತಲೆ ।
ಯಿದ್ದೇನು ಗೈವುದಿದ ಕೊಯ್ದೆನ್ನ ಗುರುವರಗೆ ।
ವೊದ್ದಿಸುವೆನೆಂದು ಖಡ್ಗದಿ ಶಿರವಗಡಿಯಲ್ಕೆ ಸಿದ್ಧ
ನಾಗಲ್ಕಾಗಳೆ ॥
ಸದ್ದಮಾದುದು ಗಗನ ಭಾಗದಿಂ ಬರಿದೆ ತಲೆ ।
ಬಿದ್ದರೇನಾಗುವದು ಮರುಳೆಯರೆ ಮಣ್ಣಿನಿಂ ।
ಮುದ್ದು ಮೊಗಗೈವುತಸು ಉದ್ಧಾರ ಮಾಡೆಂದು
ನುಡಿದ ಸಿಡುಧ್ವನಿ ಕೇಳುತೆ ॥

೫೫

ಬಲುತೋಷದಿಂದಮೃದ್ದಲಿಯೊಂದ ನಿರ್ಮಿಸುತ |
ಕಲಿಸಲ್ಕೆ ತನುವಿನೊಳು ಕಳೆಯೇರಿಯಸು ಬರಲು |
ಝಳಿಲನದ ಕಂಡು ತಾ ನಲಿದಾಡಿ ಹೂ ಪತ್ರಿಸಲಿಲವಂ
ಸೋಸಿರಿಸುತೆ ||
ಬೆಳಗಿನ ಶಿವಾರ್ಚನೆಯ ಬಳಸಿರಲು ತಾವರೆಯ |
ಗೆಳೆಯ ನೋಡುವೆನೆಂದು ಬಲು ಭಕ್ತಿಯಿಂದ ಮೂಡಲ|
ದೊಳಗೆ ಮೂಡಿದನು ನಲಿದಾಡಲಳಿನಿ ಕರಗೂಡಿ ಸೇರ
ಲ್ಗೂಕಗಳ್ ||

೫೬

ಆ ಕಾಲದೊಳಗೆ ಸದ್ಗುರುವರರ ನಿರೂಪವಂ |
ಕೈ ಕೊಂಡು ದೇಶಿಕನ ಕೈಕೋಲನಾಗಿ ಮುಂದಾ |
ಕಲ್ಯಾಣಕ್ಕೆ ಪೋಗುವ ತವಕದಿಂದಂದು ಬಂದೊಂದು
ಪುರದ ಹೊರಗೆ ||
ಹಾಕಿ ಗದ್ದುಗೆ ವಟ ಛಾಯೆಯೊಳು ಕೂಡಿಸುತೆ |
ತಾಕುಳಿತು ಪಾದ ಪರಿಚರ್ಯ್ಯಂಗೆಯ್ಯುವ ಪೊಳ್ತು |
ನಾಕದೆಶೆನೋಡಿ ತರುಶಾಖೆಯೊಳು ಜೋಲ್ದಾಡುವ
ಕಮಳ ಮುಖ ಕಂಡನು ||

೫೭

ಹಾ ಗುರುವೆ ಬಿಟ್ಟೆನ್ನ ಹೇಗೆ ಬಂದಿರಿಯಿಲ್ಲಿ |
ಗೀಗೆಂದು ಸರಸರನೆ ಮರವೇರಿ ಸಿರ ಬಿಟ್ಟು |
ಬೇಗನಿಳಿದಾಗಗನವಾಗು ನೆನಪಿಸಿಕೊಂಡು
ಮೃದ್ಕಾಯವಂ ಮಾಡುತೆ ||
ಆಗಲಾಶಿರವದಕೆ ಜೋಡಿಸುತವಗೆ ಸವ್ಯ |
ಭಾಗದೊಳು ಕೂಡಿಸುತ ಪಾದತೀರ್ಥವ ಪಡೆದು |
ಶ್ರೀಗುರುವೆ ಸಲಿಸೆನಲ್ಕಾಗಳಸು ಬಂದು ಶಿರಬಾಗಿ
ಸಲಿಸಿದನಾತನು ||

೫೮

ಗುರುಗಳೀರ್ವರಿಗೆ ಪರಿಚರನಾಗಿ ಕಲ್ಯಾಣ |
ಪುರಕೈದಿ ಬರಕೇಳ್ದು ಗುರುಬಸವರಾಜ ಶಿವ |
ಶರಣರೊಡವೆರಸಿ ಬಂದಿರದೆರಗೆ ನೆರೆದ ಜನ
ಬೆರಗಾಗಿ ಕೇಳ್ದರಾಗ ||
ಶಿರ ತನುಗಳೆರಡು ಪರಿಯಿರಲೇನುಕಾರಣವು |
ಗುರುವೆ ಪೇಳೆನೆ ಬಸವನರುಹಿದನು ತಾನ |
ವರಚರಿತೆ ಕೇಳುತಚ್ಚರಿಪಟ್ಟು ಕಟಕದವರುರೆ
ಹಿಗ್ಗಿ ಕೊಂಡಾಡಲು ||

೫೯

ಅಷ್ಟರೊಳು ಸುರರು ಸುಮವೃಷ್ಟಿಗರಿಯುತ್ತಿರಲು |
ಥಟ್ಟನಿಳಿಯಿತು ಸುಮನಯಾನಶಿವಲೋಕದಿಂ |
ಶ್ರೇಷ್ಠರುಗೆಯೆನಲು ಮರುದೇಷ್ಟಲೋಚನನ
ವರನಿಟ್ಟೊಯ್ದು ತೇರಿನೊಳಗೆ ||
ಕಟ್ಟಿಗಣಪದಮುಕ್ತಿ ಕೊಟ್ಟನೆನಲಾಚಾರ |
ಶಿಷ್ಟರಾಚಾರ್ಯನನ್ನಂಬಲೇನಪ್ಪರಿದು |
ನಿಷ್ಠೆಯಿಂ ಕೇಳುವರಭೀಷ್ಟವಂ ಸಲಿಸುತಲಿ
ಕಷ್ಟಕಳೆವನು ಶಂಕರಾ ||

೬೦

ಒರೆವೆನಿನ್ನೊಂದು ಕಥೆ ಶರಣಪ್ಪ ಕೇಳು ಹರಿ |
ಹರ ಕವೀಶ್ವರಗುರುವು ಹಂಪೆಯೊಳಗಿರಲವಗೆ |
ವರ ಶಿಷ್ಯರಾಘವೇಶ್ವರನೆಂಬನುಭಯತರ ಕವಿತಾ
ವಿಶಾರದೆಂಬ ||
ಬಿರುದಾಂತು ಗುರುಲಿಂಗ ಚರಭಕ್ತಿಯೊಳಗೆ ಸು |
ಸ್ಥಿರದಿರುತಲೊಮ್ಮೆ ವರ ಹರಿಶ್ಚಂದ್ರ ಕೃತಿಯರಚಿ |
ಸರಲದಕೆ ಮೆಚ್ಚುತ ನರಪ ಕರಿಶಿರದೊಳಗೆ ಮೆರಸಿ
ದನು ಚರಿತೆ ಸಹಿತ ||

೬೧

ಮೆರೆಯುತಲಿಬರುತ ಗುರುವರನ ಮಠ ಕಾಣುತಲಿ |
ಕರಿಯ ಶಿರದಿಂದಿಳಿದು ಭರದಿಯೊಳಪೊಕ್ಕು ಭವ |
ಹರನೆದುರ ಸಾಷ್ಟಾಂಗವೆರಗಿರ್ದ ತನ್ನನುಂ ಪರಸ
ದಿರೆ ವಿನಯದಿಂದ ||
ಗುರುವೆ ಮೌನವೇತಕೆನೆ ನೆರೆಪಾಪಿಪೋಗುನಿ |
ಹರ ಕವೀಶ್ವರನೆಂಬ ಬಿರುದು ಬರಿದೆದಿಸಿ ದು |
ರ್ನರರೊಲಿವ ಭವಿಗಳರಸರ ಚರಿತೆ ಪೇಳುವರೆ
ದುರುಳ ನಡೆನಡೆಯೆಂದನು ||

೬೨

ನರರಲ್ಲವೇನುಸವ ಚೋಳ ಬಲ್ಲಾಳ ವರ |
ಧರಣಿ ಪಾಲರ ಚರಿತೆ ವಿರಚಿಸಿದುದೇಕೆನಲು |
ಹರಪಾಪ ಹರನೆಂದು ಕರದಿ ಕಿವಿಮುಚ್ಚಿ ಕೊಳುತು
ರಿದೆದ್ದು ಪಾವಿಗೆಯುಸು ||
ತೆರೆದ ಮುಖಕಿಡಲು ಪಲ್ಧರುಣಿಗುವ ರಿದವೆಲ್ಲ |
ವರಕೆ ಪಲ್ಪಡಿವದೇನರಿದೆನಗೆ ಪಂಪಾಧೀ |
ಪುರದರಸನೊಲುವೆ ಘನವಿರಲೆಂದು ಭರದಿಂದ
ಲೈತಂದು ನತನಾಗಲು ||

೬೩

ಬರಲೊಡನೆ ತನ್ನ ತಾ ವರಕೆರಗಗೊಡದೆ ವರ ।
ಚರರೂಪಿನಿಂ ಬಂದು ದರುಶನ ಕೊಡು ಪುರ ।
ಹರ ವಿರೂಪಾಕ್ಷ ಮೊಗದೆರಿಯದಿರೆ ಮರ ಮರನೆ
ಮರುಗಿ ಮುರಹರ ಮಿತ್ರನೆ ॥
ಕರುಣಸಾಗರ ಭಕ್ತಹರಣನೀನೆಂದೆಂಬ ।
ಬಿರುದು ಮಾಜುವರೆ ಶಂಕರನೆ ಶುಭಕರನೆ ಭಯ ।
ಹರನೆ ಗಿರಿಧರನೆ ಗಿರಿಜಾವರನೆ ಗರಧರನೆ
ಸ್ಮರಹರನೆ ಸಾಹಿ ಸಾಹಿ ॥

೬೪

ಚಂಡಕರನಯನ ಮಾರ್ತಂಡ ಭವಹರ ಕಾಮು ।
ದಂಡಗಳ ದೈತ್ಯಜನ ರುಂಡಮಾಲಾಂಕ ವರ ।
ಖಂಡೇಂದುಧರ ವಾಮಚಂಡಿಕಾನ್ವಿತ ನಾಗಕುಂಡಲ
ಕುದೈತ್ಯ ಹನನಾ ॥
ಪುಂಡರೀಕಾಕ್ಷ ಪದ ಪುಂಡರೀಕಾದ್ರಿ ಕೋ ।
ದಂಡ ದುಷ್ಪಾಪ ಘನಚಂಡ ಮಾರುತ ಸುರವಿ ।
ತಂಡ ವಿನಮಿತ ಸಾಹೆ ಪಾಂಡುಸುತ ಶರವರದ
ಪುಂಡರೀಕಾಜಿನಧರಾ ॥

೬೫

ನಂಜುಗಳನೀ ಮಾನಕಂಜರನ ಮನೆಗೈದು ।
ಕಂಜಾಕ್ಷಿಯಳ ದಿವ್ಯಕಂಜ ಮುಡಿಗೊಯ್ಸಿದನೆ ।
ಕಂಜ ಭುಗ್ವಿನುತ ಪದಕಂಜ ಮದ ಕುಂಜರ
ವಿಭಂಜನನೆ ನಿರಂಜನ ವಿಭೋ ॥
ಕಂಜಾಪ್ತ ವರಶಶಿ ಧನಂಜಾಯಕ್ಷನೆ ಕಾಲ ।
ಭಂಜನ ವಿರೂಪಾಕ್ಷ ಕಂಜಾಕ್ಷ ವರಪಕ್ಷ ।
ಕುಂಜರಾನನ ತಾತ ಕಂಜಶರಮದ ಧೂತ
ಕಂಜ ಕಂಧರ ಸಾಹಿಮಾಂ ॥

೬೬

ಪಾಲ ಪಾಲಕ ವಿಶ್ವಮೌಲಿ ಜಯವಾತೃಕ ।
ಪಾಲಿ ಪಾಲಿಸು ಪಾಲಿ ಪ್ರಾಲೇಯಾಚಲದುಹಿತ ।
ಕಾಲ ಕಾಲ ವಿಮಥನ ಬಾಲೆ ಕೈ ಪಾಲ್ಸವಿದ ಶೂಲಿ
ಸೂಳಿಯ ಚೋಳಿಯು ॥
ಕೀಲಂಬಲಿಗೆ ಮೆಚ್ಚಿ ಕೀಲಾಲದೋಲ್ ಸವಿದ ।
ಭಾಳಲೋಚನ ಸೃಷ್ಟಿ ಮೂಲಕಾರಣ ಮೂರ್ತಿ ।
ಶೈಲವರ ಚಾಪಗಣಲೋಲ ಪನ್ನಂಗಸ್ತಿಮೂಲ
ಪಾಲಿಸು ಶಂಕರ ॥

೬೭

ದಕ್ಷ ದಕ್ಷ ವಿಪಕ್ಷ ಪಕ್ಷಿಗಮ ವರ ಪಕ್ಷ ।
ಕಕ್ಷಮದ ಶಿಕ್ಷ ಜಗರಕ್ಷ ಜಗದಕ್ಷಿ ಘನ ।
ರುಕ್ಷಗಣಪತಿ ಸರ್ವಭಕ್ಷಲೋಚನ ದೇವ ನೀಕ್ಷು
ಕೋದಂಡ ಶೀಕ್ಷಾ ॥
ಯಕ್ಷಗಣ ಪಕ್ಷಸಖ ಚಕ್ಷುಸ್ಮೃತಿಗಾನ ಸುಖ ।
ನಕ್ಷಪದವಿನುತ ವಿಷಭಕ್ಷ ಭವದೂರ ಶಿವ ।
ಉಕ್ಷಪತಿಗಮನ ಪಂಪಾಧ್ಯಕ್ಷ ಸಾಕ್ಷಾದ್ವಿರೂಪಾಕ್ಷ
ರಕ್ಷಿಸೆನ್ನ ॥

೬೮

ಎಂದಿನಿತು ನಿಜಭಕ್ತಿಯಿಂದ ಕೊಂಡಾಡುತಿರ ।
ಲಿಂದುಧರ ವರ ಶಾಮಕಂಧರ ವಿರೂಪಾಕ್ಷ ।
ಕಂದೆರೆದು ನೋಡಿ ಮೊಗವಂದೋರದಿರಲಾಗ
ಬೆಂದು ಬೇಗುದೆಯಾಗುತೆ ॥
ತಂದೆ ಸಾಕಾಯ್ತೆ ನಿನಗಿಂದೊಪ್ಪಿಸುವೆ ಜೀವ ।
ವೆಂದಾತ್ಮಘಾತಕನು ಸಂಧಾನಗೈಯ್ಯುತಿರ ।
ಲೊಂದು ನಿಡುಧ್ವನಿ ಗಗನದಿಂದಾಯಿತೆಲವೊ
ಮತಿಮಂದ ಬಿಡು ಸಂದೇಹವಂ ॥

೬೯

ನಡೆಪೋಗು ಮುಂದಕಡಿಯಿಡು ಇಲ್ಲ ತಡಿಯದಿರು ।
ಒಡೆಯನಡಿಪಿಡಿಗಡನೆ ಸಡಿಯದಿರು ಜಡತನದಿ ।
ತೊಡಕದಿರು ಸುಡುಮನದ ಕೆಡವಾಸೆ ಬಿಡು ನಿನ್ನ
ಜಡಮತಿಯು ತೊಡಕಮಿದನು ॥
ಮಿಡುಕದಿರು ಕಂಡಕಡೆ ಪುಡುಕದಿರು ದೈವ ತಂ ।
ಮೃಡನೆ ಗುರುವರ ನಡಿಗೆ ಪಡಿಬಾರನೆಂದೆಂಬ ।
ನಿಡು ಧ್ವನಿಯ ಕೇಳುತಲೆ ನಡೆದನಾ ಗುಡಿಯಿಂದಾ
ಪೊರಮಡುತ ಕಡು ಜವದಲಿ ॥

೭೦

ಬಂದು ಪೊಡಮಟ್ಟು ತವ ಕಂದನಪರಾಧ ಕ್ಷಮಿ ।
ಸೆಂದು ಬಿನ್ನೈಸುತಿಂತೆಂದ ಗುರು ತಂದೆ ಗುರು ।
ಬಂಧು ದಯಸಿಂಧು ಗುರುಯಿಂದುಧರನಿಂದ ಗುರು
ವಂದ್ಯನೆಂದೆಂಬ ನುಡಿಯು ॥
ಮಂದಮತಿ ಸಂದಿಯೇನೊಂದರಿಯದಜ್ಞಾನ ।
ದಿಂದ ಮರಗೆಟ್ಟು ಪದಕೊಂದಿಸಲದಷ್ಟುದ ।
ದಿಂದ ಭವವಂದುಗಕ್ಕಿಂಮು ನಾನೊಳಗಾಗಿ ನೊಂದೆ
ರಕ್ಷಿಸು ತಂದೆಯೆ ॥

೭೧

ಕೂಸು ಮಲಬಿಡಲು ತೊಡೆ ಹೇಸಿ ಕೊಯ್ವನೆ ಜನಕ ।
ಲೇಸು ವರಿಸದರುಂಟೆ ದೋಷ ಸಂಭವನೊಳಗೆ ।
ಭಾಷಾಂತರುಚಿಗಳಿಗೆ ತೋಷ ದಂದುವದೆಮನ
ಕೈಶಿಕಂ ಕೇಳು ಮತ್ತೆ ॥
ಈಶನೀಂ ದಾಸನಾಂ ದೋಷನಾಂ ಭಾಸನೀಂ ।
ದೇಶಿಕನೆ ನಿನ್ನ ಮಹಿಮಾ ಸುರವ ಬಣ್ಣಿಪೊಡೆ ।
ಸಾಸಿರದರಸನೆಂಬಾ ಶೇಷನಿಗೆ ತೀರದೆನಲೇಸರವ
ನಾನೆಣಿಸಲು ॥

೭೨

ಪರಮ ನೀಂ ಪಾಪಿನಾಂ ದುರುಳನಾಂ ದೇವನೀಂ ।
ಕರುಣಿ ನೀಂ ಕಠಿಣನಾಂ ವಿರಸನಾಂ ಸುರಸನೀಂ ।
ನರಕಿನಾಂ ನಾಕಿನೀಂ ನರಪನೀಂ ನರನು ನಾಂ
ಗೊರವನಾಂ ಗುರುವೆ ನೀಂ ॥
ಮರುಳನಾಂ ಮಾನಿನೀಂ ಗರಳನಾಂ ಗೋಜನೀಂ ।
ತರಳನಾಂ ತಾತನೀಂ ಕುರುಡನಾಂ ಕುತಪನೀಂ ।
ಪೊರೆಯಲಾಗದೊಡೆನ್ನ ತಿರುಗಣೆಯ ಮಡು ।
ನಿಂಗೆ ಭರದಿ ಅಪ್ಪಣೆಯ ಕೊಡುವದೈ ॥

೭೩

ಬಗೆ ಬಗೆಯ ಸುತಿಯಿಂದ ಪೊಗಳಲ್ಕೆ ಗುರುವರನ ।
ಬಗೆ ತೋಷದಿಂದಲಾ ಮುಗದನಮ್ಮುಮತೆಯಿಂ ।
ಮುಗುಳು ನಗೆಗೂಡಿ ಮೊಗದ್ಮಗುವಿಂದ ನೋಡಲ್ಕೆ
ಚಿಗಿದವಾಗಲೆ ರದನಗಳ್ ॥
ನಗರಜನ ಕೊಂಡಾಡೆ ನಿಗುರೆ ಮೈರೋಮಜಲ ।
ದೃಗುವಿಂದ ಸುರಿಯುತಿರಲಗಣಿತೋತ್ಸವದಿಂದ ।
ನೆಗದಾಡಿ ಪಾಡ್ವನಂ ಮಗನಿ ಬಾಯೆಂದು ಮೈ ತೆಗೆದು
ಬಿಗಿಯಪ್ಪಿಕೊಂಡು ॥

೭೪

ಕೂಡಿಸುತೆ ಮುಂಬಿನೊಳು ಮಾಡಿದನು ಬೋಧೆ ನೀ ।
ನಾಡದಿರು ನಿಂದೆ ಶಶಿಚೂಡ ಶರಣರಿಗೆಂದು ।
ನೋಡದಿರು ಪರರಾಮೆ ಬೇಡದಿರು ಪರಹೇಮ
ಮಾಡದಿರು ಭವಿ ಕೃತಿಗಳ ॥
ಮಾಡು ಗುರು ಶಿವ ಪೂಜೆ ಬೇಡು ಚರರೊಕ್ಕುದಂ ।
ಸೂಡು ಶಿವನಿರ್ಮಾಲ್ಯ ಪಾಡು ಪ್ರಮಥರಗುಣವ ।
ನೋಡು ನಿಜಲಿಂಗ ಮುಖಗೂಡು ಲಿಂಗಾಂಗ ಸುಖ
ವಾಡದಿರು ಸಟೆ ನುಡಿದಿಟಂ ॥

೭೫

ಹೀಗೆ ಬೋಧೆಯಗೊಂಡು ಶ್ರೀಗುರುವ ಬೀಳ್ಕೊಂಡು ।
ಬೇಗ ಪಂಪಾಧವನ ದೇಗುಲಕೆ ಬಂದು ಶಿರ ।
ಬಾಗುವನಿತಕ್ಕೆ ಶಿವಬಾಗಿಲಕೆ ಬಂದು ಸಲೆ ರಾಘವನ
ನಪ್ಪಿಕೊಂಡು ॥
ಆಗಲಂಜಿದೆ ಮಗನೆ ವಾಗ್ಮಿಂನೊಳಾಡಿ ಮೊಗ ।
ಹೇಗೆ ತೋರಲಿಯೆಂದು ಗುರು ಮಹಿಮೆ ಕೇಳ್ದರಿಯೆ ।
ಆಗಮದ ನುಡಿಯ ನಗುರೋರಧಿಕವೆಂದು ನಾನೇ
ಗೌರಿಗಾಡಿರ್ದುದಂ ॥

೭೬

ನರಮುನಿಯೆ ಹರಕಾಯ್ವ ಹರಮುನಿಯೆಗುರುಕಾಯ್ವ ।
ಗುರುಮುನಿಯ ಹರ ಕಾಯಲರಿಯ ನಾದುದರಿಂದ ।
ಗುರುತಾತ ಗುರುಮಾತೆ ಗುರುವೆ ಸಲೆ ಪೂತ
ನೆಂದರುಹಿದೆನುಆಗಮದೊಳು ॥
ಗುರುದೈವ ಪರನಾಸ್ತಿ ಗುರು ಚರಣ ಮಿರಲೆನ್ನ ।
ಶಿರದೊಳೆಂದಾನೆ ಗಿರಿವರ ತನುಜೆಗುಸುರಿದುದು ।
ಅರಿಯೆನೀ ಗುರುಮಹಿಮೆ ಮರೆಯದಿರು ಗರ್ವ
ದೊಳು ಬೆರೆಯದಿರು ಮುಂದೆಂದಿಗು ॥

೭೭

ಚರಿಸದಿರು ಮನಬಂದ ಪರಿಯು ನೀನೆಂಬು ಗುರು ।
ಹಿರಿಯರಿಗೆ ಬಾಗಿ ನಡೆ ಶಿರವೆಂದು ಪೇಳಿಪುರ ।
ಹರಲಿಂಗದೊಳಗೆ ತಾ ಬೆರೆಯಲ್ಕೆ ರಾಘವನು
ಗುರುಲಿಂಗಚರರ ಭಜಿಸಿ ॥
ನಿರುತಮಿರುತಿರ್ದನ್ನೈ ಶರಣಪ್ಪ ಕೇಳೆನಲು ।
ಗುರುವೆ ಲಿಂಗದ ಮಹಿಮೆಯೊರೆಯೆಂದು ಭಕ್ತಿಯಿಂ ।
ಶಿರಬಾಗಿ ಸಾಷ್ಟಾಂಗವೆರಗಿರಲು ಕರವಿಡಿದು ಕರದ
ವನ ಮುಂಗೊಳ್ಳುತೆ ॥

೭೮

ವರಪುರದ ಶಿವಲಿಂಗ ಶರಣಬಸವನ ಚರಿತೆ ।
ಗುರುಬಸವಣಾರ್ಯ ಪದಸರಸಿರುಹ ಲೀನಮಧು ।
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ॥
ವಿರಚಿಸಿದ ನೋದಿಸುವ ಬರೆವಗೋದುವಗೆ ಪರ ।
ತರ ಭಕ್ತಿಯಿಂದ ಪೇಳಿದರೆ ಕೇಳಿವರೆ ತಾಂ ।
ದೊರೆಕೊಳುಗು ಸತಿಸುತರು ಸಿರಿ ಸಕಲ ಸಿದ್ಧಿಗಳು
ಪುರಸಂಧಿವರ ಬಂಧಿಯು ॥

ಸಂಧಿ ೩ ಕ್ಕೆ ಪದ ೨೧೭ ಕ್ಕಂ ಮಂಗಳಂ.

ಶ್ರೀ ಶರಣಬಸವೇಶ್ವರ ಪ್ರಸನ್ನ

## ನಾಲ್ಕನೆಯ ಸಂಧಿ

ಸೂಚನೆ॥ ಲಿಂಗಮಹಿಮೆಯ ಕೇಳ್ದು ಜಂಗಮದ ಘನ ತಿಳಿದು ।
ಲಿಂಗಾಂಗಮೇಕಾಗಿ ಜಂಗಮವ ಪೂಜಿಸುತೆ ।
ತುಂಗ ಶರಣಪ್ಪ ಗುರುಪುಂಗವನ ಕೊಂಡಾಡಿ ಮಂಗಳದೊಳೆಸೆದಿರ್ದನು ॥

೧

ಮಗನ ವಾಹನಕೆ ಪೊಡೆಬಿಗಿದಿರ್ಪುದದು ವೈರಿ ।
ಮಿಗಿಲದಕೆ ಇನ್ನೊಬ್ಬ ಮಗನ ವಾಹನ ವೈರಿ ।
ಅಗಜವಾಹನ ಮಗನ ಮೊಗ ವೈರಿ ಕರ್ಣ ದೃಗು
ಕರ್ಣದೃಗು ವೈರಘನವು ॥
ತೊಗಲುಡಿಗೆ ಕೈಯ್ಯೊಳಿಹ ನಿಗವೈರಮಿರಲಿಂಥ ।
ನಗಿಗೇಡ ಸಂಸಾರ ಕೊಗದಿಸುತೆ ಕುಡಿದ ವಿಷ ।
ನುಗುಳಿ ಬಂದೆನ್ನೆದೆಯೊಳ್ಹೋಗು ನಿಜಂ ನಿನಗಾವೆ
ತಗುಲಿಲ್ಲ ಶಿವಲಿಂಗನೆ ॥

೨

ಲಿಂಗ ಮಹಿಮೆಯ ಪೇಳ್ವಡಂಗಜಾರಾತಿಗೆ ಭು ।
ಜಂಗ ಪತಿಗಳವಲ್ಲಲಿಂಗ ಬಿಟ್ಟೇನಿಲ್ಲ ।
ಲಿಂಗ ಬಾಹ್ಯಂ ನಾಸ್ತಿಪರವೆಂದುಳ್ವ ಶಿವಲಿಂಗನೇ
ಯಾಗಮದೊಳು ॥
ಲಿಂಗ ನಿಷ್ಕಲವಸ್ತು ಲಿಂಗನಿರುಪಮವು ನಿಜ ।
ಲಿಂಗ ಚೇತನರೂಪ ಲಿಂಗಭಯಭವಲೋಪ ।
ಲಿಂಗ ಚಿದ್ಘನ ಶಾಂತಲಿಂಗ ಸಲೆ ನಿಶ್ಚಿಂತ ಲಿಂಗ
ಜಗದಾದಿಗರಿನೀಂ ॥

೩

ಕಂದ ನಾ ಪೇಳ್ವೆನಿದಕೊಂದು ಪೂರ್ವದ ಕಥೆಯ ।
ನಂದೀಶ ಕಲ್ಯಾಣಕೊಂದಿಪ್ಪ ಸಮಯ ಪೂ ।
ರ್ಣೇಂದು ಮುಖಿ ಸಿಂಹ ಕಟಿಯಿಂದೀವರಾಕ್ಷಿ
ಮದಶಿಂಧೂರ ಸಮಗಾಮಿನಿ ॥
ಕುಂದ ಕುಟ್ಮಳರದನೆ ಮಂದಹಸಿತಾನೆ ಪಿಚು ।
ಮಂದದಳ ಪುರ್ಬೆಯರವಿಂದ ಮಧುಗಂಧೆ ಬಾ ।
ಲೆಂದೇಂದಿ ರಸಕಂಜೆ ಚೆಂದುಟಿಯ ಕಮಳಾಯಿ
ಯೆಂದೆಂಬ ವಾರ ನಾರಿ ॥

೪

ಭದ್ರದಿಂದಿರಲು ರಜತಾದ್ರಿಯೊಳಗೊಂದು ದಿನ ।
ವದ್ರಿಮಥನಾದಿಸುರ ರುದ್ರ ಪ್ರಮಥಾದಿ ಗಣ ।
ರದ್ರಿಧರನಜ ವೀರಭದ್ರ ಮುಖರಿಂ ಸಭೆ ಸಮುದ್ರ
ದೋಲ್ ಘೋಷಿಸುತಿರೆ ॥
ರುದ್ರಕನ್ನಿಕೆಯರ ಭಿದ್ರಮಾಗೊಪ್ಪುತಿರ ।
ಲದ್ರಿಲೋಚನ ವರಹಿಮಾದ್ರಿಜಾರಮಣ ಸಲೆ ।
ಭದ್ರಗಮುಪದುಳಿರುವ ರುದ್ರಸಭೆ ಗೈತಂದ
ನಾರಂದನಂದಕ್ಷರಿಂ ॥

೫

ಬಂದು ನಾರಂದಮುನಿ ಇಂದುಧರಗೆರಗಿ ಪದ ।
ಕೊಂದಿಸುತ ಕೈ ಮುಗಿದು ಮುಂದೆನಿಂದಿರಲಿಕೇಂ ।
ಬಂದಿ ಪೇಳೆನೆ ಹಸಾದೆಂದು ನಲಿದಾಡಿ ನೀ ಎಂದು
ಚಿತ್ತೈಪುದೆಂದು ॥
ತಂದೆನಾತಿರುಗದ ವಸುಂಧರಿಯದಿಲ್ಲದರೊ ।
ಳೊಂದು ಪುರಕಲ್ಯಾಣದಂದ ಮಿಲ್ಲಲ್ಲಿರುವ ।
ಸುಂದರಿಗೆ ಸಮಬರ್ಪ ಇಂದುವದನೆಯರಿಲ್ಲ
ಚಂದದೊಳ್ವೈರಣ್ ಭಕ್ತಿಯೊಳ್ ॥

೬

ಕಮಲ ಸದೃಶ ವದನೆ ಕಮಲ ಚರಿತಾಕ್ಷಿ ಕುಚ ।
ಕಮಲ ಕುಟ್ಮಳೆ ಚಾರುಕಮಲ ತರ ಮೃದುಳಾಂಗಿ ।
ಕಮಲ ಗಂಧಿನಿ ದಿವ್ಯಕಮಲ ಸೇವಿತೆ ಕೇಶಿ
ಕಮಲ ಚಕ್ರಾಭ ನಾಭಿ ॥
ಕಮಲ ಕರೆ ಕಮಲ ಪದೆ ಕಮಲಕರ ಕರಗೃಹಿತೆ ।
ಕಮಲಾಕರಕ್ಕವಳ ಸದೃಶವಂ ಸಲ್ಲದಿರೆ ।
ಕಮಳಾಯಿ ಎಂದೇಕೆ ಕರೆವರ್ೈ ಬುಧರವಳು
ಕಮಲಲತೆಯಂತೆಸೆವಳು ॥

೭

ತುಂಗಕುಚೆ ನಿರುತ ಷಡುಲಿಂಗಾಂಗ ಭಾವಿ ವಿಟ |
ಜಂಗಮ ಚಕೋರ ಕುಲ ತಿಂಗಳೆನಲೆಸೆವ ಮಾ |
ತಂಗ ಗಮನೆಯು ಭಕುತಿಯಿಂಗಡಲ ಕೆನೆಯಂತೆ
ಕಂಗೊಳಿಪಳೈದೆ ಮತ್ತೆ ||
ಮಂಗಳಾಂಗಿ ನಿಕೇತನಂಗಳುಡುಗಲು ಮಾರ |
ನಂಗನೆಯು ಸರಿ ಬರಳು ಲಿಂಗನಿಷ್ಟಾಪರಳು |
ಅಂಗಸಂಪದದಿಂದ ತುಂಗಗುಣದಿಂ ಸರ್ವ ಮಂಗಳೆ
ಯೋಲವಳೆಸೆದಳು ||

೮

ಆ ಪುಣ್ಯವಧು ನಿಮ್ಮರೂಪು ಜಂಗಮರೆ ತನ |
ಗೋ ಪರಲ್ಲದೆ ಭವಿಗಳೇಪರಿ ಯೋಳಾದಡಂ |
ತಾ ಪರಾಂಬರಿಸೆ ನೆಂಬೀ ಪಂಥ ಗೈದು ಸಲೆ
ಮಾಪ ಸಖಲಿಂಗ ||
ಸೋಪಚಾರದಿ ಮಾಡುತ ಪರಮಲಿಂಗ ವಿನಿತ ||
ಚಾಪ ಸಮರದೊಳು ಮಂಚದ ಕಾಲಿನೊಳಗಿಟ್ಟು |
ಕೈ ಪೆರಗುತೆಗಿಯದಂತೊಂದಿರಿಸಿ ಲಿಂಗೆಂದು ಕೂಪರಂ
ಭೋಗಿಸುವಳು ||

೯

ಎನೆ ಕೇಳುತಜ ನಿಂದ್ರ ದನುಜಾರಿ ಮುಖ್ಯರಿಗೆ |
ಮನೆಗಳ್ಗಿ ಕಳುಹಿ ತಾನೆನೆದೊಂದು ಯುಕ್ತಿಯಂ |
ಮನುಮಥಾರಿಯು ಕೋಟಿ ಮನಸಿಜರ ಪಳಿದೆನಿತೆ
ದಿನಕರರ ಧಿಃಕರಿಸುವಾ ||
ತನಿಸೊಬಗನಾಂತ ಮೋಹನ ರೂಪ ತಾಳ್ದು ವಿಟ |
ಜನ ಶಿರೋಮಣಿಯೆನಲು ತನು ಪೊರ್ದಿದಾಗಜಾ |
ಜಿನ ದುಕೂಲ ಮಪಾಳೆ ಫಣಿ ಖಡಿಗ ತೊಡವು
ಸನ್ಮಣಿ ಕುಂಡಲಗಳಾಗಲು ||

೧೦

ಶಶಿಯು ಕಲೆ ಕಿವಿದೆಸೆಯೊಳೆಸೆವ ಕೇದಿಗೆಗಂ ವಿ |
ಲಸಿತ ಶಿರಮಾಲೆ ವರ ಕುಸುಮ ಮಾಲೆಗಳು ಮೈ |
ಭಸಿತ ವದನಷ್ಟವಿಧ ಮಿಸುಪ ಗಂಧವನು ಜಡೆ
ಹೊಸೆದ ಚಿಂದಿಯೊಲಾಗಲು ||
ವಿಷವೇ ಕಂಠದೊಳು ರಾಜಿಸುವ ಮೃಗಮದ ರೇಖೆ |
ಮಿಸುಪ ಫಣೆಗಣ್ಣು ಕೆಂಪೆಸೆವ ತಿಲಕಾಗೆ ಸಂ |
ತಸದ ವಿಟರೂಪಾಂತು ವೃಷಭ ನಾರದರೊಡನೆ
ವಸುಮತಿಯೊಳೈತಂಪನು ||

೧೧

ಕಲ್ಯಾಣನಗ ಭವನ ಕಲ್ಯಾಣಿ ಕಾಂತ ತಾಂ |
ಕಲ್ಯಾಣನಗರವತಿ ಸಲ್ಲೀಲೆಯಿಂ ಭುವನ |
ಕಲ್ಯಾಣಿ ಕಮಳಾಯಿಗಿಲ್ಲಿರುವ ಮನೆಯೆಂದು
ಕಲ್ಲೋಲದಿಂದೆ ಶಿವನು ||
ಕಲ್ಯಾಣ ಕೈತರಲದೆಲ್ಲವನು ಬಣ್ಣಿಸಲು |
ಬಲ್ಲಕವಿಯಾವನೈ ಪುಲ್ಲಶರಹರನೊಮ್ಮೆ |
ಕಲ್ಯಾಣ ಮೆಂದೈದು ಮೊಗದಿ ನುಡಿಯಲು ಪಂಚ
ಕಲ್ಯಾಣಮಾಯ್ತು ದಿಟಕೆ ||

೧೨

ಇಂದುಧರನಾ ಪುರಾನಂದದಿಂ ನೋಡುತೈ |
ತಂದು ಬಸವನ ದಿವ್ಯಮಂದಿರಂ ಪೊಕ್ಕು ವಿಟ |
ವೃಂದದೊಡಗೂಡಿ ಸುಮಗಂಧ ತಾಂಬೂಲ ಗೊಂಡಿಂ
ದು ಮೇಘದ ಮರೆಯೊಳು ||
ಪೊಂದಿರ್ಪತೆರದಿ ನಿಜವಂದೋರದಲೆ ಚರರ |
ಸಂದಣಿಯೊಳಡಗಿ ಜವದಿಂದೆ ನಡೆತಂದನಾ |
ನಂದಿ ನಾರಂದರೊಡಗೊಂಡು ವೇಶಾವಾಟಿಯೆಂದು
ನೋಡುವ ಸಮಯದಿ ||

೧೩

ಶೇಷಕುಲದಶನಾಗಿ ಪೂಶರಗೆ ಚರನಾಸಿ |
ಯಾಶನಿಗೆ ಸಖನಾಗಿ ದೋಷಕಂಜದ ಕುಲ ವಿ |
ನಾಶಕನ ಪಿತನಾದ ದೋಷರುಜೆಯಿಂದಲಾಯಾಸ
ಘನವಾಗಿ ಬಂದು ||
ವೇಶಾಂಗಿನಿಯರೆಂಬ ಭೀಷಜರ ಗೃಹದೊಳಗೆ |
ಮೀಸಲದಯೌವನೆಂಬೌಷಧಂ ಗೊಂಡವರ |
ಭಾಸುರಾಂಗದ ವಾಸನದ ತಥ್ಯಗೊಂಡಲ್ಲಿ ಸೂಸಿತ್ತು
ಮಂದಾನಿಲಂ ||

೧೪

ತಿಳಿಗೊಳದಿ ಮಿಂದುಟ್ಟುನಳಿನ ಪತ್ರಾಂಬರಂ |
ತಳೆದಖಿಳ ಪುಷ್ಪದೊಳಗಣ ಪರಾಗದ ಭಸಿತ |
ವಳಿಯೆಂಬು ವಕ್ಷಸರಗಳು ಧರಿಸುತಂಗದೊಳಗೆ
ಲರೆಂಬ ಸದ್ಭಕ್ತನು ||
ಇಳಿರಥನ ಪದ ಜಲಜಗಳು ತೊಳೆದು ಕುಡಿದು ಭವ |
ಕಳೆಯಲಿಕೆ ಬಂದು ಸುರತಿಲಕನಂ ಕಂಡು ತಾ |
ನಳುಕಿ ನಡೆವನಾ ಎನಲು ಚಲಿಸಿ ಮಂದಾನಿಲಂ
ದಳಿಕಾಕ್ಷ ಸಮ್ಮುಖದೊಳು ||

೧೫

ಅನಿತರೊಳು ದಿನಕರನು ವನಜಜಚೂಡನ ಕಂಡು ।
ತನಗೆ ಪಗೆವಗೆ ಶಿರೋಮಣಿ ಮಾಡಿ ಮತ್ತೆ ಮ ।
ತ್ತನುಜನಿಗೆ ಮುನಿದು ಮೇಣನು ಬಂಧಕುಲಶರಗೆ
ಹನನಾಗುತಂತೆ ಬಿಡದೆ ॥
ತನುಜನಿನ್ನೊಬ್ಬನಂದನು ವರದಿ ತನ್ನ ಭ ।
ಕ್ತನ ಕೈಲೆ ಕೊಲಿಸೆಮ್ಮ ಮನೆತನವು ನಾಶಗ್ಯೆ ।
ದನು ಎಂದು ಮನನೊಂದು ಇನನಸ್ತನಾವನಂದಿನ
ದೊಳಗೆ ವನಸಿಧಿಯೊಳು ॥

೧೬

ರವಿಸಿಂಗ ಕೋಪದಿಂ ತಮ ಕರಿಯ ಮಸ್ತಕಂ ।
ತವೆ ಸೀಳೆ ಪೋಗಿ ತಾ ಗವಿಸೇರೆ ಮೃತಗಜದ ।
ಅವಯವದ ರಕ್ತ ಪೂರಪ್ರವಿಸಿತೆನೆ ಸಂಧ್ಯಾರುಣವು
ಶೋಭೆವೆತ್ತದರೊಳು ॥
ನವಮೌಕ್ತಿಕವು ನೆಗೆದುದಿವಕೆ ಬಲುಸರಪಿರ್ದ ।
ನಿವಹಮೆನೆನ ಭತ್ರಲವಲವಿಸೆಯಾಕರಿಯ ।
ತೊವಲು ಸೂಸುವಕಾಳಚ್ಛವಿಯನಲು ಕತ್ತ
ಲಿಯೆದೆತ್ತತ್ತ ಬಿತ್ತರಿಸಿತು ॥

೧೭

ದೇವಕಾಣವಲಿರುವ ತಾವವೊಂದಿಲ್ಲೆಂಬು ।
ವಾವಚನ ಪುಸಿಯೆ ಮಾದೇವ ಧೃಗ ಸಂಖ್ಯಾತ ।
ವಾವರಿಸಿದೆವುಯೆಂದು ಭೂಮಿಗತಿ ಕಾಂತೆಯಿಂ ।
ಸಾಹ್ಯೆವಿತ್ತೆಸೆದು ಮತ್ತೆ ॥
ಆವಾವ ತಾವಿನೊಳು ತೀವಿರ್ದು ಜಗಕೆ ಬೆಳ ।
ಗೀವ ಘನದಿವ್ಯದೀಪಾವಳಿಯ ನೋಡಲವು ।
ದೇವರಿಗೆ ದೇವ ಶಿವ ಸರ್ವಮಯ ಸರ್ವ
ಸಾಕ್ಷ್ಯಂದ್ಹೇಳಲೇನಾಗದೆ ॥

೧೮

ಆ ರಜನಿಯೊಳಗೆ ಮಾರಾರಿಯಿಕ್ಕೆಲ ನಂದಿ ।
ನಾರದರು ಬರಲು ಸಲೆವಾರ ನಾರಿಯರ ಬಹು ।
ಕೇರಿ ಕೇರಿಗಳೊಳಗೆ ಮಾರಿನಟ್ಟುಳಿಗೆ ಬಾಯಾರಿ
ಸಂಚರಿಸುತಿಪ್ಪಾ ॥
ಜಾರಿಯರ ಮೊತ್ತಘನಜಾರಜನ ಗೊತ್ತುಗಳ ।
ಸೇರಿ ಮರುದಾರಿಯೊಳು ಜಾರುವರ ಕಂಡು ಕಾ ।
ಲಾರಿ ಕಾಲೂರಿ ತಾನೋರಿನೋಟದಿ ನಂದಿ
ನಾರದಗೆ ತೋರಿನಗುತೆ ॥

೧೯

ಮೇಲೊಂದು ಭವನದೊಳು ಕೇಳಿಗೃಹದೊಳು ವಿಟನ
ಮೇಳದೊಳಗಿರೆ ಸಿತಗನಾಲಯದ ಪೊರಗೆ ನೆರೆ
ಬಾಲಕಿಯರೊಳಗೆ ಪುಸೆಯಾಲಾಪ ಗೈವನೆವ
ಸೂಳಿ ತಿಳಿದೇಳುತಿರಲು ॥
ಏಳ ಬೇಡಕ್ಕನೀ ಕಾಲುಗತ್ತಲೆಯೊಳಗೆ ।
ಕಾಲು ಜಾರಿದರೆ ಗಂಟೀಳ್ವದೆಂಬೀ ಬೆಡಗ ।
ಕೇಳಿ ಕಲ್ಲೋಲದಿಂದಾಳಿಯಂ ಪೊಗಳೆ ವಿಟಕೇಳಿ
ಕೌತುಕಗೊಂಡನು ॥

೨೦

ಆ ಸಮಯದೊಳ್ವರಸುಧಾಸೂತಿ ಕಲ್ಯಾಣ ।
ಕೀಶ ಬಂದುದು ಕೇಳಿ ತೋಷದಿಂ ಮದ್ವಂಶ ।
ಭೂಷನಿಗೆ ಶರದ ಭಗಿನೀಶನಿಗೆ ವರಮಿತ್ರನೈ
ಸಲೆಮದಾತ್ಮ ಪಿತಗೆ ॥
ಕೂಸಿನಂತಿತ್ತಿ ಸುವಿಲಾಸದಿಂ ಸಲುಹಿ ಮತ್ ।
ಶ್ರೀಸೋಮನಾಮವಂ ತಾಳ್ದವನ ನಾ ಕಾಂಬೊ ।
ಡೀ ಸಮಯ ಒಳಿತೆಂದು ತೋಷದಿಂ ಪೂರ್ವಾದ್ರಿ
ಗಂ ಶಶಾಂಕಂ ಬಂದನು ॥

೨೧

ಸಾಲ್ಗಡಲರೋಚಿ ಬೆಂಬಲ್ಗೈವವೋ ಬಿದುಸೀ ।
ಸಾಲ್ಗೈಗಳೀ ಭೂಮಿಮೇಲ್ಗೈದೆ ಬಂದವೊ ।
ಶೈಲ್ಗಣುಗೆತಿಕಾಯ ಮೇಲ್ಕಾಂತಿಯನಲೆಂಟು ಸಾಲ್ಗಣ್ಣ
ಸತಿಯ ನಗಿಯೂ ॥
ಸಲ್ಕಾಂತಿಯೆನಲು ಕಾದಲ್ಗೈದು ದಣಿದವರ ।
ತೇಲ್ಗಣ್ಣುಗದಿರ್ಗೊನರೊ ಬೆಳ್ಗಿಯ್ಯಗಾಂತಿ ಗಣೆ !
ಗಲ್ಗರಗಿ ನೀರು ಪರಿದೊಲ್ಗಗನಧರೆ ದುಂಬಿ ಬೆಳ್ಬೆಳಗು
ಪಸರಿಸಿಮುದು ॥

೨೨

ಚಂದ್ರಿಕೆಯ ಸಮಯದೊಳು ಚಂದ್ರಶೇಖರ ನಡೆಯೆ ।
ಚಂದ್ರಶಾಲೆಗಳೊಳಗೆ ಚಂದ್ರಕಾಂತು ಪಲಾರ್ಥ ।
ಚಂದ್ರಾಕೃತಿಯ ಜಗಲಿ ಚಂದ್ರಪೀಠಂಗಳೊಳು
ಚಂದ್ರಹಾರಗಳ ತೊಟ್ಟು ॥
ಚಂದ್ರತಿಲಕದ ಪೂರ್ಣಚಂದ್ರ ಮುಖಿಯರು ಭುಜಗ
ಚಂದ್ರರೆದುರಿಲಿ ಕುಳಿತು ಚಂದ್ರಜಾಮಾತ ಗುಣ್ ।
ಚಂದ್ರತನ ಪೊಗಳ್ವದ ನಂದಿಗಮಕೇಳಿ ಕನಲ್ದಂ
ದು ಮುಂದೈತಂದನು ॥

೨೩

ನಡೆಯಲೊಂದೆಡೆಯೊಳಗೆ ಕಿಡಕಿಯೊಳಗ್ಗಡಕಿಟ್ಟು ।
ಜಡಜಾಕ್ಷೆ ಮಾರ್ಗಸಖಿಯೊಡನಾಡುತಿರೆ ಮಾತು ।
ತಡವಾಗಲೊಳಗಿರ್ವ ಹುಡುಗಾಟಿಕೆಯ ವಿಟನು
ತಡೆಯದಲೆ ಕಾಮ ಬಂದು ॥
ತೊಡೆಯು ತಟ್ಟ್ಯಾಕಿಯುಟ್ಟುಡುಗೆಯಂ ಸೆಳೆದು ಹಿಂ ।
ಗಡೆಯಿಂದೆ ಭೋಗಿಸಿದ ಬೆಡಗು ತಾಂ ಕಂಡು ಮಿಡ ।
ನಡಿ ಮುಂದಕಿಡಲು ತನ್ನೊಡತೆಗತಿ ಮತಿದೂತೆ
ನುಡಿವಳಿನ್ನೊಂದೆಡೆಯೊಳು ॥

೨೪

ಚಿಕ್ಕವರಿಯದಿ ನೈಗೆ ತಕ್ಕ ನಲ್ಲನನೋಡಿ ।
ಅಕ್ಕಜಗವಗೂಡಿ ಮನೆರೊಕ್ಕಗಳುಗಳಿಯದಿರು ।
ಯಕ್ಕರನೆಯಿವನು ಕದ್ದಿ ಕ್ಕು ಬೇಡಿವಗೆ ಮನ
ಕಕ್ಕುಲತೆಯಾತಕಿಂದು ॥
ವಕ್ಕರವು ಬಿಟ್ಟಿನ್ನವಾಕ್ಕು ಲಾಲಿಸಲು ಜಯ ।
ನಕ್ಕ ನಿನಗೆಂದೊಡತಿಗಕ್ಕರವು ಬೀರಿ ಮೇಣ್ ।
ಚಕ್ಕನಾ ವಿಟನ ಚಿತ್ತಕ್ಕೆ ಸೊಗಸಂ ನೀಯುತಿಕ್ಕೆ
ಲರ ತೋಷಿಸಿದಳು ॥

೨೫

ಮಿಂಡಿಯರ ಹರಿಯನುದ್ದಂಡಿಯರು ಕಾಮಕೋ ।
ದಂಡ ಪೂರ್ಬಿನಗಾಡಿ ಮಂಡೆ ಕುಚ ಮೌಕ್ತಿಕದ ।
ಚಂಡಿಯರು ಚಾರುತರ ಮಂಡನದ ಮಡದಿಯರು
ಪುಂಡರೀಕಾನನೆಯರು ॥
ಕೊಂಡಿಯರು ವಿಟರ ಮಾನ್ಖಂಡಿಯರು ಮುನಿತಪ ವಿ ।
ಖಿಂಡಿಯರು ಛಲವಾದಿ ಛಂಡಿಯರು ನೆರದಲ್ಲಿ ।
ತಂಡ ತಂಡದೊಳಿರಲು ಖಂಡೇಂದುಧರನ
ವರಕಂಡು ಕಾಣದೊಲು ನಡೆದಂ ॥

೨೬

ಕುಡಿನೋಟ ಬೆಳ್ಮಾರನುಡಿ ಮೋಹನದ ಮಂತ್ರ ।
ನಿಡು ಧನಿಯ ತೋಹುಶರಮಿಡಿನಗಿಯೆ ಶಿಂಗಾಡಿ ।
ಕುಡಿಪುರ್ಬು ಹೆಡಕಿನೊಳು ಜಡೆದ ಬಿಲ್ಮುಡಿ ಬೀಸು
ಬಡಿಗೆಯೂ ತೊಡೆ ತೋಮರಂ ॥
ಜಡಜ ಶರಬಿಸುವ ಬೇಂಟೆಯನಾಡಿ ವಿಟರಕುಲ ।
ಬಿಡುಗಣ್ಮೃಗಂಗಳಂ ಪಿಡಿದು ಕುಚದಿರುಬಿನೊಳು ।
ಕೆಡಪದಿರಲಾವಾರ ಮಡದಿಯರಕುಚಗಿರಿಗೆ ಪಡಿ
ಯೆಂಬುನರೆ ವಿಬುಧರು ॥

೨೭

ಸದನ ಮತ್ತೊಂದರೊಳು ಸುದತಿ ಭುಜಗನ ವೆರಿ ಸು ।
ತೆದುರೆದುರೆ ನಿಂತುಯ್ಯಲದು ತೂಗುವನಿರುತರೊಳ ।
ಗೆದೆಗೆದೆಯು ತೊಡೆಗೆ ತೊಡೆ ವದನವು ಕಲಿಯಲದ
ರಿಂದ ಮದನಾಟದಾ ॥
ಬೆದೆಯಾಗಲಾಗಿ ಬಾಗಿದನೆ ವದಿ ಮನ್ಮಥನ ।
ಕದನದೊಳಗೊದಗಿ ಕೋವಿದರಿಗರಿದೆನಲು ಬಲು ।
ವಿಧ ವಿಧದಿ ರತಿಗೈವ ಚದುರ ಚದುರಿಯು ಕಂಡು
ಮದನಾರಿ ಮುದವಾಂತನು ॥

೨೮

ಮುಂದೊಂದು ಸೌಧದೊಳಗಿಂದು ಮುಖಿಸಾಲ್ ಶರಧಿ ।
ಕಂದನಂನೋಡುಲೇಕಂದುವಟ ಬಿಲ ನೊಲ ನೈ ।
ಗೆಂದ್ಹೇಳುತಿಪ್ಪ ರೇನೊಂದು ತಿಳಿಯನು ನೋಳ್ಪೆನೆಂಪು
ಯ್ಯಲಾಡಿ ಪೋಗಿ ॥
ಇಂದುವಂ ನೋಡುತಿನಿತೆಂದುದಂ ಪುಸಿಯನ್ನೋ ।
ಲ್ಹಿಂದೊರ್ವಳುಯ್ಯ ಲೇರಿಸಿ ಮುದ್ದಿ ಸಲು ಪೊಗವ ।
ಗಂಧ ಮೃಗ ಮದವರಸಿನಂದಿಲಕ ಪೊಂದಿರ್ದುದೆಂಪು
ಪೇಳ್ದಳು ವಿಟನಿಗೆ ॥

೨೯

ಆದುಕೇಳುತ್ತಿತರಲು ಸದನ ಬೇರೊಂದರೊಳು ।
ಚದುರ ನಾ ಸುದತಿಯುಟ್ಟದುಸುಗಿದು ನೆರೆನೋಡಿ ।
ಮದನ ನಿನ್ನೂರೊಳಗೆ ಮನೆಯ ಮಾಡಿವನೇಕೆ
ಮುದದಿ ಪೇಳೆಂದೆನಲ್ಕೆ ॥
ಇದು ತಿಳಿಯದೇಂ ರಮಣ ಮದನಾರಿಗಳ್ಕಿನೀ ।
ಮದನಾರಿ ಸಮಳೆಂದು ವದಿಸಿ ಕಾಯೆಂದೆನ್ನ ।
ಪದಕೆರಗಿದವನಿಗಭಯಳಾದೆನೆನೆ ಕೇಳಿ ವದನ
ಚುಂಬಿಸಿ ನಕ್ಕನು ॥

೩೦

ಬಾಲಿಕೇಳ್ನಿ ನಗೆ ವಟಜಾಲಮೀ ಕಾಲಕನು ।
ಕೂಲವಾಗಿಪ್ಪದಿಂದಾಲೋಚಿಸದೆ ಪೊನ್ನ ।
ಜಾಳಿಗೆಯ ತರಿಸೊಬ್ಬನಾಳಿಕೆಯೊಳಿರಬೇಡ
ಜೋಲು ಬಿದ್ದರೆ ವೊಲೆಗಳು ॥
ಕೇಳರಾರ್ನಿನಗೆ ಹಾಲಿದ್ದ ಕಾಲಕ್ಕೆ ।
ಹೋಳಿಗೆಯ ಮಾಡುವದು ಮೇಲಾದುದೆಂದು ಮುದಿ ।
ಸೂಳಿ ಮಗಳಿಗೆ ಬುದ್ಧಿ ಪೇಳುತಿರೆ ಫಾಲಾಕ್ಷ ಕೇಳು
ತೈದನು ಮುಂದಕೆ ॥

೩೧

ಚೂತನವ ತಳಿರದೊಳು ಕಾತದಾಡಿಮ ಬೀಜ ।
ಪೀತಗಿರಿಯುಗದಿ ಕಲಧೌತ ಕದಳಿ ಸ್ತಂಭ ।
ಪೂತ ಚಂಪಕದೊಳಳಿವ್ರಾತಕೂಡಿರೆ ವಾರಿಜಾತ
ಯುಗಕೋಕಕೆ ಸಲೆ ॥
ಘಾತಿಸುವದಂತೆ ಕಚ್ಛಪಜಾತನಂ ಬಾಧಿಪುದು ।
ಭೂತಳದಿ ಕಾದಲರ ರೀತಿ ಪೊಸತೆಂದೊಂದು ।
ಕೇತನದಿ ಪಂಜರದ ವಾತಕ್ಕಿ ನುಡಿಯಿತತಿ
ಕೌತುಕವದೇಂ ತಿಳಿಯಲು ॥

೩೨

ನಾರಿ ಪೇಳಿ ನಿಂತ್ಯಾಕೆ ನಾರುತೋಡ್ಯಾಡುವನು ।
ವಾರಿಜದ ದಳದಿ ಕೆಂಪೇರಿರ್ದ ಬಗೆಯೇನು ।
ಸಾರಾಮೃತಕೆ ಮುದ್ರೆಯೂರಿದವರಾರು ಸಲೆ
ಯಾರಡಿಗಲ್ಲೀಗ್ಯಾತಕೆ ॥
ಪಾರಿದವು ನೆಲೆ ಬಿಟ್ಟು ವಾರಿಧಿಜ ಖಗಮಧ್ಯ ।
ಸೇರಿರ್ದ ಪರಿಯೇನು ಜಾರಿರ್ದುದಂಬರೀ ।
ಕಾರಣವನುಸುರೆಂದು ಭೂರಿ ಕೋಪದಿ ನುಡಿಯೆ
ಮಾರುತ್ತರಂಗೊಟ್ಟಳು ॥

೩೩

ನಿನ್ನ ನಡೆನೋಟ ಸಲೆನಿನ್ನ ನುಡಿಕೂಟ ತವೆ ।
ನಿನ್ನ ಗಾಡಿಯು ಗಮಕಬಣ್ಣ ಲಾವಣ್ಯಮಯಿ ।
ನಿನ್ನಗುಂ ತನಗೇನು ಭಿನ್ನಿಲ್ಲದಿಪ್ಪುದಂ ಕಣ್ಣಿ
ನಿನ್ನೋಡಿ ಭಾವಾ ॥
ತನ್ನ ತಾ ಮರೆದು ಬಲ್ಪಿನ್ನೆರದ ನೊಲ್ಲೆನಲು ।
ನಿನ್ನ ಮನ ನೊಯ್ವುದೆಂದೆನ್ನುತಲಿ ಕೂಡಿರ್ದೆ ।
ನೆನ್ನ ತಪ್ಪೇನಕ್ಕ ಮನ್ನಿಸೆನೆಕೇಳುತಲಿ
ಮುನ್ನೆಡೆದನಾ ಶಂಕರಂ ॥

೩೪

ಸೋಗೆಗಣ್ಣಿಂದುಮುಖಿ ನಾಗಸಂಪಿಗಿಪೋಲ್ವ ।
ಮಾಗುಳ್ಳ ಸಿಹ್ಮಕಟಿ ಮೇಗೆ ಪ್ರಹುಂಡಾಗಿ ಸಲೆ ।
ಯಾಗಸ್ಯ್ರಜನ್ಮ ಕುಚಕೋಗಿಲಾಲಾಪೆನಾನಾಗಿರ್ದು
ಮನ್ಯಳನ್ನು ॥
ಭೋಗಿ ಮುಡಿಮಿಥುನ ಕುಚ ಭೋಗಿ ಸುಮಕುಚಗಮನ
ನಾಗ ಮುಗುಧೆ ವರಾಗವ ತಳಿರ್ದುಟಿಯೆಂದುಂ ;
ಭೋಗಿಸದೆ ನೀನೆಂದು ರಾಗದಿಂದೆನಲು ವಿಟ
ಬಾಗಿದನು ತಲೆ ಕೌತುಕೇಂ ॥

೩೫

ಅರಳತಳ್ಪಾಸ್ತ್ರ ಪಂಜರವಾಯ್ತು ಲೇಪಿಸಿದ ।
ಹರಿಚಂದನಮುನಾಡೆಜ್ವರದಂತೆ ಶುಕ ಪಿಕದ ।
ಸರಸಲ್ಲಾಪ ಚಲು ವಿರಸಾಯ್ತುಗಳ ರನ್ನಸರಗಳೋ
ಪಲ ವಾದವು
ಗರಳಾಯಿತಶನಿಂದು ಕಿರಣಾಯಿತನಲೆನ್ನ ।
ವಿರಹಕೌಷಧ ಮಾದ ಪುರುಷನಂ ಕರೆ ತಂದು ।
ಹರಣವುಳಿಸೆಂದು ತವೆ ಪೊರಳುವಳ ನೋಡಿ
ಪುರಹರ ಮುಂದಕಡಿಯಿಟ್ಟನು

೩೬

ಮೊದಲಪ್ಪಿಕೊಂಡೆನ್ನ ವದನದೋಳ್ ಮುದ್ದಿಡುತ ।
ಲಧರ ಕಡಿನಾಟದೋಲ್‌ರದನ ಮೆಲ್ಲನ ಮತ್ತೆ ।
ಕದಪು ಚುಂಬಿಸುತ ಪಿಡಿವದು ಮುಡಿಯ ಮುಂಗುರುಳ
ಮದರ ಮೇಲ್ಕುಚ ಮರ್ಧಿಸು ।
ಬೆದರದಿರು ಭಯ ಬಿಟ್ಟುವದುಗುಸಿರಿ ತಕ್ಕೆನ್ನ ।
ಪದಗಳಂ ಕೊಂಡು ತೊಡೆಗೊದವಿಟ್ಟು ಕೂಡೆಂದು ।
ಮದನಾಟರೀತಿಯಮ್ಮುದದಿ ತಿಳಿಸಿದಳೋರ್ವಸುದತಿ
ನೂತನ ವಿಟನಿಗೇ ॥

೩೭

ತಾಣಮತ್ತೊಂದರೊಳು ಜಾಣೆ ಸಖಿಯೋಳ್ಪೆಳ್ದ ।
ಳೇನೆಂಬೆನಕ್ಕೆನ್ನ ಪ್ರಾಣೇಶನೊಡಗ್ಯೆವ ।
ಸೂನು ಶರರತಿಯೊಳಗೆ ಧೇಸಿಸಿದೆನೆಡೆ ಬಿಡದೆ
ಬಾಣನಂ ಅದಿತಿ ಪತಿಯಾ ॥
ಸೂನುವಂ ಶೇಷ ಪತಿಗೇನಾಗೆ ನೆರೆಯದಿರೆ ।
ಮಾನಸದ ಬಯಕೆಯಂ ಸ್ಥಾಣುಮೇಣಾಕ್ಷ ಪದ ।
ಮೌನಿಯೆನ್ನೆನೆಯುತುದ್ಯಾನ ಶುಕಗುಹ ಸರಸಿ
ಪ್ರಾಣದೇವನ ಪಾಡಿದೆ ॥

೩೮

ನಸು ಮುನಿಸಿನಿಂದ ನೀಂ ಮುಸುಕಿಟ್ಟು ಕೂಡುವಿಟ ।
ನಸು ಮುನಿಯ ಲೊಡನೆನಗೆ ನಸುದೋರಿ ತಿಳುಹಿ ಭು ।
ಪ್ಪಸ ಬಿಗಿವ ನೆವದಿಂದ ಮಿಸುನಿವಣ್ಣದ ಮೊಲೆಯ
ನಸುದೋರದವ ನೋಡಲು ॥
ಮುಸುಕಿಟ್ಟು ಕೂಡುವವ ಮುಸುಕಿಡಲು ವದನ ಚುಂ ।
ಬಿಸಿ ಕೂಡು ಕಸವರಂ ವಶವಾಗ ಲೊಡನವನ ।
ಕಸಬೋರಿಗೆಂದು ನೂಕಿಸಿ ಬಿಡುವುದೆಂದು
ಮುದಿಬಸವಿ ಮಗಳಿಗೆ ಪೇಳ್ದಳು ॥

೩೯

ಕರಿಗಮನೆ ಕೇಳದೇಂ ಪುರುಷ ಸಿಂಹನೆ ಪೇಳು ।
ಹರಿಣಾಕ್ಷಿ ಕೇಳು ಶಾರ್ದೂಲ ಪೇಳು ಬಲು ಚಂ ।
ದಿರ ವದನೆ ಕೇಳೋಷ್ಣ ಕರಪ್ರತಾಪನೆ ಪೇಳ್
ಉರಗಾಭವೇಣಿ ಕೇಳು ॥
ವರಸೋಗೆನಯನೆ ಪೇಳ ಹರಶರಾಸನ ಪಯೋ ।
ಧರೆ ಕೇಳುಮಾರಸುಂದರ ಪೇಳ್ವದೆನಲೊಡನೆ ।
ಶಿರಬಾಗಿ ತಿರುಗಿದನು ತುರುಣಿಗೊತ್ತಿಯ ನೀಯದ
ಚ್ಚರಿಯದೇನೆಂಬೆನಾ ॥

೪೦

ನಾಗಧಮ್ಮಿಲ್ಲೆವರ ನಾಗಲೇಂ ಪೇಳು ನಾ ।
ನೀಗ ನಿನಗೆಂದೊಡಲೆ ನೀಗು ನೀ ಪೋಳ್ತುಮದ ।
ನಾಗಾರದಿಂದ ಮಣಿರನ್ನೊತ್ತಿ ಬಂದಿಪ್ಪುದಿದು
ಸಮಯಮಲ್ಲೆಂದೊಡೆ ॥
ಆಗಲದು ಕೇಳಿ ಮನೆಗ್ಹೋಗುತಿರೆ ನೆರೆಯ ಸತಿ ।
ಬಾಗಿಲಿಗೆ ಬಂದಿಂದು ಚೌತಿಯನಲೊಳಪೊಕ್ಕು ।
ಭೋಗಿಸಿದನವಳ ಶಯ್ಯಾಗಾರದೊಳಗೆ ಬೆಳಗಾಗು
ವರಿಗೇಂ ಚೋದ್ಯವೋ ॥

೪೧

ಬಡವನೆಂದೊಮ್ಮೆ ಬರಗೊಡಳವನ ಬಹಳ ಧನ ।
ಕೊಡುವ ನೆಂದಿವನ ಕೈ ಬಿಡದಿರೆಂದಾಡುವಳು ।
ಸುಡಲಿವನ ರೂಪು ಪೇರೊಡಲ ನುಡಿ ಜಾಪುಕೇಂ
ಪಿಡಿದ ಕೇಶದ ಮೀಸೆಯಾ ॥
ಕಿಡಿಗಣ್ಣು ಕಿಸಿವಾಯಿ ಗಡುಲಿವನು ಕೆಡಿಯಲ್ಯಾವ ।
ಬಡಪಾದರೇನಾಯ್ತು ಗಡನೆ ಸರಿ ಹಡದವಳಿ ।
ಗಿಡುವನಕ ಮಣ್ಣೆಸ್ಯೆಪಿಡಿವೆನೆಂತೆಂದು ಪೇರೆ
ಡೆಯೊಳಗೆ ನುಡಿದಳೋರ್ವಳು ॥

೪೨

ಮತ್ತೊಂದು ಮನೆಯ ಸತಿಯೊತ್ತಿಯಿಟ್ಟವನೊಡನೆ ।
ಚಿತ್ತವಿಲ್ಲದೆ ಭೋಗಿಸುತ್ತಿರಲು ತಿಳಿದವಳ ।
ತೊತ್ತು ಬಂದಕ್ಕ ವಿಟನತ್ತೆ ಸತ್ತಳೊಯನ್ನು
ತತ್ತು ಪೇಳಲು ಕೇಳುತೆ ॥
ಅತ್ತವನು ಪೋದುದರಿವುತ್ತೆ ಕದವಿಕ್ಕೆ ಪುಸೆ ।
ಗುತ್ತರೇಂ ಪೇಳ್ವೆಯೆನೆ ಸತ್ತಳೆಮ್ಮಕ್ಕ ವಿಟ ।
ನತ್ತೆನಲು ಹೀಗೆ ಪೋಗಲ್ ಬಹುದೆಯೆಂದ
ವನ ಚಿತ್ತ ತೋಷಿಸೆನೆಂದಳು ॥

೪೩

ಮಡದಿರತಿಸಮಯದೊಳು ನುಡಿದಳೆಲೆ ಜಡಜಾಕ್ಷ ।
ಮುಡಿ ಕುಚಗಳಿಂ ಪಿಡಿದು ಜಡಿದು ಮೊಗದೊಳಗೆ ಮು।
ದ್ದಿಡಲ್ಯಾತುಕೆನೆ ಶಶಿಯುಮಿಡಿದೊಡಿಂಪುಗಿಡಲೆಂದು
ಗುಡಿಯಲಸುವೆಂದಿಲ್ಲಿಯೇ ॥
ಅಡಗಿರುವ ಮಿಥುನ ಖಗನುಡುಪಗಳ ಪಿಡಿದು ಸಲೆ ।
ಜಡಿದು ಚಂದಿರಗೆ ಮುದ್ದಿಡಲೇನು ಚೋದ್ಯ ಸಲೆ ।
ಬಡವನಿಗೆ ಮಿಡುಕುವುದು ಜಡಜಾಕ್ಷಮತವಲ್ಲೆ
ಸುಡಲಿನಿನ್ನರುವೆಂದನು ॥

೪೪

ಇಸಿತಾದ ಪಾರಸತಿ ಜನಜನಿತ ತಾವು ಸನ್ಮ ।
ನಿನುತ್ಯ ನೋಡುತಂದಿನ ಬರಲು ಕಾಣಿಸಿತು ।
ಕನಕಗೋಪುರ ದಿವ್ಯಮಣಿರನ್ನಸಾಲು ಸಾಲ್ದನೆ ಮುಕುರ
ದೋರಣಗಳಿಂ ॥
ಮಿನುಗುತಿಪ್ಪ ಮನೆ ವೃದ್ಧ ಕನಕೋದರಂಗೈಯ್ಯ ।
ಲೆಸಿತವನಬುದ್ಧಿ ತಾರುಣ್ಯದಜನೀಭವನ ।
ವನುಗೈದನೆಂದು ನಗೆ ಮಿನುಗೆ ನುಡಿದಾನಂದಿ
ಮುನಿಪರೊಡನೊಳಪೊಕ್ಕನು ॥

೪೫

ಬಂದ ಜಂಗಮನ ಶಿವನೆಂದರಿಪು ಮನದಿ ಪೂ ।
ರ್ಣೇಂದುಮುಖಿ ಹಿಗ್ಗುತಿರ್ವಂದು ಕೈಮುಗಿದು ಕರ ।
ತಂದು ಮಣಿಮಂಚದೊಳು ಪೊಂದಿಸುತಲವರ
ಪಾದಂದೊಳೆದು ಭಕ್ತಿಯಿಂದಾ ॥
ಇಂದೀವರಾಕ್ಷಿ ಶರಗಿಂತೊರಸಿ ತರಿಸುತಾ ।
ಮಂದಗಮನಿಯರಿಂದ ಫಲ ತಾಂಬೂಲಾದಿಗಳು ।
ಮುಂದಿರಿಸಿ ಸಾಷ್ಟಾಂಗ ಪೊಂದಿದಾನಂದ ಕಾನಂದೀಶ
ಬೆರಗಾದನು ॥

೪೬

ಗಿರಿಪಯೋಧರಪಾವು ವರ ಪವಳ ಲತಿಯು ಜಲ ।
ಚರಚಕ್ರ ಕೂರ್ಮ ತಡಿವರ ಪಿಕ್ರಿ ಕುಚ ಬಾಸೆ ।
ಅರುಣತುಟಿನೇತ್ರಗಂಭೀರ ನಾಭಿ ಚರಣ ತೊಡಕಿಸು
ತಿಲಕದೊಡಭಾಗ್ನಿಯಾ ॥
ವರೆಬರಲು ಲಾವಣ್ಯ ಶರಧಿವುಕ್ಕೇರಿ ಮೃಗ ।
ಧರನೆದುರೆ ಪರಿಪರಿಪು ಬರಲಿವದೆನೆ ಸಾಷ್ಟಾಂಗ ।
ವೆರಗುತಿದ್ದೆರಗುತೀಪರಿಲಿರುವಳಂ ಕಂಡು
ಸುರಮುನಿಪ ಬೆರಗಾದನು ॥

೪೭

ಕರುಳೊ ಕಾಮಿಗಳ ಕೊರಳುರುಳೊ ಶಂಖ್ಯವೋ ಗಂಧ |
ಗೊರಳೊ ಸೋಗೆಯ ಸೋಗಸದ್ದೆರಳೊ ನಯನವೊ
ಕಾಮಸರಳೊ ಘ್ರಾಣಮೊ ಸಂಪಿಗ್ಗರಳೊ ಕುಚಗಳೊ
ಕೋಕಗಳೊ ಬಾಸಿದರಗರಳಮೊ ||
ಅರುಣದುಟಿಯಿಂಪು ಮೃಗವರ ಕಟಿಯ ಸೊಂಪು |
ಸುಂದರ ಭ್ರಕುಟಿಪೆಂಪು ರತಿವರಚಾಪದಿಂಪು ಶಂ |
ಕರ ಚರಣ ಕಮಲ ಷಟ್‌ಚರಣೂದಕಮಳಾಯಿ
ಪರಿಗಣಿಸಲಜನಿಗರಿದು ||

೪೮

ಪಂಚಮುಖದವಗೆ ನಿರ್ವಂಚನದಿ ಮಿಸುನಿ ಮಣಿ |
ಮಂಚದೊಳು ಕೂಡಿಸಿರೆ ಚಂಚಲಾಕ್ಷಿಯರೆಲ್ಲ |
ಮಿಂಚುವಾಭರಣ ಸುಮಗೊಂಚಲಂ ಧರಿಸಿ
ತಾ ಮುಂಚೆ ಮುಂಚೆಂದು ಬಂದು ||
ಏಂ ಚೆಲ್ವನಿವನೆಂಬುತ ಚೆನ್ನಡಿಯರು ವೀಣೆ |
ಪಂಚಷಡ್ಜಾದಿ ಸರದಿಂ ಚರದಿ ಪಾಡುತಿರ |
ಲಂಚೆಗನು ಸುತನು ನಲಿದಂಚಿತದಿ ಕುಣಿದಾಡಲೇಂ
ಚಂದ ಗಾಯನಮದೋ ||

೪೯

ಅಚ್ಚಿ ಮೂರವನ ಮುಂದಚ್ಚ ಜವ್ವನೆಯು ಕೈ |
ಮುಚ್ಚಿ ಕಣ್ಣಾಲ್ಗಳಂ ಬಿಚ್ಚಿ ಹೆಬ್ಬೆರಳೊಂದು |
ಕಚ್ಚಿಯಭಿನ್ನೈಸುತಿರೆ ಕೆಚ್ಚದೆಯ ಮುನಿಗಳೆದೆ
ಬಿಚ್ಚುವೋಲ್ ಕಣ್ಕಾಂತಿಯು ||
ಚುಚ್ಚಿ ಭಾರತ ರೀತೆ ನಚ್ಚಣಿಯ ನಚ್ಚೈಸ |
ಲಚ್ಚರಿಯರದು ಕಾಣುತಚ್ಚರಿಯು ಪಡುತಿರಲು |
ಮೆಚ್ಚುತಾ ಪೋಳ್ತು ಶಿವನಚ್ಚಿಗಳು ತೋಷದಿಂ ಮುಚ್ಚಿ
ಜಾನಿಸಲು ತಿಳಿದು ||

೫೦

ಹರಿಣಶಾಬಕೆಗೆ ಪಾಲೆರಿವದಂ ಪಿಕ ಕೇಕಿ |
ಗರಗಿಳಿಯು ಖಗಮಿಗನಿ ಕರಕೆಮೆಲುಗೊಡುವುದಂ |
ಮರದೆವೆಂದೊಂದೊಂದು ಪರಿ ನೆವನ ಪೇಳುತಾ
ತರುಣಿಯರು ಪರಿದುಪೋಗಲ್ ||
ಸುರಮುನಿಪ ನಂದಿ ಬಸವರಸನಂ ಕಂಡೀಗ |
ಬರುವೆನೆಂದಾಡಿ ನೆವಪೊರಗ್ಪೋಗಲವರ ಚಾ |
ತುರಿ ಕಂಡು ಪುರಹರಂ ಶಿರದೂಗೆ ಕಮಳೆಯೊಳು
ಸುರತೆಸಗಲನುವಾದನು ||

೫೧

ಸರಸಪರಿಮಳದೆಂಟು ಪರಿಗಂಧ ಪೂಸಿಕ |
ಪ್ಪುರ ವಿಳ್ಯ ವದನದೊಳಗಿರಿಸುತೊಕ್ಕದು ಕಂಡು |
ಪರಿಣಿಮಿಸಿ ತೆಕ್ಕೆಯೊಳು ಬೆರೆದು ಚುಂಬಿಸಿ ಲಲ್ಲೆಗರಿದು
ಬಲುಯಚ್ಚರದೊಳು ||
ಕೊರಳಲಿಂಗದ ಸಜ್ಜೆಯಿರಿಸಿ ಮಂಚದಕಾಲ್ಗೆ |
ಕರವಂದು ಮೇಲಿಟ್ಟು ಸುರತ ಸುಗ್ಗಿಯೊಳು ಮೈ |
ಮರೆವುತೆಚ್ಚರುತೆ ಬಲು ಪರಿಭೋಗಿಸಿದರು ತಾವ್ಸರಿ
ರತಿಯ ಸಮರಸದೊಳು ||

೫೨

ಹೆರಳು ಕುಚಚೂಚಕಂ ಶೃತಿಬಾಸಿ ಮೊಗಕನ್ನ |
ವುರಪ್ರೇಮಕನ್ನಡಿ ಮನೋರಥ ಬೆಳದಿರಲು |
ಶರಧಿ ತನುಮೂರ್ವಿ ಧನುಶರ ತುರಗಪಾಶ ಹಿಮಕರ
ದಿನಪನಚ್ಚು ನೊಗವು ||
ವರ ರಥಂ ಬತ್ತಳಿಕೆ ಪುರಜೈಸುವಂದು ತನ |
ಗಿರುವವೀ ತರುಣಿ ಮಣಿಪುರದೊಳಗೆ ಬಂದು ದೊಂ |
ದರಿದೆಂದು ಬೆರಗಾಗಿ ಪರಿಪರಿಯ ಸುರತ ಕಲೆ
ಪರಿವಿಡಿದು ಭೋಗಿಸಿದನು ||

೫೩

ಹರಿವಾಣಿ ಹರಿವೇಣಿ ಹರಿಗಾನೆ ಹರಿಯಾನೆ |
ಹರಿಣ ಹರಿ ಹರಿನಾಭಿ ಹರಿಶಿರಜ ಘನಶೋಭಿ |
ಹರಿ ಭೃಕುಟಿ ಹರಿಸುಕಟಿ ಹರಿಕುಂಭಸಲೆಪ ಯೋ
ಧರೆ ಬಾಲ ಹರಿಬಾಸೆ ಮೇಣ್ ||
ಹರಿವದನ ಲಾವಣ್ಯ ಹರಿನಿಧಿಯೆ ಹರಿವಸನೆ |
ಹರಿಯ ಮೋಹಿಸಿ ರೂಪದಿರುವೆಂದು ತ್ರಿಜಗ ಸುಂ |
ದರಿಯಳಿಗೆ ಭೋಗಿಸಿದ ಪರಿ ಪರಿಯ ಕಲೆವಿಡಿದು
ಹರುಷದಿಂ ಭಿಕ್ಷಾಟನು ||

೫೪

ನಾಡೆಸುಮಗಂಧ ಮುಸಿನೋಡಲಾಚಾರಮು |
ದ್ದಾಡುತ ಧರಾಮೃತದಲೀಥ ಮದುಗುರು ರೂಪು |
ನೋಡೆನೆರೆ ತೋಷದೊಳು ಗೂಡುವರು ಶಿವ ಮೇಣು
ಗಾಢತರದಾಲಿಂಗನಂ |
ಮಾಡೆ ಜಂಗಮ ನುಡಿಯು ಪರಿಣಾಮ ನಿರ್ಮಾಲ್ಯ |
ಗೂಡಲವು ಮಹಲಿಂಗ ತೃಪ್ತಿಯಂದರಿದು ರತಿಗೂಡಿ |
ಷಡುಲಿಂಗಕ್ಕೆ ಮಾಡಿ ತುಷ್ಟಿಯನು ನಲಿದಾಡಿದಳು
ಕಮಳಾಂಬೆಯು ||

೫೫

ಸ್ಮರನ ರತಿಯೊಳಗೆ ಮೈಮರಸಿ ಲಿಂಗದೊಳಿಟ್ಟ ।
ಕರಡಿಗೆಯ ಲಿಂಗದೊಳು ಹರಣ ಮೇಕಾಯ್ತುದಂ ।
ವರಿದು ಪೊರಿಯಕೆ ಬಂದು ಸುರಮುನಿಪ ನಂದಿಯಂ
ಕರೆದುಕೊಂಡೊಯ್ದು ತ್ರಿಪುರಾ ॥
ಹರನಗುಡಿ ಸೇರಲದು ಧರಿಗರುಪಬೇಕೆಂದು ।
ಚರಣಾಯುಧಂ ಕುಕ್ಕು ಕು ಕೂಕೂ ಎಂದೊದರೆ ।
ಮರುತನವಲ್ಲರಣ ತಂಪಾದುದರುಪುವೆನೆಂಬಪರಿ
ಚರಿಸಿ ತಂಪಿನಿಂದ ॥

೫೬

ಅರುಣಕರವೆಂಬ ಜಲ ಸರಿಯೆ ಕಳ್ತಲಿಯ ಗಿರಿ ।
ಕರಗಿ ಕರಣಿಗಳಾಗಿ ಧರೆಗುರುಳುವಂತೆ ಸರ ।
ಸಿರುಹದೊಳಗೆರಗುವಾರಡಿಗಳೆಸೆಯಲ್ಕವಕೆ ಕರಿವ
ವೆನೆತೆರೆದು ಮುಖವಾ ॥
ಶರಜಗಳು ಖರ ಕರನಿಗರಿಸಿಯರ್ಯನಾವಿಲ್ಲಿ ।
ಯಿರೆ ಮೋಸವೆಂದೇಳುತಿರೆ ಮರಳಿ ಕರೆದವವು ।
ಕರಗಿದರೆ ಕರಗುವದು ವರಧರ್ಮವೆಂಬುದಂ ಧರೆಗರು
ಪುವಂತೆಸೆದವು ॥

೫೭

ಕಮಳಾಯೆ ಕಮಳಾಯ್ಗೆ ಕಮಲಧರನೋಯ್ದುದಂ ।
ಕಮಲಸಖ ಕೇಳುತಂದಮುಮುಯೆನಗಿನ್ನೆಲ್ಲಿ ।
ಕಮಲದೊರಿದಪವೆಂಬ ಭ್ರಮೆಯಿಂದ ಬರಚಲ ಬಡಿ
ದೊಡೆದ ತಲೆರಕುತವಂ ॥
ಕ್ರಮುದಪ್ಪಿ ಚೆಲ್ಲಿತೆಂಬೆನೆ ಸಂಧವೊಪ್ಪಲ್ಕೆ ।
ಭ್ರಮಿಸಿ ಮತ್ತಿಷ್ಟೇಳೆ ಕುದುರೆ ರಥಕ್ಹೂಡಿ ಮೇಣ್ ।
ಕ್ರಮರಹಿತ ಸಾರಥಿಯ ತನುಕಂಪಿಪಿನ ಬಂದನ
ಮರ ಪತಿ ದಿಗ್ನಗದೊಳು ॥

೫೮

ಪಾರಾವತಾದಿ ಖಗ ಪಾರಿದವು ಗಗನಕ್ಕೆ ।
ಮಾರಾರಿ ಭವನದೊಳು ಭೇರಿ ಝೂಗುಟಿ ತಾಳು ।
ಬಾರಿಸಲು ಕೇಳಿಪರಿಚಾರಿಯರು ಎದ್ದು ನಲವೇರಿತಾವ್
ಶಿವನಪೂಜಾ ॥
ಗಾರದೊಳು ಸಾರಣಿಯು ಮೊದಲಾರತಿಯು ಕಡಿಯ ।
ಪಾರ ಕೃತಿಸರಕು ನೆರವೇರಿಸುತ ಶೈನಿಪಾ ।
ಗಾರದೊಳಪೊಕ್ಕಲ್ಲಿಗಾರಾದ ಸಾರ ಸಾಯಿಯು ಕಂಡು
ಬೆರಗಾದರು ॥

೫೯

ಅಕ್ಕಟಕ್ಕಟಾ ನಮಗೆ ದಿಕ್ಕಾರು ದೆಶೆಯಾರು ।
ಅಕ್ಕಿಯಂತೆರದೆಮ್ಮ ಚಕ್ಕನ್ಯಾತಕೆ ನೋಡೆ ।
ಅಕ್ಕ ಪೇಳ್ ನಿನ್ನಸು ಮುಕ್ಕಿದವರಾರು ಮೃತಿಗಿಕ್ಕಿದವರಾ
ರ್ನಿನ್ನನು ॥
ತಕ್ಕನುಡಿಯಾಡು ಕಮಳಕ್ಕ ನೀನೆಮ್ಮೊಡಲಿ ।
ಗಿಕ್ಕುವರೆಕಿಚ್ಚು ಸಲೆಮುಕ್ಕಣ್ಣ ಮುನಿದನೇ ।
ತಕ್ಕರರೆ ಪಕ್ಕಗಳು ಕಿತ್ತೋಗೆದ ಪಕ್ಕಿಯೋಲ್
ದುಃಖಶರಧಿಗೆ ನೂಕಿದಿ ॥

೬೦

ಓ ಸರಿಸುವೇಂ ತಾಯಿ ನೀ ಸೇವೆಯಿತ್ತುದಕೆ ।
ಬೇಸರಿಸಿದೆವೆ ಗಂಧವಾಸುಮನ ಪತ್ರಿಜಲ ।
ಸೋಸೆಂದು ಪೇಳಿದರೆ ರೋಷವ್ಯಾಕೆಮ್ಮೊಡನೆ
ದಾಸಿ ಜನರಕ್ಕನಿನಗೆ ॥
ಹಾ ಶಿವಮಹಾದೇವ ನೀ ಸುದತಿಯಗಲ್ಯ ಸುವಿ ।
ನಾಸಿಯವರಾವಲ್ಲದೋಷಮಿವಳೊಳಗಿಲ್ಲ ।
ದೀ ಸಮಯಕೊಯ್ವುದುಚಿತವೆಯಂದು ಶೋಕದಿಂ
ಘೋಷಿಸಿದರಾಸುರದೊಳು ॥

೬೧

ನಿನ್ನೆ ರಾತ್ರಿಯೊಳು ಮೋಹನ್ನ ರೂಪನನೋಡಿ ।
ನಿನ್ನ ನೀ ಮರೆತು ರತಿಯನ್ನು ಗೈದಾನಂದ ।
ವನ್ನು ಲಿಂಗಾರ್ಪಿತಕ್ಕೆನ್ನದಲೆ ಮರದೆನೆಂದೆನ್ನುತಸುವಂ
ಬಿಟ್ಟಿಯೋ ॥
ಕುನ್ನಿ ಭವಿಸ್ವಪ್ನದೊಳು ಚನ್ನರತಿಗೈದನೇ ।
ನನ್ನದಂ ಸೇವಿಸಿದೆ ಚರರೊಕ್ಕುದಲ್ಲದೆಂ ।
ದಿನ್ನುಪ್ರಾಣಂಗಳಿವಮುನ್ನ ತವೆನಮಗಕ್ಕ ನಿನ್ನಗಲಿ
ಬದುಕುವರೆ ನಾವ್ ॥

೬೨

ಅನಿತರೊಳಗೀ ಸುದ್ದಿ ಜನಿಜನಿತಮಾಗೆ ಬಸ ।
ವನ ಪೊರಿಗೆ ಮಿಂಡಚರಜನರೈದೆ ಪೇಳಿದರು ।
ನನಗೆ ಸಖಿ ಕಮಳೆಯವಳನಗೆ ಪ್ರಿಯ ಕಮಳೆಯುವ
ಳೆನಗೆ ಅಸುಪ್ರಾಯಳೆಂದು ॥
ತನ ತನಗೆ ಪೇಳಿ ಕಂಬನಿಗರೆವರನ್ನೋಡಿ ।
ಗಣ ತಿಂಥಿಣಿಯ ಕೂಡುತನಘನಲ್ಲಿಗೆ ಪೋದ ।
ನೆನೆ ಕೇಳ್ವು ಮಂಚಣ್ಣ ಕುನಿಸು ಕೈಗೂಡಿತೆಂದೆನು
ತರಸನಲ್ಲಿಗ್ಹೋಗಿ ॥

೬೩

ಧನಲೋಭಧಿಂದಿದೆ ಬಸವನೆ ಕೊಲ್ಲಿಸಿದನೆಂದು ।
ಜನಪನಿಗೆ ಪಿಶುನದಿಂದೆನೆ ಕೇಳ್ದು ಪಲ್ದಿಂದು ।
ಕನಲಿ ಕಿಡಿಯಾಗಿ ಪುರಜನವೆರಸುತೈತಂದು
ಅನಘನಿಗೆ ಕೇಳ್ದನಂದು ॥
ವನಜಮುಖಿ ಜೀವಿತಕೆ ಮುನಿದರಾರ್ಪೇಳ್ನಿನ್ನೆ ।
ದಿನಪದುಳಮಿರ್ದುಮಿಂದಿನ ಸಾಯಲೇಕಿವಳ ।
ಹನನಗೈದವರ ತನುಕುನಿಪರ್ದುನರಿಗಳಿಂ ತಿನಿ
ಸುವನಿಕಾಂಬಿಡುವೆನೆ ॥

೬೪

ಕಣ್ಣು ಕಿಡಿಸುರಿವುತಿಂತೆನ್ನುವದು ಕೇಳಿ ಬಸ ।
ವಣ್ಣನಾಡಿದನು ಸತ್ಯಣ್ಣನಿದುಬಲ್ಲ ನ ।
ಪ್ಪಣ್ಣ ನೀಂ ಪೋಗೆನಲು ಮನ್ನಿಸುತ ಪೋಗೆ ವನದನ್ನೆ
ಲ್ಲ ತಿಳಿದು ಬಂದು ॥
ಬಿನ್ನಪಂಗೆಯ್ಯೆ ಶಿವನನ್ನುತಿಸಿ ಕರತರಲು ।
ಕಣ್ಣಗಳದೆರೆದು ಶಿವವೆನ್ನುತಿರಲವಳು ಬಸ ।
ವಣ್ಣನಂ ನೃಪತಿ ಬಲುಮನ್ನಿಸುತ ಕೊಂಡಾಡಿ ಧನ್ಯನೀಂ
ಧನ್ಯಂದನು ॥

೬೫

ಅಸುಬರಲು ಕಮಳಾಯಿ ಬಸವಾದಿ ಪ್ರಮಥರಿಂ ।
ಗೊಸೆದು ಸಾಷ್ಟಾಂಗ ವಂದಿಸೆ ಕಂಡು ಪ್ರೇಮದಿಂ ।
ಬಸವಣ್ಣನವಳ ಸಂತಸದಿ ಪೊಗಳ್ದನುಮಾಚರ
ಸಮುಖ್ಯ ಶರಣರೆದುರೆ ॥
ಅಸುಬಿಡುವದೇನು ಲಿಂಗವು ಪೋಗಲೊಡನೆ ತಾ ।
ನಸು ಬರುವದೇನು ಲಿಂಗವನು ಬರಲೊಡನೆ ಸಲೆ ।
ವಸುಮತಿಯೊಳೀ ಭಕುತಿ ಪೊಸತಾಯ್ತು ಭಾಪು
ಭಾಪ ಸಮಲೋಚನಪ್ರಾಣಿಯೆ ॥

೬೬

ನೃಡನು ಆಪೋಳ್ತು ಕೆಂಜೆಡೆ ಪಂಚಮುಖ ಪತ್ತು ।
ಸಿಡಿದೋಳು ಪದಿನೈದುಕುಡಿ ವೃಷಭ ಗಮನದಿಂ ।
ಮಿಡಿನಾಗರವ ಕಿವಿಯಕಡುಕು ಗಜ ಮಿಗವಗೆಯ
ದೊಗಲುಡಿಗೆ ಪೋದಗೆಯಿಂದ ॥
ತೊಡಿಯೊಳ್ಮೃಡಾಣಿ ಶಿರದೆಡೆಯ ಗಂಗಾಂಬೆ ಬಿಸ ।
ಗುಡಿವಗಳ ಭಸಿತವಂತೊಡೆದ ಮೈಯ್ಯುಡಿಗಣ್ಣಿ ।
ನೊಡಿಯನಾವಾರ ಕುಲ ಮಡದಿ ಮಣಿ ಭಕುತಿ ಗೊಲಿ
ದೊಡನೆ ಪ್ರತ್ಯಕ್ಷನಾದಂ ॥

೬೭

ಬೃಂದಾರ ಕರುಗರೆದು ಮಂದಾರ ವೃಷ್ಟಿ ಸುರ ।
ದುಂದುಭಿ ಧಣಂ ಧಣಂ ಧಣಕೆಂದು ಬಾರಿಸಲು ।
ನಂದೀಶನಲಿಯೆ ನಾರಂದ ಕುಣಿ ಕುಣಿದಾಡೆ ಬಂದಿತ್ತು
ಯೋಮಯಾನಂ ॥
ಇಂದುಧರನಂದದರೊಳಿಂದುಮುಖಿಯಳಿಗಿತ್ತು ।
ಮಂದರಾದ್ರಿಗೆ ನಡಿಯೆ ನಂದಿಗಮ ಭಕ್ತಗಣ ।
ವೃಂದ ಉಘೆ ಚಾಗು ಭಲರೆಂದು ಕೈ ಕೈ ಬಡಿತದಿಂದ
ಬಲು ಕೊಂಡಾಡಲು ॥

೬೮

ಅದುಕಂಡು ನೃಪತಿ ಸಮ್ಮುದದಿ ಬಸವರಸನಂ ।
ಪದಕೆರಗಿ ಕೊಂಡಾಡಿ ಪದುಳಿರ್ದನೈ ಶರಣ ।
ನಿದು ಲಿಂಗ ಮಹಿಮೆ ಮರಿಯದಿರೆಂದು ಪೇಳಿದನು
ಗುರುರಾಯ ವಿದಿತಮಾಯಾ ॥
ಇದರಿಂದ ಮುನ್ನ ಲಿಂಗದ ಪ್ರಾಣಿಯಾದವರ ।
ಚದುರ ಬಣ್ಣಿಪೊಡೆನ್ನ ವದನಸಾಲುವದೆ ದೀ ।
ಪದಕಲಿಯು ಕನ್ನಣ್ಣ ಮದರಹಿತ ನಂಬೆಣ್ಣ
ಮೊದಲಾದವರ ಮಹಿಮೆಯಾ ॥

೬೯

ಲಿಂಗ ಭಕ್ತನು ಕಾಟಕೂಟ ಸಲೆ ಚಂಡೇಶ ।
ಲಿಂಗ ಭಕ್ತರು ಚೋಳಿ ಚೋಳ ಭೂಪಾಲ ಗುರು ।
ಲಿಂಗ ವರಭಕ್ತನುರುಲಿಂಗ ಪೆದ್ದಣ್ಣಿಷ್ಟಲಿಂಗ
ಭಕ್ತನು ಸುರಗಿಯಾ ॥
ತುಂಗ ಚೌಡಾರ್ಯ ನಿಜಲಿಂಗ ಭಕ್ತರು ದೊಡ್ಡ ।
ಲಿಂಗ ಘಟಿವಾಳಕಿರಿ ಲಿಂಗ ಮಳಿರಾಜ ಘನ ।
ಲಿಂಗ ಭಕ್ತನು ಮುಗ್ಧ ಸಂಗಯ್ಯನಿವರ ನೀಂ
ಲಿಂಗವೆಂದೇ ಭಾವಿಸು ॥

೭೦

ಲಿಂಗ ಮಹಿಮೆಯ ಕೇಳ್ದು ಧನ್ಯನಾದೆನು ಗುರುವೆ ।
ಜಂಗಮದಘನಪೇಳ್ವುದೆಂದಂಗಚಾಚಿ ಗುರು ।
ಪುಂಗವನು ನುಡಿದ ಗುರುಲಿಂಗದಿಂ ಘನನೈಸೆ
ಜಂಗಮಹತ್ತು ಮಗನೆ ॥
ಜಂಗಮು ಜಗತ್ಪಾವನಂಗಮಿಲ್ಲಾಗಿ ಮೇ ।
ಣಂಗರಹಿ ತಲಕರ್ಮ ಗಳಿತನಲ್ಲಿವುಕ್ರೀ ।
ಯೆಂಗಳೊಳಗಲ್ಲಾವ ಹಂಗಿಲ್ಲ ಭಕ್ತಿಯುತ ರ್ಥಂಗಿಲ್ಲ
ದವನಲ್ಲವು ॥

೭೧

ಚರಲಿಂಗದಿಂದಧಿಕ ಗುರುವಿದಿಂದಧಿಕ ಮಾ |
ಚರಮೊಕ್ಕುದಂ ಲಿಂಗಗುರುವಿಂಗೆ ಸಲುವುದಾ |
ಗುರುಲಿಂಗ ನೈರ್ಮಾಲ್ಯ ಚರಗಿಲ್ಲ ಲಿಂಗಕ್ಕೆ ಗುರು
ಲಿಂಗ ಚರನುಂಟಲ್ಲೆ ||
ಗುರುಮಿಗೆ ಲಿಂಗಚರಗುರು ವಿಪ್ಪನಿಃಶೂನ್ಯ |
ಚರವರಗೆ ಲಿಂಗಗುರುಚರನಿಲ್ಲ ಮದರಿನಾ |
ಚರ ಚರಣ ಮಿರಲೆನ್ನ ಶಿರದೊಳೆಂದಾಗಮದಿ
ಪುರಹರನೆ ಸಾರಿರ್ಪನು ||

೭೨

ಚಾರುತರ ಮಹಿಮೆ ವಿಸ್ತಾರಿಸುವಡರಿದು ಪದಿ |
ನೂರು ಮೊಗದವಗೆ ವರಸಾರ ಸಾಸನಗೆ ಗಂ |
ಭೀರ ಸುರಗಣ ಕುಲಾಚಾರ್ಯಗೆ ನಲುಳಿದರಿಂ
ಪೂರಣವ ಗೈವುವೆನಿತೊ ||
ಸಾರಮಿದಕೊಂದು ಕಥೆ ಸಾರುವೆನು ಮೊದಲು ನೀ |
ಲ್ನೂರ ನಂಬೆವ್ವವರ ವೀರಶೈವಾಚಾರಿ |
ಭೂರಿಜಂಗಮ ಸೌಖ್ಯಕಾರಿ ಸದ್ಗುಣಪೂರಿ ಶಿವ |
ಭಕ್ತಿ ಹೆದ್ದಾರಿಯು ||

೭೩

ಇರುತಿರಲು ಕಾಂಚಿಯೊಳು ಶಿರಿಯಾಳ ಸುತನತಲೆ |
ಕೊರೆದು ಪುರಹರಗುಣಿಸಲಿರದೊಲ್ದು ನಿಜದೋರಿ |
ತರುಣ ಸತಿಸಹಿತ ಶಿವಪುರಕೊಯ್ಯ ಗರುವ
ದೊಳು ಬೆರೆದನಾ ಶಿರಿಯಾಳನು ||
ಪರಮನದು ತಿಳಿದವನ ಗರುವ ಬಿಡಿಸಲ್ಕೆಂದು |
ಚರರೂಪವಂ ಧರಿಸಿ ಕರಕೊಂಡು ಬಂದನಾ |
ಪರಮಪಾವನ ಚರಿತೆ ಶರಣೆ ನಂಬೆವ್ವೆಯರ
ವರ ಮನೆಗೆ ಪರಿತೋಷದಿಂ ||

೭೪

ಅಸವಪದಿ ನುಡಿದನಾ ಶಶಿಧರಂ ಕೇಳಮ್ಮ
ಬಿಸಜಾಕ್ಷೆ ತಿಳಿ ಮೂರ್ದಿವಸದ ಉಪವಾಸದಿಂ |
ಹಸಿವು ಘನವಾಗಿ ನಾ ಕಸವಿಸಿಗೊಳ್ಳುವಾಯಸ
ನುಸುರಲಿಕೆ ಬಾರದುಲಿ ||
ಬಿಸಿಯು ಕರಿಗಡಲು ಘೃತ ಮೊಸರುಗೆನೆಯುನ್ನ ಸಂ |
ತಸದಿ ನೀಡಮ್ಮ ಕರ್ಕಶದನ್ನವನ್ನುಂಡು |
ಬಸುರು ಪಾಳಾಗಿ ಕಾಲ್ಮಸುವಿಲ್ಲಯನಲವಳು
ಪೊಸತಾವದಿದರೊಳೆಂದು ||

೭೫

ತಿಳಿದಾಗಲೆಂದುಪದನಳಿನಗಳಿಗೆರಗಿ ಕಂ |
ಬಳಿ ಗದ್ದುಗೆಯನಿಡಲು ಕುಳಿತು ಕೇಳಿದ ಮಕ್ಕ |
ಳೊಳರೆಯುಂಟೋರ್ವ ಕರುಗಳಕಾಯ್ವ ನೆನೆಲಿಕ್ಕೆ
ಯೊಳಿತಾಗಲೆಮ್ಮ ಎನಲು ||
ಲಲನೆಮಡಿಯಾಗಿ ತಾಂ ಪಳಗಿ ಪಾಯಸ ಫೇಣಿ |
ತಿಳಿದುಪ್ಪದೋಳ್ಗರಿದು ಗಡಬು ಗಾರಿಗೆ ಮಾಡು |
ತಿಳುವಿವಲೆ ದುಂಬಿನೊಳು ಸಲಿಲತರ ಪೋದ
ನಿತರೊಳಗೆ ಗರುಗಾಪಿಗ್ಹೋದ ||

೭೬

ತರುಳಬಂದವಳ ಕರೆಕರೆದು ಕಾಣದೆ ಕದವ |
ತೆರೆದು ಹಸಿವಿಂಗಾನದಿರದೆಯೊಳಪೊಕ್ಕೊಂದು |
ಕರಿಗಡಬುಕಂಡು ಬಲುಹರುಷದಿಂ ಪಿಡಿದೆರಡು
ಕರದೊಳಗೆ ತಿನ್ನುತಿರಲು ||
ಭರದಿಬಂದಾಕೆ ತಲೆಶಿರಕುಂಭನಿಳಹುತ |
ಪರಿಕಂಡು ಕಣ್ಮುಚ್ಚಿ ಹರಹರಮಿದೇಂ ಶುನಕ |
ದುರುಳತನದಿಂ ಮುಟ್ಟಿ ಚರರಡಿಗಿ ಮೀಸಲಂ
ಮುರಿಯಿತೆಂದೊನಕೆ ಎತ್ತಿ ||

೭೭

ಕಾದ್ರದಿಂ ಪೊಡಿಯಲೆ ಛಿದ್ರವಾಗಲು ಶಿರವು |
ರುದ್ರವೆನುತಸುಗಳಿಯೆ ಕಾಲ್ಪಿಡಿಯುತಿದು ಜಂಗ |
ಮದ್ರೋಹಿಯಂದು ದರದರನೆಳಿದು ಗೋವಲಿಗೆ
ಕ್ಷುದ್ರತನ ಗೈದುದೆಂದು ||
ಅಪ್ಪಸ್ಟಿಯಿಂ ನೋಡಿ ಚೆಲ್ಲಿ ಪುಲ್ಮುಚ್ಚಿಟ್ಟು |
ಭದ್ರಸ್ನಾನಂಗೈದು ಶುದ್ಧ ಪಾಕವನೆಸಗ |
ಲದ್ರಿ ಚಾಪನು ಶೆಟ್ಟಿಗಂದು ತೋರಿಸಿವನವಳ |
ದ್ರಿ ಹೃದಯದ ಕೃತ್ಯವಂ ||

೭೮

ತನುಜರುಂಡದುವೆಂಜಲೆನಲಾಗದೆಂದೆಂಬ |
ಸುನಕರೀವನುತಿಮಣಿ ಮನೆಯಪಿಂದಿನಗೋಡೆ |
ಮುಟ್ಟಲೇನು ಪಾವನರೆಸೀ ನೋಡೇಳ್ವದೆನುತ
ಗೋವಲಿಯೊಳಗೆ ||
ತೃಣವು ಮುಚ್ಚಿಟ್ಟುದನು ಗೊನೆಗಾಲಿನಿಂ ಬಗಟ |
ವನುಗೈದು ತೋರೆ ಶಿವನೆನುತ ಕಣ್ಮುಚ್ಚಿ ಮುದ |
ವನು ಬಿಟ್ಟು ಶೆಟ್ಟಿಯಾನಗಳಂ ಪೊಗಳಿದನು ಜನನಿ
ಯಿವಳ್ಭಕ್ತಿಗೆಂದು ||

೭೯

ಕ್ರಸಿತರೊಳ್ಬಂದು ಪ್ರೊದವಿನುತಳಾಗುತೆ ಶಿವ ।
ರ್ಚನೆಗೀಗೆ ವಯುಗ್ಯೆವದೆನೆ ಕೇಳುತೆದ್ದು ಮ ।
ಜ್ಜನಗೈದು ಲಿಂಗಪೂಜನ ಮಾಡಲಾಗ ಭೋಜನ
ಕನ್ನಯೆಡೆ ಮಾಡಲ ॥
ವನತೆ ಕರೆಕರೆ ನಿನ್ನ ತನುಭವನ ಬಿಂದು ನೀ ।
ಮನೆಯೊಳಿಲ್ಲದ ಪೊಳ್ತು ಜನನಿಯೆಂದು ಧನಿಗೈ ।
ದ ನಿನಗಿಸಿತು ವಯುವಿಲ್ಲೆ ಪಡಿದನವನಂ ಬಿಟ್ಟು ಉಣು
ವುದ್ಹಾ್ಯಗೆ ಹೇಳು ॥

೮೦

ದೇವಬಲ್ಲೆನು ನಿನ್ನ ಕಟಕಿವಾತುಗಳು ನಾ ।
ಜೀವದಾಸಿಯನುಳ್ಳೊಡುಣು ಸುಮ್ಮನೊಲ್ಲಿದಿರ ।
ಲಾವನಕೆ ನೋಡೆಂದು ತೋರಿಸಲ್ಕೇಳು
ರಾಜೀವಲೋಚನೆ ಜಗದೊಳು ಕೇಳು ॥
ನಾವೇನು ಮಕ್ಕಳ್ಹಡದರಿಯೆ ವೇನವ್ವ ನೀ।
ದೇವಾನ್ನ ಸುತರ ಬಿಟ್ಟುಣುವದೆಂತೈ ಮಹಾ ।
ದೇವ ಪಂಕ್ತಿಯೊಳಾತ್ಮ ಭವರಿಲ್ಲದೂಟ ಸಲೆ
ಭಾವಿಸಲು ಕಾಲಕೂಟ ॥

೮೧

ಸುತರಹಿತ ಭೋಜನವು ಸತತಯುವ ಭಾಜನವು ।
ಪತಿತಜನಸಂಗ ದುರ್ಗತಿ ಮಾನಭಂಗ ಶಿವ ।
ನುತಿಯಿಲ್ಲದಾಸ್ಯ ದುರ್ಮತಿ ಕೋತಿಲಾಸ್ಯ
ಸಲೆಸತಿಯಿಲ್ಲದವನ ಸಂಸೃತಿ ॥
ಅತಿವಿನದವಸತಿ ಪಂಡಿತನಿಲ್ಲದಿಹ ಸಭಂ ।
ವಿತತ ಕುಲರಾಸಭಂ ಮತಿಯಿಲ್ಲದಾತ್ಮಚರ ।
ಜತತವಮಾತ್ರಜನಚರ ಧೃತಿರಹಿತ ನರ ವಾನರ
ತಿಶಯೋಕ್ತಿಯದಲ್ಲವು ॥

೮೨

ಎಣಿಕೆಬೇಡೌ ಮಗಳೆ ತನುಜನಂ ಕರೆವನಕ ।
ಸುಣುವವನಾನಲ್ಲೆನಲು ಹಣಿಯಗಂಟಿಕ್ಕಿ ನಾ ।
ನಣುಗನಂ ಕರೆಯಲಂದಿನದ ಸಿರಿಯೊಳ ಚಾಂ
ಗುಣೆಯೆ ಬಿಡುನಿನ್ನಬಿಂಕಂ ॥
ವಿಸುತ ಜಂಗಮುದನ್ನವನು ಮೀಸಲಳಿದ ಭವಿ ।
ಶುನಕದಂ ಕೊಂದಮೇಣ್ ತನುಜನೆಂಬಳರಿಂ ।
ದನಿಗೈವಳೆಂದು ನೀನೆನೆಸದಿರು ಉಣದಿರ್ದೊ
ಡೊನಕೆಯಿದು ನೋಡೆಂದಳು ॥

೮೩

ಅದುಕೇಳಿ ಶಿರಿಯಾಳ ಮುದವುಳಿದು ಮುಖಬಾಗಿ ।
ಬೆದರಿಶಂಕರನು ಗದಗದನಡುಗುತುರೆ ಪಂಚ ।
ವದನ ವೀರೈದು ಭುಜವಿಧುಕಲಾಧರ ಹಿಮನ
ಗದಸುತೆಯಳೆಡದೊಡೆಯೊಳು ॥
ಪದಿನೈದು ನಯನ ವೈಮದನನುರುಹಿದ ಬೂದಿ ।
ಬಿದಿತಲೆ ಕರೋಟಿಕೈಃದುದವ್ಯಾಳ ವ್ಯಾಘ್ರ ಚ ।
ರ್ಮದ ಪೊದಕೆಯಸಿಯೆ ಸನ್ನಿಧಿಯಾಗಿ ನಿನ್ನಿಚ್ಛಿತದ
ಪದವಿಬೇಡೆಂದನು ॥

೮೪

ಕೇಳುತಾನುಡಿ ಕೋಪತಾಳಿ ಕೊಡುವದನು ಶಿರಿ ।
ಯಾಳನಿಗೆ ಕೊಡುದೇವ ಮೀ ಲಲಿತರೂಪೆನ್ನ ।
ಆಲೋಕನಿಗೆ ಬೇಡಸಾಲ್ಗು ಮುನ್ನಿನ ರೂಪು ತಾಳು
ತಾಳ್ಮೆಬೇಗನೆ ॥
ಪಾಲು ಕುಡೆಯುವರೆಡಿಗೆ ಕೀಳಂಬಲಿಯನೀಡು ।
ಪೋಲೀಗ ಭಕುತಿಮೂಲ ಕೆಡಿಸಲಿಕಿನಿತು ।
ತೋಳವೊದಲಾದವಂ ತೋರಿದರೆ ಭ್ರಮೆಯೊಳಗ
ಬೀಳುವೆನೆ ಪೇಳ್‌ಶಂಕರ ॥

೮೫

ಗಿರಿಯು ಚಲಿಸದರೇಳು ಶರಧಿ ಮಿತಿಮೀರಿದರು ।
ಮರುತ ಬೆಮರಾಂತು ಭಾಸ್ಕರ ತಂಪು ಶಶಿಯೂಷ್ಣ ।
ಕರವಾಂತ ಪರಗಿರಿಯ ಶಿರದೊಳಗೆ ಮೂಡುತಲಿ
ಸುರಪದೆಶೆಯೊಳು ಮುಳುಗಲಿ ॥
ಧರುಣೆಯುಂಬರಕೆಡ್ಡರುರೆ ಗಗನಬಿದ್ದರುಂ ।
ಪುರಹರನೆ ಕೇಳ್ ನಿನ್ನ ಚರಣದಾಣೆಯು ದಿಟಂ ।
ಚರಭಕುತಿಯುಲ್ಲದಂ ಪೆರತೊಂದು ಬಯಸೆನೆಂದರಿ
ನಿನ್ನ ಮನಸಿನೊಳಗೆ ॥

೮೬

ಪನ್ನಗ ವಿಭೂಷಕೇಳ್ ನಿನ್ನ ಚರರೂಪಕಾಂ ।
ಭಿನ್ನ ತಿಳಿದೆನೆಯರಡು ಕಣ್ಣೇನು ಮೂರೇನು ।
ಸನ್ನುತನೆ ಸಾಕು ನೀನುಣುತೆಮ್ಮಂ ಸಲಹು
ದಿನ್ನಾವ ವರನೊಲ್ಲೆನು ॥
ಎನ್ನಲಪುಕೇಳಿ ಮುಕ್ಕಣ್ಣ ಶೆಟ್ಟಿಯು ಸಹಿತ ।
ಉಣ್ಣುವದು ತೀರ್ಚಿಸಂಬೆಣ್ಣಗಸು ವಿಡಲು ಬಿಡು ।
ಗಣ್ಣವರು ಸುರವೃಷ್ಟಿಯನ್ನುಗರಿಯಲು ಹರಹರೆ
ನ್ನುತಿರಲಖಿಳ ಜನರು ॥

೮೭

ಆ ಸಮಯದೊಳು ಬಂದುದಾಸುಮನಯಾನ ಸಂ ।
ತೋಷದಿಂದೀಶನಂಬೆಣ್ಣಿ ನೊಂದೊಳಗಿರಿಸಿ ।
ಘೋಷಿಸಿದರುಘೆ ಚಾಂಗು ಭಲರೆಂದು ಜನರು
ಕೈಲಾಸ ಕೊಯ್ದು ವನಗಣರಾ ॥
ಧೀಶ ಪಟ್ಟವುಗಟ್ಟುತೀ ಸುದತಿ ಪೊಗಳ್ವಪ್ಪುತಾ ।
ಆಶೀರ್ವಚಂ ಗೈಯ್ಯುತೀಶ ಪೋಗಲ್ ಚರರ ;
ವಾಸೋಹದಖಿಳದೊಳು ಲೇಸೆಂದು ಮಾಡಿದಳು
ಬೇಸರಿಲ್ಲದೆ ಧರಿಯೊಳು ॥

೮೮

ಶರಣಪ್ಪಕೇಳು ಶಂಕರನೊಲ್ದು ಕರಿಯೆ ಧೀ: ।
ಕ್ಕರಿಸಿ ನಿಂಬೆಕ್ಕ ಚರದರ ಚರಣ ಡಾಸೋಹ ।
ನೆರೆಗೈದು ಜಂಗಮುದ ಚರಣದೊಳು ಬೆರೆದು
ಸುಸ್ಥಿರ ಮುಕ್ತಿಯಂ ಪಡೆದಳು ॥
ಚರನು ಬೇಡಲು ಮಗಳ ತುರುಬಿತ್ತ ಮಾನಕಂ ।
ಜರನು ವಿಗಪಟ್ಟದರಸಿಯನಿತ್ತ ಬಲ್ಲಾಳ ।
ಚರವೇಷಕನ ಪೂರ್ವನರುಹಲ್ಕೆ ತರಿದ ತನ್ನ
ರಸಿಯನು ಕಲಿಕಂಭನು ॥

೮೯

ಶೂಲಬೊಮ್ಮಯ್ಯ ಎಳೆಯೂಂಡ ಗುಡಿಮಾರ ।
ಕೈಕೂಲಿ ಚಾಮಯ್ಯ ಮೊನೆಧರಗುಂಡ ಬೊಮ್ಮಯದ ।
ಯಾಳು ನಿರ್ಲಜ್ಯ ಶಾಂತಯ್ಯ ಮುರನೀತಿ ಸಲೆದಾಸಯ್ಯ
ದಸುರ್ಕೈಯನು ॥
ಚೀಲಾಳಶೆಟ್ಟಿ ತಿರುಕುರುಪಿ ತೊಂಡಂಕಾರಿ ।
ಕಾಲಮ್ಮೆ ವೈಜವ್ವೆ ಶೇದಿರಾಜಂ ಪಗ ।
ಲ್ಬೋಳ ತಿರುಪುಲಿಯಾಂಡನ್ಯೆಕ ಕಡವಘ ಪೆರು
ಮಾಳಾದಿ ಸದ್ಭಕ್ತರು ॥

೯೦

ಚರಭಕ್ತರಿವರ ನೀ ಮರೆಯದಿರು ಎನಲು ಗುರು ।
ವರನ ಪದಕೆರಗಿ ಘನ ಹರುಷದಿಂ ಕೊಂಡಾಡಿ ।
ಎರಗಿ ಸಾಷ್ಟಾಂಗೆದ್ದು ಗುರುಸಮ್ಮುಖದಿ ಕುಳಿತು
ಪರಿಪೂತನಾದೆನೆಂದು ॥
ಕರಗಳಂ ಮುಗಿದು ಮುಂದರುಪೆ ನಗೆಯುಳಿದಷ್ಟ ।
ವರಣ ವೆನಲದನು ಸದ್ಗುರು ಕೇಳಿ ತೋಷದಿಂ ।
ಶರಣಪ್ಪ ಕೇಳು ಸುಸ್ಥಿರ ಚಿತ್ತದಿಂದೆಂದು ಪರಿವಿಡಿದು
ಪೇಳ್ದೊಡಗಿದಂ ॥

೯೧

ವರಪುರದ ಶಿವಲಿಂಗ ಶರಣಬಸವನ ಚರಿತೆ ।
ಗುರುಬಸವಣಾರ್ಯ ಪದಸರಸಿರುಹ ಲೀನಮಧು ।
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ॥
ವಿರಚಿಸಿದನೋದಿಸುವ ಬರೆವಗೋಮುವಗೆ ಪರ ।
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ ।
ದೊರೆಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ಸ್ಮೃತಿಸಂಧಿನುತ ಬಂಧಿಯು ॥

ಸಂಧಿ ೪ ಕ್ಕೆ ಪದ ೩೦೮ ಕ್ಕಂ ಮಂಗಳಂ.



ಶ್ರೀ ಶರಣಬಸವೇಶ್ವರ ಪ್ರಸನ್ನ

## ಐದನೆಯ ಸಂಧಿ

ಸೂಚನೆ॥ ಭೂತಿಮಹಿಮೆಯ ಕೇಳ್ದು ಪ್ರೀತಿಯಿಂ ಧರಿಸಿ ಸಲೆ ।
ಭೂತನಾಥನನಯನ ಜಾತಮಣಿ ಚರಿತೆಯಿೀ ।
ಭೂತಳಕೆ ಘನವೆಂಬುದೋತಾಲಿಸುತಲಿ ಸಾದ್ಭೂತ ಮನದಿಂದಿರ್ದನು ॥

೧

ಸಾರಸಕಲಾಧರಂ ಸಾರಸ ವಿಶಿಖಹರಂ ।
ಸಾರಸಸುತಾವರಂ ಸಾರಸ ವಿದೂರ ಸಂ ।
ಸಾರ ಸಗಮಾನತಂ ಸಾರಸಖನಯನ ಭವಸಾರ
ಸಂಹರ ಶಾಶ್ವಿತಂ ॥
ಸಾರಂಗ ಪ್ರೀತ ಸಾರಂಗ ಮುಖತಾತ ।
ಸಾರಂಗ ಗಮನಾಥ ಸಾರಂಗವರ ನಮಿತ ।
ಸಾರಂಗಧರ ಹಸ್ತ ಸಾರಂಗ ಪಾಹಿ ಶಿವಲಿಂಗ
ಸಾರಂಗ ಜನರ ॥

೨

ಭಸಿತ ಮಹಿಮೆಯ ಪೇಳ್ವೊಡೊಶವಾರಿಗೈ ಶರಣ ।
ಬಸವಪ್ಪ ದ್ವಿ ಸಹಸ್ರ ರಸನಿಯವಗಾಗದೆನು ।
ಉಸುರಲಾನೆನಿತರವ ಕುಸುಮ ಶರಹರ ತಾ
ಧರಿಸುವನ್ನೈ ಭಕುತಿಯಿಂದ ॥
ಪೆಸೆಗೊಳಲು ಭೂತಿಸಂತಸವೀವುದೈ ಭವ ।
ನಸಿವದಿದುವೇ ಸಿದ್ಧಿ ಸಿರಿ ಸಿಕಾರ ಸಲೆ ತಕಾ ।
ರ ಸಮ ತಮ ನಾಶವೈ ಕುಶಲಭಭವಸಿ ಸಿಂಧು
ತನು ಶೀಲ ತಿಳಿತರಣಿಯೈ ॥

೩

ಭೂತಪತಿಮುಖ ಸದ್ಯೋಜಾತವಾಮಾಘೋರ ।
ಶ್ರೀ ತತ್ಪುರುಷ ಮೀಶಜಾತ ಮಾಕಾಶ ಸಲೆ ।
ವಾತಾಗ್ನಿ ಜಲಕುಕೂಸಂಭೂತನ್ನೀವೃತ್ತಿ ಪ್ರತಿಷ್ಠೆ
ವಿದ್ಯಾಶಾಂತಿ ಶಾಂತ್ಯಾ ॥
ಶೀತ ಕಲೆ ಕಪಿಲಸಿತ ರಕ್ತ ಸಿತಬಹುವರ್ಣ ।
ಪೂತನಂದೇಭದ್ರೆ ಸುರಭಿ ಸುಸಿಲೆ ಸುಮನೇ ।
ಜಾತ ಗೋಮಯದಿಂದ ಭೂತಿಭಸಿತಂ ಭಸ್ಮ
ಕ್ಷಾರ ರಕ್ಷಗಳೊಗೆದವು ॥

೪

ಧರಿಸಲಿಕೆ ಭೂತಿಯೈಸಿರಿಯಕ್ಕು ಭಸಿತದಿಂ ।
ಸರಸಿಜಾಪ್ತನಧಾಮದಿಂ ಪರಮ ತೇಜಕ್ಕು ।
ದುರಿತಳಿಗು ಭಸ್ಮದಿಂ ಮರಣೆಲ್ಲಕ್ಷಾರದಿಂ ಮರುಳ
ಭೂತಾಪಸ್ಮರಾ ॥
ಉರೆಬೊಮ್ಮರಕ್ಕಸರ ಉರಗಾದಿಗಳ ಭಯ ।
ಹರರಕ್ಷೆಯಿಂದೆ ಗಣವರ ಪದವಿಯೈದರಿಂ ।
ನಿರುತನೀ ನಂಬೆಂದು ಗುರುವರಂ ಪೇಳಿವನು
ಶರಣನಿಗೆ ಕರತೋಷದಿಂ ॥

೫

ಇನಿತಾದ ಭೂತಿ ಯಿಮ್ಮನು ದಿವಿಜ ನರ ನಾಗ ।
ದನುಜ ಮುಖರೆಲ್ಲ ಪಾವನರಾದರೆಲೆ ಮಗನೆ ।
ಮುನಿಪ ಜಮದಗ್ನಿ ಮೇಣ್ ಮುನಿಕಶ್ಯಪಾಗಸ್ತ್ಯ
ನನುವಿಷರು ಗೌತುಮಸು ತಾ ॥
ವನಿತು ಮೂರ್ವಾಳ್ಯ ಜೀವನ ಪಡೆದರದರಿಂದೆ ।
ಮನುತ್ರಿಯಾಯುಷ್ಯ ವೆಂದನು ದಿನವು ನಿಗಮದೊಳ
ಗೆನುತಿಹುದು ಗೋಪಿಚಂದನ ಮುಖ್ಯ ಶತಕೋಟಿ
ಸಾಟಿಯಲ್ಲೈ ಭಸಿತಕೆ ॥

೬

ಮತಿಯುತನೆ ಕೇಳ್ ಪೂರ್ವಕಥೆ ಪೇಳ್ದೆ ವಾಸಿಷ್ಟ ।
ಮತದೋಳ್ ಧನಂಜವಯಂಬತುಳಯತಿ ಯಿರಲವಗೆ ।
ಸತಿಯರಿರೆ ಶತಸಂಖ್ಯ ಸುತರನಿತೆ ಪಿರಿಯು ಪೆಂಡತಿ
ಸುತನು ಕರ್ಣನೆಂಬ ।
ಚತುರವನ ಸತಿ ಶುಚಿ ಸ್ಮಿತಿಯೊಡನೆ ಸಂಸರಣ ।
ದತಿ ಸೌಖ್ಯದಿಂದಿರಲು ಖತಿಗೊಂಡುಪಾಯದ್ಯ ।
ಮತಿ ಬರುಡರೆಲ್ಲ ತಾವ್ ಜೊತೆಗೊಂಡ
ಸೂಯದಿಂ ಸತತ ಬಾಧಿಸುತಿಪ್ಪರು ॥

೭

ಜ್ಞಾನದೊಳು ರೂಪು ಬಿನ್ನಾಣದೊಳು ವಿದ್ಯ |
ಸನ್ಮಾನದೊಳಗಿವನಿಗೆ ಸಮಾನರಿಲ್ಲೆಂಬುದಂ |
ಪೇಳ್ ಯಿವನ ಸತಿಯುಗುಣ ನ್ಯೂನಮಿಲ್ಲಾಗಿ
ತಾಂ ಮಾನಿನಿಯುಹೆಂಬುದೆಮ್ಮಾ ||
ಮಾನ ಖಂಡನಿಗೆ ಹೆದ್ದಾಣನಾಯ್ತೆಂದು ಬಲು |
ಕೇಣದಿಂ ತಾನವನ ಪ್ರಾಣವಂ ಗೊಳ್ವನಕ |
ದೇನು ಸುಖವಿಲ್ಲೆಂದು ಮಾನಸದಿ ಬಲುದೊಂದು
ಥೇನಿಸಿದರಾ ದುಷ್ಟರು ||

೮

ಪಿಕನ ಬಾಧಿಪ ಕಾಕನಿಕರ ವೋಶ ವಿಕರಕೆ |
ವಿಕಳವಂ ಗೊಂಬ ಕೌಶಿಕ ಸಂತತಿಯೊ ಬಾಲ |
ಶುಕನ ಗೊಣ್ ಮುರಿವ ಮೂಷಕ ವೈರಿಗಳ
ಕುಲವೋಕಕುವ ಹಂಸನ ಬಗಿಯದಾ ||
ಬಕಬಳಗವೊ ಕಮಲಸಖನಿಗಾಗದ ಚೋರ |
ಸಕಲ ರೋಸ ಲಿಂಗಾರ್ಚಕಗೆ ಸಹಿಸದಿಹ ನಾಸ್ತಿ |
ಕರೆನಲು ಸಜ್ಜನನ ಪ್ರಕಟದಿಂ ಕಾಡಿದರು ಸಕುಟ
ಲಾತ್ಮರು ಸತತವು ||

೯

ಖಳರುಗೈವುದನು ತಾ ತಿಳಿದು ಭವನಾಸಿ ತಟ |
ದೊಳಗಿರುವ ಪರಮಹೋಬುಳ ಪುರಕೆ ಬಂದು ತ |
ತ್ಸಲಿಲದೋಳ್ ಮಿಂದು ಶಿವನಿಲಯದೊಳು
ಲಿಂಗವಂ ಬಲವಂದು ನರಸಿಂಹನಾ ||
ಬಳಿಗೈದೆ ಪೋಗುವೆಡೆಯೊಳಗೋರ್ವಮುನಿ ಲಿಕುಚ |
ಫಲವರಸದೊಯ್ಯುತಿರೆ ಸೆಳೆದು ಘ್ರಾಣಿಸಲಿವನ |
ಹೊಲಸು ನಡೆಕಂಡವನು ಬಲು ಕನಲಿ ನೊಣ ಜನ್ಮ
ಕಿಳಿ ನೂರು ಬರಿಸೆಂದನು ||

೧೦

ಅಸಿತಕ್ಕೆ ಬಂದು ಮಾನಿನಿ ಶುಚಿ ಸ್ಮಿತೆಗೆ ತಾ |
ನಿನಿತುಳಿಯದೋಲುಸುರೆ ನೊಣವಾಗಿ ಪಾರಲ್ಕೆ |
ಹಣೆಯುದಿಯು ಬಡಿದು ದೊಪ್ಪನೆ ಬಿದ್ದು ಯಿನಯನ
ಸುಗುಣಗಳಂ ಕೊಂಡಾಡುತೆ ||
ನಿನಗೆ ಮತಿ ಬರಿದಾಯ್ತುದೆನಗೆ ಗತಿಸರಿದ್ದೋಯ್ತು |
ಜನಕ ಜನನಿಯು ಬಂಧು ಜನರಿಲ್ಲ ಮೇಣೆನಗೆ |
ತನುಜಾತರಿಲ್ಲ ಹಾ ಧನಿಕ ಧನಿಕನೆಯೆಂದು ಧನಿ
ಗೊಟ್ಟಳಲ್ದಳಂದು ||

೧೧

ಭೂರಿಶೋಕದೊಳು ಬಾಯಾರಿಯೇಣ್ದೆಸೆ ನೋಡಿ |
ಚೀರಿ ಮಕ್ಕೈಗಳಿಂ ತೂರಿಶಾಪವನಿತ್ತ |
ಕ್ರೂರ ಮುನಿಸತಿಯುಳಿಗೆ ಸೇರಲೀ ಹಾಡೆಂದು
ಸಾರಿ ಬೀಳುತ್ತೇಳುತೆ ||
ಹಾ ರಮಣ ನಿನ್ನಗಲಿ ಧಾರುಣಿಯೊಳಿರಲೆಂತು |
ಹಾರಲೇಂ ಗಿರಿಮಡುವ ಸೇರಲೇನೆಂದು ನೊಣ |
ಪಾರಿದತ್ತಂ ಪೋಗಿಯಾರ್ಕೈದಳಾರಿ ದಿವ್ಯನಾರಿ ಪ್ರತಿ
ರೂಪ ಸತಿಯು ||

೧೨

ತೋಯಜಾನನೆ ಪತಿಕಾಯಕ್ಕದೊಂದೇನ |
ಪಾಯ ಬರದಂತ ನಿಶಕಾಯುತಿರಲದು ಕೇಳಿ |
ದಾಯಾದ್ಯರೈತಂದುಪಾಯದಿಂದಾ ನೊಣವ ನೇಯ
ದೊಳ್ ಕೆಡಪಲಾಗ ||
ಸಾಯಲದು ಕಂಡು ಹಾ ಹಾ ಎಂದು ಎದೆ ಬಾಯಿ |
ಬಾಯಿ ಬಡಕೊಂಡು ನಾಸಾಯದ್ಯಾಕುಳಿದೆನ್ನೈ |
ಯ್ಯೋಯೆಂದು ಶಿವನೆ ನೀ ಕಾಯೆಂದು ಪತಿಯು
ನೀ ಬಾಯೆಂದು ಬಯಲಪ್ಪುತೆ ||

೧೩

ಕಂಬು ಕಂಧರ ನಿನ್ನ ಕಾಂಬೆ ನಿನ್ನೆಂತಕಟ |
ಶುಂಭರೀಪರಿ ಕಷ್ಟಕಿಂಬುಗೊಟ್ಟರೇ ಯಹ |
ಅಂಬುಜೋದ್ಭವ ಪಣೆಗಿದಂ ಬರೆದನೇ ಪಾಪಿ
ಶಂಬರಾರಿಯು ರೂಪನೇ ||
ನೆಂಬೆ ಮಧುರಾಲಾಪವಂ ಬೀರಿ ಸುಖಿಸದೆ |
ನ್ನಂ ಬಿಟ್ಟು ಪೋಗಲ್ ಮನಂ ಬಂತೆ ಪೊಸರನ್ನ |
ಬೊಂಬೆನೀನಂದಂದು ಪಂಬಲಿಸುತಪರಿಮಿತ
ಕಂಬನಿಗಳಂ ಸುರಿದಳು ||

೧೪

ಇಂದಿಲ್ಲ ನಾಳೆ ಗುಣ ಸಿಂಧು ನಿನ್ನಂಗದತಿ |
ಸುಂದರ ತನಂ ಕಂಡು ಪೊಂದುವೆನು ನಿಶ್ಚಯ ಮಿ |
ದೆಂದಿರ್ದೆನೈ ನಿನ್ನ ಕೊಂದರೀ ದುಷ್ಟ ಜನರೆಂದು
ಗೋಳಾಡಿ ಮತ್ತೆ ||
ತಂದೆ ತಾಯಿಗಳುಂಟೆ ಬಂಧು ಬಳಗುಂಟೇ ವರ |
ನಂದನರ ನೋಡಿಯಾನಂದ ಬಿಡಲುಂಟೇ ಹಾ |
ಎಂದು ಹಂಬಲಿಸುತ ವಸುಂಧರಿಯೆ ಗರ್ಭದೆರೆ
ಯೆಂದು ಕೈ ಬಡಿದು ನುಡಿದು ||

೧೫

ಫುಲ್ಲಾಕ್ಷ ನೋಡಮೃತ ಸೊಲ್ಲ ಮಾತಾಡು ಮೃದು ।
ಪಲ್ಲವಾಧರನೆ ತುಟಿಗಲ್ಲ ಮುದ್ದಾಡಿ ರತಿ ।
ಯೊಲ್ಲಭ ಸಮಾಂಗರತಿಯಲ್ಲಿ ಸುಖನೀಡಿಕೈಗೊಳ್ಳು
ಬಾ ನಳಿದೋಳನೆ ॥
ಖುಲ್ಲದಾಯಾದ್ಯಜನ ಕೊಲ್ಲಿದರೆ ಹಾ ಶಿವನೆ ।
ನಲ್ಲ ನಿನ್ನಯ ಪೂರ್ವನಲ್ಲ ರೂಪಮು ಕಾಂಬೊ ।
ದೆಲ್ಲೆಂದು ತಲ್ಲಣಿಸಿ ಕಲ್ಲಿಂದ ಹಣೆ ಬಡಿದು ಚಲ್ಲಿ
ದಳು ನಯನವಾರಿ ॥

೧೬

ರಸಿಕ ನಿನ್ನಯ ಪೂರ್ವದಸಮ ತನುಗಳಿದಾಯ್ತು ।
ದಶವತ್ಸರಿಂದಿಂಗೆ ಯಸುವಗಳಿವರೆ ಶತ ಬ ।
ರಿಸ ಮಕ್ಷುಕಾಗೆಂದು ಋಷಿಯಿತ್ತ ಶಾಪ ತಾ ಪುಸಿ ।
ಯಾತಕಾಯಿತಕಟಾ ॥
ಹಸಿವು ತೃಷೆ ಮೇಣಾ ಕಳಿಸುವದಮ್ಮರೆದುನಾ ।
ನಿಶಿ ಪಗಲಿದೆನ್ನದಾಯಸ ದೋರದಂತೆ ಶೂ ।
ಶೃಷೆಗೈದ ಫಲವಿನಿತು ಹಸನಾಯ್ತೆ ಹಾಯೆಂದು
ದೆಸಿಗೆ ಬಾಯಂದೆರಿಯುತಾ ॥

೧೭

ಅತಿಶೋಕದಿಂದಲಾ ಮೃತ ಪತಿ ಶರೀರವಂ ।
ಸತಿಕಯ್ಯೊಳಾಂತರುಂಧತಿ ಬಳಿಗೆ ಬಂದು ಸಂ ।
ತತಿ ನಿನ್ನದೈಸೆ ಪತಿವ್ರತೆಯೊಂದು ಪೂರ್ವಚಾರಿ
ತೆಯಲ್ಲ ಪೇಳಿ ಮತ್ತೇ ॥
ಗತಿಯಾರು ತಾಯೆ ದುಷ್ಪಥಳ ನಿನ್ನಯ ಧರ್ಮ ।
ಸುತೆಯೆಂದು ಸಲಹೆಂದು ನುತಿಸಲ್ಕೆ ದಯವಂದು ।
ಮತಿಯುತಿಯೆ ಬಿಡು ಮನದ ಖತಿಯೆಂದು
ಸಂತೈಸಿ ಕಥೆ ಪೇಳಿದಳು ಪೂರ್ವದಾ ॥

೧೮

ಯಾತಕೀ ಚಿಂತೆ ಬಿಡು ಗೌತಮಾಗಸ್ತ್ಯ ಸಲೆ ।
ಪೂತ ಜಮದಗ್ನಿಯಘದೂತ ಕಶ್ಯಪರು ಸುರ ।
ವ್ರಾತವಂ ಮೂರ್ಪೊಳ್ತುವಾತ್ಮೈದು ಪಡೆದ ಸು
ವಿಭೂತಿ ಬಳಿಯೊಳಗಿರುತಿರೆ ॥
ನಾ ತಳುದಸುಪಡಿವೆನೌ ತರುಣಿಯೆಂದಾತ್ಮ ।
ನಾಥನ ವಿಭೂತಿಯಡಗೈ ತಳದೊಳಿಟ್ಟದಕೆ ।
ಪೋತು ಪಂಚಾಕ್ಷರಿಯ ಪ್ರೀತಿಯಿಂ ಜಪಿಸಿ ಬಲಗೈ
ತಳದಿ ಮುಚ್ಚಿ ನಮಿಸಿ ॥

೧೯

ತ್ರ್ಯಂಬಕತ್ರಿಯಾಯುಷ್ಯವೆಂಬ ಮಂತ್ರಂಗಳಂ ।
ದಂಬುಜಾನನೆ ಜಪಿಸಿ ಸಾಂಬನಂ ನೆನಿಸಿ ಶವ ।
ಕಂ ಭಸಿತ ತಳೆಯಲಸುವಂ ಬಂದುದಂ ಕಂಡು
ಸಂಭ್ರಮದಿ ನಲಿದಾಡುತಿ ॥
ಅಂಬೆಕೇಳ್ ನಿನ್ನ ಪಾದಾಂಬುಜವು ನಾನು ನೆರೆ ।
ನಂಬಿ ಪಾವನಳಾದೆ ನೆಂಬುದಂ ಜಗವರಿಯಿ ।
ತೆಂಬುತಾ ಮಕ್ಷುಕ ಕರಾಂಬುಜದೊಳಿರಿಸಿ ಸಲೆ
ಬಿಂಬಾಧರೆಯು ಸಾಕುತಿ ॥

೨೦

ನೊಣಮದನು ಕೈತಳದ ವ್ರಣನೋವುವಂತೆನಿಸಿ ।
ದಿನ ಸಾಕುತಿರ್ದಳಂದು ಣುತಿನುವದಂ ಮರೆದು ।
ಗಣಿಸದಾಸರು ನಿದ್ರೆಯಣಿಸದಲೆ ನೀರಡಿಕೆ ದಣು
ವೆಂಬುದರಿಯದೊಂದು ॥
ಮಿಣುಕುತಲಿ ದಿವಸ ಯುಗಕೆಣಿಸುತಲಿ ಸಮಿಯೆ ಕೆಲ ।
ದಿನವಿದನು ಕೇಳುತಾ ಬಣಗರೈತಂದು ಮಾ ।
ಕಣ ಜೀವಿರಾಜನಂ ಕೆಣಕಿ ಮೊದಲಿನ ತೆರದಿ
ಹನನಗೈದರು ದುರುಳರು ॥

೨೧

ಆ ದಯವಿಹೀನ ಜನಗೈದುದಂ ಕಾಣುತವೆ ।
ಹಾದೈವವೇ ಕೆಟ್ಟೆನ್ನೆ ದೇವರೆಂದು ತಾ ।
ಮೇದಿನಿಯೊಳೊರಗಿ ನೆರೆ ಖೇದದಿಂ ಕೊರಗಿ ಬಲು
ಬಾಯ್ದೆರೆದು ಸುರಜೇಷ್ಠನಂ ॥
ಬೈಯ್ದದಕೆ ಮೊದಲು ಮುತ್ತೈದೆತನ ಪ್ರೇ ।
ಮದಿಂ ಕಾಯ್ದು ಮುನಿಪತಿ ಸತಿಯು ಪಾದಪದ್ಮಕ್ಕೆರಗಿ ।
ಮೋದದಿಂ ಪಾಲಿಸೆನಗೈದೆತನವಂ ತಾಯೆ ನೀ
ದಯೆದೊಳೆಂದು ಬೇಡಿ ॥

೨೨

ಮನ್ನಾಥನ್ನಗಲಿ ನಾನಿನ್ನೆಂತು ಜೀವಿಸಲಿ ।
ಕುನ್ನಿಗಳು ತಾವಿನಿತು ಬೆನ್ನಟ್ಟದರೆ ವಿಧಿಯೇ ।
ಇನ್ನಾರುಗತಿ ನೆರವಿಪನ್ನಾಪಹಾರಿ ಕೇಳೆನ್ನ
ಬಿಟ್ಟೇ ಜಗದೊಳು ॥
ಎನಗಾರುಂಟು ಪೇಳೆನ್ನುವಾ ಪೋಳ್ತು ಧ್ವಜ ।
ಪನ್ನಗಾಶನನ ಮದಪನ್ನು ಮುರಿದುರೆ ಕ್ಷುಪನ ।
ಬನ್ನ ಬಡಿಸಿದ ದಧೀಚಿನ್ನುವ ತಪೋಧನಂ ಸನ್ನುತಂ
ಬಂದನಾಗ ॥

೨೩

ಬರೆ ಕಂಡು ಮುನಿವರನಿಗೆರಗಿಕ್ಕುತಾಸನಂ ।
ಕರೆದು ಕುಳ್ಳಿರಿಸಿ ಪದ ಸರಸಿರುಹದ್ವೊಳೆದು ಸ ।
ತ್ಕರಿಸೆ ಕೈಕೊಂಡವರು ಪರಕೆಯಿತ್ತವಳಾರ
ತರುಣಿ ರೋದಿಪಳ್ಯಾತಕೀ ॥
ಪರಿಯೆನಲು ಕೇಳಿ ಮುನಿಯರಸಿ ನುಡಿದಳು ನಿಮ್ಮ ।
ಚರಣಕರಿದೇನಿವಳು ಕರಣಸತಿ ಕುರುಣೆ ಮ ।
ತ್ಸರದಿಂದ ದಾಯಾದ್ಯರಿರದೆ ಪತಿಹರಣಗೊಳೆ
ತರಹಸುತ್ತಿರುತಿರುಹಳು ॥

೨೪

ಸತ್ತಮುನಿ ಸುರರಿಗಸುವಿತ್ತು ಮೂರ್ವ್ವಾಳ್ಯ ಮಪ ।
ಮೃತ್ಯು ಪರಿಹರಿಸಿರ್ದುದಾತ್ತ ಭಸಿತಮದೆನ್ನ ।
ಹತ್ತಿರಿರಲಾಗಿನಿತು ಅತ್ತಪಳದೇಕಿವಳ ಚಿತ್ತ
ತೋಷಿಪೆನೀಗಳೇ ॥
ಉತ್ತುಮೆಯೆ ಕೇಳೆಂದು ಮತ್ತೆ ಸ್ನಾನಂಗೈದು ।
ಉತ್ತುಮಾಸನದಿ ಕೂಡುತ್ತೆರಳೆ ಮುದ್ರಿಯಿಂ ।
ದೆತ್ತಿಭೂತಿಯನೆಡದ ಹಸ್ತದೊಳಗಿರಿಸಿ ಮುಚ್ಚ
ತ್ತೆಂದು ಬಲಹಸ್ತದಿಂ ॥

೨೫

ಪ್ರಣುತವಂ ಗೈದೈದು ಪ್ರಣವಗಾಯಾತ್ರಿ ಷಟ್ ।
ಪ್ರಣವಶತರುದ್ರೀಯೆ ತ್ರಿಣಿಯಾಯುಷಂ ರಸನೆ ।
ಗೊನೆಗೈದೆ ತಂದೆಲ್ಲ ಮನುಗಳಷ್ಟೋತ್ತರ ಶತೆಣಿ
ಸುತೊಂದೊಂದರಂತೆ ॥
ನೊಣಶವಕೆ ವೀಭೂತಿಯನು ತಳಿಯಲಾಗಿ ತತ್ ।
ಕ್ಷಣದೊಳಸು ಬಂದು ನರತನು ಧರಿಸಿ ಶತಕೋಟಿ ।
ಮನಸಿಜರ ತೆರನೆಸೆದು ಮುನಿಪದಕೆ ಹರುಷದಿಂ
ಮಣಿದು ಕೊಂಡಾಡಿದನವಂ ॥

೨೬

ಮುನ್ನಿನಿಂ ರೂಪುಲಾವಣ್ಯಗಳ ನೋಡುಲತಿ ।
ಭಿನ್ನತರ ಕಾಂತಿ ಸಂಪನ್ನನಾಗಿರುತಿಪ್ಪ ।
ತನ್ನಪತಿಯಂ ನೋಡಿ ಮುದಗೂಡಿ ಸಲೆಪಾಡಿ
ನಲಿದಾಡಿ ಕೊಂಡಾಡುತೆ ॥
ಚೆನ್ನುವಿಂದೆತಿ ಶಿರೋರನ್ನನ ಪದಂಗಳಿಗೆ ।
ತಾನ್ನಮಿಸಿ ಭಕ್ತಿಯಿಂದೆನ್ನ ಕಾಯ್ದು ಪ್ರತಿಮ ।
ನೆನ್ನುತತಿ ಭಜಿಸುವಳ ಮನ್ನಿಸುತ ಮುನಿ
ವರಂ ತನ್ನಾಶ್ರಮಕೆ ಪೋದನು ॥

೨೭

ಆ ಕರಣ ಸತಿ ಸುಚಿ ಸ್ಮಿತೆ ಕೋಕಕುಚೆಯೊಡನ ।
ನೇಕ ದಿನ ಸುಖಮಿರ್ದು ಕೋಕಜನ ಕೋಕ ಪಿ ।
ನಾಕೆ ಸದ್ರೂಪ ಘನ ಶೋಕಹರ ಭೂತಿಯನ್ನೇ
ಕನಿಷ್ಟಿಲೆ ಧರಿಸುತೆ ॥
ನಾಕ ಜನನುತರಾದರ್ಯೆ ಕರುಣಿ ಶರಣಪ್ಪ ।
ನೀ ಕೇಳು ಪ್ರೇಮದಿಂ ಲೋಕ ಮೂರಕೆ ಭಸಿತ ।
ಶ್ರೀ ಕರಂ ಸಲೆ ಪಾವನಾಕರಂ ಯಮನಿಗತಿ ಭೀಕರಂ
ಮೃತ್ಯು ರಹಿತಂ ॥

೨೮

ಗೌತುಮನ ಮದುವೆಗಂದೈತಂದ ದೇವಜನ ।
ವ್ರಾತಮುಮಹಲ್ಯೆ ರೂಪಾತಿಶಯನೋಡಿ ಕಾ ।
ಮಾತುರಂದಳೆದರದನಾ ತಪೋಧನಂ ಕಂಡು ಶಾಪಿ
ಸಿದ ಕೋಪದಿಂದ ॥
ಆ ತತ್‌ಕ್ಷಣದೊಳಜ್ಞಾತಮಾಗಲ್ಕರವು ।
ಭೀತಿಯಿಂದುರ್ವಾಸ ಪೂತಮುನಿಗಳಿಗೆ ಸಲೆ ।
ಪ್ರೀತಿಯಿಂದುಳಿಯದೆಲ್ಲ ತಿಳಿಸದುದು ಕೇಳಿ
ಭೂತಿಧರಿಸ್ಯರುಹಿತ್ತನು ॥

೨೯

ಹರನೊಂದು ಪೊಳ್ತು ತನ್ನುರದೆಡಿಯ ಭಸಿತ ನರ ।
ಹರಿಮೇಲೆ ತಳಿಯ ಹೃತ್ಸರಜದೊಳು ದೀಪವಂ ।
ಕುರಿಸದಂತಾಗಲ್ಕೆ ಪರಮ ಸೋಜಿಗದಿ ಪದಕೆರಗಿ
ಕೊಂಡಾಡುವವನಂ ॥
ಕರೆದು ಭಸ್ಮವನವನ ಕರಕಿತ್ತು ನಿತ್ಯನೀ ।
ನಿರದೆ ಭುಂಜಿಸುವದೆನತೆರಗುತಂತೆಸಗಲ್ಕೆ ।
ಹರಿನೀಲ ಮಣಿಕಾಯಮರಿಸಿ ಮೋಕ್ತಿಕ ಛಾಯು
ಧರಿಸಿಪರಿತೋಷನಾದಂ ॥

೩೦

ಕುಸುರನೋರ್ವನು ಚೋರ ವಿಸರದಿಂ ಕಡೆವಡೆದು ।
ಮುಸವಟಗೋಯೋಳ್ಬೆರ್ದು ಅಸುಗಳೆವ ಪೊಳ್ತು ಸುನಿ ।
ಯುಸವಸದಿ ಪೆಣದ ಚಿಪ್‌ಭಸಿತವನು ತುಳಿದವನ
ನೊಸಲವಂ ಮೆಟ್ಟಲಾಗ ॥
ಶಶಿಕಲಾಧರ ಚರರು ವಸುಧಿ ಗೈತಂದು ಸಂ ।
ತಸದಿ ಯಮನಾಳುಗಳ ವಶಕಿಡದೆ ವೈದರ್ಥಣೆ ।
ಭಸಿತವಂ ತೋರಿ ಬೆದರಿಸುತಂದು ಶಿವಪುರಿಗೆ
ಪೊಸಯೋಮರಥದೊಳಿರಿಸಿ ॥

೩೧

ಚರಣದಸಿ ರಂಧ್ರದೊಳಗಿರದೆ ಯ್ಗೋಹಿಲಸು ಶಾ ।
ಬರ ರೂಪಿ ಶಿವನೆದುರೆ ತೆರೆದುದರ ಪುಕಸು ತಾ ।
ಸುರವಾರ ಸತಿಗೆ ಕಿನ್ನರ ಪತಿಗೆ ಯಡುಫಡಿಯೊಳಿ
ರುವಕ್ಕ ಮುಪದೇವಿಯು ॥
ವರಯೋನಿಯಿಂ ಭಸಿತ ಸುರಿವರದರಿಂದ ಲಸಿ ।
ತರ ಚರಣರೇಣು ಪರತರ ಭೂತಿಯೆಂದು ನೀ ।
ಶಿರದೊಳಗೆ ಧರಿಸೆಂದು ಶರಣನಿಗೆ ಪೇಳಿದನು
ಗುರುರಾಜು ಪರಕಾಯನು ॥

೩೨

ವೀಭೂತಿ ಧರಿಸದೆ ಶತಾಭರಣ ವಿಟ್ಟರದು ।
ಕ್ಲೀಬನಿಗೆ ಶತಗಣ ಮದೇಭಗೆ ಮುಸಿಯರಿದ್ದ ।
ಲಾಭದೋಲ್ ಶಿವನ ಪದಲೋಭದಿಂ ಪೂಜಿಸಲು
ಶೋಭಿಸದು ಕೇಳು ಮಗನೆ ॥
ಸೌಭಾಗ್ಗಿನಿಯರಿಲ್ಲದ್ಧಂದರದ ಚಂದಮುದ ।
ನಾಭ ಚಲುಭಿತ್ತಿ ಪುಥ್ಥಳಿಸಿಲವು ನಿಷ್ಫಲವು ।
ನೀ ಭಣಿತಗಣಿತೆಮೊಂದೇ ಭೂತಿಯಿಲ್ಲದಿರೆ ಸಲ್ಲ
ದಿಹಪರದಲ್ಲಿಯು ॥

೩೩

ಭಸಿತವಿಲ್ಲದ ಹಣೆಯು ಮುಸಿದೆನಿಯು ಭಸ್ಮದುನ ।
ಮೊಸೆದು ಹಚ್ಚದರಟ್ಟೆ ನಸುನಾರಜಟ್ಟೆ ಸಂ ।
ತಸದಿ ವರರಕ್ಷಂ ಧರಿಸಿದಿರುವ ಕುಕ್ಷಿ ಸಲೆ ಮಕ್ಷು
ಕದ ಪಕ್ಷ ಮತ್ತೆ ॥
ಅಸಮಕ್ಷಾರ್ದಳಿಯದಿಹ ಬಸುರ ಹಡಿಯದ ಬಂಜೆ ।
ಬಸುರಭೂತಿಯ ತೀಡದಶಿಟೊಂಕ ಪುನಿಟೊಂಕ ।
ಕುಶಲಮತಿ ಶರಣ ಕೇಳ್ ಭಸಿತವಂ ಧರಿಸಿದವನ
ಸಮನಯನನಧರಿಸಿದಂ ॥

೩೪

ಗುರುವೆ ಭಸ್ಮದ ಮಹಿಮೆಯರಿದು ಸಲೆಪಾವನಾ ।
ಕರನಾದೆ ಮುಂದಿನ್ನು ಹರನಾಕ್ಷಿ ಘನತೆ ಯೆಂ ।
ತರುಹೆನಗೆ ಗುರುವೆ ಪರತರವೆ ಭಜಕೌಘಸುರ
ತರುವೆಂದು ಚರಣಕಂದು ॥
ಶಿರಬಾಗಿ ಸಾಷ್ಟಾಂಗವೆರಗಿರ್ದ ಶಿಷ್ಯಂಗೆ ।
ಭರದಿ ಪಿಡಿದೆತ್ತಿ ಕುಳ್ಳಿರಿಸಿ ಪೇಳಿದನು ಸ ।
ತ್ವರುಣದಿಂ ರುದ್ರಾಕ್ಷಿ ಚರಿತೆ ಸತ್ ಶರಣ ಜನರ
ರತೆ ಗಣಪದ ಭರಿತೆಯಂ ॥

೩೫

ಮಗನೆ ರುದ್ರಾಕ್ಷಿ ಘನಪೊಗಳ್ವಡಳವಲ್ಲೆಂದು ।
ದೃಗುಶ್ರುತಾಧಿಪನು ಪೈದೆಗಿದು ರಸತಳದೊಳಗೆ ।
ಜಿಗಿದು ತಲೆಬಾಗಿ ಬಲು ಮುಗುಧಾವ ನೆನಲಿಕಿದು
ಜಗದಿ ಬಣ್ಣಿಪನಾವನು ॥
ಸುಗತಿ ಕೊಡುವುದು ದುರಿತವಿಗತಕಿರಿದೆನಿಸಿ ಪಿಂ ।
ದಗಣಿತರ ಪೊರೆದ ಶಿವದೃಗುಣಮಣಿಯ ಮಹಿಮೆಯಂ ।
ಸುಗುಣ ಪೇಳುವೊಡೆ ನಾಲಿಗೆ ಸಾಲುವುದೆ ತಿಳಿದ ಬಗೆ
ಪೇಳ್ವೆನಗೆ ಮಿಗಿಲಿನೆ ॥

೩೬

ಗುರುದೀಕ್ಷೆ ಸಮಯ ಪುರಹರಪೂಜೆ ಪೊಳ್ತು ಬಂ ।
ಧುರ ಜಂಗಮದ ಪಾದಕರುಣೋದಕಂ ಸಲಿಸಿ ।
ಚರ ಪ್ರಸಾದಂ ಕೊಳ್ಳುತಿರುವಾಗಲಿರದಿರಲು ಹರನಾಕ್ಷಿ
ಕಾಯದಲ್ಲಿ ॥
ನೆರೆನಿಷ್ಫಲವನು ನಾಚರಿಸಿದೆಲ್ಲಮುಮಗನೆ ।
ಮರಿಯದಾವಾಗಲುಂ ಧರಿಸಿ ಚರಿಸುವಗೆ ಯಮು ।
ಪುರದ ಭಯವಿಲ್ಲ ಗುರುತಲ್ಪಗಮನಾದಿಯಘ
ವರಿಸಿರಿಸುವದು ಹರನೊಳು ॥

೩೭

ನೋಡಿ ಶಿವನಾಕ್ಷಿಯಂ ಮಾಡಿ ಸ್ಪರ್ಶನವು ನಲಿ ।
ದಾಡಿ ಬಲು ಭಕ್ತಿಯಿಂ ಪಾಡಿ ಘನ ಮಹಿಮೆ ಕೊಂ ।
ಡಾಡಿ ಪ್ರೇಮದಿ ಪೂಜೆ ಮಾಡಿ ಸಂತೋಷದೊಳ್ಗೂಡಿ
ಸರ್ವಾಂಗದೊಳಗೆ ॥
ಸೂಡಿ ಚರಿಸುವರದುರಿತೀಡ್ಯಾಡಿ ಸಂತತಂ ।
ಬೇಡಿದಿಷ್ಟಾರ್ಥ ಕೈಗೂಡಿಸುತ ಪೊರೆವ ಶಶಿ ।
ಚೂಡನನು ದಿನಮಗನೆ ಬೇಡ ಹಲವಾಳಾಪ ಸೂಡೊಂದೆ
ಮನದಿ ನಿರುತಾ ॥

೩೮

ಯಿದಕೊಂದು ನಾನು ಪೂರ್ವದ ಕಥೆಯ ಪೇಳ್ವೆ ಕೋ ।
ವಿದನೆ ಕಾಶಿಯೊಳು ಸಮುದ್ರದದಿ ಸುಜ್ಞಾನಾಶ್ರ ।
ಮುದವಸಿತನಾಗಿರಲು ಪದ ಶೇವಿಗೆಂದೋರ್ವಪದ
ಜನಿತನಿರಲು ಕಾಲಂ ॥
ದೊದಗಿಪೋಗಲ್ತಾಲ ಸದನದೊಳಗವಗೆ ಯತಿ ।
ಪದ ಪೂಜಿಫಲ ಶೋಧನದಲಿಂದ ಕಾಲಚರ ।
ವದವಿಗಟ್ಟಿದರ್ಪೈದೆಯುಧಿಕತರ ತೋಷದಿಂ ಚದುರ
ಕೇಳ್ವೆ ಮುಂದಕೆ ॥

೩೯

ತಡಿಯದೊಂದಿವಸವನು ಪೊಡವಿಗೈತಂದು ತಡ ।
ಬಡಿಪ ಕಾಲ್ತೊದಲು ನುಡಿ ಮಿಡುಕಗಳೆದೆದೆಯು ।
ತಡೆದು ಬಿಡು ಬಿಡುವ ನಿಡಿದುಸುರು ವಡಿಗಡಿಗೆ
ಮೈನಡಗು ಶಸ್ತ್ರಾಸ್ತ್ರದಿಂದ ॥
ಕಡೆವೊಡೆದ ಕಾಯು ಕೆಂಪಿಡಿದೊಸರುವರುಣ ಜಲ ।
ತೊಡೆದು ಕಚ ಪೈಪತ್ತಿಯುಡುತೊಡುವಿ ಗೋಕುಳಿಯು
ನಿಡಿದಂತೆಯಸಿಯಲತಿ ಗಡನೈದೆ ಮುನಿವರನ
ಅಡಿಗೆರಗಿ ಕೈ ಮುಗಿದನು ॥

೪೦

ಅವನತಾಗಲು ಕಂಡು ರವಿಸುತನ ಚರನೆಂದು ।
ಸುವಿವೇಕದಿಂದ ತಿಳಿದವಗೆ ನೀ ನಾರು ಬಲು ।
ಅವಸರದಿ ಬಂದ ಪರಿ ವಿವರಿಸೆನೆ ಕರಸಾರಸವ
ಮುಗಿದು ಭಕ್ತಿಗೂಡಿ ॥
ಜವದಿಂದ ಪೇಳಿದನು ವಿವಿಧ ಚರಿತೆಯನೆಲ್ಲ ।
ಶಿವದೂತರೊಡನಂದು ಬವದ ಮೊರಗಿದಕಾರ ।
ಣವ ಮೊದಲು ಶೂದ್ರ ತಾ ತವಸೇವೆಗೈದ ಫಲ
ಲವದಿಂದ ಕಂಡೆನಿದು ನಾಂ ॥

೪೧

ತಿಳಿಸುವೆನು ತಾನೆನ್ನ ಕೆಲಸ ತಮ್ಮಡಿಗಳಿಗೆ ।
ಮಲೆತು ಮೇದಿನಿಯೊಳಗೆ ಹೊಲಿಯರುಂತಿರನ ಸಲೆ ।
ಛಲವಾದಿ ಚಂಡಿಗಳ ಕುಲಗೇಡಿ ಭಂಡಗುರು
ತಳುಪಗಮನಕ್ಕೆಳಿಸುವಾ ॥
ಕಲಕಮನಸಿನ ಪಿಸುನ ತಿಲಕರಂ ಪರದಾರ ।
ಕಳುಪಿ ಪರಧನಕ್ಷೇತ್ರ ಸೆಳೆಯುವರೆ ಮೊದಲು ವೀ ।
ಯಿಳಿಯೊಳಗೆ ದುರಿತ ಬೊಬ್ಬುಳಿಯಾದ ಜನರನ್ನು
ಯೆಳೆದು ದರದರನೊಯ್ವೆವು ॥

೪೨

ಪುರಹರನ ಲಾಂಛನೇತರನ್ನು ಪಿಡಿದು ಭಾ ।
ಸ್ಕರ ತನುಜನಾದ ತಮ್ಮೆರಿಯಗೊಪ್ಪಿಸಲದವನು ।
ದುರಿತಾಳಿಗಳಿಗೆ ನೆರೆನರಕದೊಳು ತುರುಕಿ ಕಿಂಕರ
ರಿಂದ ಬಲು ಬಾಧಿಸಂ ॥
ಪರಮಸುಕೃತಾಳಿಗಳ ಕರೆದು ಮನ್ನಿಸಿ ತನ್ನ ।
ಅರಿಪೀಠದೊಳಗೆ ಕುಳ್ಳಿರೀಶ ವರಪುಣ್ಯದಂ ।
ತರವರಿದು ಸುರರವರ ಸುರಜೇಷ್ಟಹರಿಹರ
ಪುರಕೆಳಿಸುವ ಹರುಷದಿಂ ॥

೪೩

ತೋಷದಿಂ ಪೇಳ್ವೆನು ಮುನೀಶನೀಂ ಕೇಳು ದು ।
ರ್ದೋಷ ಗೈದವಗಪ್ಪರಾಸಭಗ ಜನ್ಮವಂ ।
ನ್ಯಾಸಕಾಸಿಯೊಳಗಸು ನಾಶಾದಗಪ್ಪದೆನಲೇಸು
ದುರಿತದ ತಾಣಮೊ ॥
ಈ ಸಮಯಕಾ ಪುರನಿವಾಸ ನಂತ್ಯಜ ಕುಲ ವಿ ।
ಶೇಷ ದುರಿತನ ಕಾಲಪಾಶದಿಂ ಕೊಲ್ಲಿ ಪ್ರೇ ।
ತೇಶ ಪುರಕೊಯ್ಯುತಿರಲಾ ಸುದ್ದಿ ಕೇಳಿ ಕೈಲಾಸ
ದಿಂ ಶಿವದೂತರು ॥

೪೪

ಐತಂದು ಚೀರಿ ಹೊ ಹೊ ತಡಿರಿ ತಡೆದು ನಮು ।
ಗೀತನಂ ಕೊಡಿರಿ ಘನಪೂತನವನೆಂದಿರದೆ ।
ಭೀತಿಯಂ ಬೀರೆ ಯಮದೂತರದು ಕಂಡು
ಸಂಭೂತ ರೌದ್ರಾನನದೊಳು ॥
ಪೂತುರೆ ನೀವು ಶಿವದೂತರಹುದಹುದು ತವೆ ।
ಪಾತಕನ ಕೊಂಡೊಯ್ವುದೇತರಧಿಕಾರ ಸಲೆ ।
ಭೂತನಾಥನ ತನ್ನಿ ಸೋತೆವಾದರೆ ನಮ್ಮ ಜಾತಿ
ಹೊರಗೆಂದರಿಯಿರಿ ॥

೪೫

ಐಸೈಸೆ ಸತ್ವಶಾಬಾಸು ಮೂಢರೆ ಶ್ರೀ ಪ ।
ರೇಶ ಪೊರಿಗ್ಯಾಕೆ ಕೀನಾಶ ಚರರೊಳಗುಂಟೆ ।
ಲೇಸನಾರಿಸಲು ಕೀ ನಾಶ ದೂತರೆ ನಿಮಗೆ ನಾಶ
ಬಂದೊದಗಿತಿಂದು ॥
ಮೀಸಲವು ತಮಗಿಂದಿನೀ ಸಮರಜಯ ಜೀವ ।
ದಾಸೆಯುಳ್ಳರೆ ನಿಮ್ಮಧೀಶನಂ ಕರೆಯನಲು ।
ರೋಷದಿಂದಾಗ ಕೈ ಬೀಸಲ್ಕೆ ಬಂದು ಸೇನಾ ಸಮೂ
ಹವು ಕೂಡಿತು ॥

೪೬

ಮಸಣ ಮನೆಯರ್ಧ ಹೆಂಗುಸನಾಗಿ ಪೊಡೆದುಂಬ ।
ಲಶನವಿಲ್ಲದೆ ಕುಡಿದ ವಿಷವೇರ್ವಡೊಂದು ಮುದಿ ।
ಬಸವ ಪೆಣಸುಟ್ಟ ಮೈ ಭಸಿತ ಮೇಣುಟ್ಟುಡುಗೆ
ಪಸೆ ತೊವಲ ಅಸಮಾಕ್ಷನು ॥
ಅಸುರ ಶಿರಮಾಲಿಯು ಧರಿಸಿದಪನು ಪಡೆದವರ ।
ಪೆಸರಿಲ್ಲದವನ ಪೌರುಷವೆಷ್ಟು ಸಾಕು ಸಾ ।
ಹಸಮವನಿಗಾಗಿ ಬಸರಿಗೇನುಂಡಿರೆಂದ
ಸವಸದಿ ನುಡಿವಾಗ್ಗ ॥

೪೭

ಮಾರಾರಿ ಗಣರದಕೆ ಸೈರಿಸದೆ ಕೋಲ್ಗರಿಯೆ ।
ಚೀರಿದವು ಉಭಯ ಪರಿವಾರದೊಳು ಕಹಳೆಗಳು ।
ಬಾರಿಸಿದವ್ವೈದೆ ರಣಭೇರಿಗಳು ನೆಲವೆದ್ದು ಪಾರಿತ್ತು
ಗಗನಕೆನಲು ॥
ತೂರಿತ್ತು ಧೂಳಿಯುಕ್ಕೇರಿದವು ಶರಧಿ ನಲ ।
ವೇರಿ ಧ್ವಜಚಾಮರಂ ಭೂರಿಛತ್ರಗಳ ಸಂ ।
ಭಾರಣೆಯು ನಡೆಯಲ್ಕೆ ವೀರರಾವೇಶವಂ
ಮೀರಿತ್ತು ತತ್‌ಕ್ಷಣದೊಳು ॥

೪೮

ಅಸಮವೀರರು ರಣರಭಸಕೇಳಿ ನಲಿದು ಸಂ ।
ತಸದಿಂದ ತಂತಮ್ಮ ನಿಶಿತಶಸ್ತ್ರಾಸ್ತ್ರ ಕೂ ।
ರಸಿ ಕಕ್ಕಡೋತಿ ಕರ್ಕಶಲೌಡೆ ಜವವಾಡಿಯು ಶಿ
ರಾದಿ ಮುಖ್ಯ ಪಿಡಿದು ॥
ವಸುಧಿಯಾಕಾಶ ವೇಣ್ಣೆಸಮೇಕಕಾಲದೊಳು ।
ಬೆಸಲಾದವೆಂಬಿನಿಂ ಪಸರಿಸಿತು ಕಾಲಾಳು ।
ವಿಸರ ವಂದರ್ಘಸೈಮಿಷದೊಳಂದುಭಯತರ
ದೆಸೆಯಿಂದ ರಣಕಣದೊಳು ॥

೪೯

ಶರಕುಂತ ಧನು ತೂಣ ಪರುಶವುಬ್ಬಣ ಖಡ್ಗ ।
ಕಿರಸೆ ಮುದ್ಗರ ಮೀಟ ಸುರಗಿ ಸಬ್ಬಳ ಚಕ್ರ ।
ಧರಿಸುತಲಿ ಪ್ರತಿಭಟರ ಶಿರಗಡಿವ ಕುತುಹಲದಿ
ತುರಗೇರಿ ಬರಲಂದಿನಿಂ ॥
ಖುರಪುಟಧ್ವನಿಗೆ ದಿಕ್ಕರಿಗಳೆದೆ ಬಿರಿದು ಕುಲ ।
ಗಿರಿಗಳಲ್ಲಾಡಿ ಜಲಚರನು ಚಲಿಶಾಡಿ ಯಹಿ ।
ವರನ ಶಿರಬಾಗಿಸುತ ಭರದಿ ರಣರಾವ್ತರಾತುರ
ದಿಂದ ಪೊಕ್ಕರಾಗ ॥

೫೦

ಗಿರಿಗಳೆನಿತಕ್ಕೆ ಮಸಿಯೊರಸಿ ನಿರ್ಝರದ ಝರಿ ।
ಕರ ಕಠಿಣಗೈದು ಪೇರುರಗಗಳುಂ ಕಟಿವಟದ ।
ತರುಗಳೆಮ್ಮೈಘ ಕುಲವರ ಹೇಮಾರೋಹಣಾ
ಚರಮನೇಕಂಗಳಿಂಪಾ ॥
ಕರಿದಶನ ಕರಗಳಂ ಚರಣ ಶೃತಿಯಂ ಭಾರಿ ।
ಪರಮೇಷ್ಟಿ ವಿರಚಿಸಿ ಬವರಕಿತ್ತ ನೆಂಬುವ ।
ಚ್ಚರಿಬೀರೆ ಗಜವೇರಿ ಪರಮ ಸಂಭ್ರಮದಿ
ಮಾವ್ತರು ಬರಲು ಧರೆ ಬಿರಿಯೊಲು ॥

೫೧

ಆ ರಣದ ಮಾರಣದ ಕಾರಣದ ವೀರ ಗಂ ।
ಭೀರ ರಥಿಕರ ಮನುಕ್ಕೇರಿಯಪ್ಪಣೆ ಕೊಡಲು ।
ಚಾರು ತುರುಗಗಳ್ಹೂಡಿ ಭೂರಿ ಧ್ವಜ ಕೊಡೆ ಚಮರ
ವಾರ ಪಿಡಿವಜನ ಕೂಡಿ ॥
ಸಾರಥಿಗಳೈದೆ ಶೃಂಗಾರ ಗೈದಿರ್ದವರ ।
ತೇರುಗಳ ತರಲು ಕೈವಾರಿಸುವ ವಂದಿ ಶುಭ ।
ದಾರವದಿಯೇರುತೆ ಸಮೀರಗತಿ ಗತಿಶಯಂ
ಮೀರಿಬಂದರು ರಣದೊಳು ॥

೫೨

ಚತುರಂಗ ಸೇನಿಸಿಪದ ಹತಿಗೆದ್ದ ಧೂಳಿ ದಿನ ।
ಪತಿ ಗತಿ ನಿಬೀಡ ರಥ ತತಿಯ ಮಾರುತಗೆಗಜ ।
ವಿತತಿಗಳ ಘಂಟಾಸುರುತಿಯಖಿಳ ಮಾನವರ
ಕೃತಿಗಳಿಗೆ ತೇಜಿಗಳ ಹೂಂ ॥
ಕೃತಿ ನಾಡೆಯಷ್ಟ ದಿಗ್ಪತಿಯದಿಗೆ ಪದ ಚರರ ।
ಧೃತಿಯಖಿಳರಿಂಗೆ ಯಂಥತಿಗೆಯ್ಯನಿಮಿಷದೊಳ ।
ಗತಿರಣಭಯಂಕರ ವಿಜಿತಮನರು ಕಾದಿರ್ದ
ತುಳ ವಿಕ್ರಮವೀರರು ॥

೫೩

ಭೋಗಿ ಭೂಷನ ಚರರಿಗೀಗೆ ಬರಹೇಳೆಂದು ।
ಕೂಗಲದು ಕೇಳುತತಿ ರಾಗದಿಂದವರು ಶಿರ ।
ದೂಗಿ ಭಳಿ ಭಳಿರೆ ಭಲೆ ಜಾಗು ಜಾಗೆಂದು ಜನ
ಸಾಗಿ ಮುಂದಕ್ಕೆ ಬಂದು ॥
ಪೊಗಳೆಯನಂ ಕರೆವ ಗೂಗಿಕುಲ ನೋಡುಗಡ ।
ನಾಗತತಿ ಖಗಗೆ ಸಮನಾಗುವವೆ ಮೊಗದೊಳಗೆ ।
ಮೂಗುಳ್ಳೊಡೆವ್ಮೊಡನೆ ಬೇಗ ಕಾದಲಿಕೆ
ಯನುವಾಗೆಂದು ಪೇಳಿ ಮತ್ತೆ ॥

೫೪

ಅಂತಕನ ಚರರೆ ಕೇಳಿಮ್ಮ ಶಿವ ನಿಮ್ಮಂತ ।
ಕಂತಕಂತಾಗಿ ನಿಮ್ಮಂತಕಾವಂತಕಾ ।
ಲೆಂತೆಂಬೊಡಿದು ನಿಮ್ಮ ಭ್ರಾಂತಿಯೈ ಸಮರದೊಳು
ನಿಂತೊಡನೆ ತಾಂ ತಿಳಿವದು ॥
ಪಿಂತಿರುಗಿ ಪೋಗಿ ಮನೆ ಕಾಂತಿಯಂ ಮೇಣ್ ನಿಮ್ಮ ।
ಸಂತತಿಗಳಂ ನೋಡಿ ಸಂತೋಷ ಪಡೆದು ಬ ।
ಲ್ಕೆಂತಾದೊಡಂ ನಿಮ್ಮಗ್ರಂತವಂ ನೊವಗಿರ್ಪು
ದೆಂತು ನಿಶ್ಚಯ ತಿಳಿಯಿರಿ ॥

೫೫

ಎಂದಿಗಾದರು ಜಗವ ಕೊಂದನುಂಗುವದು ರವೀ |
ನಂದನನ ವಶವುಳ್ಳದೆಂದುದಂ ಮರೆದಿರೇ |
ನೆಂದು ಪೇಳುವೆವೈದೆ ಮಂದಮತಿಗಳೆ ನಿಮ್ಮ
ತಿಂದು ತೇಗುವರೆ ನಾವು ||
ಸಂದೇಹಬಿಟ್ಟು ಶರಣೆಂದು ಬಾಳುವುದೆ ಲೇ |
ಸೆಂದುದಂ ಕೇಳಿ ಪಲ್ದಿಂದು ಬಲುರೋಷದಿ ಪು |
ರಂದರಸು ಮಳೆಯ ಚಲವೃಂದದೊಳ್ಗರಿವಂತೆ
ಯೊಂದೆ ಸಮಶರ ಸುರಿದರು ||

೫೬

ಶರಗರಿಯಲದರಿಂಪ ಶಿರ ಕೆಲವು ಪರಿದುಗರ |
ಗರ ತಿರುಗಿ ತಿರುಗಿ ಯೆಂಬರದಿಂದ ಧರಿಯಮೇ |
ಲುಳಿದವು ಶಂಕರನ ಕರ ಕಪಾಲಕೆ ಪ್ರಥಮ ದರು
ಶನಕೆ ತಾಂಕಳುಪಿದಂ ||
ಪರಿಯೆಸಿಯೆ ಯಮನಪದ ಚರರಪಕೆ ಸೈರಿಸದೆ |
ಸುರಜೇಷ್ಠನುಳಿದ ತಲೆತರಿವರೆನೆ ನಾಲ್ದೆಸೆಗೆ |
ಸುರಿದಂಬು ನೋಡಿ ದಿಗ್ವರರು ಬೆರಗಾದರೆನೆಗಸು
ವ ಪೆಸಿತುಳಿದನರರ ||

೫೭

ಮುಂಚೂಣೆಯವರು ನಾ ಮುಂಚೆ ತಡೆ ತಡೆ ಬೇಡ |
ಮುಂಚೆ ನಾನೆಂದುಂಪಳಂಚಿ ಬಡೆವಾಡಿ ಸಲೆ |
ಪಂಚಶರ ರತಿಗೆ ಗಮನಂಚ ಸುರವೇಸಿಯರ ಮಂಚ
ದೊಳಗೊರಗಲೆಂದು ||
ವಂಚಿಸದೆ ತನುಕಾದೆ ಪಂಚಾಶ್ಯಚರರ್ ನೋಡಿ |
ಮಿಂಚುವಾಂಸ್ತ್ರಂಗಳಿಂದ ಪಂಚತತ್ವಗೈಸಲ್ದರೆ |
ಹಂಚಾದೊಲೆಸಿಯಲತಿ ಚಂಚಲಾದೆನು ಸೃಷ್ಟಿ
ಗಂಚದೇರನು ತಡಿಯದೆ ||

೫೮

ಅದು ಕಂಡು ಕೋಪದಿಂ ಕುದುರೆಯವರೈದೆ ಮುಂ |
ದೊದಗಿ ಬಂದೆಂದರೆಲೆ ಮದನಾರಿಚರರೆ ನೀವ್ |
ಬೆದರಿಸಿ ಪಲಂಬರಂ ಪದ ಚರರ ಕೊಲ್ಲಿರ್ದ ಮದ
ದೊಳಗೆ ಬೆರಿಯದೆಮ್ಮ ||
ಕದನದನು ಬೇರೆಯಂದಿದು ನಿಮಗೆ ತೀರದಾ |
ಬಿದಿಯು ನಡುದೆಲೆ ಕಪಾಲದಕರನ ಕರಿಯದಿರೆ |
ತುದಿ ನಿಮ್ಮ ಜೀವಕೆಂಬುದು ಕೇಳಿ ನಯನದಿಂದುದುರೆ
ಕಿಡಿನುಡಿದರಾಗ ||

೫೯

ಶಶಕ ಬಡಿಯಲಿಕ್ಯಾಕೆ ನಿಶಿತಶಸ್ತ್ರಾಸ್ತ್ರಗಳು |
ಬಿಸಲದೊರೆ ದಾಂಟಲಿಕೆ ಪೂಸಪೊಡಗವ್ಯಾಕೆ ಕೊ |
ರಸಿಯ್ಯಾಕೆ ಕದಳಿಂಗೆ ಪಶುಗಳ್ಘಾತಣಕೆ ಬಾಣಸಿ
ಯಾತಕೆಲೆ ಮೂಢರೆ ||
ನಸುಜೀವಿಗಳೆ ಕೇಳಿ ಬಸುರ್ಬಗೆದು ಕರುಳ ಬಗ |
ಟಸಿ ನಿಮ್ಮ ಅಸುಗೊಂಡು ಪಿಸಿತ ದಿಗುಬಲಿಯಿಡಲಿ |
ಕಸಮಾಕ್ಷನ್ಯಾಕೆ ಛೀ ಕಸವಿಸಿಯು ಬಿಡಿರೆಂದು
ಯೆಸಿದರತಿ ವಿಶಿಖಗಳನು ||

೬೦

ಬಾಣಗಳ ಗರಿಯಲದು ಕಾಣುತಲೆ ರಾವುತರ |
ಘ್ರಾಣದಿಂ ಬಿಸಿ ಬಿಸಿಯ ಪ್ರಾಣಪೊರಸೂಸ್ಯಾವು |
ಕ್ಷೀಣಬಲರೇ ನಿಮಗೆ ತ್ರಾಣಮುಳ್ಳರೆ ರಣಧುರೀಣೆ
ತೆಯ ನೋಳ್ಪೆನಿಂದು ||
ಕೋಣಗಳೆ ಸಮರ ಪ್ರವೀಣತೆಯ ನಿಮಗೆಲ್ಲಿ |
ಜಾಣರಾದರೆ ಮೋಗಿ ಗೋಣಬೆಲೆಗಿದೆಯಂದು |
ತೂಣದಿಂ ತೆಗೆ ತೆಗೆದು ಕೇಣದಿಂ ಶರಗರೆದು
ಮಾಣೆಸಿದರಖಿಳರೆದೆಯ ||

೬೧

ಗರಿದನಿತು ಸೆರಗಡಿದು ಕರವಾಳದಿಂದಿಕ್ಕಿ |
ಸುರಗಿಯಿಂ ಚುಚ್ಚಿ ಮುಗ್ಗರದಿಂದ ಹೊಡೆದು ತೋ |
ಮರದಿಂದ ಪರಿದಿಕ್ಕಿ ಕಿರಿಸೆ ಸಬ್ಬಳದಿಂದಲುರೆ ತಿವಿದು
ಜವದಾಡೆಯಿಂ ||
ನೆರೆಕೊಲ್ಲಿ ಕಡೆದು ಘನಪರುಶದಿಂ ದೊರೆ ಬಿಟ್ಟು |
ತಿರುಗುವದು ಸರಿಯಲ್ಲ ತೊರ ಪೋಗಿರೆಂದು ಯಮ |
ಸುರವ ಪೋಗಿಸುತಲಂದು ಪುರಹರನ ಚರರು
ಸಂಗರಸಿರಿಗೆ ವರರಾದರು ||

೬೨

ಅಂತಾದುದಂ ಕಂಡು ದಂತಿವಾಹಕರು ಸಲೆ |
ಕುಂತಕಕ್ಕಡ ಬಾಣ ಮುಂತಾದವಂ ಕೊಂಡು |
ಪಂಥವಂ ತಾಳ್ದುಮಾಕಾಂತ ಚರರಿಂಗೆ ಮಾರಾಂತ
ತುಳ ಕೋಪದಿಂದ ||
ಪಿಂತಖಿಳ ಸೇನೆ ಕೊಂದಂತಲ್ಲ ನೋಡೆಮ್ಮ |
ಸ್ವಂತಪ್ರತಾಪವೆಂದಂತಕನ ದೂತರುರೆ |
ನಿಂತು ಕಾದುವರೆ ನಿಮ್ಮಂಥವರ ಹವಣೆ
ಕರಿರಂತಕಂತಕನ ಭರದಿ ||

೬೩

ಬಡರಾವ್ತರಂ ಕೊಂದ ಬಡಿವರೆಮ್ಮೊಡನಿಂದು |
ನಡಿಯದಾಗರ್ವ ನೀವ್ ಬಿಡಿರೆಂದುಯೆಂದಾಗ |
ನುಡಿದುದಂ ಕೇಳಿ ಕಣ್ಗಿಡಿಸೂಸಿ ಮೀಸೆ ಹುರಿ ಹೊಡೆದು
ಶಸ್ತ್ರಾಸ್ತ್ರಂಗಳು ||
ತೊಡುಬಿಡುವದುಂ ಗಣನಿಗಿಡು ರಾರಾಕ್ಷಣದಿ |
ಕಡಿದು ಕರಿಗಳ ಕಂಠಕೆಡಹಿ ಮಾವ್ತರನು ಪೆಣ |
ಮೊಡಿಯನೋಲಗದ ಚಾವಡಿಗೆ ಕಳುಹಿದರಂದು
ಮೃಡಚರರು ಕಡುರೋಷದಿಂ ||

೬೪

ನೋಡುತದು ರಥಿಕರೆಲೆ ಮೂಢರಿರೆ ಅಹಂಕಾರ |
ಕೇಡಾಗದಿರಿ ನಿಮ್ಮ ನಾಡಿಗಳು ಚನ್ನಾಗಿ |
ನೋಡುವರು ನಾವಿರಲು ಬೇಡರಣ ನಿಮಗೆ ಗಳಕ್ಷ್ವೇ
ಡನಂ ಬರಹೇಳಿರಿ ||
ನಾಡೆಯಂ ಮಾಳ್ಪಂಗೆ ಮಾಡಿರ್ದವಗೆಗೆ ಪಗೆ |
ಗೂಡುವದು ಕೈ ಸಮರ ಮಾಡಲಿಕೆ ನೀವು ಸಮ |
ಜೋಡಿಗಳೆ ನಮಗೆಂದು ಆಡಲ್ಕೆ ಖತಿಯಿಂದ ಕಾಡಿ
ದರು ಶಿವಧೂತರು ||

೬೫

ಉರುಗೋಪದಲಿ ವಿಭಾಕರ ತನಯ ಚರರೈದೆ |
ಯುರುಗಾಸ್ತ್ರ ಬಿಡಲು ಶಂಕರನ ಕಿಂಕರರಿಗವು |
ಕರಗಳಿಗೆ ಕೊರಳಿಗಾಭರಣ ಮಾಗಲ್ಕಂಡು ಬೆರ
ನಾಗಿ ಬೆಗಡುಗೊಂಡು ||
ಉರಿದೋಳ್ಗಳಂ ಗರಿಯ ತಿರುಗಿಯಪುವು ತಮ್ಮವರ |
ತುರಗ ರಥಕೇತು ಚಾಮರ ಛತ್ರ ಸಾರಥಿಯ |
ಶರ ಶರಾಸನ ಕವಚ ಉರಿಯುತಿರಲಂಜಿ ಬೊಬ್ಬಿ
ರಿದು ನಿಬ್ಬರದಿ ಮತ್ತೆ ||

೬೬

ಜಲಬಾಣಗರೆಯುತಾನಲ ಬಾಧೆಗೆಡಿಸಲೆ |
ಜಲಧಿ ಉಕ್ಕೇರಿದೋಲೆಳೆಯಲಾ ಸೇನೆಯದ |
ರೊಳು ಮುಳುಗಿ ತೇಲು ತಂದನಿಲಾಸ್ತ್ರದಿಂದ
ದನು ನಿಲಿಸಲದರಿಂದ ಮತ್ತೆ ||
ಕುಲಗಿರಿಗಳಲ್ಲಾಡಿ ನೆಲ ಬಿಟ್ಟು ಪಾರಿದವು |
ಕೊಲಲುಯೆಮ್ಮವರೆಮಗೆ ನೆಲೆಯಾವುದೆಲೆ ಪಾಪಿ |
ಗಳಿರೆಂದು ಗೋಳಿಟ್ಟು ಕಳೆಯುತಿರಲಸುವನಾ
ನಳಿನಾಪ್ತ ಸುರರು ||

೬೭

ಅನಿಲ ಸೂಕ್ತಗಳಿಂದಲೆ ನಜಗಣವಾತ ಬಾ |
ಧನೆಗಳೆದು ಪಲ್ದಿನುತೆ ಕನಲಿ ಕಡುಗೋಪದಿಂ |
ಮುನಿದು ಬೆರಳಿಂ ಮೀಸೆಗೊನೆಗುಳ್ಳುರಿಯಿಕ್ಕಿ
ಲೋಚನೆಗಳಲಿ ಕಿಡಿಯುಧರಿಸಿ ||
ಮನುಮುಥಾರಿಯ ಚರರ ಕೆಣಕಿ ನುಡಿಸಿದರು ಪಿಂ |
ದಿನ ಕಾಳಗಲ್ಲೆಮ್ಮ ರಣದನುವು ಬೇರೆ ನೀ |
ವ್ಹೆಣಗಿದರೆ ತಿಳಿವದಾ ತ್ರಿಣೆಯ ನಿಂದೌಗದೆನೆ
ಗಣನೆಯನಿತುಳಿವ ತೃಣಂ ||

೬೮

ಕೇಳುತತಿಖತಿಗೊಂಡು ಸೀಳು ಕುನ್ನಿಗಳ ತಲೆ |
ಬೀಳು ಹೊಡೆ ಭಂಡರಂ ಶೂಲ ತಿವಿ ನಡು ಬೆನ್ನ |
ಮೂಳೆ ಮುರಿ ಮೂಢರಿಗೆ ಕೋಲುಗರೆದಿವರ ನಿಜ
ಫಾಲ ಮೊಡೆತಡವ್ಯಾತಕೆ ||
ಹೋಳಿ ವರಗಳ ಬೇಗ ಜಾಲವ್ಯಾಕಿವನ ಸತಿ |
ಗೋಳಿಡಲಿ ಕಡಿಯವರ ತೋಳು ತೊರತರಿಯೆಂದು |
ಕಾಲ ಕಾಲನದೂತರ್ಥೀಳಲಂತಾಯ್ತುದೆ ಕಾಲದೋಳ್
ತಡವಿಲ್ಲದೆ ||

೬೯

ತೃಣಯದೂತರಿಗೆದುರೆ ಕೆಣಕಿ ಕಾದಲಿ ಬಂದ |
ಬಣಗುಗಳ ತನು ಮನಿಯರುಣ ತೀರಿತಿಲ್ಲಿಗೆನೆ |
ಪೆಣವಮೆದೆ ಕಂಡಮಂತ್ರಣ ಕೊಟ್ಟು ಸಲೆ ಭೂತ
ಗಣ ಮರುಳ ಗಣ ಕರಿಸುತೆ ||
ಉಣಬಡಿಸಲಾಗ ಮನದಣಿದುಂಡು ಬಳಿವಿಡಿವ |
ರುಣ ಜಲವು ಕುಡಿದು ಕುಣಿ ಕುಣಿದಾಡಿ ಮುದದಿ ರಿಂ |
ಗಣವಿಟ್ಟು ನಡೆದು ಮೈಮಣಿಸಿ ಝುಲ್ಲಿಸಿ ಮತ್ತೆ
ತಿನತೊಡಗಿದವು ಪ್ರೇಮದಿಂ ||

೭೦

ನೆರಳಿ ಬಾಯಾರಿ ನೆಲಕುರುಳುತಾ ಸುಗಳಿವಾಗ |
ಕರುಳು ಪೂಸರಗೈದ ಮರುಳ ತಂಡಂದು ಪ |
ಲ್ದಿರೆದಂಜಿಸುತ ರಕ್ತ ಸುರಿದೊಡಳ್ವರಿದುದರ ನೆಳೆದು
ಜಗ್ಗಾಡುತೆ ||
ತಿರು ತಿರುಗಿ ಭೂತಗಳ ಕರೆ ಕರೆದು ತೋರಿಸುತೆ |
ಪರಮಾನುರಾಗದಿ ಕುವರರ ಮದುವೆಯ ಮಾಡಿ |
ಮೆರಣಿಗೆ ತೆಗೆದವಕ್ಕರದಿಂದ ಕರಿಶಿರದ
ಮುರಜಂಗಳಂ ಬಾರಿಸಿ ||

೭೧

ಮರುಳಗಣ ವೇತಾಳ ಗುರುವಂದು ಕರತಂದು ।
ಕರಿಮೃತ ಶರೀರವರ ಹರಿವಿಷ್ಟರದೊಳು ಕು ।
ಳ್ಳಿರಿಸ್ಯರುಣಜಲದಿಂದ ಚರಣವಂ ತೊಳೆದು ಮೇಣ್
ಶ್ಲೇಷ್ಮದ ಗಂಧವಂ ॥
ಕರುಳಪೂದಂಡೆಗಳು ವರಕಂಠ ಕಿಟ್ಟೊಡೆ ಗ ।
ಪರಿತೋಷದಿಂದುಣಿಸಿ ಪೊರಿಸಿ ಪಸಿತೊವಲ್ಲೊದಕೆ ।
ತುರಗ ಖುರ ಮೂಳೆಗಳ ಕರತಾಳ ಬಾಜಿಸುತೆ ಸುರಸದಿಂ
ಪಾಡ್ದವಾಗಾ ॥

೭೨

ಪರಿವಶೋಣಿತ ನದಿಯರುಣಮಯಂ ಕಣಮಯಂ ।
ಮರಳತಂದಾಡ್ವ ರಿಂಗಣಮಯಂ ಹೆಣಮಯಂ ।
ಕರುಳ ಮಿದುಳಡಗು ಕಾರಣಮಯಂ ಗುಣಮಯಂ
ಮುರಿದ ಶರಧನುಗಣಮಯಂ ॥
ನರಲುತಳಿಯುವರಾರ್ತರಣಮಯಂ ರಣಮಯಂ ।
ಯಿರಿತದಿಂದಾದ ಘನವ್ರಣಮಯಂ ನೊಣಮಯಂ ।
ಹರಣಳಿದವಾಜಿ ವಾರಣಮಯಂ ನೆಣಮಯಂ ನರಿ
ಘೂಕ ಖಗಕಣಮಯಂ ॥

೭೩

ಯತಿಪತಿಯ ಪೂರ್ವಪದ್ಧತಿ ನೀವು ಅರಿಯದುದೆ ।
ನೃತಿಪಲಾಯನಮಾನ ಮತಿಯೆಂಬವೆಂ ಮಾಳ್ದ ।
ಪತಿಗೆಮಗೆ ಸಂತತಂ ಜತೆಗಾರರೈಸೆ ದುಷ್ಕೃತಿಗಳಿಗೆ
ಜಯವಿರುವದೆ ॥
ಕೃತಕದಿಂ ಪಡೆದು ಕೊಂಡತುಳ ಧನಕಪ್ಪ ದು ।
ರ್ಗತಿಯಂತೆ ನರ ತೇಜಿ ರಥ ಗಜ ಪದಾತಿ ಸಂ ।
ತತಿ ಗಾಳಿಸೊಡರಂತೆ ಶತಯಾಗಧನುಶದಾಕೃತಿ
ಯಂತೆ ಬದಲಾಯಿತು ॥

೭೪

ಅಳಿಯಲಿಂತೆಲ್ಲ ಕೆಲರುಳಿದವರು ನಾವು ಪದ ।
ನಳಿನಗಳಿಗೆರಗಿಯಘಕುಲ ತಿಲಕ ನಿವಗೆಂತು ।
ಸುಲಭ ಶಿವಲೋಕಮದು ತಿಳುಹೆಂದು ಕೇಳಿದೆವು
ಯಿಳೆರಥನ ಚರಿರಿಗಾಗಾ ॥
ಪೊಲಿಯನಳದಿಹ ತಾಣದೊಳಗವನ ಮೊಣಕಾಲ ।
ತೆಳಗೊಂದು ನರನಳತೆಯೊಳಗೊಂದು ರುದ್ರಾಕ್ಷೆ ।
ಫಲವಿಪ್ಪುದಾ ಸುಕೃತ ಫಲದಿಂದಲಿವನು ಗಣತಿಲಕ
ನಂದವರೇಳ್ದರು ॥

೭೫

ಮುನಿನಾಥ ಲಾಲಿಸಾತನ ವೈಯ್ಯಲವರೆನಗೆ ।
ಧನದಸಖನಾಕ್ಷ ಮಣಿಯನು ನೋಡಬೇಕೆಂಬ ।
ಮನವಾಗುತ್ತೈತಂದೆನನಘನಡಿ ನೋಳ್ಪೊಡೆಂದೆನುತ
ವರಗೂಡಿ ಪೋಗಿ ॥
ಖನನಗೈಸಲ್ಕೆ ಚರಜನರಿಂದವಳಿದ ಮೇ ।
ದಿನಿಯೊಳಗೆ ಕಾಣುತಲಿ ವಿನುತ ರುದ್ರಾಕ್ಷಿಯ ರ ।
ತುನಗರ್ಭವೆಂಬುದೀ ಮಣಿ ತನ್ನೊಳಿರುವ ಕಾರಣದಿ
ಧರೆಗಾಯ್ತೆಂಬುತೇ ॥

೭೬

ಕೊಂಡಾಡಿ ಕರದೊಳಗೆ ಕೊಂಡದಕ ನಮಿಸುತು ।
ದ್ಧಂಡ ಮುನಿವರನಿಗಾ ದಂಡಧರ ಚರನೆಂದ ।
ಮಂಡಲದೊಳಿದು ಧರಿಸಿ ಕೊಂಡವನಿಗಾಗದೆ ನಂಡ
ಲೆಂಬುವ ದಿಂದೆನಾ ॥
ಕಂಡೆನಿದರಿಂ ಮುಕ್ತಿ ಪೆಂಡತಿಗೆ ವರನಪ್ಪ ।
ಜಾಂಡದೊಳಗಿದಕೆ ಸರಿಗಂಡದೊಂದಿಲ್ಲೆಂಬೆ ।
ಖಂಡಿತಿದು ನಿಂದಿಸಿದ ಭಂಡನಾಗುವುದು ಶತಚಾಂಡಾಲ
ಯೋನಿ ಜನನಂ ॥

೭೭

ವರಮುನಿಯು ಕೇಳಿದನು ಧರಿಸಿಕೊಳೆ ನಾಂ ।
ಪುಣ್ಯ ಚರಿತಪ್ಪೆನಾದರೇಂ ಧರಿಸಲ್ಕೆ ಬಾರದೈ ।
ದುರಿತಾಳಿಗಳಿಗೆಲ್ಲ ಸ್ಪರುಶನಂ ಮಾಡುವದು ನಿರುತೆಮ್ಮ
ಕೆಲಸವಾಗಿ ॥
ಇರಲಿವಂಗದೊಳು ಪಾಮರಪೂತನಾದಪಂ ।
ಗುರುವೆಯಿದರಿಂದ ದೊರೆಗೆರೆಡೆಣಿಸಿದಂತಹುದು ।
ಧರಿಸಿಕೊಳಿ ನೀವೆಂದು ಕರಕಿತ್ತು ಪೋದ ಮುನಿಚರಣ
ಕಾನತನಾಗುತೆ ॥

೭೮

ಹರನಾಕ್ಷಿ ಮೌನಿಯಾದರದಿಂದೆ ಕೈಕೊಂಡು ।
ಶಿರದೊಳಗೆ ಧರಿಸಿ ಸುಸ್ಥರ ಪದವಿ ಪಡೆದನೆಲೆ ।
ಶರಣಪ್ಪ ಕೇಳೆಂದು ವರ ಮಹಿಮೆಯೆಂದು ಗುರುವರ
ಪೇಳ್ದು ಮುದದಾಳ್ದನು ॥
ವರನಂದಿಗ್ರಾಮದೊಳಗಿರುವ ಮಹನಂದಿ ಕಪಿ ।
ಚರಣಾಯುಧಂಗಳಿಗೆ ಹರುಷದಿಂ ಧರಿಸಲ್ಕೆ ।
ಮರುಜನ್ಮದೊಳು ಮಂತ್ರಿಯರಸು ಸುತರಾಗುತವೆ
ಧರಿಸಿ ಮುಕ್ತಿಯ ಪಡೆದರು ॥

೭೯

ಪರಮ ಪಾತಕಿಯೋರ್ವ ಬರುತಪ್ಪದೊಳಗೊಂದು |
ಹರನಾಕ್ಷಿಯಂ ಕಂಡು ಮರದ ಮಣಿಯೆಂದರಿದು |
ಕೊರಳೊಳಗೆ ಧರಿಸಿ ಶಿವಪುರ ಪೊಕ್ಕು ಪ್ರಮಥಗಣ
ರೆರಿಂಪನಾಗುರೆ ಮೆರೆದನು ||
ಖರನೊಂದು ರುದ್ರಾಕ್ಷಿ ಹೊರಲಾರದಾ ಭರಕೆ |
ಹರಣಗಳದಿರಲಂದು ಹರದೂತರೈತಂದು |
ಪುರಹರನ ಪುರದಿ ಗಣವರ ಪದವಿ ಗಟ್ಟಿದರು
ಪರಮಾನುರಾಗದಿಂದ ||

೮೦

ಜಾರೆ ರುದ್ರಾಕ್ಷಿಯಂ ಸೇರಿಸುತೆ ರಟ್ಟೆಯೊಳು |
ಜಾರನೊಡಗೂಡಿ ಸಲೆಮಾರ ಕೇಳಿಯೊಳಿರಲು |
ಕ್ರೂರ ಪತಿಯು ಭಯರಸುವಾರಿಸಲು ಶೇರಿದಿವ
ಸೂರೆಗೊಂಡರು ಗಣಪದಂ ||
ಕೇರಳಾಧಿಪನ ಸತಿ ಚಾರು ರುದ್ರಾಕ್ಷಿ ಘನ |
ಸಾರಿ ತನ್ನರಸನ ವಿಕಾರ ಮತಬಿಡಿಸಿ ಸತಿ |
ಮಾರಹರನೊಳಗೆ ಮನಪೂರೈಸೆ ರುದ್ರ ಪದಕಾರಾಧ್ಯ
ರಾದರವರು ||

೮೧

ದುರಿತದೊಬ್ಬುಳಿವನೇ ಚರನೋರ್ವ ಕುಕ್ಕುರದ |
ಕೊರಳೊಳಗೆ ಹರನಾಕ್ಷಿ ಧರಿಸಲದು ಬೇಂಟೆಯೊಳ |
ಗಿರದೆ ಕಿಟಘಾಯಲದು ತಿರುಗಿ ಬೇಡನ ಗುದ್ದಿ
ಕಿರುಬಸಹ ಕೊಲ್ಲಿ ತಾನು ||
ಧರಿಗುರುಳಿ ಕಳೆಯಲ್ಕೆ ಹರಣ ಶಿವದೂತರೈ |
ತರುತ ವರ ಪುಷ್ಪಕದೊಳಿರಿಸಿ ಕೊಂಡಾಡುತಲಿ |
ಹರನ ಪುರಕೊಯ್ದು ಮೂವ್ವರಿಗೆ ಗಣಪದ ಕೊಟ್ಟ
ರುರೆ ಶರಣಬಸವ ಕೇಳಾ ||

೮೨

ಮರಣವಾದರೆ ಬರುವ ಖರ ಜನ್ಮಸ್ಥಲದೊಳಗೆ |
ಹರಣಗಳಿದವಗೆ ಕುಕ್ಕುರ ಕಿರಾತನಿಗೆ ಶೂ |
ಕರ ಖರಕೆ ಮೇಣ್ಯೆದೆ ಚರಣಾಯುಧಕ್ಕೆ ಪಾದರಿ
ಗೆದುರಿತಾರ್ಯರ್ಗೆ ||
ಮರವಿಸಿಂ ಧರಿಸಲೀ ಪರಿಯಾಯಿತೆನಲು |
ಪರತರ ಭಕ್ತಿಯಿಂದ ಸುಸ್ಥಿರ ಚಿತ್ತದಿಂದ ಶಂಕರನಾಮ |
ಸ್ಮರಣೆಯಿಂಧರಿಸುವನ ಪುಣ್ಯ ಉಚ್ಚರಿಸಲರಿ
ದಾರಾರಿಗೆ ||

೮೩

ಅಳಿಕಾಕ್ಷನಾಕ್ಷಿಗಳು ತಳೆದು ಚಾರಮ ತನ್ನ |
ದಳ ಸಹಿತ ಪೋಗಿಂದು ಕಳೆಧರಿಸಿದವನ ಪುರ |
ದೊಳು ಬೆರೆದು ರುದ್ರಗಣ ತಿಲಕನೆಂದುರೆ
ಮೆರೆವಸ್ಥಲ ಪಡೆದನೈ ತೋಷದಿ ||
ತಿಳಿಯಿತೇ ಶರಣ ಜನ ತಲೆ ಮಣಿಯೆಯೆನಲು ಪದ |
ನಳಿನಗಳಿಗೆರಗಿ ಕರಗಳ ಮುಗಿದು ಮುಂದಿನ್ನು |
ಉಳಿದವಂ ಪೇಳಿ ಭವಕಳಿಯೆಂದು ಕೇಳಲ್ಕೆ ತಿಳು
ಹಿದನು ಗುರುರಾಯನು ||

೮೪.

ವರಪುರದ ಶಿವಲಿಂಗ ಶರಣಬಸವನ ಚರಿತೆ |
ಗುರುಬಸವಣಾರ್ಯ ಪದಸರಸಿರುಹ ಲೀನಮಧು |
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ||
ವಿರಚಿಸದನೋದಿಸುವ ಬರೆವಗೋದುವಗೆ ಪರ |
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ |
ದೊರೆಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ಶೃತಿಸಂಧಿನುತ ಬಂಧಿಯು ||

ಸಂಧಿ ೫ ಕ್ಕೆ ಪದ ೩೯೨ ಕ್ಕಂ ಮಂಗಳಂ.



ಶ್ರೀ ಶರಣಬಸವೇಶ್ವರ ಪ್ರಸನ್ನ

## ಆರನೆಯ ಸಂಧಿ

ಸೂಚನೆ॥ ಮರವಿನೊಳು ನುಡಿಯೆ ಸುರವರ ಪದವಿ ಕೊಡುವ ಶಂ।
ಕರ ನಾಮಮನುಶರಾಕ್ಷರಿಯ ಘನ ಮಹಿಮೆಯಂ।
ಗುರುವರನು ಪೇಳಲ್ಕೆ ಸ್ಮರಿಸುತೆಡೆ ಬಿಡದೆ ಶಿವಶರಣ ಸುಖದಿಂದಿರ್ದನು॥

೧

ಗಿರಿವಾರಾತ್ಮಜೆಯ ತನುವರ ಶರಜಸುರ ಷಟ್।
ಚರಣ ಪರಮೇಷ್ಟಿಶಿರಕರ ಸುರಾಪಗೆ ಶಿರಾ।
ಭರಣ ಸುರವರ ವಿನುತ ಚರಣಗಜದೈತ್ಯ ಸಂ
ಹರಣಪದ ಶರಣ ಜನರಾ॥
ಹರಣ ಪುರಮಾರಣ ಸುಕರುಣಸಾಗರ ದೇವ।
ಮರುದಾಪ್ತರವಿ ಸುಧಾಕರನಯನ ಪಾಹಿಮುರ।
ಹರಮಿತ್ರ ಶಿವಲಿಂಗ ಪರಮಧವಳಾಂಗ ಶಂಕರ
ಧರೆಯ ಜನರ ನಿರುತಾ॥

೨

ಪಂಚಮುಖ ಸಂಭೂತೆ ಪಂಚ ತತ್ವಕೆ ಮಾತೆ।
ಪಂಚ ಸದ್ಬ್ರಹ್ಮ ನಿಜ ಪಂಚ ವಿಜಯಾನುಗಜ।
ಪಂಚಾಸ್ಯಗಜವಿನುತೆ ಪಂಚಕ್ಲೇಶ ವಿರಹಿತೆ
ಪಂಚ ಪಾತಕವಾರಿಣಿ॥
ಪಂಚವರ್ಣವು ಸುಕೃತ ಸಂಚಯನಿ ಸುಖದಾನಿ।
ಪಂಚ ತರುರೂಪಂ ಪ್ರಪಂಚ ಕುಲದೀಪ ಜಿತ।
ಪಂಚ ಕರ್ಮೇಂದ್ರಿ ನಿರ್ವಂಚನದಿ ವರ್ಣಿಸುವ
ಡಂಚದೇರನಿಗಾಗದು॥

೩

ಕೊಡುಕೊಂಬುವಾಗಲಂಗಡಿಯೊಳಗೆ ಕೂತು ತ।
ಕ್ಕಡಿ ತೂಗುವಾಗ ಹೊಲಕೆಡೆ ಕುಂಟಿ ರಂಟೆಗಳು।
ಹೊಡೆವಾಗ ಲೆಕ್ಕಣಿಕೆ ಪಿಡಿದು ಲೇಖಿಸುವಾಗಲುಣು
ವಾಗಲು॥
ಇಡುವಾಗಲಂಕಾರ ಕೊಡುವಾಗರತಿಮಾರ್ಗ।
ನಡೆವಾಗ ಮೈಲಿಗೆಪು ಮಡಿಯೊಳಗೆ ಯಿರುವಾಗ।
ಯೆಡೆ ಬಿಡದಲರ ನಿಮಿಷ ನುಡಿವದೈ ಶಿವನಾಮ
ಮೃಡ ಮಹಾದೇವನೆಂದು॥

೪

ಉಪವಾಸದಿಂದೇನು ಉಪಕ್ರೋಶದಿಂದೇನು।
ಕುಪಿತಮನದಿಂದೇನು ತಪವುಗೈವಾಗೇನು।
ಅಪಹಾಸದಿಂದೇನು ಚಪಲತನದಿಂದೇನು ಉಪಚಾರ
ದಿಂದಾದರೇಂ॥
ಕಪಟತನದಿಂದೇನು ಅಪಲಾಪದಿಂದೇನು।
ಉಪತಾಪದಿಂದೇನು ಉಪಟಳವುಗೊಂಡೇನು।
ಕೃಪತನದಿ ಮನುಪಂಚ ಜಪಿಸಿದರೆ ಸಾಕು ಶಿವನು
ಪಕಾರಿಯಾಗ್ಪ ನಿರುತಾ॥

೫

ಇಂದ್ರಿಯಗಳು ನಿಗ್ರಹಿಪ ವಂದುಗವು ಬೇಡ ಸಲೆ।
ಯಿಂದ್ರಕೀಲದಿ ತಪದೊಳಂದುವಾಯಸ ಬೇಡ।
ನಿಂದ್ರ ಬೇಷಗ್ನಿಯೊಳುಪೇಂದ್ರಾದಿ ಸುರದೇವರೆಂದು
ನಂಬಲಿ ಬೇಡವು॥
ಚಂದ್ರ ಭಾಗಾದಿ ನದಿಯೊಂದು ಸೇವಿಸಬೇಡ।
ಚಂದ್ರಾಯಣಾದಿ ವ್ರತದಿಂದ ಕೊರಗಲಿಬೇಡ।
ಚಂದ್ರಶೇಖರನಾಮವೊಂದೆ ಸಾಕೈ ಭವದ ಬಂಧನಂ
ಪರಿಸುವದಕೆ॥

೬

ಬಾಯಿ ನೋವಿಲ್ಲೇನಪಾಯ ತನಗಿಲ್ಲ ಮೇ।
ಣಾಯಾಸವಿಲ್ಲಾರ ಸಾಹ್ಯಬೇಡಖಿಳ ಮನು।
ರಾಯ ಮಂತ್ರ ನಮಃಶಿವಾಯೆಂದು ನುಡಿಯಲ್ಕೆ
ಕಾಯವೆ ಸನ್ಮುಕ್ತಿಯಾ॥
ಗೇಯವಾಗುವದು ಸದುಪಾಯದಿಂ ಪುಡುಕಿಗುರು।
ರಾಯ ನಿಂದುಪದೇಶನಾಯ ಗೈದವನುರೆ ನಿ।
ಜಾಯು ಸಿರಿಯುಶಸುತಸುಜಾಯೆ ಪಡಕೊಂಡು ಯಮ
ರಾಯ ಭಯಿ ಪರಿದಿರುವನು॥

೭

ಹರನಾಮದುರು ಷಡಾಕ್ಷರಿ ಬಿಡದೆ ಜಪಿಸುವಗೆ ।
ಗರಳಶೇವಿಸಲಮೃತ ಪರಿಯಾಗುತಿಹುದು ಧ ।
ಳ್ಳುರಿ ಕಾಯೆ ಪತ್ತಲ್ಕೆ ಶಿರಿಗಂಧಮಹುದು ಕಾಳುರುಗ
ಸರವಿಯೊಲಿರುವದು ॥

ಕರಡಿ ಪುಲಿ ಸಿಂಗಗೋಕರುವಿನಂತಾಗುವವು ।
ಮರುಳ ಭೂತಗಳುಮನಿಪರಿಚರ್ಯ ಗೈವವೈ
ಕೊರಳ ಕತ್ತರಿಸುವರಿ ಕರವಾಳಮದು ಸುಮನ ಸರ
ವಾಗುವದು ನಿಶ್ಚಯಂ ॥

೮

ಮತಿಯುತನೆ ಪೂರ್ವದಿಂದಿತಿಹಾಸ ಪೇಳ್ವೆನಿದ ।
ಕತಿ ಭಕ್ತಿಯಿಂ ಕೇಳು ಕ್ಷಿತಿಶರುಣೆ ಮಸ್ತಕದ ।
ಸಿತ ಕುಂತಳೆನಲೊಪ್ಪುವತಳ ಕುಂತಳ ಪುರದ
ಪತಿಯು ಗುಣಶೇಖರಂಬಾ ॥

ಕ್ಷಿತಿಪಾಲ ರೂಪರತಿ ಪತಿಯಂತೆ ರಾಜ ಪ ।
ದ್ಧತಿ ಮೀರದಂತಿರುವ ಕೃತಿ ಚರಿಪ ಸೌಂದರ್ಯ ।
ವತಿನಾಮ ಲಾವಣ್ಯವತಿ ಯುವನ ಸತಿಯಾಗಲತಿ
ಸೌಖ್ಯದಿಂದಿರ್ದನು ॥

೯

ಇಂದು ನಿಭವದನೆಯರವಿಂದದಳನಯನೆ ಪಿಚು ।
ಮಂದದಳ ಪೂರ್ಬೆ ವರಕುಂದ ಸಮರದನೆ ಸುಮ ।
ಗಂಧಿ ಗಂಭೀರನಾಭಿ ಕಂದರ್ಪ ಶಂಕವಾಣಿ ದಂದ
ಶೂಕಾಭವೇಣಿ ॥

ಮಂದಗಜಗಮನೆ ಸಲೆಕಂದಲನನಾಭ ಕುಚೆ ।
ಇಂದುಟಿ ಮೃಗಾಭಕಟಿ ಬಂಧುರ ನಿತಂಬೆಘನ ।
ಸೌಂದರ್ಯದಿಂ ಮೆರೆವ ಸೌಂದರ್ಯವತಿ ರಾಜ ನಂದನನ
ಮಾರ್ಗೊಂಡಳು ॥

೧೦

ಆ ವಸುಂಧರ ಪತಿಯ ಜೀವಸಂಕಿಯೊಳಿರುವ ।
ಜೀವಕತಿವೃದ್ಧಿ ಘನ ಜೀವನಂ ರಾಜವಹ ।
ಜೀವನಂತಾಗಿ ಮೃದು ಜೀವದೊಳು ಸುರರ ಗುರು
ಜೀವನೋಲೆಸದು ಮತ್ತೆ ॥

ಜೀವಕರ ಜೀವನರಿ ಜೀವನ ಪತಿ ಜೀವಧರ ।
ಜೀವನಖಿಳರ ತನ್ನ ಜೀವವರ ಪರ ಕಾಪ್ಪು ।
ಜೀವನವು ತನಗಾಗೆ ಜೀವನ ಸಚಿವನಾಮ
ದಾಮಾತ್ಯ ನೆಸದಿರ್ದನು ॥

೧೧

ನಗೆಗಳೆಂದರೆ ರೋಮನಿಗುರೆ ಮೀಸೆಯು ಕುಣಿದು ।
ಧೃಗುವಿಂದಕಣ ಸುರಿದು ನಗಗಳಂ ಕೀಳುತಲಿ ।
ಭಗಣಗಳು ಭೂಮಿಯೊಳು ಜಗುಳಿಸುತೆ ಬಿರುದು
ಗಳು ಪೊಗಳಿಸುತಲಾ ವೀರರು ॥

ಜಗಳದೊಳಗಾರಿಗುಂಬಗಿಯದಲೆ ಝುಸಬಡಿದ ।
ವಿಗಡ ಚೂಣಿಯಮೇಲೆ ಮಿಗಿಲಾದ ಸೇನಾನಿ ।
ಯಗಣಿತ ಪ್ರತಾಪವಂ ಭಗತೇಜ ಮಿಕ್ಕಲ್ಕೆ ಜಗತಿ
ಪಾಲಿಪ ಸೌಖ್ಯದಿಂ ॥

೧೨

ಇಂತು ಸುಖಮಿರ್ದು ಭೂಕಾಂತ ತಾನೊಂದಿವಸ ।
ದಂತಿಯೊಳು ಜೀವನ ಸುಮಂತ್ರಿಯಂ ಕರೆದು ಯೇ ।
ಕಾಂತದೊಳು ತಿಳಿಸಿದ ಪುರಾಂತದೊಳು ಪ್ರಜೆರಿಗೇಂ
ಕ್ರಾಂತಿಯೋ ಮೇಣೊಂದರಾ ॥

ಚಿಂತೆಯೇನದು ತಿಳಿವದಿಂತುಟವರ ವರಸು ನಿ ।
ಶಾಂತದೊಳು ತಮ್ಮೊಳಗೆ ಭ್ರಾಂತಿಯಂ ತೊರೆದಾಪ್ತ ।
ದಂತಿಳಿವುತಾರ್ತರಂ ಸಂತೋಷ ಗೈಯಲ್ಕೆ ನೀಂ
ತಿರುಗಿ ನೋಡೆಂದನು ॥

೧೩

ಭೂಧವ ನಿರೂಪದಿಂ ಸಾಧು ಜೀವನ್ಮಂತ್ರಿ ।
ಮೋದದಿಂ ರಾತ್ರಿಪುಟ ಭೇದನದಿ ಗೂಢತರ ।
ಶೋಧನಂಗೈಯುತಿರಲಾ ದಿವ್ಯತರ ರಾಜಸೌಧಾಗ್ರ
ದೊಳಗೆ ॥

ಮಾಧವ ಚತುರ್ಥಿಯರು ರೋಧನಂ ಗೈಯುತಿಹ ।
ನಾದವಂ ಕೇಳಿ ತವೆ ಖೇದವಂ ತಾಳಿ ಶಿವ ।
ಪಾದದಾಣೆಯುಸಿಟ್ಟು ಆದರದಿ ನೀವುದಾರೌ ದಯದಿ
ಪೇಳೆಂದನು ॥

೧೪

ಜೀವನಾಮತ್ಯನೀಂ ಸಾವಧಾನದಿ ಕೇಳು ।
ಭೂವರನಿಗಿಮವರೆಗೆ ಯೋವು ತಿರುತಿಪ್ಪವರೆ ।
ನಾವು ವಿಜಯಾದಿ ಸಿರಿ ದೇವಿಯರು ನಿಮ್ಮರಸು
ಸಾವುತಿಪ್ಪನು ನಾಳಿಗೆ ॥

ನೋವುವೆಮಗಾಯಿತಿನ್ನಾವನಂ ಸೇರ್ವೆವೆಂದೀ ।
ರ್ವೆವೆಂದೀ ವಿಧದಿ ಶೋಕಿಸುವ ಭಾವಮೆನೆ ಕೇಳ್ದು ಹಾ ।
ದೈವದುರ್ಘಟವೆಂದು ಕಾವರಿನ್ನಾರೆಂದು ಭೂಮಿಯೊ
ಳಗ್ಗೊರಳ್ದಾಡುತೆ ।

೧೫

ತಾಯಿಗಳೆ ಪೇಳಿ ನೃಪ ಸಾಯಲೇಂ ಕಾರಣವು |
ಪಾಯಮುಳ್ಳೊಡೆ ಪೇಳಿ ರಾಯನನ್ನುಳಿಸೆನ್ನುತ |
ಕಾಯಬೇಕೆನಲೆಂದರಾ ಯುವತಿಯರು ಬರುವ
ಮಾಯದಶ್ವಂಪತ್ತಲೂ ||
ಕಾಯಂಬಿಡುವ ತರುವಾಯ ವಿಷಬೆರಿದ ಕ |
ಜ್ಞಾಯದಿಂದರಸನಿಗಪಾಯಮುದು ತಪ್ಪಿಸಲು |
ವಾಯುಭಕ್ಷಕನಿಂದ ಸಾವುಮರಿಸಲ್ಕದನು ಆಯು
ಶತ ರಾಜೇಂದ್ರಗೆ ||

೧೬

ಇಂತೆನಲು ದೈವಿದ್ದೆಂತಾಗಲಾನು ಜೀ |
ವಂತ ಮಿರುವನಕ ಭೂಕಾಂತನಂ ಕಾಯಲೇ ;
ನಂತರಮೆಪುಂದು ತನ್ನಂತರಂಗದಿ ದೃಢವ
ನಿಂತು ನಿಶ್ಚೈಸಿಕೊಂಡು ||
ಸಿಂತಿರುಗೆ ಪೂರ್ವದಿಕಾಂತಿಯಿನನಾಗಮಂ |
ತಾಂ ತಿಳಿದು ಕೃಷ್ಣವಸನಂತೆಜಿಸಿ ಬಿಳಿದುಟ್ಟು |
ಸಂತೋಷದಿಂ ತಾಂಬುಲಂ ತಿಂದಳೆನೆ ಬೆಳಗು
ಸಂಧ್ಯಾರುಣಮದೊಪ್ಪಿತು ||

೧೭

ಆ ಸಮಯದೊಳ್ ಮಂತ್ರಿವಾಸಕ್ಕೈತಂದು ಪರ |
ಮೇಶಾರ್ಚನಂಗೈದು ಪೂಶಿ ಗಂಧಾಂಬ ರವಿ |
ಭೂಷಣಂ ಧರಿಸೆ ಜಗತೀಶನನಿತಕ್ಕೆ ನಿದ್ರಾಸುದತಿ
ಬೀಳ್ಕೊಂಡನು ||
ದೋಷಕಾಗರನಾಗಿ ತೋಷದಿಂ ದ್ವಿಜಗಣವಿ |
ಲಾಸ ಕೆಡಿಸಿದ ರಾಜನ್ಯೆಸಿಯನೆರೆ ತಿಳಿಯ |
ಲೇಸುದಿನೆದೆಂದು ಘನರೋಷದಿಂದೊದಿಯನೆಲೆ
ಪೂಷಮೂಡಿದನುದಯದಿ ||

೧೮

ಸಂಧ್ಯಾದಿ ಕೃತಿ ತೀರ್ಚಿಯೆಂದಿನಂತರಸು ಕವಿ |
ವಂದಿ ಮಾಗಧ ಚರರ ಸಂದೋಹ ವೇತ್ರಧರ |
ಬೃಂದರಸು ಮಾಂಡಲಿಕ ನಂದನರ ಸಹವಾಗಿ
ಯಂದಳವನೇರಿಕೊಂಡು ||
ಕುಂದನದ ಕೆಲಸದೊಳಗೊಂದುಳಿಯದೋಲ್ ರನ್ನ |
ವಂದಿಸಿದವರ ಸಭಾ ಮಂದಿರದಿ ಸಮೆದನವ |
ಕಂದಲಾಸನಕೆಯರವಿಂದಸಖ ಸಮತೇಜ
ಬಂದೋಲಗಂಗೊಟ್ಟನು ||

೧೯

ಕುಡತೆಗಣ್ಮಿಂಚೆಲ್ಲ ಕಡೆಸೂಸೆ ಬೆನ್ನೊಳಗೆ |
ನಿಡುಜಡೆಗಳೊಲದಾಡೆ ಜಡಜಕೋರಕಕುಚಂ |
ಕಡುಬಿಣ್ಪೆನಿಂದೊಪ್ಪೆ ಬಡವಾಸೆ ತೋರೆ ಕೆಂಪಿಡಿದ
ರುಣದುಟರಾಗವಂ ||
ಕೊಡಲಖಿಳರಿಗೆ ಕೇಶನಡುಗೆ ಮುಂದಲೆಯೊಳಗೆ |
ಬಡನಡವು ಬಳ್ಕುತಿರೆ ಪಿಡಿಕರದ ಘನ ಶೋಭೆ |
ಪಡೆದ ಕರದೋಳ್ ಚಮರ ಪಿಡಿದು ಬೀಸಾಡಿದರು
ಮಡದಿಯರು ಸಡಗರದಲಿ ||

೨೦

ವೈರಿಭೂಪಾಲ ಕುಲಸಾರಗಜ ವಿಜಿತ ಕಂ |
ಠೀರವಗೆ ನೃಪಘನ ಸಮೀರ ನರಿ ಪೃಥವಿಪತಿ |
ಮಾರುತ ಚ ಕಸ್ಯಪಕುಮಾರ ಜಯವೆಂದು ಕೈವಾರಿ
ಸುತೆ ವಂದಿಜನರೂ ||
ಸಾರುತಿರಲಾಪೊಳ್ತು ದ್ವಾರಪಾಲಕ ಬಂದು |
ದೂರದಿಂ ನೆಲ ಮುಟ್ಟೆ ಧಾರುಣೀಶಗೆ ನಮಿಸಿ |
ವಾರು ತಂದನೋರ್ವ ದ್ವಾರದೊಳು ನಿಂದಿಹನು
ಧೀರ ಚಿತ್ತೈಸೆಂದನು ||

೨೧

ಒಳಗೆ ಬರಹೇಳೆಂದು ನೆಲದೊಡೆಯನೆನೆ ಮಣಿದು |
ಘಳಿಲನವ ಪೊರಗ್ಹೋಗಿ ಕಳುಹಲ್ಕೆ ಕುದರಿ ಸಹಿ |
ತೊಳಪೊಕ್ಕು ಶಿರಬಾಗಿಯಲಘೆತರ ವಾಜಿಯಂ
ಸುಲಭ ನೀಂ ನೋಡೆಂದನು ||
ನಳಿನಸಖನಂತದರ ಬೆಳಗು ಝುಗಝುಗಿಸೆ ನೃಪ |
ತಿಲಕ ಸೋಜಿಗಗೊಂಡು ತಿಳಿವಡೆ ಬಲಾಹಕ ಮೊ |
ಅಳಕಾಪುರೀಶನೇಂ ಕಳುಹಿದನೊ ತನ್ನಶ್ವಮೆನೆ
ಲಲಿತಮಾಗೊಪ್ಪಿತು ||

೨೨

ಶತಯಾಗ ಸಿರಿಯಂತೆನುತ ದೇವಮಣಿಯು ಸಂ |
ಯುತಮಾಗಿ ಸೌಭಾಗ್ಯವತೆಯಂತೆಯಧಿಕ ಶೋ |
ಭಿತಮು ಕಂಠಾಭರಣ ಚತುರ್ಪದಂ ವೃತ್ತಪದ್ಧತಿ
ಯಂತೆ ವಿಪ್ರನಂತೆ ||
ಶ್ರುತಿರಮ್ಯಮಾಗಿ ಹರಸತಿಯಂತೆ ಜಯ ಶುಭಾ |
ನ್ವಿತ ಚಪಲತರ ವರ್ಷಋತುವಂತೆ ಬಹುರೂಪ |
ನತಿಯಂತೆ ನಯನಮೋಹಿತಮಾದ ತುರಗವಂ
ಕ್ಷಿತಿಪಾಲ ಸಲೆ ನೋಡಿದಂ ||

೨೩

ನೋಡಿದಾಕ್ಷಣ ಮೋಹ ಮೂಡಿತ ನೃಪ ಮೇಲೆ ।
ಕೂಡುವಾನಂದಕ್ಕೆ ಮಾಡೆಮನ ಸಚಿವನೊಳ ।
ಗಾಡಿದನು ಯಮುಗೆ ಮುದಗೂಡಿತಿದ ನೇರುತಲಿ
ನೋಡುವೆನು ತಾನೆನ್ನಲು ॥
ಬೇಡರಸೆಯುಡಿಯೊಡ್ಡಿ ಬೇಡಿಕೊಂಬುಗೆ ನಿನಗೆ ।
ಪ್ರೌಢತನಮಲ್ಲ ಪೊಸ ಘೋಟಕವನೇರುವುದು ।
ಕೇಡಿಂಗೆ ತವರೆಂದು ನಾಡೆತಿಳಿವದು ನೃಪರಿಗಾಡಿ
ತೋರಿಸಲ್ಯಾತಕೆ ॥

೨೪

ಅರಸನಾದವನು ಆತುರಿಸನೊಳಿತಲ್ಲವೈ ।
ತುರಗಮೊದಲಾಗಿ ಪೊಸತಿರಲಿಕ್ಕದಲೆ ಸಾಣೆ ।
ತ್ವರ ನೇರ್ವುದಕ್ಕೆ ಮನ ಪರರಾಜರೊಳಗೆ ನೈಮುರಿಯ
ಬಾರದು ಕೇಳುಮೇಣ್ ॥
ಸುರತದೊಳು ಬೇಂಟೆಯೊಳು ಪರಿಚರ್ಯಗೈಯುತಿಹ ।
ಚರರೊಳೆಚ್ಚರದಪ್ಪಿ ಚರಿಸದಲೆ ಕವಿ ಚಿತ್ರ ।
ಕರಬಾಣಸಿಯ ವೈದ್ಯರುರೆ ವೈರಥರವಲ್ಲ ನರಪತಿಗೆ
ಕೇಳೆಂದನು ॥

೨೫

ಭೂ ತರುಣಿಥವರಾಜಸೀತೆ ತಾವರಿಯದುದೆ ।
ಪೂತರಂ ಪೊರೆದು ಕುಜನಾತುಮರದಂಡಿಸಿ ಮ ।
ದಾತವರ ಮುರಿದು ಸಲೆ ಸೋತವರ ಸಲಹುತತಿ
ಭೀತರಿಗಭಯ ಕೊಡುತಲಿ ॥
ಪ್ರೀತಿಯಿಂ ಪ್ರಜರ ಕುಲಜಾತಿಯದುಯಿದುಯೆಂದು ।
ದ್ವೈತಗೈಯ್ಯದೆ ಸಲಹಿ ಶೀತಕರಧರ ಭಕ್ತ ।
ವ್ರಾತಘನವೆಂದು ಮನಸೋತು ಸೇವಂಗೈವೊಡಾತನು
ತ್ತಮನರಪತಿ ॥

೨೬

ತರುಗಳಂ ರಕ್ಷಿಸುತದರ ಪುಷ್ಪಫಲ ತಳಿರ ।
ನೆರಳಿನಿಂ ಸುಖಪಡೆಯುತಿರದಲ್ಪಕಾರಣಕೆ ।
ಮರಗಳನೆ ಕಡಿವಂತೆಯರಳ ಕುಡತಿಗೆ ಬಣಬೆ
ಗುರಿಹಚ್ಚುವಂತೊಸ್ಮೆಲೆ ॥
ಸಿರಿವಂತನಾಗಲಾತುರಿಸೆಮ್ಮೆ ಕೆಚ್ಚಲಂ ।
ಕೊರೆದು ಕೊಲ್ಲಿದ ಗೋಪನಿರುವಂತೆ ಪ್ರಜೆರಿಂದ ।
ಬರುವ ಹಣದೊಳು ತೃಪ್ತಿಕರರಾಗದಲೆ ಕೆಡಿಸಿ
ಪರರ ಕೆಡುವರು ದುರುಳರು ॥

೨೭

ಯಕ್ಕುಲದ ಮಾಳ್ಕೆಯೋಲ್ ಸಿಕವರಗುದ್ದಿ ಮೃತಿ ।
ಗಿಕ್ಕಿ ಕಾಕನ ತೆರದಿಕ್ಕುತಲೆಕಂಡವರ ।
ತಿಕ್ಕಿ ಸೈರಭದಂತೆ ಸೊಕ್ಕಿರ್ದ ಪುಲಿಯಂತೆ ವಾಕ್ಕು
ಘರ್ಜಿಸಿನೆ ಸರ್ಪದೋಲ್ ॥
ಮುಕ್ಕಿಯಸು ಕಳ್ಳರೋಲ್ ರೊಕ್ಕಗಳು ಸುಲಿದುಕೊಂ ।
ಡುಕ್ಕಿ ಮನಜನಕೆ ಗೋಳಿಕ್ಕಿಕಾಡುವ ನೃಪನು ।
ರಕ್ಕಸನೆ ಸರಿರಾಜ ಲೆಕ್ಕದೊಳಗಲ್ಲಲವಗೆ ಮುಕ್ಕಣ್ಣ
ನೊಲಿಯನೆಂದು ॥

೨೮

ಕಂದಾಯದ್ಧಣವು ಪ್ರಜೆರಿಂದ ಕೊಂಬುದ ಭೂಮಿ ।
ಯಿಂದಾಗ್ವ ಪ್ರಾಪ್ತಿಯೊಳಗೊಂದರೊಳಗಾರನೆಯ ।
ದೊಂದು ಭಾಗಂ ಕಂಡು ಬಂದ ಸಂಕಟ ಪರಿಸಿ
ತಂದೆ ಮಕ್ಕಳ ನೋವುವಾ ॥
ಅಂದ ತಾ ಸಲಹಿ ಜನರಿಂದ ಹೊಗಳಿಸಿಕೊಂಡು ।
ಬಂಧು ಜನರೊಳು ಪ್ರೇಮದಿಂದಿರುತೆ ಘನ ನ್ಯಾಯ ।
ದಿಂದಗಳಿಸಿದ ದ್ರವ್ಯದಿಂದ ಬೊಕ್ಕಸ ಬಲಿಸಿ ಚಂದ
ದಿಂದಿರುವರಸ ॥

೨೯

ಪುರದುರ್ಗಗಳು ಬಲಿಸಿ ಚರರ ಜೀವನ ಬೆಳಸಿ ।
ನೆರೆ ನಾಲ್ಕುಪಾಯವಂನರಿತ ಮಂತ್ರಿಗಳಿರಿಸಿ ।
ಗುರುಜನರ ಸೇವಿಸುತೆ ಪರಿಜನರ ಭಾವಿಸುತೆ
ಪರದೇಶದೊಳಗೊದಗುವ ॥
ಚರಿತೆಗಳಿಸಿತು ಗುಪ್ತಚರರಿಂತಿರಿಸಿ ಪರಂ ।
ಪರೆಯಿಂದ ಓಲಗದೊಳಿರುವರೆನೆ ನಂಬಿರುತೆ ।
ಯರಸುಧರ್ಮದಿ ನಡಿವ ನರಪನೊಳು ಮುನಿದು
ತಾಂ ಸುರಪಾದೊಡೇಂ ಗೈವನು ॥

೩೦

ಅದರಿಂದ ಸಾಣಿಯಿಂದ್ಧದ ನಾಗದಿರುತಿರುವ ।
ಕುದುರೆಯೇರುವಡೆ ನಿನಗಿದು ಸಲ್ಲದಿನ್ನೊಬ್ಬ ।
ಮದಚರನ ಕೂಡಿಸುತೆ ಮೊದಲನುವ ತಿಳಿದ
ಮೇಲ್ಮುದದಿ ನೀವೇರ್ವುದೆನಲು ॥
ಅದಕೊಡಂಬಟ್ಟಂತೆ ಯೊದವಿಸಲು ನಿಮಿಷದೊಳು ।
ಬೆದರಿ ಪಾರುತೆ ಕೆಡಹಿಯೊದೆದು ಕಾಲಂ ಯಮನ ।
ಸದನ ಸೇರಿಸಿ ಯಶ್ವಮದ್ರುಸೆವಾಗಲುರೆ ಪೊಗಳಿದ
ರಖಿಳ ಜನ ಸಚಿವನಂ ॥

೩೧

ಅನಿತರೊಳು ಬಂದು ತಲೆಮಣಿದು ವೇತ್ರಂಕರನು |
ಜನಪಾಲ ದ್ವಾರದೊಳು ವನಪಾಲ ಬಂದಿಪ್ಪ ;
ನೆನೆಕೇಳಿ ಕರತರುವದೆನೆ ತಡೆಯದಂತೆಸಗಲನಿತಕ್ಕೆ
ಬಂದುತನ್ನಾ ||
ಫಣಿಪಾದದೊಳಗಿಟ್ಟು ಮನದಣಿಯೆ ಪೊಗಳಿಕರ |
ವನಜಗಳು ಮುಗಿದು ಸುಮ್ಮನೆ ನಿಲ್ಲಲಾತನಾ |
ನನ ನೋಡುತೇನ ಚಿಂತನವೆಂದು ಬೆಸಗೊಳಲಿಕೆ
ನಿತುಳಿಯದೋಲ್ ಪೇಳ್ದನು ||

೩೨

ಕಾಳಮಿಗಗಳು ಗೈದ ಗೋಳನಾನಿತೆಂದು |
ಪೇಳುವೆನು ವನದೊಳಗೆ ಕಾಲಿಟ್ಟರಾಯ್ತುವರ |
ಸೀಳಿಬಿಡುವವು ಗಂಧಶಾಲಿಗಳು ಪೂದೋಟ
ಪಾಳಾಗಿ ಪೋದವೆಲ್ಲ ||
ತೋಳ ಪೇರ್ಬುಲಿಸಿಂಗ ವ್ಯಾಳ ಸೈರಬ್ಬ ಖಡ್ಗಿ |
ಚೈಲ ಕಿಟಿಗಳ ಕಾಟ ತಾಳಲಾರದೆ ಬಂದು |
ಪೇಳಿಕೊಂಡಿಪ್ಪೆ ನುಡಿಲಾಲಿಸುತೆ ವನಬೇಂಟ
ಗೇಳು ಭರದಲಿ ಭೂಮಿಪಾ ||

೩೩

ಈತೆರದ ನುಡಿಗೆ ಭೂನಾಥ ಮನನೊಂದುರೆ ಕಿ |
ರಾತ ಪಡಿ ಬರಿಸೆಂದ ಮಾತು ಮುಗಿವನಿತರೊಳು |
ಭೂತಳದ ಸರ್ವಮಿಗ ಜಾತಿಗಳ ಕೊಲ್ವಯಮದೂತ
ರೋ ಅಸಿತಗಿರಿಯೊ ||
ಜಾತರೋಜ ಗುನಿಸಂಭೂತರೋ ದುರಿತದ ನಿ |
ಕೇತರೋ ಎಣಿಸಲಾವಾತಂಗೆ ಶಕ್ಯ ಘನ |
ಭೂತ ಬಳಗೆನೆ ಬಿಯದವ್ರಾತ ನೆರೆಯಿತು ನಿಮಿಷ
ಕಾತುರಿಸೆ ಮನ ಬೇಂಟೆಗೆ ||

೩೪

ಉಟ್ಟು ತಳಿರುಡುಗೆ ತಲೆಕಟ್ಟಿ ಶಿಖಿಗರಿ ಫಣೆಯೊ |
ಳಿಟ್ಟು ಮೃಗಮದದ ಸಲೆಬೊಟ್ಟು ಕಣ್ಣಿಂದ ಕಿವಿ |
ಮುಟ್ಟು ಗೈರಿಕದ ಕಿರಿಪಟ್ಟ ಪಚ್ಚುತಲಂಚೆ ರಟ್ಟೆ ತಲೆ
ಯೊಳಗೌಂಕುತೆ ||
ಬಟ್ಟ ಮೌಕ್ತಿಕದ ಸರತೊಟ್ಟು ಗುಂಜಾ ಭರಣ |
ಮೆಟ್ಟು ಕರ ಕರ್ರೆನಲು ಪಟ್ಟ ವುಲಿದೊವಲ್ಬೊಣ್ಣೆ |
ತೊಟ್ಟದರ ಮೇಲೆ ನಡುಕಟ್ಟು ತಲೆನಾಡೆ ಜಗಜಟ್ಟಿಗಳು
ನಡೆತಂದರು ||

೩೫

ಬಡಿಗೋಲು ಬೀಸುವತಿ ನಿಡುಗೋಲು ಜಾಯಿಲಂ |
ತೊಡಕುವತಿಯೀಟಿ ಚೂರಿ ಸಣಗತ್ತಿ |
ಯಿಡವಲೆಯು ಬೆಳ್ವಾರ ಕಕ್ಕಡ ಮಡುಗಡುವ
ಸುಂಟಿಗೆಯ ಬಡಿಗೆ ಬತ್ತಳಿಕೆ ಬಾಣಂ ||
ಕಡುಗತ್ತಿ ಕೊಳಲು ಧನು ಉಡಿಗಲ್ಲ ಗವಣೆಗಳು |
ಸಿಡಿಮದ್ದು ಗುಂಡುಸಲೆ ಬಡಿವ ತಂಬಟ ಪೆಗಲ |
ಕಿಡಿಸೂತ್ರ ಮದ್ದೊಡಿವನಿಡುಗೊಳವಿ ಸಹ ಬೇಡಪಡೆ
ನಡೆಯಿತಂದಡವಿಗೇ ||

೩೬

ತಿಗುರಿದನು ಲೇಪನದ ಮೃಗಮದದ ಗಂಧ ಕಳೆ |
ಮುಗುರೆ ಬರೆಕಣ್ಣ ಕಾಡಿಗೆಗೊಲಿದು ಪಿಕ ನಿಕರ |
ವಗಣಿತೈತರೆ ತಮಾಲಗದದಳಿರುಡಿಗೆ ಝುಗ ಝುಗಿಸೆ
ಶಿರ ಕುಂತಲಗಳಾ ||
ಪೊಗರೊಂದು ಗೂಡಿರುವ ಮುಗುಧೇಯರ ಕಾಣಲ್ಕೆ |
ನಗವೈರಿರನ್ನ ಬೊಂಬೆಗಳೈದೆ ತಾವರೆಯ |
ಮುಗನೆಸಗಿ ಕಳುಹಿರ್ದ ಬಗೆ ತೋರೆ ಪತಿಗಳೊಡ
ನೊಗುಮಿಗೆಯೊಳೈತಂದರು ||

೩೭

ಆ ಶಬರಪಡೆಗೂಡಿ ಭೂಸುದತೆ ನಾಥ ಸಲೆ |
ತೋಷದಿಂ ಸ್ವಾಮಂತರ್ಯೆ ಸುಜನ ಸಚಿವ ಸೇ |
ನಾ ಸಮೂಹವಗೊಂಡು ಭೂಶಿವಗಣಂ ಗೈವ
ಆಶೀರ್ವಚಂಗೊಳ್ಳುತೇ ||
ಆಸುರದ ವಾದ್ಯತತಿ ಘೋಷಿಸಲು ಜನರೆಲ್ಲ |
ಸೂಸುತಿರೆ ಮುಮನಸುವಿಲಾಸದಿಂ ಪೂರಮಟ್ಟು |
ಘೋಷಯಾತ್ರಿಗೆ ಬಂದು ಬೀಸಲ್ಕೆ ಕರ ಬೇಂಟೆಗಾ
ಸಮುಯಕನುವಾದರು ||

೩೮

ಜೋಲುಗಿವಿ ಕಿಡಿಸೂಸು ವಾಲಿಗಳು ಡೊಂಕಾದ |
ಬಾಲಕಡುತ್ವರ ನೇಳ್ವ ಕಾಲು ಬಾಗಿದ ಬೆನ್ನ |
ನಾಲಗೆಯು ಹೊರೆದಗಿದ ಶಾಲು ಶುನಿಗಳ ಹಾಸು
ಕೀಲುಚ್ಚಿ ತೋರಿ ಬಿಡಲು ||
ಶಾಲೆಗಳ ಕಚ್ಚುತೆ ಸೃಗಾಲಗಳ ಚುಚ್ಚಿಕ್ಕಿ |
ಶೂಲಿಗಳ ಕೊಲ್ಲಿದವು ವ್ಯಾಳಗಳ ಮೇಲ್ವಾಯ್ದು |
ಸೀಳೆ ಸಿಂಹಗಳ ಶಾರ್ದೂಲದಸುಮುಕ್ಕಿದವು
ಪೇಳಲೇನದ್ಭುತವನು ||

೩೯

ತೊಡುಕೋಲು ಪುಲಿಗೋಣು ಕಡಿಬೇಗಕಾಡಕಿಟಿ ।
ಗಿಡುಯೀಟಿ ನುಡಿ ತೋಹು ಬಿಡುತೋಹಿನಾಮೃಗವು ।
ಸುಡುಮೆಳಿಯು ಮಹಿಷ ಪದವಿಡಿದೆಳೆಯೋಗಡನೆ
ನೀಂ ಬಡಿ ಬಡ್ಡಿಯೊ ಮೊಲನರಿಗಳು ॥
ಬಿಡದಿರಾಗಜ ಖಡ್ಗಿ ಖಡುಗದಿಂ ಕತ್ತರಿಸು ।
ಪಿಡಿ ಪಿಡಿಯೊ ನೀಂ ಜವದಿ ಜಡಿ ಜಟಲ ಹಿಂದಕ್ಕೆ ।
ಸಡವವಗೆ ಕಡುಪಾಪವಡಿ ಮುಂದಕಿಡುಯೆಂಬ
ನುಡಿದುಂಬೆ ಗಿಡಗಿಡದೊಳು ॥

೪೦

ದುರುಳ ವೇದಾಂತಿಗಳ ತೆರೆದಿಂದ ಶೀಲವಂ ।
ಮುರಿದು ಶಾಲೆಯ ಕುಟ್ಟಿ ಕಿರಿಕೂಲಿಯವಳಂತೆ ।
ಹರಿಯ ನೆರೆ ಶೀಳಿ ವರಶರಭನಂದದಿ ಮತ್ತೆಯರಳಿ
ಯಂ ಪಿಡಿದು ಮಾರಾ ॥
ಹರನಂತೆ ತೆಗೆದು ಶಿಖಿಗರಿಪುರಂದರನಂತೆ ।
ತರಿದು ಮಹಿಷನ ಭೂಮಿಧರವರಾತ್ಮಜೆಯಂತೆ ।
ಚರಿಸಿದರು ಮೃಗಯದಾತುರ ಚಿತ್ತ ಬಿಯದರಾ
ಗಿರಿದುರ್ಗವನಗಳೊಳಗೆ ॥

೪೧

ಅನಿತರೊಳಗೊಂದು ಗಜಹನನ ವನಚರರ ನಿಡು ।
ಧನಿ ಕೇಳಿ ಪಾರುತತಿ ಕುನಿಸಿಸಿಂ ಬರೆಕಂಡು ।
ಮಿನುಗೆ ಮುಗುಳ್ನಗೆಯೆನುತರುಣ ಪಾಲಿಪಿಡಿದು
ಮೇದಿನಿಯೊಳಪ್ಪಳಿಸುತದರಾ ॥
ಹನನಕ್ಕದೊಂದು ಕರ ವನಜಮೇಲೆಥ್ಯಾಯ್ಕು ।
ವನಿತರೊಳು ನೆನಿಸಿ ತನ್ನಿನಿಯಳಸಿ ನಡುರೀತೆ ।
ಕನಿಕರವು ಗೈದು ಜೀವನದಿಂದ ಬಿಟ್ಟನೆನಲೆನಿತು
ಶೌರ್ಯಮೋಮಾರನಾ ॥

೪೨

ಬೇಡ ಮತ್ತೊರ್ವರತಿಗೂಡುತಿಹ ಚಿಗುರಿಗಳ ।
ನೋಡಿ ಬಿಲ್ಲಿನೊಳಂಬು ಪೊಡೆಸಿಯೆ ಗುರಿತಪ್ಪ ।
ತೋಡಿದರೆ ಬರುವವನ ಜೇಡತಿಗೆ ತಾಗಲಸು
ನೀಡಿದಳು ರವಿತನಯಗೆ ॥
ಮೂಢನದು ಗಂಡು ಹೊರಳಾಡಿದನು ಹಾಯೆಂದು ।
ನಾಡೆ ಸಜ್ಜನರಿಂಗೆ ಮಾಡಿದಪಕಾರ ಕೈ ।
ಗೂಡುವುದು ತಮಗೆಂಬ ನಾಡು ನುಡಿದಿಟ ದಿಟಕೀ
ಕೇಡಾದುದುದೇಂ ಚೋದ್ಯವೊ ॥

೪೩

ಅಲ್ಲೊಂದು ತಾಣದೊಳು ಭಿಲ್ಲ ಮುನಿಸಿಂ ಪೋದ ।
ನಲ್ಲಳಂ ಪುಡುಕುತಿರೆ ಭಲ್ಲೂಕಮೊಂದು ಮೆಳೆ ।
ಯಲ್ಲುಸುರು ಬಿಡುತಿರಲು ಭಿಲ್ಲಣಿಲ್ಲಿಹಳೆಂದು
ಮೆಲ್ಲನೊಳು ಪೊಕ್ಕು ಬಾಚಿ
ಯೊಲ್ಲಭಿಯೆಯೆಂದಪ್ಪಿ ಕೊಳ್ಳಲದು ಖತಿಯಿಂದ ।
ಕೊಲ್ಲುತಿರೆ ಬೆರಗಾಗಿಯುಳ್ಳಾಡಿದನು ಛಿಕ್ಕೆ ।
ಯಿಲ್ಲದರುಶನಿ ಕರೆದುಕೊಳ್ಳೆಂಬ ನಾಣ್ನುಡಿಯು
ಸುಳ್ಳಾದುದಲ್ಲೆಂದಿಗೆ ॥

೪೪

ಹರಿಯೊಂದರೊಳಗೊಂದು ಹರಿಮಸ್ತಕದಿ ಕುಳಿತು ।
ಹರಿಸತಿಯ ಪೋಲ್ವ ಮಣಿಹೊರಗೆ ಸೂಸುವೆನೆಂಬ ।
ಹರಿಯಹರಿ ಕಂಡು ಹರಿಹರಿ ತನ್ನ ಹರಿ ನಡಿಸಿ
ಹರಿಯಂತೆ ಹರುಷದಿಂದಾ ॥
ಹರಿಮಾಳ್ಕೆಯಿಂ ಮೇಲೆ ಹರಿಶದರ ಕಂಠ ಸಂ ।
ಹರಿಸಿ ಹರಿಯಿಂದದನು ಹರಿನಗರಿಗಟ್ಟಲೆ ।
ಹರಿಪ್ರತಾಪನ ಶಬರ ಹರಿಯುರೆಲ ಹರಿಯಿಂದ
ಶರಭನೆಂದುರೆ ಪೊಗಳಲು ॥

೪೫

ವನಚರರು ತೀರ್ಚುತಾವನ ಬೇಂಟೆಯಂದಿನ ಭು ।
ವನಚರಂ ಕೊಲ್ವುದಂ ನೆನೆದು ಬಲಿಗಾಣಗಳ ।
ನನುಗೊಳಿಸಿ ಬಂದು ಕಾನನ ಬೆಂಚಿ ಪೊಕ್ಕು ಕಾರಣ
ರಹಿತ ವೈರದಿಂದಾ ॥
ಅನಿಮಿಷ ಕಮಠ ಭೇಕ ಘನ ಜವದಿ ಕೊಲ್ಲಿ ।
ಮನದಣಿದು ನಲಿದಾಡೆ ಸಜ್ಜನ ಹನನ ತಮ್ಮ ಪೈ ।
ಶುನತನದಿ ಗೈವ ದುರ್ಜನರಿಂಗೆ ದಯುವೆಲ್ಲಿದೆನಲೆಸ
ದರಮು ನೋಡಲು ॥

೪೬

ವಿತತ ಕರಿ ಕಮಠ ಕಿಟಿ ಜತ ಭೇಕ ಭೇಕ ಸ ।
ನ್ನುತ ಮತ್ಸ್ಯಮೇಣ್ ಸಂತತಿಯಿಂದಲಭಿಸಿರ್ದ ।
ರತುನಗಳ ಪೊತ್ತು ಶಬರತುಳಬಳ ಬರುತಿಪ್ಪ ಪಥ
ದೊಳಗೆ ಗಜಕೆ ಮೃಗದಾ ॥
ಪತಿಸೀಳೆ ಚೆಲ್ಲುತಿಹ ಸಿತಮುತ್ತು ಕಂಡು ಕಕು ।
ಲತೆಯಿಂದ ಕೊಳಲು ತನುಪತನಾಗಲ್ಲ ತನಾದ ।
ಕ್ಷಿತಿಯೊಳಾರ್ಗಾದೊಡೇನತಿಯಾಸೆ ಗೈದವನ ಗತಿ
ಗೇಡಿಸದೇಂ ಬಿಡುವದೇ ॥





೬೭

ಇನಿತು ಬೇಂಟೆಯನಾಡಿ ದಣಿಯುತಾ ಸಮಯದೊಳು ।
ಜನಪವನ ಚರರಿಗಪ್ಪಣೆ ಕೊಡಲು ತ್ಯಜಿಸಿ ತತ್ ।
ಕ್ಷಣನಿಸ್ತುರಂಗದಾವನಧಿಯನೆ ಶೋಭಿಸೆ ಭುವನಜ
ನೆರಳಿ ನೊಳು ಕುಳಿತು ॥
ಅನಿತರೊಳು ಹಸಿವು ತೃಷೆ ಘನವಾಗೆ ತರಿಸುತೆ ಭು ।
ವನಬಿಚ್ಚಿ ಕಜ್ಜಾಯತಿನುವೆನೆ ನೋಡಿ ಜೀ ।
ವನ ಮಂತ್ರಿವರನ ಕರವನಜಗಳು ಮುಗಿದು ಭೋಜನ
ಗೈವಡೀಗಳೆನ್ನಾ ॥

೬೮

ಬಿಸಿಬುತ್ತಿಯಿದೆ ಯಿದನು ನಸುಸೇವಿಸಲ್ಕೆಂಥ ।
ಬಿಸಿಲಿಗಾದರು ತಾಳ್ವ ಕಸುಬರುವುದೆನೆ ಕೇಳುತ ತ ।
ಸವಸದಿ ಕೊಂಡು ಭುಂಜಿಸಲದು ಪರೀಕ್ಷಿಸಲು ವಿಷದ
ಕಜ್ಜಾಯ ತೆಗಿದು ॥
ತುಸುಕಾಗಿಗಿಡೆ ತಿಂದು ಅಸುಗಳಿಯಲದು ಕಂಡು ।
ವಸದೀಶ ಕೌತುಕದ ರಸಧಿಯೊಳು ಮುಳುಗಿ ಸಂತಸ ।
ದಿ ಸಜಿವನನು ಮನಮೊಸೆದು ಪೊಗಳುತ ಶಬರ
ವಿಸರದೊಡಗೂಡಿ ತಿರುಗೀ ॥

೬೯

ಪುರದತ್ತ ಬರುತಿರಲು ಖರಕರನು ಮುಂಬಪ್ಪ ।
ನರವರನ ದುರ್ಮರಣ ಪರಿಹರಿಪನೆಂತೊ ಸಚಿ ।
ವರ ಶ್ರೇಷ್ಠನಿದನು ಶಂಕರಗೆ ಕೇಳುವೆನೆಂದು
ಭರದಿ ಪೋಗುವ ಕಾಲದೀ ॥
ದುರಿತನದೆ ಪುಷ್ಪತತಿಯುರ ನೆರೆದ ಬಗೆ ನೆನಿಸು ।
ತಿರದಂದ ಶೌಚದಂಬರ ಬಿಟ್ಟು ಪಾರಿದನೊ ।
ಶರಧಿ ಸ್ನಾನಕ್ಕೆಂಬ ಪರಿಶೋಭಿವೆತ್ತಸ್ತಗಿರಿಯೊಳಗೆ
ಮುಳುಗಿ ಪೋದಂ ॥

೭೦

ಖಗನಿಕರ ಓಡೋಡಿ ನಗಗೂಡುಗಳು ಗೂಡಿ ।
ಭುಗಿಲೆಂದವೆದೆ ಕೋಕನಗಲಿಕೆಯ ಘನಶೋಕ ।
ನಗುತಿರುವ ಕುಮುದಿನಿಯು ಬಗೆ ಕಂಡು ಕಮಲಿ
ನಿಯು ಮೊಗ ಮುಚ್ಚಿಕೊಂಡು ಮತ್ತೆ ॥
ಮಿಗೆ ಸೌಖ್ಯ ತಮಗೆಂದು ನೆಗೆಯು ಕೌಶಿಕ ವಂದು ।
ಅಗಲಿದರೆ ಸಿರಿ ಪಡಿಯು ಬಿಗಿಯುದೆಂಬುವ ನುಡಿಯು ।
ಜಗಕೆ ಕಾಣಿಸುತೆ ಭ್ರಮರಿಗಳಾಗ ತೆಜಿಸಿ
ಕಮಲಿನಿ ಸೇರಿದವು ಕುಮುದವಂ ॥

೭೧

ಇನನಗಲಿ ಪಾತಾಳವನಿತೆಯಂ ಬೆರೆದ ನಿಂ ।
ದೆನಗಾರು ಗತಿಯೆಂದು ನೆನಿಸಲಂಬರ ಸತಿಗೆ ।
ಜನಿತ ವಿರಹಾಗ್ನಿ ಪೊಗೆ ಘನತಮಂ ಕಿಡಿಗಳೆನೆ
ಮಿನುಗುತಿಹ ತಾರೆಗಳನು ॥
ತನ ತನಗೆ ತೋರಿದವು ಗುಣಶೇಖರಗೆ ಮಂದ ।
ತನ ಮುಂದೆ ಬರುತಿಪ್ಪುದಿನಿತೆಂದು ನಿಶಿಯೆಸಿಯೆ ।
ಲನಿತರೊಳು ಕೈ ಸೊಡರ ನನುಗೊಸುತಲಗಣಿತ
ಜನರು ಜನಪಾಲ ಮುದದಿ ॥

೭೨

ಬೆಳಕಿನೊಳು ಬಂದು ನೃಪತಿಲಕ ಪುರಜನರು ಮಂ ।
ಗಳ ಧ್ವನಿಯನಾಲಿಸುತ ಪೊಳಲವಂ ಪೊಕ್ಕರಸು ।
ನಿಳಯದ್ವಾರದಿ ಕುದುರೆಯಿಳಿದಪ್ಪಣೆಯನಿತ್ತು
ದಳಶಬರ ಸಹಿತೆಲ್ಲರಂ ॥
ಕಳುಹಲ್ಕೆ ಮಂತ್ರಿ ಕುಲತಿಲಕ ಮನಿಗ್ಹೋಗದಲೆ ।
ತಳೆದು ಚರರೂಪಾರ್ಗ ತಿಳಿಯದರಸನ ಬೆರಿಸು ।
ತೊಳಪೊಕ್ಕು ಶೈನಗೃಹದೊಳಗೆ ಮೈಗರಿದು ಕರ
ತೊಳದೊಳಗೆ ಖಡ್ಗವಾಂತು ॥

೭೩

ಭೂಪತಿಯು ತಾನು ಸಂಧ್ಯೋಪಾಸನೆಯು ಮುಗಿಸು ।
ತೋಪ ಹಾರ್‍ಗೊಂಡು ಸುಖಕೂಪಾರ ಸತಿಯೊಳಿನಿ ।
ಚಾಪರತಿ ಸೌಖ್ಯಗೊಂಬಾಪೇಕ್ಷದಿಂ ಜಾತರೂಪ
ಮಂಚದಿ ಸೇರಲು ॥
ಆ ಪೊಳ್ತು ಸೌಂದರ್ಯರೂಪೆ ಸೌಂದರದೇವಿ ।
ಕೂಪರನ ಕೂಡಿ ಶಿವಚಾಪ ಕುಚ ಕಂಚುಕ ಹಿ ।
ತಾಪೆರೆಯುವೆಗೆದಂತೆ ಬಾಹುವಿಂ ಕಳೆದು ಸಲ್ಲಾಪ
ವಂಗೈದು ಮತ್ತೆ ॥

೭೪

ಮುದ್ದಿಟ್ಟು ಮುಂಗುರುಳ ತಿದ್ದುತಲಿ ಪ್ರೇಮಾಭಿ ।
ವೃದ್ಧಿಯಿಂ ಸಲೆತೆಕ್ಕಿಬಿದ್ದು ಕುಚವದೆಗೊತ್ತ ।
ಲೆದ್ದ ರೋಮಾಂಚ ಮನವದ್ಧಿದ್ದುರುಕ್ಷಾಂಬುಧಿ
ಯೊಳೆದ್ದ ಚಿತ್ತದ ಬಯಕೆಯಂ ॥
ಕದ್ದಿಡದೆ ಅವಯವದಿ ಸಿದ್ಧಗೈದುರೆ ಮಾರ ।
ಯುದ್ಧವಂ ಗೈಯ್ಯೆ ಸನ್ನದ್ಧಾಗಿ ಸ್ಮರವೀರ ।
ಬದ್ಧಕಂಕಣರು ರತಿಬುದ್ಧಿ ಚಾತುರ್ಯದಿಂ
ಗೆದ್ದರೊಬ್ಬರಿಗೊಬ್ಬರು ॥

೫೫

ಸರಸ ಸಲ್ಲಾಪದಿಂ ಸ್ಮರಕೇಳಿಗೈದು ಮೈಮರೆ ।
ದೊರಗಿ ನಿದ್ರೆಯೊಳಗಿರುತಿರಲು ಕರಿಪಾವು ।
ಸರಪಳಿಯು ಪಿಡಿದು ಬರುತಿರುವದನು ಕಾಣು
ತೆಚ್ಚರದೊಳಿರುವಾಮಾತ್ಯನು ॥
ಕರವಾಳದಿಂದೆ ಕತ್ತರಿಸೆ ತುಂಡೆರಡಾಗಿ ಧರೆ ।
ಗುರುಳುವಂದು ವಿಷ ಸುರಿಯೆ ಕುಚ ಚೂಚಕಿದಿ ।
ಮರ ಮರನೆ ಮರುಗಿ ಶಂಕರನೆ ಗತಿಯೇನೆಂದು
ಕರಗಿ ಕಾತರಗೊಳ್ಳುತೆ ॥

೫೬

ತೆಗೆಯುತಿರೆ ವಿಷವ ನಾಲಿಗೆಯಿಂದ ಕಣ್ಮುಚ್ಚಿ ।
ಮುಗುಧೆಯಚ್ಚತ್ತು ತವೆಭುಗಿಲೆಂಬ ಕೋಪದಿಂ ।
ಪಗೆಯ ಕೈಗೂಡಿತೀಗಿಗೆ ಭಾಪು ಭಾಪೆಂದು
ಜಗದೀಶನಂನೆಬ್ಬಿಸಿ ॥
ಮಿಗೆದುರುಳ ಬಂದು ಕುಚಕುಗುರಿತ್ತು ಚುಂಬಿಸಿ ।
ಮೊಗದೊಳೆನೆ ಕಿಡಿಸೂಸಿ ದೃಗುವಿಂದ ಪಲ್ದಿನ್ನು ।
ತೊಗೆಮಿಗೆಯ ಚರರಿಂದ ಬಿಗಿಸಿ ರಟ್ಟೆಗಳು
ಪೊರದೆಗಿಸಿ ಕಂಭಕೆ ಕಟ್ಟಿಸಿ ॥

೫೭

ಛೀ ನೀಚ ಪಾಪಾತ್ಮ ನೀನೆನಿಸಿತು ಗೈದಿ ಪತಿ ।
ಮಾನಿನಿಗೆ ಮನಸು ಸಲೆಧೇನು ಮುಖವ್ಯಾಪ್ರನೆಂ ।
ದಾನರಿಯದುದಕಿಂಥ ಮಾನಾಪಹಾನಿಯಂ ತಾನಾ
ಯಿತಕಟ ನಿನ್ನ ॥
ಪ್ರಾಣವಂಗೊಂಡೆನ್ನ ಮಾನ ಮರಳಿ ಸಲೆ ಮ ।
ತ್ತೇನು ಗೈಯಲಿ ಪೇಳು ನೀ ನೀತಿಯರಿದಂಥ ।
ಜಾಣ ಗಡ ಗಡನೆನಲು ಮೌನದಿಂ ಮಂತ್ರಿ ಶಿವ
ಧ್ಯಾನ ಪರನಾಗಿರ್ದನು ॥

೫೮

ಆ ಸಮಯದೊಳು ನೃಪನ ರೋಷವಂ ಕಂಡು ಪದ ।
ದಾಸನಂ ನೈಯ್ದು ಕೈಲಾಸದೊಳಗಿರಿಸಲ್ಕೆ ।
ತೋಷದಿಂ ಬರ್ಪ ಹರಿಕೇಶ ಜಟಿ ಕೆಂಪೆನಲು
ಭಾಷಿಸಿತು ಸಂಧ್ಯಾರುಣಂ ॥
ದೋಷ ಧೃತರಾಜನಂ ಶಾಸನೆಸಗಲ್ಕೆ ಗಿರಿ ।
ಜೇಶ ಕಣ್ದೆರೆದು ಕಿಡಿ ಸೂಸಿದನೊ ಯನಲು ಜಗ ।
ದೀಶ ಬಲನಯನಾದ ಪೂಷಕರ ಸಹಿತುದಿಸಿದಾ
ಸುರಪ ದಿಗ್ನಗದೊಳು ॥

೫೯

ಭಾಸುನುದಿಮದೊಳೆದ್ದು ಭೂನಾಥ ಕರೆಸಿ ದಯ ।
ಹೀನ ಮಾಶಾಳರಂ ಏನೆಣಿಸದಿಂದಿವನ ।
ಪ್ರಾಣವಂ ಗೊಳ್ಳೆಂಬುವಾಣತಿಯು ಮೀರದಲೆ
ಮೌನದಿಂದಿರುತಿರ್ದರು ॥
ಜಾಣರಾಮಾತ್ಯರಾಸ್ಥಾನಪಂಡಿತರೆಲ್ಲ ।
ಕೇಣಬೇಡರಸ ಪ್ರವೀಣನನೇ ನಿವನಿಂಥ ।
ಹೀನಕೃತಿ ಗೈಯಲ್ಕೆ ಗೋಣಮಣಿವೆವು ಜೀವ
ದಾನವಂ ಕೊಡುಯಂದರು ॥

೬೦

ಹೇಳಲೇಂ ಕಿವಿಯಿಂದ ಕೇಳುವದು ಬಳಿವಿಡಿದು ।
ಕೇಳಿದುದ ನಯನದಿಂದಾಲೋಕಿಪುದು ಮತ್ತೆ ।
ಯಾಲೋಕಿಸಿರ್ಪುದುದೇ ಯಾಲೋಚಿಸುವದು
ಭೂಪಾಲ ಜನ ಜನಿತೆ ನೀತೆ ॥
ಶೀಲಮಿದು ಮಿನಿತನುಕೂಲಾದ ಸಂಗತಿಗೆ ।
ಕಾಲಾಂತರರಿತು ತಲೆ ಬೀಳಿಸುವದುಳಿಸುವದು ।
ಶಾಲಮತಿ ಸ್ವಾಧಿನಂ ಕೇಳೆಂದು ಪೇಳಿದರು
ಕಾಲಗೆರಗುತಲಖಿಳರು ॥

೬೧

ಶಂಕೆಯೇನಿದರೊಳಗೆ ಮಂಕನೇಂ ನಾನು ಕೈ ।
ಕಂಕಣಂ ನೆರೆಕಾಣಲುಂ ಕನ್ನಡಿಯದೇಕೆ ।
ಪಂಕಜಾಪ್ತತೆ ಕೋಟ ಸಂಖ್ಯದೀವಿಗೆ ತೋರ್ಪ
ಬಿಂಕ್ಯಾತಕ್ಕೆ ತಿಳಿವಡೆ ॥
ಯೇಂ ಕೆಲಸ ಬೆಣ್ಣೆಯೊಳಗೌಂಕಿ ನೋಡುವದು ತನು।
ಸೋಂಕಿ ನೋಡುವುದ್ಯಾಕೆ ಬೆಂಕಿಯ ಪರೀಕ್ಷಕ್ಕೆ ।
ಅಂಕಿತದಕಳ್ಳಜೀವಂಕೊಳ್ಳನದರಿಂದ ನಾಂ ಕಡಿಪೆ
ನಿವನ ತಲೆಯಾ ॥

೬೨

ಸಣ್ಣನಡುವದನವಂ ಹುಣ್ಣಿವಿಯ ಶಶಿಯಂತೆ ।
ತಿಣ್ಣ ಮೊಲೆ ಜಂಬೀರ ಪಣ್ಣಿನಂತೆಸೆವ ಮೈ ।
ಬಣ್ಣ ತೆಳು ನಸರೆರಳಿಗಣ್ಣೆನಂಗನೆಯರಂತನ್ನಿಂದ
ಕಂಡಕ್ಷಣವೆ ॥
ಕಣ್ಣು ಮನ ತನು ಸೋಂಕದಣ್ಣರೊಳರೇಂ ಪೇಳು ।
ಬೆಣ್ಣೆ ಬೆಂಕಿಯೊಳಿಡಲು ತಣ್ಣಗಿರುವದೆ ಜಗದಿ ।
ಹೆಣ್ಣಿಂಗೆ ಸೋತು ಮಸಿಮಣ್ಣಾಗದವರಾರು
ಯಿನ್ನೆಂತು ತಡೆವೆನೀಗ ॥

೬೩

ಧಾತ್ರಿಪತಿ ಕೇಳು ಶತಪತ್ರನಯನೆಯರ್ಕೈದಿ ।
ಮಿತ್ರರಂ ಕ್ಷಣದೊಳಗೆ ಮಿತ್ರರಂ ಮಾಡುವರು ।
ಪುತ್ರಸಲೆ ಬಾಂಧವ ಕಳತ್ರರಂದುಹಿತೆ ದೌಹಿತ್ರರಂ
ಮರಸಿ ಮತ್ತೆ ॥
ಪಾತ್ರಜನ ನಿಮಿಷದೊಳ ಪಾತ್ರರೆಂದೆನಿಸಿ ಮೇಣ್ ।
ಗೋತ್ರವಧೆಗೈಸಿ ವೈಚಿತ್ರದಿಂ ಕುಣಿಸಿ ರವಿ ।
ಪುತ್ರ ಪಟ್ಟಣದ ಘನಯಾತ್ರೆ ಮಾಡಿಸುವಡ
ನ್ಯತ್ರಿಲ್ಲನಬಲೆಬಿಟ್ಟು ॥

೬೪

ಕುಟಿಲ ಕುಂತಳದೊಳಗೆ ಕಠಿಣ ಕುಚದೊಳವಿಷ ।
ತುಟಿಯೊಳಗೆ ಕುಲನಾಶ ಕಟಿಯೊಳಗೆ ನುಡಿಯೊಳಗೆ ।
ಸಟೆಯು ಚಂಚಲನಯನ ಕಟದೊಳಗೆ ಕೊಂಕಂ
ಭೃಕುಟಿಯೊಳಗೆ ನೋಡಲೊಂದೇ ॥
ಹಟಮನಸಿನೊಳಗೆ ಸಂಘಟಮಾದ ನಾರಿಯರು ।
ದಿಟತನಕೆ ಮಾರಿಯರು ಶಟಿದು ಪುರುಷನಿಗೆ ದು।
ರ್ಘಟನರಕಕಿಕ್ಕುವರ ಚಟುಲತನ ನೆರೆನಂಬಿ
ನಟಿಸದಿರು ಮನಬಂದೊಲು ॥

೬೫

ನಳಿನಾಕ್ಷಿಯರು ತಾಳಿಗಳನೆಣಿಸಿ ಗಾಣದೊಳು ।
ಮಳಲೆಣ್ಣೆ ತೆಗೆದು ಮೃಗಜಲಕುಡಿಸಿ ಪುರುಷಗೆ ಮ ।
ರುಳಮಾಡಿ ಪಿಂಬಪ್ಪ ನೆಳಲೆನಿಸಿ ನರಕದೊಳು ಮು
ಳುಗಿಸರು ಜನ್ಮಾವಧಿ ॥
ಹಲವು ಮಾತೇಂ ಚಿತ್ರದೊಳಗೆ ಲೇಖಿಸಿದ ಹೆಂ ।
ಗಳಿಯರಿಗೆ ನಂಬಿದವಗಳವು ತಪ್ಪದು ರಾಜ ।
ತಿಲಕ ದಯದಿಂ ಜೀವನುಳಿಸಿ ಸಚಿವನ ಸೈಪು
ನುಳಿಸಿ ಕೊಂಬುವದೆಂದರು ॥

೬೬

ರಾಯ ನೀನರಿಯದುದೆ ದೇವೋನಂ ಜಾನಾತಿ ।
ಸ್ತ್ರೀಯಶ್ಚರಿತ್ರವೆಂಬೀ ವಾಕ್ಯವದರಿಂದ ।
ತೋಯಜಾನನೆಯರತಿ ಮಾಯಾವಿಗಳು
ಮತ್ತೆ ಸಾವಧಾನದಿ ಕೇಳು ನೀಂ ॥
ಕಾಯಲ್ಕೆ ಕೊಲ್ಲಲಿಕಪಾಯಕ್ಕೆ ಆಯಕ್ಕು ।
ಪಾಯವಂಬಲ್ಲ ದುರ್ಜಾಯ ನುಡಿಗೇಳುತಂ ।
ನ್ಯಾಯವಂ ಮಾಡುವಘ ಜೀವಿ ಭವ ಭವದೊಳಗೆ
ನಾಯಕದ ನರಕಕಿಳಿವಾ ॥

೬೭

ಕೇಳಿ ಕಿಡಿ ಕಿಡಿಯಾಗಿ ಪೇಳುವದು ಸಾಕಿಂಥ ।
ಹಾಳು ನೀತಿವನ ತಲೆಬೀಳು ಹೊಡಿವನಕ ಮನ ।
ತಾಳಲಾರದು ನಿಮ್ಮ ಆಲಯಕೆ ನಡಿರೆನ್ನುತಾಲಿಯಿಂ
ಕಿಡಿಸೂಸುತೆ ॥
ಬಾಳು ಜಳಿಪಿಸುತೆ ಮಾಶಾಳರಂ ಕರೆದು ನಸು ।
ಜಾಲಮಾಡದೆಸ್ವೈಯ್ದು ಶೀಳವನ ಗಳಮೆಂಬು ।
ದಾಲಿಸುತೆ ಪ್ರಜೆರ ಜೀವಾಳ ಹಾ ಹಾ ಎಂದು
ಗೋಳಿಟ್ಟರಖಿಳ ಜನರು ॥

೬೮

ಕೊಲೆಗಾರರಂದು ಕೈಗಳ ಬಿಗಿದು ಶತಪ್ರಾಸಿ ।
ದಲರ ಮಾಲಿಯ ಕಂಠದೊಳಗಿಟ್ಟು ಸಿಂಧುರಂ ।
ತಳಿದು ಮುಖದೊಳಗೆ ಯಡಬಲಕಾಗಿ ವರ
ದರನೆ ಯಳದೊಯ್ಯುತಿರಲು ಕಂಡು ॥
ಪೊಳಲ ಜನರೆಲ್ಲ ಹಾ ನಳಿನಸಖತೇಜ ಹಾ ।
ಕುಲಜಾತಾ ಸಲೆಪೂತ ಬಲುಮಮತೆಯಿಂದೆಮ್ಮ ।
ಸಲಹಿದನೆ ನಿನ್ನಗಲಿ ಉಳಿವೆವೆಂತೊಂದೊರಳಿ
ನೆಲದೊಳಗೆ ರೋದಿಸಿದರು ॥

೬೯

ಹಾ ಮಂತ್ರಿ ಸುಗುಣಮಣಿಧಾಮ ಸಜ್ಜನಪ್ರೇಮ ।
ಕಾಮುಸನ್ನಿಭರೂಪ ಶಾಂತ ಸಲೆನಿಭ್ರಾಂತ ।
ಸೋಮಶೇಖರ ಭಕ್ತ ಭೂಮಿಸಮಶಮಯುಕ್ತ
ಸಾಮಾದ್ಯುಪಾಯವೆತ್ತಾ ॥
ತಾಮರಸ ಸಖತೇಜ ಜೀವಕರ ಸುರಭೂಜ ।
ಭೀಮಪರ ಬಲವಿಜಿತಭೀಮ ಸಲೆ ವಿದ್ವನಲ ।
ಲಾಮ ನಿಸ್ಸೀಮೆಮ್ಮ ನೀ ಮರೆದು ಪೋದರಿಂ
ನಾವುಳಿವದೇತಕಕಟ ॥

೭೦

ತಂದೆ ನೀನಿರ್ಸಿಯಮಗೊಂದಾವ ಭೀತಿ ಯಿ ।
ಲ್ಲೆಂದಿರ್ದೆವೆಮ್ಮ ನೀನಿಂದಗಲಿ ಪೋದರೆ ವ ।
ಸುಂಧರಿಯೊಳೆಮಗಾರು ಬಂಧುಜನ ಲೇಸು
ಸಾವೆಂದು ನಿಶ್ಚಯಿಸಿಕೊಂಡು ॥
ಮುಂದೆ ನೀನಡಿ ನಿನ್ನ ಹಿಂದಿಂದೆ ಬರುವೆವ್ವೆ ।
ಇಂದು ಸಮಶಾಂತ ಹಾಯೆಂದು ಹಂಬಲಿಸಿ ಮನ ।
ಬಂದಪರಿ ಘನಶೋಕವಂವಾಳ್ದು ಖತಿಯಲ
ರೆವಿಂವ ಜನಬೈಯ್ದು ಸುಯ್ದು ॥



೭೧

ಅಣ್ಣ ಜೀವನ್ಮಂತ್ರಿ ಪುಣ್ಯ ನೀ ಗೈದುದಂ ।
ಮಣ್ಣುಗೂಡುತ್ತೆ ಹಾಯಿನ್ನರು ಗತಿಯು ಮು ।
ಕ್ಕಣ್ಣನೆ ಮುನಿದನೆಂದೆನ್ನುತಲಿ ಶೋಕದಿಂ
ಬಾಯೊಳು ಹಾಕುತೆ ॥
ಕಣ್ಣೀರು ಸುರಿಸಲದರಿಂ ನೆನೆಯ ಮೈ ವಸ್ತ್ರ ।
ಚನ್ನಾಗಿ ನೆನಿವ ಶಿವವರ್ಣ ಪಂಚಾಕ್ಷರಿಯು ।
ನಿನ್ನನುಳಿಸದೆ ಸುಗುಣರನ್ನ ಶಿವ ಶಿವ ಚೋದ್ಯ
ವೆನ್ನುತತಿ ಗೋಳಿಟ್ಟರು ॥

೭೨

ಈ ಕೆಲಸಕಿನಿತೊಂದು ಶೋಕಮೇತಕೆ ಬಿಡಿ ಪಿ ।
ನಾಕಿಯಂ ಭಜಿಸಿ ಶಿವಲೋಕ ಪಡಿವೆ ನಾ ।
ನೀ ಕಳ ಕಳಂ ಬೇಡ ಸಾಕು ಪ್ರಜೆಗಳಿರೆ ನಿಮ್ಮೀ
ಕರುಣಮೊಂದಿರ್ದೊಡೆ ॥
ವ್ಯಾಕುಲಂ ಬಿಟ್ಟು ಪಂಚಾಕ್ಷರಿಯ ಜಪಿಸಿ ಮಹಿ ।
ಮಾರಕನ ಪದಧ್ಯಾನಮೇಕನಿಷ್ಟಲಿ ಗೈಯ ।
ದ್ಯಾಕೆ ಯೋಚನೆಯು ತೆಗಿ ಜಾತಸ್ಯ ಮರಣಂ
ಧ್ರುವಂ ಯೆಂಬುದೇನರಿಯಿರೆ ॥

೭೩

ಮಂಗಳಾತ್ಮನೆ ನಿನ್ನ ಕರಿಗಳಿಂ ಕಾಂಬದಿಂ ।
ದಿಂಗೆ ಬೈಲಾಮದೇ ನಿಂಗಡಲ ಪೋಲ್ವ ವಚ ।
ನಂಗಳಂ ಕೇಳ್ವ ಕರ್ಣಂಗಳಿಗೆ ಗತಿಯೇನು ಅಂಗಜಾಂಗ
ವಿರೂಪನೆ ॥
ತುಂಗಗುಣ ಪೊಗಳ್ವರಸನಂ ಗೈವದೇನಿನ್ನು ।
ಹ್ಯಾಂಗೆ ನಿನ್ನಗಲಿ ಜೀವಂಗಳಂ ಪಿಡಿವೆ ವ್ಹಾಹ ।
ಅಂಗವೇನೆಂದು ನಯನಂಗಳಿಂ ನೀರ್ಗರೆದು
ಕಂಗೆಟ್ಟು ಕಳವಳಿಸುತೆ ॥

೭೪

ಕಸವಿಸಿಲೆ ಜನರು ರೋದಿಸುತವನ ಬಳಿವಿಡಿದು ।
ಮಸಣ ಭೂಮಿಗೆ ಬರಲು ಆಸವಸದಿ ಚಾಂಡಾಲ ।
ರುಸುರ್ಗೈದೆ ಶಂಕರನ ಪೆಸರು ಪಂಚಾಕ್ಷರೆಂದೊಸೆದು
ಪೇಳಲು ಕೇಳುತೆ ॥
ಶಶಿಧರನುತಿಯುಚ್ಚರಿಸಿದರಿಂದವುಕಾರಿ ।
ಪುಸಿಯಲ್ಲ ನಿಮಗೆಂದು ಹಸಿತಮುಖದಿಂದಂದು ।
ಬಸವಾದಿಗಣರ ಸಂತಸದಿ ಹೃದಯದೊಳು
ನೆನಪಿಸಿಕೊಂಡು ದೃಢಚಿತ್ತದಿ ॥

೭೫

ಆಸನಂ ಬಲಿದು ದುರ್ವಾಸ ನಳಿದಂದು ಮನ ।
ಹೇಸಿ ಸಂಸಾರಕೆ ದುರಾಸೆಯಂ ತ್ಯಜಿಸಿ ಘನ ।
ರೋಷದಿಂದಖಿಳೇಂದ್ರಿ ನಾಶನಂ ಗೈದಿಟ್ಟು ನಾಶಿಕಾಗ್ರದಿ
ದಿಟ್ಟಿಯಂ ॥
ಸೂಸುತಿಹ ರವಿಶಶಿಗಳಾಸದಾಗತಿ ನಿಲಿಸಿ ।
ಸೂಷುಮ್ನಬಲಿಸಿ ದಶಘೋಷಂ ಕೇಳಿ ಸಂ ।
ಸಂತೋಷದಿಂದೀಶ ಪಂಚಾಕ್ಷರಿ ವಿಶೇಷಮನು
ಧ್ಯಾಸಪರನಾಗಿರ್ದನು ॥

೭೬

ಮಾಸಾಳರಾಗ ಸಂತೋಷ ವರ್ಜಿತರಾಗಿ ।
ಹಾ ಶಿವನೆ ನಾವೆನಿತು ದೋಷ ಜೀವಿಗಳೆಂದು ।
ಬೀಸಿಕರವಾಳ ಮಂತ್ರೀಶ ಗಳ ಕತ್ತರಿಸುವಾಸಮಯ
ದೊಳ್ಮೊಲ್ಲಿಯಾ ॥
ಪೂಸರಗಳಾಗಿ ಗಳ ಭೂಷಿಸಲು ಭೇರಿರವ ।
ಘೋಷಿಸಲು ನಾಕಜನ ಸೂಸಿದರು ಸುಮವೃಷ್ಟಿ ।
ತೋಷದಿಂ ಕುಳಿತು ಆಕಾಶಯಾನದೊಳು ಜಯ
ಘೋಷವಾಯಿತು ನಿಮಿಷದಿ ॥

೭೭

ಹರಭೂಮಿಯನು ಸ್ವಯಂವರ ಮಂಟಪಂ ಭಯಂ ।
ಕರಶೋಕರವ ಸಾರತರ ಜಯಧ್ವಾನ ಮೆನೆ ।
ಧರಿಸಿರ್ದ ಮೊಗದ ಸಿಂಧುರ ಕುಂಕುಮಾಗಲಿಕ ಪರ
ನಾರಿ ಕೊರಳಿಗಿಡುವಾ ॥
ಕರವಾಳ ಮೆರಡು ಸುಮುಸರ ಮಾಡಿ ಮೆಚ್ಚಿಗೆಯ ।
ವರನಗಳ ಕಿಟ್ಟಳೆನೆ ಪುರಹರನ ಭಕ್ತರಿಗೆ ।
ಅರಿಯಲಿಕ ಶುಭವೆಲ್ಲಿದರರೆಯೊಂದ್ಹೊಗಳಿದರು
ಪುರಜನರು ಪರಿತೋಷದಿ ॥

೭೮

ಬೆರಗಾಗಿ ಜನರೆಲ್ಲ ಹರಹರ ಉಘೇ ಚಾಂಗು ।
ಹರಚಾಂಗು ಭಳಿರೆಂದು ಕರಚಪ್ಪಳಿಯ ನಿಕ್ಕಿ ।
ಹರುಷದಿಂ ಕುಣಿದಾಡಿ ಚರರ್ಗೈದೆ ಪೋಗಿ ನರವರ
ಗರು ಪಲದು ಕೇಳಿ ಮೈ ॥
ಮರೆದು ಕೌತುಕದಿ ಮನಬೆರೆದು ಪರಿಜನಕೂಡಿ ।
ಭರದಿಂದೆ ಬಂದು ಶಂಕರ ಭಕ್ತತ್ರಾಹಿನಾಂ ।
ಮರುಳತನದಿಂ ಗೈದ ದುರುಳತನ ಕ್ಷಮಿಸೆಂದು
ಚರಣಕಾನತನಾಗುತೆ ॥

೬೯

ನಂಜುರುತಿ ನಾಂ ದುರಿತ ಭಂಜನನೆ ನೀನು ಗುಣ |
ಬಂಜಿಯಾಂ ಸುಗುಣಗಣ ಪುಂಜ ನೀಂ ನಿಬಿಡತಮ |
ನಾಂ ಜೋತಿ ನೀಂ ಹೇಡಿನಾಂ ಜಯಂ ನೀನು ಮದ
ಕುಂಜರಾಂ ಮಾವುತನು ನೀ ||
ಕಂಜಸಖ ನೀಂ ರಾತ್ರಿ ಸಂಚಾರಿ ನಾಂ ಮೊಲ್ಲಿ |
ಕುಂಜ ನೀಂ ನಾನು ಗುಲಗಂಜಿಲತೆಯಪರಾಧ |
ಕಂಜರಿಯದೆನ್ನ ನೀ ನಂಜಿಸದೆ ಸಲುಹೆನ್ನುತಂಜುಲಿಯು
ಮುಗಿದೆರಗುತೇ ||

೭೦

ತಾತಪೇಳ್ನೀ ನಿನ್ನೆರಾತುರಿಯೊಳೆಮ್ಮ ಮನೆ |
ಗೇತ ಕೈ ತಂದೆ ಸಂ ಪ್ರೀತಿಯಿಂ ನಿನ್ನತನು |
ಜಾತಗೆನೆ ಕೇಳಿ ಭೂನಾಥನಿಗೆ ತಿಳಿಸಿದನು ಭೂತ
ಕಾಲದ ಸುದ್ದಿಯಾ ||
ಆತನದು ಕೇಳಿ ಸಾದ್ಭೂತ ಮಾನಸನಾಗಿ |
ಸಾತಿಶಯದಿಂ ಪೊಗಲಾತತಕ್ಷಣದಿ ಶಿವ |
ದೂತಜನ ಶತಕೋಟಿ ಜ್ಯೋತಿಂಗೆ ಮಿಗಿಲೆಂಬುವಾ
ತೇರು ಸಹಿತಿಳಿದರು ||

೭೧

ಅಮರರುಘೆಯೆನುತಿರಲು ಹಿಮಶಿಖರಿಜಾತೆ ಮೈ |
ಗಮರೆ ದಶಭುಜ ಶೂಲ ಡಮುರಾದಿಯಿಂ ಮೆರೆಯೆ |
ಹಿಮಕರೋಪರಿಭಾಗ ಸುಮನಸಾಪಗೆ ತುಳ್ಕೆ ಸುಮನ
ಶರ ದೈತ್ಯ ಪುರವಂ ||
ಶಮನಾಂಗ ಭಸಿತ ಸಂಕ್ರಮನಾಂಗ ಪಂಚಮುಖಾ |
ಪ್ರಮಥಗಣರೆರಸಿ ವೃಷಗಮನ ಪ್ರತ್ಯೇಕ್ಷಾ ಗು |
ತಮರ್ದಪ್ಪಿ ನಿನ್ನಿಚ್ಛಿತವದೇನು ಬೇಡೆನಲು ನಮಿಸಿ
ಸಲೆ ಕೊಂಡಾಡಿದಂ ||

೭೨

ಬಾಲಶಶಿಮೌಳಿ ಜಯಕಾಲ ಕಾಲಾಂತ ಜಯ |
ಭಾಲಾಕ್ಷ ಜಯ ಗೌರಿ ಲೋಲಜಯ ಪನ್ನಂಗ |
ಮಾಲ ಜಯ ಜಯ ಚಾರುಶೀಲ ಜಯ ಕರುಣಾಲ
ವಾಲ ಜಯ ಜಯ ಶಂಕರಾ ||
ನೀಲಗಳ ನಿಖಿಳ ಜಗಪಾಲ ಜಯಕರಧೃತ ಕ |
ಪಾಲ ಜಯ ದೀನರ ದಯಾಳ ಜಯ ಶೂಲಿ ಜಯ |
ಪಾಲಿಸೈ ದೇವ ಜನ ಪಾಲ ಪಾಲಕನೆಂದು ಕಾಲಿ
ಗೆರಗಿದ ತೋಷದಿ ||

೭೩

ಕೊಟ್ಟಪೆನು ಮಗನೆ ನಿನ್ನಿಷ್ಟವೇಂ ಬೇಡೆನಲು |
ಪಟ್ಟಣದ ಜನರ ನಾಂ ಬಿಟ್ಟಿರುವನಲ್ಲದಯೆ |
ವಿಟ್ಟನರಸಹ ಬೆಳ್ಳಿ ಬೆಟ್ಟಕೊಯ್ಯನೆ ಕರುಣ ಪುಟ್ಟಿ
ಸಚಿವಗೆ ಪ್ರಮಥರಾ ||
ಪಟ್ಟವಂ ಗಟ್ಟು ತಂದಷ್ಟು ಜನ ಸುಮರಥದೊ |
ಳಿಟ್ಟು ಸುರ ಜನರು ಪೂವೃಷ್ಟಿ ಸೂಸಲಿಕಘೂಘ ||
ರಟ್ಟ ಕೊಂಡೊಯ್ದು ದೃಢವಿಟ್ಟು ಕೇಳ್ಕೆ ಶರಣ ಪಟ್ಟ
ದೊಡೆಯನೆ ತೋಷದಿ ||

೭೪

ಇದು ಮಂತ್ರ ಮಹಿಮೆ ಸಮ್ಮುದದಿ ಕೇಳ್ಕೆ ಶರಣ |
ಮಧುರಿಪುರದಧಿಪತಿಯು ಯದು ಕುಲೋತ್ತಮ ತನ್ನ |
ಸುದತಿಯಂ ಬಿಗಿದಪ್ಪಿ ಬೆದರಿ ತನು ತಪ್ತಾದ
ಹದನರಿತು ಗಾರ್ಗ್ಯ ಮುನಿಯಾ ||
ಪದಕೆರಗಿ ಶಿವಮಂತ್ರ ಪದೆದು ಪಡಿಯಲ್ಕವನ |
ಉದರದಿಂ ಜನ್ಮ ಜನ್ಮದ ದುರಿತ ಕಾಕಾಗಿ |
ವದನದಿಂದ್ಹೊರಗಾಗಿ ಬೆದ ಬೆದನೆ ಸುಡಲು ಗಣಪದ
ವಿಯಂ ಪಡಕೊಂಡನು ||

೭೫

ಮರಗುದರಿಗಸುತವಿತ್ತು ಮೆರೆವ ಸೊಡ್ಡಲಮಲ್ಲಿ |
ವರನೊಂದು ದಿನ ಶರಾಕ್ಷರಿ ನುಡಿದು ಪಂಥದೊಳು |
ಮರುಳದಿರುದಿರೆ ಹರಣ ಮರಣ ನಿಶ್ಚೈಯಿಸಿ
ಶಂಕನೊಳಗೆ ಬೆರೆದ ಮತ್ತೆ ||
ವರಮನುವ ಜಪ ಗೈಯ್ಯುತಿರುವಾಗವಾವ ದು |
ಚ್ಚರಿಸದಿಹ ನೇಮದೊಳಗಿರು ತೊಂದು ದಿನ ಮರೆದು |
ಪೆರತಾಡಿ ಹರಣಳಿದು ಹರಪುರದೊಳಾದ ಗಣವರ
ಮೊಕ್ಕಳದಮಾರನು ||

೭೬

ಖುಲ್ಲರಂ ಜೈಸುವೆಡೆಯಲ್ಲಿ ತಿರುಚಿಟ್ಟನೆಳೆ |
ಪುಲ್ಲಶಿವಮನು ಜಪಿಸಿ ಚಲ್ಲಲಿಕೆ ಗೂಳಿಯದ |
ನೊಲ್ಲದಿರುತಿರಲದನೆ ಕಲ್ಲುನಂದಿಗೆ ತಿನಿಸು ತೆಲ್ಲರಿನ್ನು
ತಿ ನೆತ್ರನು ||
ಬಲ್ಲಿದನು ಮುರುಘಕೊಳಲಲ್ಲಿ ಪಂಚಾಕ್ಷರಿಯ |
ನಲ್ಲಮೆನೆ ನುಡಿಸಿ ಶಿವೆಯೊಲ್ಲಭನೊಳೇಕಾದ |
ಸುಲ್ಲಾಸದಿಂ ನುಡಿದಗಿಲ್ಲಾವ ದುರಿತವಂ ಸಲ್ಲಲಿತ
ಶರಣ ಕೇಳಾ ||

೮೭

ಪೂತಸೊಡ್ಡಾಳನಘದೂತನಜಗಣ್ಣ ಮುನಿ ।
ನಾಥ ಸಾನಂದ ಮೆನುಜಾತ ಮನುಲಕ್ಷವಿಟ ।
ಶ್ವೇತ ಸುಕುಮಾರ ಸನ್ನೀತ ಬಂಕಯ್ಯ ಘನ
ಪಾತಕಿಯು ಸೌಮಿನಿಯಳು ॥
ಯೀತಗಳು ಶಿವಮಂತ್ರ ನೋತು ಜಪಿಸುತಲೊಲಿಸಿ ।
ಭೂತ ಪತಿಯನು ಪ್ರಮಥನಾಥರಾದರು ಶರಣ ।
ನೀ ತಿಳಿದು ಪಠಿಸಿದನು ಪ್ರೀತಿಯಿಂ ಭವ
ಮರಣ ಭೀತಿಯು ಕಳಿಯಂದನು ॥

೮೮

ವರಪುರದ ಶಿವಲಿಂಗ ಶರಣಬಸವನ ಚರಿತೆ ।
ಗುರುಬಸವಣಾರ್ಯ ಪದಸರಸಿರುಹ ಲೀನಮಧು ।
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ॥
ವಿರಚಿಸದನೋದಿಸುವ ಬರೆವಗೋದುವಗೆ ಪರ ।
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ ।
ದೊರೆಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ಶೃತಿಸಂಧಿನುತ ಬಂಧಿಯು ॥

ಸಂಧಿ ೭ ಕ್ಕೆ ಪದ ೪೮೦ ಕ್ಕಂ ಮಂಗಳಂ.



ಶ್ರೀ ಶರಣಬಸವೇಶ್ವರ ಪ್ರಸನ್ನ

# ಏಳನೆಯ ಸಂಧಿ

ಸೂಚನೆ॥ ಚರಣೋದಕದ ಸಹಿತ ಚರಪ್ರಸಾದದ ಮಹಿಮೆ।
ಗುರುವರನು ಪೇಳಲ್ಕೆ ಸ್ಥಿರಚಿತ್ತನಾಗುತಾ।
ಚರಿಸುತದರಂತೆ ಸುಂದರ ಶರಣನಿರ್ದನೈ ಪರಮಾನುರಾಗದಿಂದ॥

೧

ಶಿಖಿರಾಜತನುಜಾತ ಮುಖಕಮಲಭಾನು ಶತ।
ಮುಖ ವಿನುತಪಾದ ಗಜಮುಖಪ್ರೀತ ಜಾಂಬುನದ।
ಶಿಖರಿಧನುಶಾಂತ ಷಣ್ಮುಖವೀರತಾತ ಶಿವಶುಕ
ಮುಖಾರ್ಚಿತ ಪಾದಭೋ॥
ಮುಖನಾಶ ಧನದವರಸಖ ಸಾಮಲೋಲ ಕಾ।
ರ್ಮುಕವಿಷ್ಣು ವಿಜಿತ ಹರಮುಖಸೇವ್ಯ ಹಂಸೇಂದು।
ಶಿಖಿನಯನ ಶಿವಲಿಂಗ ಸುಖವಿತ್ತು ಪಾಲಿಸೈಯಖಿಳ
ಜಗಜನರ ನಿರುತಾ॥

೨

ಎರಗಿ ಸಾಷ್ಟಾಂಗ ಗುರುವರನೆ ಪೇಳನಗಷ್ಟ।
ವರಣದೊಳು ಗುರುಲಿಂಗ ಚರಭೂತಿ ರುದ್ರಾಕ್ಷಿ।
ವರಮಂತ್ರ ನೈಷ್ಠಾಪರರ ಮಹಿಮೆ ಪೇಳಿದೊಲು
ಚರಣೋದ ಮತ್ತೆ ಚರರಾ॥
ಉರುಪ್ರಸಾದದ ಮಹಿಮೆಯುರುಹುತಿಂದೆನ್ನನು।
ದ್ಧರಿಸೆಂದ ಶಿಷ್ಯನಂಕರದಿಂದ ಮೈದಡಹಿ।
ಶಿರನೆಗಹಿ ಮುಂದೆ ಕುಳ್ಳಿರಿಸಿ ಪೇಳ್ದೊಡಗಿದಂ
ಗುರುನಾಥ ವರದಾತನು॥

೩

ವರವಾರಣಾಸಿ ಪುಷ್ಕರ ನರ್ಮದಾ ಸಿಂಧು।
ಸರಸತಿ ಪ್ರಯಾಗ ಸುಂದರಗಂಗೆ ಗೌತುಮಿ ಬ।
ದರಿ ಕನ್ಯಸೇತು ಪರತರಯಮುನೆ ತುಂಗ ಶುಭೆ
ದುರಿತ ನಾಶಿನಿಯು ಸಪ್ತಾ॥
ಶರಧಿ ಶತಕೋಟಿಗಳಿರುತಿರುವ ಸತ್ವವಂ।
ಗುರುಲಿಂಗ ಜಂಗಮುದ ಚರಣೋದಕಕ್ಕಿರುವ।
ದರಿಯೆಂದು ಶರಣನಿಗೆ ಪರಿವಿಜಿತ ಕರಣನಿಗೆ
ಗುರು ತಿಳಿಸಿದನು ಕರುಣದಿ॥

೪

ಜ್ಞಾನನಿಧಿಗಂಜನಜ್ಞಾನ ಗಿರಿವಜ್ರ ಸು।
ಮ್ಮಾನಜಳನಿಧಿ ಚಂದ್ರಹೀನ ಭವತರು ಪರಶು
ಭಾನುಸುತ ಭಯಹರ ನಿಧಾನ ಭಕ್ತಿಗೆ ದುರಿತಕಾನನಕೆ
ದಾವಾನಳಂ॥
ಸ್ಥಾಣುಕಲಿಸುವ ಸಂಚು ಸ್ಥಾನವಂ ನಿರುತ ದುಂ।
ಮ್ಮಾನಮುದಕುಂಭಿ ಪಂಚಾನನಂ ರುಜೆ ಪಂಕ।
ಭಾನುಸೇವಿತರ ಸುರಧೇನು ಪಾದೋದಕಂ
ನೀನೊಲಿದು ಭಕ್ತಿಲೀಂಟು॥

೫

ಪೊಡಮಟ್ಟನುಜ್ಞೆಯಂ ಪಡಕೊಂಡು ಚರಚರಣ।
ಪಿಡಿದು ಕರುಣಾಮೃತಂ ಪಡೆದು ಸೇವಿಸಿ ಧರಿಸಿ।
ಮುಡಿಗೆ ನೇಂತ್ರಂಗಳಿಗೆ ತೊಡೆದುಗಿನ್ನಿಲವೆತ್ತಿ ಕುಡಿದು
ನಿರ್ದ್ರವ ಮಾಡುತೇ॥
ದೃಢವ್ರತವುಮಿದರಂತೆ ನಡಸಿ ಭವರುಜೆ ಮರಣ।
ಕಡಿದು ಘನಮುಕ್ತಿಯಂ ಪಡೆದ ಭಕ್ತಂಗಾರು।
ಪಡಿಯಾಗಲರಿಯರೀ ಪೊಡವಿಯೊಳು ರಾಜಿಸುವ
ಮೃಡನಾಗಿ ಕಡುತೋಷದೀ॥

೬

ಒಮ್ಮೆ ಜಂಗಮುದಪದ ನಿರ್ಮಲೋದಕವ ಸಲೆ।
ನೆಮ್ಮಿ ಸೇವಿಸಲು ದುಷ್ಕರ್ಮವಂನಳಿದು ಘನ।
ಬೊಮ್ಮಹತ್ಯಾದಿಗಳು ನಿರ್ಮೂಲವಾಗಿ ನಗಧರ್ಮ
ಲೋಕಂ ಸೇರುವಂ॥
ಸುಮ್ಮನಲ್ಲಿದು ಕೋಟಿ ಜನ್ಮದಘವಳಿದಖಿಳ।
ಸೊಮ್ಮಿತ್ತು ನಿತ್ಯ ಸದ್ಧರ್ಮಪರನೆನಿಸಿ ಪರ।
ಬೊಮ್ಮದೊಳ್ಬೆರಿಸಿ ಜೀವನ್ಮುಕ್ತಿಯೀವುದೈ
ಗಮ್ಮನಿದು ನಂಬಿದವಗೆ॥

೭

ಕೇಳು ನೀನಿದಲೊಲ್ದು ಪೇಳುವೆನು ನಾಂ ಭೂತ ।
ಕಾಲದೊಂದಿತಿಹಾಸ ಶಾಲಯುತ ಸಕಲಗುಣ ।
ಶೀಲನಾದಿತ್ಯ ಭೂಪಾಲ ಸತಿಸುತರಿಂದ ಶ್ರೀಲನಾಗ್ಯ
ಖಿಳ ಜನರಾ ॥
ಪಾಲಿಸುತೆ ಹರಿಯೊಲ್ದುಯಾಳತನದಿಂ ವೃದ್ಧ ।
ಕಾಲದೊಳು ಸಾಮ್ರಾಜ್ಯದೇಳಿಗೆಯಧೀನಾತ್ಮ ।
ಬಾಲಕನೊಳಿರಿಸಿ ಶಶಿಮೌಳಿ ಪ್ರೀತ್ಯರ್ಥಂ ವಿಶಾಲ
ತಪವಂಗೈದನು ॥

೮

ಕಾಲಂಗುಟಂ ನೆಲದ ಮೇಲೂರಿ ನಿಡಿದಾದ ।
ದೋಳೆರಡು ಸಹಿತ ಮೊಗಮೇಲೆತ್ತಿ ಭಾಸ್ಕರನ ।
ನಾಲಿಯುವೆಯಿಕ್ಕದಂತಾಲೋಕನಂಗೈದು ಗಾಳಿಯಂ
ನಿಲಿಸಿ ಮತ್ತೆ ॥
ಮೂಲಕುಂಡಲಿಯು ತಲಿಮೇಲೆತ್ತಿನಡಿಸಿ ಪರ ।
ಸಾಲ ಸಾಸಿರದಳ ಸಲೀಲಜಧಿ ಶೋಭಿಸುವ ।
ಕಾಲಕಾಲನ ಕಂಡು ಲೋಲ್ಯಾಡಿ ಚಿತ್ತ ಬಹುಕಾಲ
ತಪಸಂಗೈದನು ॥

೯

ವಸುಧಿನಾಥನ ಘನತಪಸಿಗೊಲ್ದು ಸಲೆಸಪ್ತ ।
ಋಷಿಗಳಂ ಕರೆದು ನೇಮಿಸುತ ತರಲೆಂದೊಂದು ।
ಕುಸುಮಯಾನಂ ಬಂದು ಶಶಿಮೌಳಿ ಪ್ರತ್ಯಕ್ಷ
ನೆಸೆವುತಂದಾ ಭೂಪಗೆ ॥
ಅಸವಸದಿ ಮನದಿಚ್ಛೆವುಸುರೆಂಬ ಪೊಳ್ತುನಭ ।
ದೆಸೆತೇರುಸಹ ಬಪ್ಪಋಷಿಗಳಿಗೆ ಸರಸರ ಗ ।
ಮಿಸಿರೆಂಬುವುದು ಕೇಳಿ ಬಿಸಿವುಸುರುಗರಿದು
ಕೋಪಿಸುಲೆತ್ತರತಿಶಾಪವಂ ॥

೧೦

ಎಲೆಭೂಪ ನೀನೆಮ್ಮ ತಿಳಿಯದಲೆ ಸರಸರನೆ ।
ಇಳಿರೆಂದು ಗರ್ವದಿಂ ಗಳಹಿರ್ದ ಕೃತಿಗೆ ದುಷ್ಫಲ ವೀ ।
ಗಲುಣೆಸದೆ ತೆರಳುವೇಂ ನೋಡೆಮ್ಮ ಛಲವೆಂದು
ಕೋಪದಿಂದಾ ॥
ಮುಳಿದು ಸರಸರವೆಂದ ಫಲಕೆ ಸರ್ಪಾಗೆನ್ನ ।
ಲಳಕುಲೇ ಶಾಪವೆನಗುಳಿವದೆಂತಯ್ಯೋ ಮುನಿ ।
ತಿಲಕರಿರೆ ಪೇಳೆಂದು ಬಲು ಭಕುತಿಯಿಂದ ಪದದಳಿನ
ಗಳಿಗೆರಗಲಾಗ ॥

೧೧

ಕರುಣವಂ ಪುಟ್ಟಿ ಮುನಿವರರು ಕೇಳ್ದಾರು ಚರ ।
ಣೋದಕಂ ನಿನಗೆ ದೊರೆದಂದು ನಿವೃತ್ತಿಯನು ।
ತಿರದೆ ಪೋದರು ಮಾರಹರನ ಸಹ ಕೈಲಾಸಪುರದತ್ತ
ಲಿವನಿತ್ತಲೂ ॥
ಮರಮರನೆ ಮರಗುತಜಗರನಾಗಿ ಧರುಣಿಯೊಳೆ ।
ಗುರುಳಿದನ ಕರುಗಳಂ ಕುರಿಗಳಂ ನೈಮರೆಯು ।
ತೊರಗಿರ್ದನರಸುಂಗಿ ಹರಣಳಿಸಿ ಚಿರಕಾಲಮಿರುತಿರಲು
ಕಾನನದೊಳು ॥

೧೨

ಆತನಹಿಯಾಗೆ ಜನಭೀತಿ ನಡುಗಿತೆನೆ ।
ಪೂತಕರ್ಮಿಗಳು ತವೆಶೀತಲೋದಕ ಸ್ನಾನ ।
ಪ್ರಾತರ್ಸಂಧ್ಯ ಬ್ರಹ್ಮೇತರದ ಕೃತಿಭವಕೆ ಹೇತು
ವಾಗಿರ್ಪುದೆಂಬಾ ॥
ಮಾತು ಪೇಳಿರ್ಪುದದ್ವೈತ ಶಾಸ್ತ್ರದೊಳು ಹಿಮ ।
ಶೀತಘನರುತು ಬರಲು ಯಾತಕೀಕ್ರಿಯವೆಂದು ।
ನೈತೆಗದು ಸತಿ ಕುಚವೆ ಶೀತಕೌಷುಧವೆನ್ನುತೌತು
ಪೊಕ್ಕರು ಮಗ್ಗುಲಂ ॥

೧೩

ದಿನಪನೆರೆಯಂಜಿ ಕಂಪನದಾಳ್ದು ದಕ್ಷಣಾ ।
ಯನನಾಗಿ ಬಂದು ತಾನನಲ ಸಮ್ಮುಖನಾದ ।
ನನಲ ಬಹುಭೀತಿಯಿಂ ಜನಕೆ ಶರಣೆಂದ ವರತನುವ
ನಾಶ್ರಯಗೈಯ್ಯಲು ॥
ಕನಲಿ ಹಿಮಕಾಡುತಿರೆ ಜನ ಭೀತಿಯಿಂ ಗದ ಗ ।
ದನೆ ನಡುಗಿ ನಿಜ ಹೇಡಿತನದಿಂದಲೊಡಲ್ದೊಕ್ಕ ।
ವನ ಕೊಟ್ಟು ಶರಣೆಂದರೆನೆಲೆಸೆಯಿತಖಿಳರಾನನದಿ
ಪೊಗೆ ತತ್ಕ್ಷಣದೊಳೂ ॥

೧೪

ಅಗ್ಗಿಗೇರ್ಪ್ಹಣ್ಣಾಗಿ ಸಗ್ಗದರ ಮೊಗಸೇರಿ ।
ತಗ್ಗಳದಪಾವು ಕಿರಿಪಗ್ಗಾಯ್ತು ಘರ್ಜಿಸುವ ।
ಬಗ್ಗ ಬಡಗೋವಾಯ್ತು ನುಗ್ಗಾಯ್ತು ಭೂಮಿತವೆ
ತಗ್ಗಿತ್ತು ರವಿ ಪ್ರತಾಪಂ ॥
ಸುಗ್ಗಿಗೆಳಿಯನ ಭಟರ ಕುಗ್ಗಿಸುತಗಳಶರಕೆ ।
ಮೊಗ್ಗಿಯೊಂದಿಲ್ಲೆಸಿಸಿ ಗಡ್ಡನಂಗೈಸಿ ನೆರೆ ।
ಮುಗ್ಗಿಸುತಲೆಲ್ಲರಂ ಗೊಗ್ಗರೆಂದೆನಿಸಿತೇನಗ್ಗಮಾ
ಛಳಿಗಾಲವು ॥

೧೫

ಛಳಿಗಂಜಿ ವರದವಾನಳ ಪೋಗಿ ಹರನ ಫಣಿ |
ಯೊಳಗೆ ಮೇಣ್ ಶರಧಿಯೊಡಲೊಳಗೆ ಸೇರಲುಬಿಡದೆ|
ಅಳುಕಿಸಲು ನದಿಕೂಪಕೊಳದೊಳಗೆ ಬಿದ್ದು ಅಸು
ಗಳಿದು ಮರುತನ ಕೂಡುವಾ ||
ಹೊಲಬೆನಲು ಸರ್ವಜಲದೊಳಿಗೆದ್ದ ಪೊಗೆಯು ಮುಂ |
ಬೆಳಗಿನೊಳು ಪಾರುವುದು ತಿಳಿಯಲಿಕೆಯಂಜುದವ |
ರೊಳರೆ ಜಗದೊಳಗೆ ಹಿಮಸುಳಿಯಲದರೊಳು ಭರದಿ
ಮುಳುಗಿ ನಡುಗಿದರೆಲ್ಲರು ||

೧೬

ಪೂಗಣಿಗಳೇಕೆ ಚೈತ್ರಾಗಮನದೇಕೆ ಮಧು |
ಭೋಗಿಗಳದೇಕೆ ಸುರ ಸೋಗೆಮುಡಿಯೇಕೆ ಗಿಳಿ |
ಕೋಗಿಲಿಗಳೇಕೆ ಹರಿಣಾಗಮನನೇಕೆ ಸಂಯೋಗಿ
ಪಗೆ ಕನ್ನೈದಿಲೆ ||
ಪೂಗೆಳೆಯರ‍್ಯಾಕೆ ನಾನೇಗಿಲಿದು ಕ್ಷಣದೊಳಗೆ |
ಯೋಗಿಗಳ ತಂದು ಸತಿಭೋಗಿಯೆನಿಸುವೆನೆಂದು |
ನಾಗನಡಿಂಪುರದಾಸರಾಗಿ ಮಾಡಿಸಿತು ಸಲೆ ಮಾಗಿಯಿಂದ
ಖಿಳಜನರಾ ||

೧೭

ಸುರರವಗೆ ಮೊಗಕಾನ ಪರಿತಿಳಿದು ರೋಷದಿಂ |
ದಿರದೆ ಹಿಮನವರ ಕೈಸೆರೆಹಿಡಿದು ನಡುಗಿಸಲು |
ನೆರೆಕಾಣುತವರ ಸತಿಯರು ಕಂಬನಿಗಳಂದುಗರೆದ
ರೆನೆ ಶೋಕದಿಂದಾ ||
ವರಹಿಮಚರರು ಶಂಬರಪೊತ್ತು ಶಿರದೊಳಗೆ |
ಧರಿಪುಖಿಳರಿಗೆ ಸುರಿದು ಧರಧರನೆ ನಡುಗಿಸುವ |
ಪರಿಶೋಭೆಯಿಂದ ತುಂತುರ ಹನಿಗಳೆಸೆಯು
ತಿರುತಿರೆ ಪುಲ್ಲು ಕೊನೆಗಳೊಳಗೆ ||

೧೮

ಆ ಋತುವಿನೊಳಗೋರ್ವ ಚಾರುಜಂಗಮದೇವ |
ರೂರೊಂದರೊಳು ಭೀಕ್ಷ್ಯಕಾರಣದಿರುಗಿ ಹಣ |
ಸಾರೆ ಕೈಯ್ಯೊಳಗೆ ಮಠಸೇರಿ ರಾತ್ರಿಯೊಳೆದ್ದು
ಸೂರನುದಯನ ಮೊದಲಿಗೇ ||
ದಾರಿಯಂ ಪಿಡಿದುಬರೆ ಘೋರ ಕಾಂತಾರದೊಳು |
ಚೋರನವರಂ ಕಂಡು ಚೀರಿ ಹೊ ನಿಲ್ಲೆಂದು |
ಹಾರುತೈತರಲು ಹೌಹಾರಿ ಪಿಂದೆಸೆನೋಡಿ
ಮಾರಾರಿಯಂ ನೆನಿಸುತೆ ||

೧೯

ಆಸವಸದಿಯೋಡುತೇಣ್ದೆಸೆ ನೋಡಿ ದಾರಿ ತ |
ಪ್ಪಿಸಿ ಕಂಡ ಕಡೆ ನಡಿದುವುಸುರಿಡುತಲೆಡೆಬಿಡದೆ |
ಪಸುರ ಪುಲ್ಗೊನೆಗುಟ್ಟವಸನವುರೆತೊಯ್ದು ಕಂಪಿಸು
ತಾಗ ನಡೆತರುತಿರೆ ||
ಋಷಿಶಾಪದಿಂದಾದ ವಿಷಧರಮು ಹೈಮ ದಾ |
ಯಸದಿಂದ ನೆಲಕೆಪೊಡೆ ಹೊಸಿಯಲಿಕೆ ಬರದನಭ
ದೆಸಿಗೆ ಮೊಗದೆರದಿರಲು ಅಸಮುಚರ ಪಾದದಿಂದೊಸರಿ
ಚರಣಾಂಬುಮುಖದಿ ||

೨೦

ಸೇರಿರಲಿಕನಿತರೊಳು ಚೋರರಿಯದಲೆ ಮೊಗದೊ |
ಳೂರೆಕಾಲದರಖತಿಮೀರೆ ಕಚ್ಚಲ್ಕೆ ಬಾ |
ಯಾರಿಬಿದ್ದ ಸುಗಳಿಯೆ ಧಾರುಣಿಗೆ ನಭದ ಸುಮದೇರೂಂ
ದು ಬಂದುದಾಗಾ ||
ಮಾರುತಾದನಗೆಮಿಗೆ ಚೋರನಿಗೆ ದೈವ ಶ |
ರೀರವಂ ಕೊಟ್ಟೊಯ್ಯುತಾ ರಜತಗಿರಿಗೆ ಗಣ |
ರಾರಾಧ್ಯಪುಟ್ಟವಂ ಮಾರಾರಿಗಟ್ಟಿದನು ಚಾರು
ಶರಣಪ್ಪ ಕೇಳಾ ||

೨೧

ಸಗರಚಕ್ರೇಶ ಸುತರಘ ಕಳಿಯಲೆಂದೈದೆ |
ಭಗಿರಥನು ತಪಗೈದು ಮುಗುಳಶರಹರನೊಲಿಸಿ |
ಜಗಪಾವನಕೆ ಸುರಾಪಗೆ ಶಿವನ ಜಟೆಯಿಂದ ತೆಗಿದು
ತಂದುದರಿಂದಲೆ ||
ಅಗಣಿತರ ದುರಿತಳಿದು ಮಿಗೆ ಸುಕೃತರಾದರಿಂ |
ದಿಗೆ ಶಿವನ ಮಜ್ಜನೋದಕ ಮಹಿಮೆಯಿದು ಕೇಳು |
ಮುಗನೆಯೆನಲಾಗ ಕೈಮುಗಿದು ಗುರುವರನ ಘನ ನಗುತ
ತವೆ ಕೊಂಡಾಡಿದಂ ||

೨೨

ಚರರಿಗಪರಾಧವಂ ಪೊರಿಸಿ ಬಿಜ್ಜಳನು ಬಸ |
ವರಸನೊಡಗೂಡಿ ಘನಹರುಷದಿಂ ಬರು |
ತಿರಲು ಚರಣೋದಕದ ಕೊಳೊಂದಿರೆ ಕಂಡು
ಧರಣಿಪತಿಯೇನಿದೆಂದು ||
ನರಪನಿದು ಸಿದ್ಧರಸಪರಿಭಾವಿಸೆನಲದಕೆ |
ನೆರೆದಿಟಂ ತೋರೆನಲು ಕರಗಿಸುತಲಖಿಳ ತರ |
ತರ ಧಾತು ಚರಣಾಂಬುಬೆರಿಸಿ ಹೇಮಂ ಗೈದರುರೆ
ಶರಣಬಸವ ಕೇಳಾ ||

೨೩

ದ್ಯುಮಣಿತಾನಳುಪೆ ಗೌತುಮುನ ಸತಿಗದು ಕಂಡು ।
ವಿಮಲಮುನಿ ಮುನಿದು ಶಾಪವನೀಯ್ಯೆ ತೊನ್ನಾಗ ।
ಲಮಿತ ಶೋಕದಿಬಂದು ಪ್ರಮಥಪತಿ ನಂದಿ
ಪದಕಮಲಗಳು ಕಂಡು ಮತ್ತೆ ॥
ನಮಿಸುತಲಿ ನೀನೆನ್ನ ಭವಣೆಯಂ ಕಳೆದುತನು ।
ಕಮನೀಯ ಮಾಡೆನಲು ಶಿವಮಜ್ಜನೋದಕ ದೊ ।
ಳು ಮುಳುಂಗಿ ಶುದ್ಧನಹದೆನೆ ಕೇಳುತಂತೆಸಗುತ
ಮಲರಹಿತಂದಾನು ॥

೨೪

ಘೋಣಿ ಬೆನ್ನಟ್ಟಬಹ ಶ್ವಾನಭಯದಿಂ ಬಂದು ।
ಸ್ಥಾಣು ಮಜ್ಜನದುದದಿ ಕಾಣದಲೆ ಬಿದ್ದಳಿದು ।
ಪ್ರಾಣವಂ ಪ್ರಮಥಗಣ ಸ್ಥಾನವಂ ಪಡೆಯಿತೆನೆ
ಲೇನೆಂಬೆ ಮಹಿಮೆಮತ್ತೆ ॥
ಸೂನುಕೇಳ್ಚರಣುದದಿಗಾಣವಂ ನಿಕೃತ ಜ ।
ದಾನವಾರಾತಿ ಸುರಶ್ರೇಣಿಯೊಮ್ಮೆಮ್ಮಳಿದು ।
ಮೌನಿನುತನಂ ಕೊನಿಗೆ ತಾನೆಳಿದು ಪ್ರಮಥಾದ
ಗಾಣದಸು ಕನ್ನಯ್ಯನು ॥

೨೫

ನಡೆ ಬೇಳ್ಪರಿಲ್ಲದಾಂ ಬಡವಾದೆನೆನೆ ಬಸವ ।
ಮಡಿವಾಳ ಮಾಚನಾನುಡಿ ಕೇಳಿ ಕೋಪದಿಂ ।
ಬಡವಾದರೇನಿವಗೆ ಮೃಡಭಕ್ತರೆಂದರಿದು ಗಡನೆ
ಕಿವಿಮುಚ್ಚಿಕೊಂಡು ॥
ನಡೆದುಬರೆ ಪೊಳೆಯತ್ತೆರಡನೇಂದುಧರನು ಬಂ ।
ದಡಿಗೆರಗೆ ಪದದಿ ಜಲಬಿಡದೆ ಸೂಸುತಲೆಲ್ಲ ।
ಕಡಿಗೆರತುನಂಗೈದು ವಡಿಯ ಚರರ್ಗಿತ್ತನವ
ಪೊಡವಿ ಜನ ಕೊಂಡಾಡಲು ॥

೨೬

ಮೋಳಿಗಿಯ ಮಾರಯ್ಯನಾಲಯದೊಳಂ ಪೊನ್ನ ।
ಜಾಳಿಗೆರಡಿತ್ತುದಂ ಕೇಳಿ ಬಸವಣ್ಣನ ಹಿ ।
ಯಾಳಿಸುತ ಬಿನ್ನಪಂ ಪೇಳಿ ಕಟಕುದಚರರ ಜಾಲ
ಕರಿಸುತ ಲಕ್ಷದಾ ॥
ಮೇಲೆ ತೊಂಬತ್ತಾರು ಸಾಸಿರಗಣಕ್ಕುಣಿಸಿ ।
ಕಾಲುದೊಳೆದುದಕೆ ಪೊರೆಮೇಲೆ ಚಲ್ಲುತೆ ಮಿಸುನಿ ।
ಕೋಲುಗೈದುರೆಕೊಟ್ಟ ಭಾಲಾಕ್ಷ ಶರಣರಿಗೆ ಕೇಳ್ಕೈದಿ
ಶರಣಬಸವಾ ॥

೨೭

ಧೂಡಯ್ಯನೆಂಬ ಶಶಿಚೂಡಭಕ್ತನು ಸ್ನಾನ ।
ಮಾಡಿದುದಕದಿ ಬಿದ್ದ ಬಾಡ ಬನ ತೊನ್ನಳಿಯೆ ।
ನೋಡುತೇಳ್ನೂರು ಜನಗೂಡಿ ತಲೆ ಭೂಮಿಸುರರೋಡಿ
ಬಂದಾಸ್ಥಾನದಿ ॥
ಮಾಡಿಸ್ನಾನವು ಕಷ್ಟನೋಡಿಸುತ ಶರಣನಂ
ಪಾಡಿ ಪಾದಗಳ ಕೊಂಡಾಡಿ ಪೋದರು ಶರಣ ।
ನಾಡಲಾರಿಂವಹುದು ನಾಡೆಚರಣೋದಕಂ ಬೇಡಿ
ದೀವುದು ಭಕ್ತನಾ ॥

೨೮

ಚರಣೋದಕವೆ ಪರಮತರ ಸಿದ್ಧರಸವೆನಲು ।
ನೆರೆದೃಷ್ಟ ತೋರೆನಲು ಪರವಾದಿ ಕಾಷ್ಟದೊಳು ।
ಚರಣದುಂಬೆರೆಸಿ ಕಸವರಮಾಡಿ ಚರಕಿತ್ತ
ಸನ್ಯಾಸಿ ಮಂಚಣ್ಣನು ॥
ಹರಳೈಯ್ಯನೆಂಬ ಶಿವಶರಣ ಬಚ್ಚಲದ ಶಂ ।
ಬರದದಿಂದಲಾಗ ಮಧುವರಸ ಪಾವನನಾದ ।
ನುರಿಕೇಳಿದವರ ಭವಪರಿವವೆನಲೆನಿತು ಘನಶರಣ
ಕೇಳ್ಪಾದಾಂಬುವಂ ॥

೨೯

ತುರಗಳು ತರಹೇಳಿ ಧರುಣೀಶ ಕೊಟ್ಟಹಣ ।
ಚರಕಿತ್ತು ನರಿಗಳಂ ತರಿಸಿ ಚರಪಾದ ಶಂ ।
ಬರದಿ ಕುದುರೆಯಮಾಡಿ ಸುರಪನಂ ಗೆಲಿದನಾ
ಚೊಕ್ಕನಾಯ್ನಾರಾಖ್ಯನು ॥
ಕೆರೆಕಟ್ಟಲಿತ್ತ ಹಣಚರರ್ಗಿತ್ತು ಕೇಳಿದರೆ ।
ನರಪತಿಗೆ ಭೂತಿಯಿಂ ವಿರಚಿಸುತೆ ಕಟ್ಟಿಚರ ।
ಚರಣಾಂಬು ಸುರಿದು ಭಾಸುರಕೆರಿಯ ತೋರಿದನು
ಕೆರಿಯು ಪದ್ಮರಸನಾಗ ॥

೩೦

ವೀರಮ್ಮನೆಂಬೋರ್ವ ವಾರಿಜಾನನೆ ಪತಿಯು ।
ಶೇರಲಿಕೆ ಶಿವನಪದ ವಾರಿದುರ್ಮಿಳವೆಂದು ।
ಚಾರುಗಿಂಡಿಯೊಳಿಡಲು ಕೇರಿಗುರಿಪತ್ಯದೆ
ನೀರು ಚಿಮ್ಮಡಿಸುತಗ್ನಿ ॥
ವಾರಿಸುತೆ ಸುಖಮಿರಲು ಮಾರಾರಿಯೊಂದು ದಿನ ।
ವೀರಭಕ್ತಿಯನೋಳ್ಪ ಕಾರಣದಿ ಬಯಲ್ಗೈದು ।
ನಾರಿಜೀವಕೆ ಮುಳಿಯೆ ವೀರೈದು ಕರತೋರಿ
ಸಾರಪದವಿತ್ತ ಶರಣಾ ॥

೩೧

ಯನೆ ಕೇಳು ಗುರುವೆ ಪಾವನನಾದೆ ಮುಂದಿನ್ನು ।
ತನಗೆ ಚರಶೇಷ ಘನವನು ಪೇಳುತುದ್ಧರಿಪು ।
ದೆನೆ ಕೇಳಿ ತೋಷದಿಮ್ಮೆನುಗೆ ಮುಗುಳ್ನಗೆ ಪೇಳಲ
ನುವಾದ ಗುರುರಾಯನು ॥
ವನಜ ಜಾತಾಂಡದೊಳಗೆಣೆಯಾವುದಿದಕೆ ।
ಕೇಳಣುಗಸಮನೆಣಿಸುವಡೆ ಫಣಿರಾಜಗಾಗದು ಸು ।
ಮನಸ ಗುರುಸುಚತುರಾನನರಿಂಗೆ ತೀರದೆನಲುಳಿದ
ನರರಿಂದಾಗ್ವದೇಂ ॥

೩೨

ಕುರುಜೆ ಪಂಕಕೆ ವಿಭಾಕರ ಜನ್ಮ ಶೋಕ ಸಾ ।
ಗರ ಕಲಶ ಭವಕೇಶ ಗಿರಿವಜ್ರದಾರಿದ್ರ್ಯ ।
ಕರಿಸಿಹ್ಮ ದುಷ್ಕರ್ಮ ತರುಕುಠಾರುರೆ ದುರಿತ
ಹರಿಣಕುಲಶಾರ್ದೂಲವಂ ॥
ಚರವರಪ್ರಸಾದ ಪರತರ ಶರಣಜನ ಮೋದ ।
ಮರಣಿಲ್ಲ ಸೇವಿಸುವ ನೆರೆನಂಬಿ ಭಾವಿಸುವ ।
ಶರಣರಿಗೆ ಕೇಳೆಂದು ಶರಣರಿಗೆ ಹೇಳಿದನು ಗುರುನಾಥ
ಪರಿಪೂತನು ॥

೩೩

ಪರಮಪ್ರಸಾದೇತರನ್ನವಂ ಸೇವಿಸುವ ನ ।
ರಗೆ ಸನ್ಮುಕ್ತಿಯುಂ ದೊರಕಲಾರದು ಮಿದ ।
ನ್ನಿರುತ ಮಿಂತಾಗೆ ಚರನೊಕ್ಕುದಂತಲ್ಲದಂ ಪರ
ಮಾಮೃತಾದೊಡದನು ॥
ಗರಳಸಮುವಕ್ಕು ಪುರಹರನ ನಿರ್ಮಾಲ್ಯವಂ ।
ಶಿರದೊಳಗೆ ಧರಿಸಿ ಸಂಚರಿಸುತಿಹ ಭಕ್ತಂಗೆ ।
ದೊರಕೊಳಗು ಸತಿಸುತರು ದುರಿತಭವ ಮರಣ
ಳಿದು ಸ್ಥಿರಮುಕ್ತಿ ಪಡೆದು ಬಾಳ್ವಂ ।

೩೪

ಸಬ್ಬಗುಣಯುತಕೇಳು ಸಬ್ಬಾಣಿ ಪತಿಭಕ್ತ ।
ಗೊಬ್ಬೂರವಾಸವರ ಬಿಬ್ಬಿ ಬಾಚರಸ ನೆಂ ।
ಬೊಬ್ಬ ನಿಜಶರಣಮದವೊಬ್ಬು ಹರಪ್ರಮಥ
ಗಣ ರೊಬ್ಬುಳಿಯ ಘನ ಪರ್ವದಾ ॥
ಹಬ್ಬಮೆಲ್ಲುಂಟು ಮನ ಮುಬ್ಬೆಲ್ಲಿ ತೋಷದಿಂ ।
ನಿಬ್ಬರದಿ ಪೋಗಿ ಭವದೊಬ್ಬಿಸುವ ಶೇಷವಂ ।
ನೊಬ್ಬುಳಿಯು ಗೈಯುತನಿಗಬ್ಬದಿಂ ಶೇವಿಸುತ ಕಬ್ಬು
ಗೈಜಿತ ನೊಲಿಸಿದಂ ॥

೩೫

ತ್ರಿವಿಧ ಪ್ರಸಾದದನುಭವದೊಳಿರುತಿರಲೊಂದು ।
ದಿವಸ ನೆರೆಪಳ್ಳಿಯೊಳು ಶಿವಗಣಾರಾಧನೆ ಯಿ ।
ರುವದೆಂದು ಕೇಳುತಂದವನು ಘನ ಹರುಷದಿಂ ತವೆ
ಹಿಗ್ಗಿ ಕೊಂಡಾಡುತೆ ॥
ಜವಳೆತ್ತುಗಳು ಪೂಡಿದ ವಿಲಂಬ ಶಕಟದಿಂ ।
ಶಿವಭಾಗುಭಳಿರೆಂಬರವದುಂಬೆ ದಶ ದಿಶೆಯೋ ।
ಳವಿರತಂ ಧ್ವಜ ಛತ್ರ ಚವರಿಗಳು ಪಿಡಿದ ಜನ
ಜವಳಿಯಂ ಕೂಡಿಕೊಂಡು ॥

೩೬

ಘನತೋಷದಿಂ ಬಂದು ಗಣತಿಂಥಿಣಿಗೆ ನಮಿಸು ।
ತುಣು ತುಳಿದುದಂದು ಮನದಣಿದುಂಬಿ ಭಂಡಿಯೊಳು ।
ವಿನುತ ಸವನದಲಿ ಬಾಸಣಿಸಿಯುಘೆ ಚಾಗು ಭಲ
ರೆನುತ ಚಪ್ಪಾಳಿಯನಿಕ್ಕಿ ॥
ಇನಕರಕೆ ತೆರಪಿಡಿದ ಘನ ನಿಕೇತನಗಳಿಂ ।
ಮುನಿವ್ಯಾಸ ಭುಜ ಮುಖಾಗಣಿತ ಬಿರುದುಗಳೆತ್ತಿ ।
ತನ ತನಗೆ ಪೊಗಳುವಾನಿನದವಂ ಕೇಳಿ ಪುರಜನ
ರೆಲ್ಲ ಖತಿಗೊಳ್ಳುತೆ ॥

೩೭

ಪೊಲಿಗಲಿಸಿದನು ನಮ್ಮ ಪೊಳಲೆಲ್ಲ ಭೂಮಿಸುರ ।
ತಿಲಕ ತಾನಾಗಿರ್ದು ಕುಲಹೀನ ಮನುಜರಿಂ ।
ಜಲ ತಿಂದು ತೆಗೆದಿಟ್ಟು ತುಳಸಿ ಮಣಿಗಳಕೆರಂಡಲ
ತೊಟ್ಟು ಗೋಪಿಮಲವಂ ॥
ಉಳಿದು ಚಿತಿಬೂದಿಯಂ ತಳೆದು ತಾ ಸರ್ವಾಂಗ ।
ದೊಳಗನಿತು ಕುಲಗೆಟ್ಟ ಪೊಲಿಯನನ್ನಮ್ಮಾರಿ ।
ನೊಳಗಿಟ್ಟರಘವೆಮಗೆ ಫಲವೆಂದು ಛಲದಿ
ತಮ್ಮೊಳಗೆ ಮಾತಾಡಿಕೊಂಡು ॥

೩೮

ಪೊಗಿಸಗೊಡಬಾರದಿವಗಗಸಿಯೊಳಗೆಂದೆಂದು ।
ವಿಗಡ ವಿಪ್ರರುಗೂಡಿ ಮಿಗೆ ರೋಷದಿಂ ಬಂದು ।
ಮುಗುಳ ಶರಹರ ಭಕ್ತಗಗಣಿತರುವೇಷ್ಟಿಸುತ
ಬೊಗಳಾಟ ಮೇನಿದೆಂದು ॥
ಹಗರಣ ವಿದಾರೊಡನೆ ಹಗೆಗಳಾರ್ನಿಮಗಿನಿತು ।
ಜಗವದೇಂ ಕಾರಣವು ಮುಗುಧರಿರೆ ಪೇಳೆಂದು ।
ನೊಗ ಬಂಡಿಯೆತ್ತು ದಂಡಿಗೆ ಪಿಡಿದು ಮತ್ತೆ ಜತ್ತಿಗೆ
ಬಿಚ್ಚಿ ತೆಗೆದೊಗೆದರು ॥

೩೯

ಕುವರರೊಸಗೆಯೊ ಶಿವಾಧವಭಕ್ತರುತ್ಸವವೊ |
ಶವದ ಮೆರವಣಿಗೆಯೇನವಿವೇಕದಾಟವೋ |
ತವೆಭೂತ ಬಡಿದರಿಂದವಿಚಾರಿದಿಂದಕುಣಿ ವಿವರಮೋ
ಕೇಳಿ ಮತ್ತೋ ||
ಬವರಕೆಲ್ಲಾ ದೊಡಂಗಮಿಸುವಿರೋ ಬಂಡಿಗತಿ |
ಗವಸಣಗಿ ಹಾಕಿಟ್ಟ ಪವಣಾವುದೆಮಗೀಗೆ |
ವಿವರಿಸದೆ ಗ್ರಾಮದೊಳು ಗಮಿಸದಿರಿಯೆಂದಾಡಿ
ಶಿವಶರಣಂ ತಡೆದರು ||

೪೦

ಮುಸರಿಯಂತಿನುವದೇನೆಸಕ ಬಿಡು ಛೀ ಪೊಲೆಗ |
ಲಿಸುವರೇಂ ಚಾಂಡಾಲ ವಿಸರದೊಳ್ನಿನ್ನಂಥ |
ಕಸಮಳರ ಕಾಣೆ ಮತಿಹಸನಾದುದೆ ದ್ವಿಪಾದ್ವಶುವೆ
ನಿನಗೆ ಲಜ್ಜೆಯಂ ||
ತುಸುವಿಲ್ಲವಾಯ್ತು ಮಾನುಷ ನೀತಿಯೇನೆಸಲು |
ಶಶಿಧರನ ಭಕ್ತನಿದು ಅಸಮಪ್ರಸಾದವೆನ |
ಲುಸುರಿದೊಲು ದೃಷ್ಟತೋರಿಸುವದೆಂದಸವಸದಿ
ವಸನಂ ತೆಗೆಪೋಗಲು ||

೪೧

ನೋಡಿ ಕಿಡಿಕಿಡಿಯಾಗಿ ಬೇಡ ಬೇಡೆಲೆ ವಿಪ್ರ |
ಖೋಡಿಗಳೇ ನಿಮಗಿಂದು ಕೇಡುಮೊದಗಿಹುದು ನಿಜ |
ಬೇಡಿದಿಷ್ಟಾರ್ಥ ಕೈಗೂಡಿಸುವದ್ವೈದೆ ಶಶಿ ಚೂಡ
ಭಕುತರ ಶೇಷವಂ ||
ನಾಡೆಭಕುತಿಯಲಿ ಕೊಂಡಾಡಿ ಸೇವಿಸಲು ಸುಖ |
ನೀಡುವುದು ನಿಂದ್ಯವಂ ನಾಡಿದವನಿಗೆ ಕಾಲ |
ಕ್ಷ್ವೇಡಹುದು ಬಡಜೀವಿ ಬಾಡ ಬರೆಬಿಡಿ ನಿಮ್ಮ
ಮೂಢತನವೆಂದಾಡಲು ||

೪೨

ನಾಚಿಕೆಯ ತೊರೆದಿನಿತು ವಾಚಿಸುವರೇಂ ಖಳ ಸ |
ದಾಚಾರಮೆಂದು ಕುಲನೀಚರೆಂಜಲ ತಿಂಬು |
ದೇಂಚಂದ ಸತ್ಕರ್ಮಮೋಚನನೆ ನೆರೆ ತಿಳಿವಡೀ
ಚರಾಚರ ಮಧ್ಯದೀ |
ಲೋಚನಕೆ ನಿನ್ನೋಲ್ವ ಆಚಾರರಹಿತ ಜನ |
ಗೋಚರಿಸರೆಲ್ಲೆಲ್ಲಿ ಛೀ ಛೀ ತೆಗೆ ಬಿಬ್ಬಿ |
ಬಾಚರಸ ನಿಮಗಿಂಥ ಶೌಚ ನಡತೆಗಳ್ಯಾಕೆ ಚಾಚದಿರು
ರಸನೆ ಮುಂದೇ ||

೪೩

ಸೂತಕರ ಮತ್ತೆ ಮುಟ್ಟಾದವರ ಮೇಣು ಸಲೆ |
ಸೂತಕಿಯರನ್ನಾಡೆ ಪೂತರೆಂದೆಣಿಸಿ ಸಂ |
ಪ್ರೀತಿಯಿಂ ಪೂಜಿಸದು ಭೂತನಾಥನ ಕುಕುಲಜಾತ
ರಿರ ಕೇಳಿಮತ್ತೀ ||
ತಾತನಂ ಕಡಿದು ತನುಜಾತನಂ ಕೊಲ್ಲಿ ಕುಲ |
ಜಾತಿಯೊಂ ತೊರೆದು ಶಿವಜಾತಿಯೆಂದೆಂದೆಂಬ |
ನೀತಿ ನುಡಿಗಳನಾಡ್ವವೇತರ ವಿಚಾರಘನ ಪಾತಕರೆ
ನಡಿಯೆಂದರು ||

೪೪

ಮಂಗಗಳೆ ಕೇಳಿ ಮಾತಂಗಿಜಾತರು ವಿಪ್ರ |
ರ್ಹೈಂಗಾದಿರ್ಹೇಳಿ ಲಗ್ನಂಗಳೋಳ್ ಯಜ್ಞದೊಳು |
ಭಂಗಮಯ ಕುಲದೈವತಂಗಳಂ ಸ್ಥಾಪಿಸಿರೆ ಹೆಂಗಸಂ
ಮುಟ್ಟಾದರೇ ||
ಹಾಂಗೆ ವೃದ್ಧಿಯು ಶೌಚನಂಗಳಂ ಬರಲಾಗ |
ಲೇಂ ಗೈವಿರ್ಕೈದೆ ಶಿವಲಿಂಗ ಸಂಯುಕ್ತಮಾ |
ದಂಗವು ಸದಾಶುಚಿಯು ಮಂಗಲಮಯೆಂದು
ತಂತ್ರಂಗಳೊಳು ಪೇಳಿರ್ಪುದು ||

೪೫

ವೇದಮವು ಸಕಲ ಧರ್ಮಾಧಾರಮಾಗಿರ್ದು |
ವ್ಯಾಧರೂಪಾದ ಶಿವಪಾದ ಮೂಸಿಸುವ ಶುನಿ |
ಯಾದವ್ವೈಯಾಳವಗೆ ಮಾದೇವರ್ಕೈದೆ ಸತಿ ಮಾದೇವಿ
ಯಾದ್ದರಿಂದ ||
ಮಾದೇವನವಗೆ ಭಕುತಾದವರ ಚರಿತಗಳ |
ನಾದಗೈಪಡೆ ಭಕ್ತಿ ಭೇದಕಾಂಬೊಡೆ ತೀರ |
ದಾದಿಶೇಷಂಗೆನೆ ಕುವಾದವಂಗೈವರಿಂದಾದಪುದೆ ಪುಲ್ಯಿಸ
ರಿದ್ಯಾ ||

೪೬

ಈಶನೋರ್ವ್ವಖಿಳ ಜಗದೀಶನೆಂದೆಂಬ ಮತಿ |
ಮಾಸಿಯಜ್ಞಾನದಿಂ ವ್ಯಾಸಮುನಿಪತಿ ಮುನ್ನೆ |
ಕಾಶಿಯೊಳಗಿರುತಲಿನ ಕೇಶವಾತ್ಪರವೆಂದು ಘೋಸಿ
ಸುತ ಪಡೆದುಕೊಂಡಾ ||
ದೋಷದಿಂದೇನಾದನ್ನೈಸಲೆ ವಿಚಾರಿಸದೆ |
ಹಾಸದಿಂದವಗೆ ಭೂತೇಶನೆಂದರೆ ತುಚ್ಛ |
ವೇ ಸಕಲ ಭೂತದಿಂದೀ ಸೃಷ್ಟಿಯಾದುದೆನಲೇಸು ಘನ
ಮಾದೇವನಾ ||

೪೭

ನಂಜುಮತಿಗಳಿಗೆ ಮಾರಭಂಜನನ ಭಕುತಗಣ |
ಭುಂಜಿಸಿದ ನೈರ್ಮಾಲ್ಯಕೆಂಜಲೆಂದನ್ನುತಲಿ |
ದಂಜರಿಯೆ ನಿಮ್ಮ ಕುಲ ಭಂಜಿಸುವ ಕಡೆಗಾಲ್ಧ ನಂಜ
ಯೆಂದರಿಯಿರೆನಲು ||
ಅಂಜಿದೆವೆ ನಿನ್ನನುಡಿ ರಂಜನೆಗೆ ನುಡಿದುದಂ |
ಭಂಜಿಯಾದೊಡೆ ಪೊಗದ ಕಂಜೆಕೀಳುವೆವೆಂದು |
ಕಂಜಸಖಗೆರಗುತಿಹ ಮಂಜುಬಳಗೆನೆ ವಿಪ್ರಪುಂಜ
ಮುಸುಕಿತು ಭಕ್ತನಾ ||

೪೮

ಆ ಪರಮ ಭಕ್ತನತಿ ಕೋಪವಂತಾಳಿ ಸಲೆ ಭಾಪು |
ಭಾಪುರೆ ಜ್ಞಾನಲೋಪರಿರೆ ನಿಮ್ಮಯ ಪ್ರ |
ತಾಪವಂ ನಾನರಿಯದೇ ಪಾಪಿಗಳೆ ತಡೆಯಿರೀ
ಪರಿಯ ನಿಮ್ಮ ಗರ್ವಂ ||
ಲೋಪವಂ ಗೈವನಿತು ಸೈಪುಮಿಲ್ಲೇನೆಂದು |
ಆ ಪುರದ ಕಡೆ ತೆಗೆದು ಶೇಷದೊಂದಗುಳಿಡಲು |
ತಾಪಿಸುತ ಕ್ಷಣದಿ ಗುಡಿಗೋಪುರಂ ವಿಪ್ರಪ್ರಲಾ
ಪವಂ ಗೈಸಿತಾಗ ||

೪೯

ಛಿಣಿ ಛಿಟಲು ಛಿಟಲು ಛಿಣಿ ಛಿಣಿ ಛಿಟಲು ಛಿಟಲೆಂಬ |
ಧ್ವನಿಯೊಡನೆ ಸೂಶಗ್ನಿಕಣವೆಲ್ಲ ಕಡೆಗೆ ಪುರ |
ಜನರು ಬೊಬ್ಬಿಡುತಲೆದೆಹಣೆ ಬಡಿದುಕೊಂಡು ರೋ
ದನರವದ ಜಲದಿಸೂಸೆ ||
ಜನಕನೇನಾದನ್ನಾ ತನುಜನೇನಾದನ್ನಾ |
ಜನನಿಯೇನಾದಳಾ ತನುಜೆಯೇನಾದಳ್ಹಾ |
ಯೆನುತ ಗೋಳ್ಯಾಡುತಿಹ ನಿನದ ದಶದಿಶೆದುಂಬೆ
ಘನಶೋಕದಿಂದೋಡಿದರ್ ||

೫೦

ಕೇಶವಾಚಾರಿಮನೆ ಕೇಸುರಿಯು ಪತ್ತಿ ನಿ |
ಶ್ಯೇಷವಾಯ್ತಗ್ನಿಯಿಂ ಶೇಷಭಟ್ಟರ ಗೃಹಂ |
ವಾಸುದೇವ ನಿವಾಸವಾಸವಾಯ್ತನಲಂಗೆ ಕಾಶಿನಾಥ
ನಿಕೇತನಂ ||
ಕಾಸಿದನು ರಸರಸನವಾಸರಥಿ ಸದನಾಶ |
ಯಾಶನುರೆಸುಟ್ಟ ಹರಿದಾಸ ಧಾಮವು ನಾಗ |
ನಾಶನುರುಪಿದನು ಜಲಸೂಸಿರೆಂದಡಿಗಡಿಗೆ ಘೋಷಿ
ಸಿದರಾವಿಪ್ರರು ||

೫೧

ವೆಂಕಟಾಚಾರಿ ಮನೆ ಬೆಂಕಿಯಿಂ ಸುಟ್ಟತಾ |
ವೆಂಕಮ್ಮನಾವೆಡೆಯೊಳುಂ ಕಾಣೆ ಚಾರುತರ |
ಸಂಕ ಟಚತುರ್ಥಿವ್ರತವಂ ಕೆಟ್ಟ ಕಾರಣೇಸಂಕಟವು
ನಮಗಾಯಿತೊ ||
ಮಂಕುತನದಿಂದಾವು ಶಂಕರನ ನಿಂದಿಸಿದ |
ಹಂಕಾರ ಮುರಿಯಲ್ಕೆ ಬೆಂಕಿಗಣ್ದೆರೆದನೋ |
ಪಂಕಜಾಸನನ ಶಿರವಂ ಕಡಿದ ದೇವನೊಳು ಬಿಂಕು
ಥರವಲ್ಲೆಂದರು ||

೫೨

ಪುಂಡ ವಾತಜಲಂಕೆ ಕೆಂಡದಿಂದುರುಪಿರ್ದ |
ಪಂಡುಸುತ ಗೈದಿಂದ್ರ ಕಾಂಡವವನದಹ ಕಥೆ |
ಚಂಡಿಕಿಯವನಿಸುತಲಿ ಮಂಡಲದಜನಕ್ಹೇಳಿ
ಕೊಂಡವರ ಮನೆಗಳಲ್ಲಿ ||
ಉಂಡುಸುಖಮಿರ್ದು ಹಣಕೊಂಡ ಕಾರಣದಿಯಾ |
ಹಾಂಡೆ ಭಾಂಡೆಂಬರದ ಬಿಂಡಿ ಪೆಟ್ಟಿಗೆ ಸವಟು |
ಗಿಂಡಿಗಳು ಪೋಪಿಮಲ ದುಂಡಿಗಳು ಮೊದಲಾಗಿ
ಕೆಂಡದಾಹುತಿಯಾದವು ||

೫೩

ತೊಟ್ಟಿಲಂ ಬಿಡು ಬೆಳ್ಳಿ ಬಟ್ಟಲಂ ಪೊರಗೆ ತಾ |
ಥಟ್ಟನೇ ಬಾ ನೀನು ವುಟ್ಟದವರಿಸಿಕೊಂಡು |
ಜುಟ್ಟು ಬಲು ಜೋಕೆ ಬಿಡುಕೊಟ್ಟಗೆಯಧೇನು ಕರು
ಕಟ್ಟಿರ್ದ ಕಣ್ಣಿ ಬಿಚ್ಚು ||
ಒಟ್ಟಿಗಾಪರಕುಗಳು ಸುಟ್ಟವಾಗಳೆ ಜೀವ |
ಕೊಟ್ಟವರ ಸಂಖ್ಯೆ ಗೋಳಿಟ್ಟವರ ಬಂಧುಗಳು |
ಕೆಟ್ಟೆವ್ಹಾಯೆಂದು ಬಾಯ್ಬಿಟ್ಟತ್ತು ಮನೆಗಳಂ
ಬಿಟ್ಟೋಡಿದರು ಹೊರಿಯಕೆ ||

೫೪

ನಿತ್ಯಜಪ ಪೂಜೆಸಲೆ ಚಿತ್ರಾಹುತಿಯುಗೊಂಡು |
ಚಿತ್ತತೋಷದೊಳು ಸುತಿವೆತ್ತ ನೀತಿ ಹೋತ್ರ |
ಮೃತ್ಯುವಾದನು ತನ್ನ ತೆತ್ತಿಗರಿಗ್ಹಾಯೆನ್ನುತತ್ತು
ಕಂಬನಿಗರೆಯುತೆ ||
ಮತ್ತೆ ಭಾರತ ಚಂಪುದಾತ್ತ ವ್ಯಾಕರಣ |
ಮುಖ್ಯ ಹೊತ್ತಿಗಿಗಳೆಲ್ಲಕುರಿ ಹತ್ತಿದವು ಸತಿಸುತರು |
ರತ್ತರಯ್ಯಯ್ಯೊಯಿನ್ನೆತ್ತ ಪೋಗುವೆವೆನ್ನುತತ್ತರಾ
ವುನ್ಮತ್ತರು ||

೫೫

ಈಶನೆಂದಾವನಂ ಧ್ಯಾನವಂಗೈದು ನಾ।
ವೀಸುದಿನ ಭಕುತಿಯಲುಪಾಸಕರು ರೋಚಿಸ್ಸು ।
ಕೇಶಗಾಗಿರ್ದುದೆಂದೋಷವೇ ಯಾತಕೀ ರೋಷ
ವೆಮ್ಮೊಳ್ಗಾಳ್ದು ತಾ ॥
ತೋಷದಿಂ ತನ್ನಯ ನಿಜಾಶ್ರಯಗಳಂ ತಿಂದ।
ನೀ ಸಕಲ ಭಕ್ಷನತ್ಯಾಸುರದರಿಂದಾಶ ।
ಯಾಶನೆಂಬುವ ನಾಮವೇ ಸಾರ್ಥಕಾಯ್ತು
ಹಾ ಹಾ ಶಿವನೆ ಕಾಯೆಂದರು ॥

೫೬

ಕೆದರುದಲೆ ಬೆಳ್ಪಾದವದನ ನಿಡಿದುಸುರು ಗದ ।
ಗದಿಪ ನಡೆ ನಯನಗಳು ಬೆದರು ಕರತಾಡನದ ।
ಯದೆ ಮಿಡುಕುತಿರುವ ನುಡಿತೊದಲು ಹಾ ಹಾ
ಯೆಂಬರುದತಧ್ವನಿಯೆಸೆದು ಮನದಾ ॥
ಮದಗೆಟ್ಟು ಗರ್ವಸಂಪದವಳಿದ ಶೋಕದಿಂ ।
ದೊದರುತಲಿ ತಮ್ಮಮ್ಮ ಕದಡು ಪೇಳುವೆವೆಂದು ।
ಮುದದಿಂದ ಬಂದಂದು ಸದಯಾಳ ಪೊರೆಯೆಂದು
ಪದಕೆರಗಿ ಬಾಚರಸನ ॥

೫೭

ದೇವಬಾಚರಸ ನಿರುತಾವನತ ಜನರ ಸಂ।
ಜೀವ ಬಾಚರಸ ಸಲೆ ಪಾವನಾಕರ ನಮಿತ ।
ದೇವತರು ಬಾಚರಸ ಕೋವಿದನೆ ವರಸದ್ಗುಣಾ
ವತಂಸನೆ ಧೀರನೆ ॥
ಕಾವಹರಚರಣ ರಾಜೀವ ಸಲೆ ಸೇವಕನು ।
ಮಾವರನ ನಿಜಭಕ್ತ ಸಾವಧಾನದಲೆಮ್ಮ।
ಕಾವದೆಂದೆರಗೊಂದೆ ಭಾವದಿಂ ನುತಿಸಿರ್ದರಾ
ವಿಪ್ರರತಿ ದೈನ್ಯದಿಂ ॥

೫೮

ವಿನುತರಾಗಿಹ ಪಾರ್ಶ್ವರನು ಕಂಡು ಘನತೋಷ ।
ಜನಿಸೆತ್ತುತಾನನಂ ಕೊನೆಗಣ್ಣಿನಿಂ ನೋಡ ।
ಲನಿತರೊಳು ಸುಪುಟ ಭೇದನ ಮುನ್ನಿನೊಲಾಗೆ
ಜನರೆಲ್ಲ ಬದುಕಿದ್ದರು ॥
ತನ ತನಗೆ ಬಿಬ್ಬಿಬಾಚನ ಗುಣವ ಕೊಂಡಾಡೆ ।
ಜನಕಗುರು ನೀನೆಂದು ಮಣಿ ಮಣಿದು ಪಾದದೊಳು
ಹಣಿಯಿಟ್ಟು ಭೂಸುರರು ಮನದಣಿಯ ಪೊಗಳಿ
ದಾ ನಿನದ ದಶೆದಿಶೆಗೆಸೆಯಿತು ॥

೫೯

ತ್ರಿಣಯ ತಾಂ ಸುಟ್ಟಂದು ದನುಜ ಪುರ ದೈತ್ಯರಂ।
ಮನುಮಥನ ಮುನ್ನಿನೋಲ್ಪನು ಮನಗಳು ಪುಟಛೀ ।
ದನ ಕಾಯದಾದನಿಂದಿನ ನೀವು ಶರಣೆಂದ ಜನರ
ರಕ್ಷಿಸಲೋಸುಗಂ ॥
ತನುಜ ಸತಿ ಸುತ ಜನಕ ಜನನಿ ಪುರಮುನಿಯು ಧನ
ದನಕರುಗಳೆಲ್ಲ ಮುನ್ನಿನ ಪರಿಯಂ ಗೈದರಿಂ ।
ಘನನು ಶಿವನಿಂ ಭಕ್ತನೆನುತ ಕೊಂಡಾಡಿದರು
ಜನರೆಲ್ಲ ಮನತೋಷದಿ ॥

೬೦

ಆ ಸಮಯ ಸುಮವೃಷ್ಟಿಸೂಸೆ ಸುರನಿಕರ ಕೈ ।
ಲಾಸದಿಂ ಬರಲಂದು ಭಾಸುರವಿಮಾನ ಪರಮೇಶ ।
ನಹಿಭೂಷನಘನಾಶ ಗಿರಿಜೇಶ ಪರಿತೋಷ
ಹರಿಪದಕೇಶನು ॥
ಶೇಷಕುಂಡಲ ವಿಪಂಚಾಸ್ಯ ದಶಭುಜ ಜನಯನ।
ಪೂಶಾಗ್ನಿ ಶಶಿವಾರಿಜಾಸನ ಕಪಾಲಕರ ।
ವಾಸುದೇವಾಕ್ಷ ಪದುಮಾಸಮೇತಂ ಮತ್ತೆ
ವಾಸವಾದಿಗಳ ಗೂಡಿ ॥

೬೧

ಚಿತ್ತಜಾಂತಕನಾಗಿ ಪ್ರತ್ಯಕ್ಷ ಪ್ರಮಥಾಧಿ ।
ಪತ್ಯ ಪಟ್ಟವುಗಟ್ಟಿ ಸಚ್ಚರಣನನ್ನು ಕರ ।
ವೆತ್ತಿ ಪೊಗಳುತಲಂದಿನಿತ್ತೊಯ್ದು ತನ್ನಗಿರಿಯತ್ತ
ಸುಮಯಾನದೊಳಗೆ ॥
ಉತ್ತುಮನೆಯಿದು ಚರರದತ್ತ ಶೇಷದ ಮಹಿಮೆ ।
ಮತ್ತೊಂದು ಪೇಳ್ವೆ ಕೇಳ್ಭಕ್ತಶೇಷದ ಘನತೆ ।
ಚಿತ್ತ ತೋಷದೊಳೆ ಸಲುಭೃತ್ಯಭಾವದಿ ಪಾದ
ಕಿತ್ತುಹಣೆ ಕೊಂಡಾಡಿದಂ ॥

೬೨

ಮತಿವಂತ ಕೇಳು ಸನ್ನುತಗಾತ್ರೆ ಶಾಮಕಚ ।
ಶತದಳಾಯತನಯನೆ ಶಿತಿಕಂಠ ಪದ ಭಕ್ತೆ ।
ವಿತತ ಜೋಕಾದೇವಿ ಜಿತಕಾಮನೆ ತನ್ನ ಪತಿ
ಯೆಂಬುದೊಂದೆ ದೃಢದಾ ॥
ಮತಿಯು ಬಲಿದಿರುತಿರಲು ಪ್ರಮಥ ಋತುಮತಿಯಾದ
ಸತಿಗೆರಡನೆಯ ಗೃಹದೊಳತುಳ ಹರುಷದೊಳಿಟ್ಟು ।
ಸ್ಮಿತಮುಖಿಯರೆರಿದುಡಿಸಿ ಸಿತವಸ್ತ್ರ ಮಂಗಳಾರುತಿ
ಬೆಳಗಿದರು ಬೇಗನೆ ॥

೬೩

ಕಂದಲದಗಿನ್ನುಲದೊಳಿಂದುಮುಖಿಯರು |
ತಂದು ನೀಡಿರಲುಣ್ಣಲೆಂದು ಬಾಯೊಳಗೆ ಕಬ |
ಳೊಂದಿಡಲು ರಸನಿಗಾನಂದಮಾಗಲು ಬೆದರಿಬೆಂದು
ಹಾ ಮಹಾದೇವನೆ ||
ಎಂದುಗುಳಿಬಟ್ಟಲೊಳು ಹಿಂದುರಿಗಿ ಬಾ ಯುಂದವಳ ಕ |
ಠಿದುನೀಯಿಂದುಣಿಸಿಬಾ ಭಾವಗೆಂದುದಂ |
ಕೇಳ್ಯಾಗಲೆಂದು ಗಿನ್ನಿಲಗೊಂಡು ಬಂದಳಾ
ಶಿವನ ಗುಡಿಗೆ ||

೬೪

ಚಕ್ಕನ್ನೈತಂದು ಮುಂದಿಕ್ಕಿನೊಳಗಿರುವರಸು |
ಮಕ್ಕಳೊಡವೆರದ ಜನಕಿಕ್ಕಿಂದ ಕಂಡು ಕಾ |
ಲಿಕ್ಕೆ ತೆರಪಿಲ್ಲದಿಂದ್ಧಿಕ್ಕಿನೊಳು ಪೋಗಿ ಬಾ
ಮುಕ್ಕಣ್ಣ ಬಾ ಭಾವನೆ ||
ಅಕ್ಕನಿನಗುಣಿಸಲೆಂದಕ್ಕರದಿ ಕಳುಹಿದಳು |
ಸಕ್ಕರಿಯ ಹುಗ್ಗಿ ಯಾತಕ್ಕೆತಡ ಉಂಡು ಹಿಂ |
ದಕ್ಕೆನ್ನ ಕಳಿಸೆಂಬುವಾಕ್ಕ ಲಾಲಿಸಿ ಹರುಷವುಕ್ಕುತ್ತೈ
ತಂದು ಪೊರಗೆ ||

೬೫

ಕರದುಪ್ಯಾತಕೆ ಭೀಮೆ ಭರದಿ ಪೇಳೆನಲು ಶಂ |
ಕರನೆ ಕೇಳ್ನಿನಗಗೋಚರಮಾವುದೆನ್ನಕ್ಕ |
ಸುರಿದ ಪುಗ್ಗಿಯನು ಹಿಂದಿರುಗುಗುಳಿ ಕಳುಹಿದಳು
ಹರುಷದಿಂ ನಿನ್ನ ಬಳಿಗೆ ||
ಪರಿ ನೀನೆ ಬಲ್ಲೆಯಾರರಿವರೀ ಮಮತೆ ನಿ |
ನ್ನರಘಳಿಗೆ ಮರೆದಿರಳು ಪುರಹರನೆಯನಲುಂಡ |
ನರರೆ ಈ ಭಕುತಿಯಂ ತರವರಿವರಾರೆಂದು ಸುರ
ರೈದೆ ಬೆರಗಾದರು ||

೬೬

ಸನಿದವಳ ಪೊಂಬಟ್ಟಲವನಿಟ್ಟು ಕೊಂಡಾತ್ಮ |
ನವರನ್ನಯುತ ಗಿನ್ನಲವು ಕೊಡಲು ಕೊಂಡು ಬಲು |
ಅವಸರದಿ ಪೋದಳಾಯುವತಿ ಗೃಹದತ್ತಲಾ ಶಿವ
ಭವನದೊಳ್ಯಾರನೆ ||
ದಿವಸ ದೇವಲನು ಮಾಧವ ಭವನದೊಳಗಾದ |
ವಿವರವಂ ಕಂಡು ಭೂಧವಗರುಪೆ ಕೊಡೆ ಬಟ್ಟ |
ಲವು ಕಂಡು ಖತಿಗೊಂಡು ತವೆ ಶೋಧನಕ್ಕೆ
ಪ್ರತಿಭವನಕೊಬ್ಬೊಬ್ಬರಂತೆ ||

೬೭

ಚರರಕಳಿಸಖಿಳರಂ ಕರೆಸುತ ವಿಚಾರಿಸಿದ |
ಹರಿವಾಣಮಿದುದಾರದಿರುವದೆಂದೆಂದಾಗ |
ವರಚೋಳಿಯಕ್ಕನಾ ನೆರೆಯವರು ಪೇಳಿದರು ಸರಸಿ
ಜಾನನೆಯುಣ್ಣುವಾ ||
ಹರಿಬಟ್ಟಲೆಂದು ಭೂಧವಗರುಪಲದು ಕೇಳು |
ತುರಿದೆದ್ದು ಭರದಿಂದು ಕರೆತನ್ನಿರೆಂದು ಪುರ |
ಹರನ ಗೋಪುರದತ್ತಬರೆ ನೃಪತಿ ಪುರಜನರ ನೆರೆ
ವಿಗಜವಿಜಿ ಮಸಗಲು ||

೬೮

ಅರಸಾಳ್ಗಳೇಳ್ತಂದು ಹರದಿ ಚೋಳಾದೇವಿ |
ಯರಬಂಧುಜನರಿಂಗೆ ಕರೆದು ಕೇಳಲ್ಕೊಂದು ನರಿಯೆ|
ವಾವನೆ ಭೀಮೆ ಬೆರಗಾಗಿ ನಮ್ಮದೀ ಹರಿವಾಣ
ಶಿವನಿಟ್ಟುಕೊಂಡು ||
ಕರಕಿಟ್ಟುದರಿಯದಾಂಶರಗಿಟ್ಟು ತಂದೆ ನೀ |
ಪರಿಕಾಣೆ ನಾನು ಶಂಕರಗಿನ್ನಲೆಮ್ನುತ್ತ |
ರಿರಬಹುದು ಯಾಕೆ ತತ್ತರವೆನ್ನುತೊಳಪೊಕ್ಕು ಭರದಿಂದೆ
ತಂದಿತ್ತಳು ||

೬೯

ಕಂಡು ಪುರಜನರು ಖತಿಗೊಂಡು ಗರುವರು ನೀವು |
ಪುಂಡತನದಿಂ ಕದ್ದುಕೊಂಡು ಬರುವದು ಥರವೆ |
ಭಂಡರಿರೆ ಜನರೊಳಗೆ ಮಂಡಿಯೆತ್ತುವದ್ಯಾಗೆ ಖಂಡಿತಂ
ಪೇಳಿ ಮತ್ತೆ ||
ತುಂಡ ತುರುವಿನದು ಗುಣಪುಂಡರೀಕನದುಮಿದು |
ಕಂಡಕ್ಷಣದೊಳಗೆಮ್ಮ ಗಂಡುಗಲಿಯಾದ |
ಭೂಮಂಡಲಾಧಿಪ ನಿಮ್ಮನಂಡಲೆದು ಪ್ರಾಣವಂ
ಗೊಂಡಲ್ಲದೇಂ ಬಿಡುವನೆ ||

೭೦

ಸೂಳೆ ನಡೆ ನಡೆ ಬೆನ್ನಮೂಳೆ ಮುರಿಸುವೆನೆನಲು |
ಕೇಳಿಗಾಬರಿಗೊಂಡು ಚೋಳಿಭೀಮೆಯು ಕರೆದು |
ಕೇಳಿದರೆ ನಿಜವಾರ್ತೆ ಪೇಳಿದಳು ನನ್ನಕ್ಕ ಕೇಳು ನೀ
ಕಳುಹಿಕೊಟ್ಟಾ ||
ಬ್ಯಾಳಿಪುಗ್ಗಿಯನುಂಡು ಭಾಳಲೋಚನ ಕೊಟ್ಟ |
ಕಾಲದೊಳು ಗುರುತರಿಯದಾಲಯಕೆ ತಂದೆನೆನೆ |
ಕೇಳಿಜನ ಗಹಗಹಿಸಿ ಪೇಳು ನೀ ಮತ್ತಿಷ್ಟು ಪೇಳು
ಪೇಳೆನುತಿರ್ದರು ||

೭೧

ಕಾತರದಿ ಪೇಳಿದಳು ಭೂತನಾಥನು ಕೊಟ್ಟ |
ರೀ ತರುಣಿಗೈವದೇಂ ಪಾತಕರೆ ಕಳವು ನಮ |
ಗೇತಕಿಟ್ಟರಿಯಂಬ ಮಾತು ಮುಗಿವನಕರಸುದೂತ
ರಾಡಿದರವಳಿಗೆ ||
ಕೈತವದ ಕೃತಿಗೈದು ಭೀತಿಯಂ ತೋರಿಸುವ |
ವಾತುನಾಡಿದರೆ ನಾವು ಸೋತೆವೇಂ ಬಿಡು ನಿನ್ನ |
ಕೌತುಕವನೆಂದವಳದೂತೆ ಸಹಪಿಡಿದು ಭೂನಾಥ
ನಲ್ಲಿಗೆ ನಡಿಯೆನೆ ||

೭೨

ಖೊಟ್ಟಿಗಳೆ ನಮಗೆ ಶಿವಕೊಟ್ಟುದುದೆ ನಿಜವೇತ |
ಕಿಟ್ಟರೀ ಕಳವೆನಲು ಸಿಟ್ಟೇಕೆ ಸಾಕ್ಷಿಯಿಂ |
ಕೊಟ್ಟರಿದು ದಿಟವೆನಲು ದಿಟ್ಟಮೂರರನ ಸಾಕ್ಷಿ
ಕೊಟ್ಟಪೆನು ತಾನೆನ್ನಲು ||
ಬಿಟ್ಟುಕಳೆ ಕಟಕಿಯಿದು ಕೆಟ್ಟಗುಣ ಫಲವೆಂದು |
ರಟ್ಟಿಗಳ ಹಗ್ಗದಿಂ ಕಟ್ಟ ತರುತಿರೆ ಕಂಡು |
ಪಟ್ಟಣದ ಜನರೆಲ್ಲ ಬಟ್ಟು ಮೂಗಿನ ಮೇಲೆಯಿಟ್ಟು
ಸೋಜಿಗಗೊಂಡರು ||

೭೩

ಎಳದೊಯ್ದು ದರದರನೆ ಮಲಹರನ ವೇಗುಲಕೆ |
ತಳುವದರಸನ ಮುಂದೆ ನಿಲಿಸುತವರಂದುದಂ |
ತಿಳುಹಲ್ಕೆ ಕೇಳಿ ಕಲಕಲನಕ್ಕು ಮರುಳ ಜನರೊಳಗಿವರಿ
ಮೇಲೆನ್ನುತೆ ||
ಲಲನೆಯರು ಲಕ್ಷಿಸುತೆ ನೆಲದೊಡೆಯು ನಾಡಿದನು |
ಕಳವುಮಾಡಿದ ಕೆಟ್ಟ ಹೊಲತಿಯುರೆ ನಿಮ್ಮ ನಾ |
ನೊಳಗೆ ಬಿಡುವವನಲ್ಲ ಗಳುಹಿದೋಲ್ಲುಡಿಸೆನಲು ಬಲು
ಭಕುತಿಯಿಂದ ನಮಿಸಿ ||

೭೪

ಭೀಮೆ ಕಟ್ಟನ ಸಹಿತ ಕೈಮುಗಿದು ಪೊಡಮಟ್ಟು |
ಭೀಮೇಶ ಜಯತು ವರಸೋಮಶೇಖರನೆ ಭವ |
ಭೀಮ ಜಯ ರಜತನಗಧಾಮ ಜಯಸೋಮ ಜಯ
ಕಾಮಸಂಹರ ಜಯ ಸದಾ ||
ತಾಮರಸನಾಭ ವಿನುತಾಮರಾಧಿಪಸೇವ್ಯ |
ಹೇಮನಗಧನ್ವ ಜಯ ತಾಮರಸಜಾತ ಶಿರ |
ತಾಮರಸಕರ ಕಲಿತ ಭಾಮುಕರಕೋಟಿತನು ಸ್ವಾಮಿ
ಪಾಲಿಸು ಶಂಕರಾ ||

೭೫

ಇಂದುಶೇಖರ ಚಾರುನಂದಿಗಮ ಜಯ ಜಯ ಪು |
ರಂದರಾತ್ಮಜ ಶರದನಿಂದೀವರಾಸ್ತ್ರಜಿತ |
ಕಂದು ಕಂಧರನೆ ಗೋವಿಂದಲೋಚನಪಾದ ಕಂದಲ
ವರಧನ್ವಿನೇ ||
ಮಂದರಾದ್ರಿನಿವಾಸ ದಂದಶೂಕ ವಿಭೂಷ |
ತುಂದಿಲಶರೀರಪಿತ ಸುಂದರ ಶರೀರ ಗಿರಿ |
ನಂದನಿಯ ಚೇತಸ್ಸುಶಿಂಧುವರ್ಧನ ಪೂರ್ಣಮೇಂದು
ಭಕ್ತರ ಬಂಧುವೆ ||

೭೬

ಭಾವ ನಿನ್ನಂತಪ್ಪ ಜೀವಿತೇಶಕ್ಕಗಿರ |
ಲೀವಿಧಿಯೆ ಶಿವಮಹಾದೇವ ನೀನುಂಡುದಂ |
ಭೂವರನೆ ಮುಖ್ಯಜನ ಜಾವಳಿಯು ಪುಸಿಯೆಂಬೊಡಾ
ವದು ವಿಚಾರ ಶಿವನೆ |
ದೇವನೀ ಮುನಿಯಲ್ಕೆ ಕಾವರಾರೈಜಗದಿ |
ಗೈವನೇನೀಪೊಳ್ತು ಸಾವಧಾನದಿ ಸತ್ಯ |
ನೀವೇಳ್ವುದೆನಲವಳ ಭಾವ ಕೊಲಿದೀಶವೊ ಹೋ
ಯೆನಲು ಕೋಟ ಸಿಡಿಲಂ ||

೭೭

ಎರಗಿದಂತಾಗೆ ಬೆಬ್ಬೆರಗಾಗಿ ಮೂರ್ಛೆಯಿಂ |
ಪುರಜನರು ತಮ್ಮ ಮೈಮರೆದೊರಗಿ ಧರಣಿಯೊಳ |
ಗರಸುನಾಲಿಸುತ ಲಜ್ಜರಿವಡುವ ತೆರದಿ ಶಂಕರ
ನುಡಿದನಾ ಕಾಲದಿ ||
ಹರದಿ ಕಳುಹಿದ ಪುಳ್ಗಿ ಹರುಷದಿಂದುಂಡೆನ್ನ |
ಹರಿವಾಣ ಕೊಟ್ಟೆನಿದು ನಿರುತೆಂದು ಲಿಂಗದಿಂ |
ದ್ಹೊರಗೆ ಬಂದಪ್ಪೆ ದಶಕರದಿಂದಲಂಬರದಿ ಸುರರಳ
ಮಳೆಗರೆದರು ||

೭೮

ತೋಯಜಾಸ್ತ್ರ ವಿನಾಶನಾಯುವತಿಗಳಿಗೊಲ್ದ |
ಪಾಯವೆನ್ನಿಂದಾಯ್ತು ನೋಯದಿರು ಬಾಯೆಂದು |
ಕಾಯದೊಳುಕೊಂಡು ಪದಸಾಯುಜ್ಯನಿತ್ತನದಿ
ತೋಯನಿಧಿ ಸೇರುವಂತೆ ||
ತೋಯಜಾನನೆ ಭೀಮೆ ಹಾಯೆಂದು ನನ್ನಕ್ಕ |
ನೀಯಾಕೆ ಬಿಟ್ಟ್ಹೋದಿ ಭಾವ ನೀನ್ಯಾತಕ |
ನ್ಯಾಯಗೈದ್ಹೇಳೆಂದು ಬಾಯ ಬಿಟ್ಟೊಲಿಸಿ ನಿರ್ಮಾಯ
ನೊಳಗೇಕಾದಳು ||

೭೯

ಕೇಳಿಬಲ್ಲೆವು ಭೂತಕಾಲ ವರ್ತನೆ ಶಬರ ।
ಪಾಲಕನ್ನಣ್ಣಡಗು ನಾಲಿಗೆಲೆ ಮುಟ್ಟೆ ಶಶಿ ।
ಮಾಳಿಗುಣಿಸಿರ್ದುದಂ ಕೋಳೂರ ಚನ್ನಮ್ಮ
ಶೀಲಗುಣ ಸಂಪನ್ನೆಯು ॥
ಪಾಲುಗುಡಿಸಿರ್ದುದಿಂದಾಲಿಯಿಂ ಕಂಡೆ ವೀ ।
ಚೋಳಿಯಕ್ಕಮುದಾಸಿ ಕೈಲುಣಿಸಿ ಶಿವನೊಳಗೆ ।
ಬೈಲಾದರೆಂದು ಜನಜಾಲ ಕೊಂಡಾಡಿ ತಾವ್ಯಾಳ್ಯ
ದೊಳು ಘನಹರುಷದಿ ॥

೮೦

ವರಿವೆನಿನ್ನೆಂದು ಕೇಳ್ ಶರಣಬಸವಪ್ಪ ಚರ ।
ವರನೋರ್ವ ಭಿಕ್ಷೆಯಾಚರಿಸೊಂದು ನದಿ ತೀರ ।
ಕಿರದೆಯೇಳ್ತಂದು ಘನ ಹರುಷದಿಂ ಭುಂಜಿಸುತ್ತಿರು
ವಾಗನಸುಶೇಷವಂ ॥
ಕರದಪ್ಪಿಬೀಳೆ ಜಲಚರ ಸೇವಿಸಿರಲು ಧೀ ।
ವರನದನು ಪಿಡಿತಂದು ಕೊರೆದುತಿನಲಾಗಿ ಶಿವ ।
ಪುರದೊಳಗೆ ಪ್ರಮಥಪದ ದೊರಿಕಿತೀರ್ವರಿಗೆನಲು
ಚರಶೇಷ ಪೊಗಳಲಳವೆ ॥

೮೧

ಗಂಧರ್ವ ಜನ್ಮಾಂತರ್ದ್ದಂದಿ ತಾನಾಗಿರು ।
ತ್ತೊಂದುದಿನ ಚರಶೇಷತಿಂದರವು ಪಡೆದಿರಲು ।
ಒಂದುದಿನ ಬರಗುಣಿಗೆಳಿಂದದಕೆ ಬರಿಯಲವು
ಕಂದಲಾಗಲು ಕಾಣುತೆ ॥
ಬಂದರಸಗರುಪಲ್ಕೆ ತಂದವದು ಪರೀಕ್ಷಿಸಲು ।
ಬೆಂದಳಿಯಲಸ್ಥಿ ತೊವಲಿಂದ ಹೇಮಾಗಲ್ಕೆ ।
ಹಂದಿಮುದ್ರಿಯ ನಾಣ್ಯಯಿಂದಿಗೆ ವರಹನಾಮದಿಂದೆಸೆವ
ವೀ ಧರೆಯೊಳು ॥

೮೨

ಮನುಜೇಂದ್ರಚೋಳ ಮಜ್ಜನದೆಳ್ಳು ಪರಿಪಿ ಬಹು ।
ಜನ ಕಾವಲಿಟ್ಟುದಂ ಮುನಿಚೋಳ ಕೇಳುತಂ ।
ದಿನ ಬಂದು ಧೈರ್ಯದಿಂತಿನುತಿರಲು ಪಿಡಿತಂದು
ಜನನಾಥಗೊಪ್ಪಿಸಲ್ಕೆ ॥
ಮನುಮಥಾರಿಯ ತಿಲವು ತಿನಲವನು ಭವ ಭವದಿ ।
ಋಣಿಯಹನು ಶಿವನಿಗೆನಲೆನಗದನೆ ಬೇಕೆನಲು ।
ಕ್ರಿಣೆಯಚರನಹುದುಮಯೀ ಋಣದಿಂದ ನೀನು ನಾನಿನಗೆ
ಚರವಪ್ಪೆನೆಂದು ॥

೮೩

ಬೆರಳಿಂದ ಬಾಯಿಯೊಳಗಿರುವೆಳ್ಳು ತೆಗೆದು ಮೆಲು ।
ತಿರುತಿರಲು ವೀರಗುಹ ಗಿರಿಜೆ ಗಜಮುಖ ಸಹಿತ ।
ಹರುಷದಿಂ ತಿನ್ನುತಿರೆ ಧರಣಿಯೊಳು ಬಿದ್ದೆಳ್ಳು
ಬೆರಗಾಗುತವರೀರ್ವರಾ ॥
ಪರಿಕೇಳೆ ಮಾರಸಂಹರ ಪೇಳಿದನು ನಿಮ್ಮ ।
ಚರನಪ್ಪ ತಿಲದಋಣ ಪೊರುವೆನೆನೆ ಪದಕೆರಗಿ ।
ಹರುಷದಿಂ ಕೊಂಡಾಡುತಿರೆ ಮೆಚ್ಚಿ ಕೈಲಾಸಪುರಿ
ಗೊಯ್ದು ಕೇಳು ಶರಣಾ ॥

೮೪

ಕರಿಕಾಲಚೋಳ ಭೂವ್ವರನ ದಿವ್ಯಾನ್ನ ಶಂ ।
ಕರನು ತಾಬಿಟ್ಟು ಮಾದರಚನ್ನನಂಬಲಿಯ ।
ಸುರಿಯಲದು ಕೇಳಿ ನರವರನು ಹೊಲಗೇರಿಯೊಳು
ಬರೆಕಂಡು ಚನ್ನಯ್ಯನು ॥
ತ್ವರನೆದುರೆ ಬರೆಕಂಡು ಚರಣಕಾನತನಾಗಿ ।
ಕಿರಿಯನೆಂದರಿದ ಮರುಮರಿಯೊಂದು ಕೊಂಡಾಡಿ ।
ಕರಿಯುಶಿರದೊಳಗಿಟ್ಟು ಮೆರಿಸುತಿರೆ ಮೆಚ್ಚಿ ಶಂಕರ
ನೊಯ್ದು ಕೈಲಾಸಕೆ ॥

೮೫

ಗುರುಲಿಂಗ ಚರಭೂತಿ ಹರನಾಕ್ಷಿಮಂತ್ರ ಚರ ।
ಚರಣಾಂಬು ಶೇಷಗಳ ಪರಿಚರ್ಯಗೈದುಮನ ।
ಹರುಷದಿಂದಿತ್ತು ಧನ ನೆರೆಕೊಟ್ಟು ಧರಿಧರಿಸಿ ಸ್ಮರಿಸಿ
ಸೇವಿಸುತುಣ್ಣುವಾ ॥
ನರಗೆಜಸಮೋಕ್ಷ ಸುತ ತರುಣಿ ಸಂಪದಭೋಗ ।
ದೊರಕೊಳಗು ಮೀಯಷ್ಟವರಣದೊಳು ಭಕುತಿ ಲ ।
ಕ್ಷರಮೊಂದು ಕೇಳಿದವ ಚಿರಕಾಲ ಮಿರುವನೆನೆ ।
ಪರಿಪೂರ್ಣ ಕೇಳಿದವನು ॥

೮೬

ಸುಕರವೇಂ ಪಡಿವನೋ ಅಕುಟಿಲನೆ ಕೇಳು ಮುಂ ।
ದಕೆ ಹಿಂದೆ ಪೇಳಿದನಿತಕೆ ನೋಡೆ ಬೇಕೊಂದೆ ।
ಭಕುತಿಯದರಿಂವಾವಸುಕೃತ ಘನವಲ್ಲ ತಾಂ ।
ಪ್ರಕಟಮಿದು ಕೇಳುಮತ್ತೆ ॥
ಸಕಲ ಧರ್ಮದೊಳ ಬಾಧಕ ತಿಳಿಯೆ ಭಕ್ತ ಸಾ ।
ಧಕಗಹುದು ನಾಡೆ ಸನ್ಮಕುತಿಯನಲಿನ್ನಾವ ।
ಕಕುಲತಿಯು ಕೇಳ್ವದೆಂದಕಲಂಕನಿಗೆ ಕರವಿಮುಕು
ಳಿತಾಗುತೆ ಶರಣನು ॥

೮೭

ತಿಳುಹೆನಗೆ ಗುರುವೆ ಧರೆಯೊಳು ಭಕುತಿ ಮಾಡಿದವ |
ರೊಳರೆಯೀಕಲಿಕಾಲದೊಳಗೆನಲು ಸಂತಸಂ |
ದಳೆದು ಕೇಳ್ ಶರಣಮಂಗಳವಾಡಿಯಲ್ಲಿ ಗಣತಿಲಕ
ಬಸವೇಶ ಬಂದು ||

ಸುಲಭ ಜಂಗಮರ ಸಂಕುಳ ಬೇಡಿದಿತ್ತು ನಿ |
ರ್ಮಳ ಭಕ್ತಿಮಾಡಿ ಶಿವನೊಳು ಬೆರಿದ ನೀಗಲಿದೆ |
ಕಲಿಯೊಳೆನೆ ಕೇಳಿ ಪದನಳಿನಗಳಿಗೆರಗುತದು
ತಿಳುಹೆಂದ ಗುರುತಿಲುಕಗೆ ||

೮೮

ವರಪುರದ ಶಿವಲಿಂಗ ಶರಣಬಸವನ ಚರಿತೆ |
ಗುರುಬಸವಣಾರ್ಯ ಪದಸರಸಿರುಹ ಲೀನಮಧು |
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸುಖ ಭಕ್ತಿಯಿಂ ||

ವಿರಚಿಸದನೋದಿಸುವ ಬರೆದಗೋದುವಗೆ ಪರ |
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ |
ದೊರೆಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ಗಿರಿಸಂಧಿ ಸುರ ಸಂಬಂಧಿ ||

**ಸಂಧಿ ೬ ಕ್ಕೆ ಪದ ೫೭ಲಕ್ಕಂ ಮಂಗಳಂ.**



ಶ್ರೀ ಶರಣಬಸವೇಶ್ವರ ಪ್ರಸನ್ನ

## ಎಂಟನೆಯ ಸಂಧಿ

ಸೂಚನೆ॥ ಭಕ್ತಿಯಂಗೈಯ್ಯುತವ್ಯಕ್ತನಂ ಬೆರೆದು ವರ ।
ಮುಕ್ತಿಯಂ ಪಡೆದ ಘನ ಭಕ್ತರ ಚರಿತ್ರೆ ಮೃದು ।
ಓಕ್ತಿಯಿಂ ಪೇಳಲಾಸಕ್ತಿಯಿಂ ಕೇಳಿ ಸದ್ಭಕ್ತಿಯೊಳಗಿರುತಿರ್ದನು ॥

೧

ಶ್ರೀನಗೇಂದ್ರಾತ್ಮತನುಜಾನನ ಸರೋಜ ವರ ।
ಭಾನು ಭವಭೀಮ ಸನ್ಮೌನಿಗಣವಂದ್ಯ ಹರಿ ।
ಸೂನುಜಿತ ಸುರಸೇವ್ಯ ಸ್ಥಾಣುನತಜನ ಕಾಮಧೇನು
ಧರ ಸುರ ನಿಮ್ನಗಾ ॥
ದೀನಜನ ಬಂಧು ಚತುರಾನನ ಮುಖಾಮರ ಪ ।
ದಾನತಂ ಪುರವಿಜಿತಕೀನಾಶ ನಾಶಪಂ ।
ಚಾನನಘಕಾನನ ದವಾನಲಂ ಶಿವಲಿಂಗ ತೇನ
ಮಸ್ಮಿ ಜಗಪಾಹಿ ॥

೨

ಸೂನು ಶಿವಭಕ್ತಿಯಾಧೀನ ಕೇಳಾಭಕ್ತಿ ।
ತಾನೆ ವರಭಕ್ತರಾಧೀನಮಾ ಭಕ್ತಂಗ ।
ದೀನೊಂವರೊರೆಯಿಲ್ಲ ದಾನಕರ ಮೇಲು ಸೋಪಾನ
ಮಿದು ನಿಜ ಮುಕ್ತಿಗೆ ॥
ದಾನಮಿಲ್ಲದಮಾಟ ದಾನವರಕಾಟ ಸಂ ।
ತಾನವಿಲ್ಲದ ಭೋಗ ಮಾನಮಿಲ್ಲದ ತ್ಯಾಗ ।
ಗಾನಮಿಲ್ಲದ ಕೇಳಿ ಹೀನದಯು ನರಧಾಳಿ ನೀನರಿ
ಯೊ ಶರಣಬಸವಾ ॥

೩

ಶರಣಕುಲ ತಲೆಮಣಿಯೆ ಗುರುಬಸವ ಕಲ್ಯಾಣ ।
ಪುರದರಸ ಬಿಜ್ಜಳನ ವರಮಂತ್ರಿಯಾಗಿ ಸೂ ।
ಸ್ಥಿರ ಮನದಿ ಭಕ್ತಿಯಾಚರಿಸಿರ್ದಪರಿ ಬೇರೆ ಚರರೇನು
ಬೇಡೆತನಗೆ ॥
ಪರಿ ಪರಿಯು ಕಾಡಿದರೆ ನೆರೆಗೊಟ್ಟು ತಣಿಸುತಲಿ ।
ಪರಮಾನುರಾಗದಿಂದುರೆ ಪವಾಡಂ ಗೆಲಿದು ।
ಧರೆ ಭೋಗತೀರ್ಚಿ ಪುರಹರನೊಳಗೆ ಬೆರೆದನಾ
ಶರ ಶರಧಿಯಂ ಬೆರಿಯೊಲು ॥

೪

ಬಸವಗೈಯ್ಯುವ ಭಕ್ತಿಯಸಕಮದು ಜಗದೊಳಗೆ ।
ಪಸರಿಸಿರೆ ಕೇಳು ತಾಯಶವು ಜಂಗಮರಖಿಳ ।
ದಸೆಯಿಂದ ಬಂದು ಸಂತಸದಿಂದ ಕಂಡು ಚರವಿಸರ
ಮಾ ಕಲ್ಯಾಣದಾ ॥
ವಸತಿಗೈದವರೊಳಗೆ ಮೊಸರು ನೇಮಿಗಳು ಕೆನೆ ।
ಮೊಸರು ನೇಮಿಗಳು ಸೀಮೊಸರು ನೇಮಿಗಳು ಪುಳಿ ।
ಮೊಸರು ನೇಮಿಗಳು ಗುರುಬಸವರಾಜನ ಭಕ್ತಿ
ಗೊಸೆದು ಸುಖದಿಂದಿರ್ದರು ॥

೫

ದೇಶದೇಶದಿ ಬಪ್ಪ ಭಾಸುರೈಯ್ಯಗಳ ।
ಸಂತೋಷದಿಂ ಕರೆತಂದು ಈಶಾರ್ಚ ಭೋಜನಂ ।
ಗೈಸಿ ಸೇವೆಗೆ ದಾಸಿಯರನಿತ್ತಿರಲು ವಾಸವಂ
ಕೊಟ್ಟು ಮತ್ತೆ ॥
ಪಾಸಿಗೆಯು ಧನಧಾನ್ಯ ರಾಸಿಗಣಗಳನೇಕ ।
ಸಾಸಿರಕೆ ಭಕ್ತಿಯ ವಿಶೇಷದಿಂ ಕೊಟ್ಟು ಮೃದು ।
ಭಾಷೆಯಿಂದುಪಚರಿಪನೀಶನಿಜಮಿವರೆಂದು ।
ಬೇಸರಿಲ್ಲದೆ ಸಂತತಂ ॥

೬

ನೊರೆವಾಲು ನೇಮದವರೆರಡಾರು ಸಹಸ್ರ ಪ ।
ನ್ನೆರಡು ದಶಶತಕನೆಯ ನಿರುತ ನೇಮಿಗಳು ಸಾ ।
ಸಿರ ಭಾನುಗಟ್ಟಿ ಪಾಲ್ಸುರಿವ ನೇಮಿಗಳು ಸಲೆ ಪರಮ
ಪಂಚಾಮೃತವನು ॥
ಸುರಿವ ನೇಮಿಗಳು ಸಾವಿರ ದ್ವಾದಶಂ ಬೆಣ್ಣೆ ।
ಕರಗಿಸಿದ ತುಪ್ಪ ಹೆರೆದುಪ್ಪ ನೇಮಿಗಳನಿತೆ ।
ಪರಿಗಣಿತೆ ಪಾಯಸಂ ಪರಡಿ ಸಜ್ಜಿಗೆಕಟ್ಟು ಪರಮಾನ್ನ
ನೇಮದವರು ॥

೭

ಅರಳುವಲು ಪಾಲುಂಡಿ ಕರಿದ ಹೂರಣಗಡಬು ।
ಮರುಗ ಚಟ್ಟಣೆ ಖಮ್ಮಘುರಿದ ತಂಬಿಟ್ಟು ಸೀ ।
ಕರಣೆ ಸಣ್ಣಕ್ಕಿಯನ್ನ ಸುರಳಿ ಹೋಳಿಗೆಯು ಸಕ್ಕರೆ
ಹುಗ್ಗಿವಡೆಗಾರಿಗೆ ॥
ಸಿರಿಖಂಡ ಮಂಡಿಗೆಯು ಕರಜಿ ಕಾಯ್ಲಡ್ಡಿಗೆಯು ।
ಸರಳ ಶಾವಿಗೆ ಗೌಲಿ ತುರುಪಾಲಿನ್ಹುಗ್ಗಿ ।
ಸುರಚಿರದ ಚಿತ್ರಾನ್ನ ಪೀವರ ಪರಯೋಘರೆಗೈದ
ಪರಮು ಷಡುರಸ ನೇಮದಾ ॥

೮

ನಾರಿ ಕೇಳ್ ಕದಳಿ ಜಂಬೀರ ಚೂತ ಕಪಿಥ್ಥ ।
ಪೇರು ವರದ್ರಾಕ್ಷಿ ಖರ್ಜೂರ ದಾಡಿಂಬ ರಂ ।
ಜೀರಥವಳೇಕ್ಷುರಸ ನೀರಲಂ ಪನಸು ಸಲೆ
ನಾರಂಗ ಸೀತಾಫಲಂ ॥
ಆರು ರುತು ಕಾಲದೊಳು ಚಾರು ಜಂಗಮುಗಳುಪ ।
ಹಾರಮಿವು ಗೈಯುತಿಹ ಭೂರಿ ವ್ರತ ವರೆ ನಿಮಿಷ ।
ಮೀರದಲೆ ನಡಿಸುವನು ದಾರಿ ಬಸವೇಶನೀ ಧಾರು
ಣಿಯ ಜನ ಪೊಗಳಲು ॥

೯

ನೇಟನಿಂ ಸೂಳಿಯರ ಕೂಟದೊಳು ಚರ ಚಾರು ।
ವೈಟಜನ ವೇಶಾಸುವಾಟಿಕಿಯೊಳಿರುತಾವ ।
ಕಾಟಗೈದರು ನಿಗಮ ಘೋಟರವರೆಂದ್ಹೇಳ್ದ ।
ಮಾಟಗೈವನು ತೋಷದಿ ॥
ಮೀಟಾದಲಂಕಾರ ಊಟವಸನಗಳು ಮುದ ।
ನಾಟದನುಕೂಲ ಧನ ಬೇಟಕೆರಡನೆಯ ಶಶಿ ।
ಜೂಟನಡಿಸಲ್ಕಾವ ತೋಟಿಯಿಲ್ಲದಲೆ ಚಲ್ಲಾಟ
ದೊಳಗಿರುತಿರ್ದರು ॥

೧೦

ಆ ಚರರೊಳೋರ್ವ ಹಿಮರೋಚಿಮುಖಿ ಧನ ತರಲು ।
ಸೂಚಿಸಲ್ಕೈತಂದ ನೀಚದಾಸಿಗೆ ನೀಲ ।
ಲೋಚನಿಯರುಟ್ಟುದಂ ಗೋಚರಿಸೆ ಯಕ್ಕಗಿದು
ವಾಚಿಸುವೆನೆಂದು ಬಂದು ॥
ಭೂಚಕ್ರದವರ್ಗೆಲ್ಲ ಗೋಚರಾಮಡಿ ಕಂಡ ।
ಲೋಚನಕೆ ಶೋಭಿಸೆ ವಿರೋಚಿಕರಗಳ ತೆರದೊ ।
ಳೀಚ ದುರಭಾವ ಕೈಚಾಚಿದರೆ ಕೊಡನಯಘ
ಮೋಚ ಬಸವೇಶನಕ್ಕಾ ॥

೧೧

ಎನೆಕೇಳಿ ವಿಟನಿದೇಂ ಘನಕಾರ್ಯವೆಂದು ಕುಣಿ ।
ಕುಣಿದಾಡಿ ಬಂದು ಬಸವನ ಬಳಿಗೆ ಕೊಡು ನಿನ್ನ ।
ವನುತೆಯುಟ್ಟಾಥಟ್ಟ ತನಗೆನಲು ನೀಲಲೋಚನಿ
ಯರಂ ಕರೆಸುತಾಗ ॥
ಜನಸಮಾಜದಿ ಪಿಡಿದು ಕೊನೆಸೆರಗು ಸೆಳೆವುತಿರೆ ।
ಲಸಿತರೊಳು ಶೀರೆಗಳಗಣಿತಮಾದವು ನಾನ ।
ಜಿನಸಿನವು ಬಸವಕರವನಜ ಸೋಂಕಿಂದಖಿಳ
ಜನವ್ಯೈದೆ ಬೆರಗಾಗಲು ॥

೧೨

ಅಂಬರದೊಳಿಂದ್ರಧನುಬಿಂಬ ಮೆಸೆವಂತೆ ಗಂ ।
ಗಾಂಬೆದೇವಿಯ ಗುರುಸಿತಂಬು ಪರಿ ಭಾಗದೊಳು ।
ಪೊಂಬಿಸಲು ನೀಲಮರುಣಂಬೆತ್ರ ಪಚ್ಚಶಿತ
ಪೊಂಬಣ್ಣಗಳು ಕಣ್ಣಿಲೆ ॥
ಕಾಂಬಮನ ಕೌತುಕಂಗೊಂಬದಿರದೆನಲು ಪೀ ।
ತಾಂಬರಗಳಿಕ್ಕೆಲ ದುಂಬಿರಲು ಜಂಗಮನಿ ।
ದೇಂ ಬಸವ ಬಿಡೆನೆ ಚರರಂ ಬರಿಸಿ ಪೊರಿಸಿಯವ
ರಿಂಬಿಂಗೆ ಕಳುಹಿಕೊಟ್ಟು ॥

೧೩

ಘನತೋಷದಿಂ ಶಿವಾರ್ಚನೆಗೈಯ್ಯುತಿರಲೊಂದು ।
ದಿನ ಬಸವರಾಜನಾ ಜನಪಾಲಯದೊಳು ಜೀ ।
ವನ ದಂಡಿಗಿಡುತಿರುವವನು ಕಂಡು ಚರಪಲ್ಲವನು
ಬೇಡಿ ಬಲು ಕಾಡುತೆ ॥
ತನಗೆಕೊಡು ಬಸವನೀ ಧನವಿನಿತುಯನಲಿತ್ತು ।
ವಿನತನಾಗುತಲವನ ಮನೆಗೆ ಕಳುಹಲ್ಕಂಡು ।
ಕುನಿಸು ಕೈಗೂಡಿತೆಂದೆನುತ ಮಂಚಣ್ಣಾದಿ
ಜನಪನಲ್ಲಿಗ್ಹೋಗಿ ॥

೧೪

ಮಂಡಲಾಧಿಪ ನಿಮ್ಮ ಭಾಂಡಾರ ಧನವೆಲ್ಲ ।
ದಂಡನಾಯಕನೋರ್ವ ಮಿಂಡವಿಟಗಿಟ್ಟುದಂ ।
ಕಂಡೆವೆನೆ ಕೇಳುತಾ ಕೊಂಡಿಯರನುಡಿಗೆ
ಕಣ್ಕೆಂಡದಂತಾಗಲೊಡನೆ ॥
ಭಾಂಡಾರಿಯಂ ಕರಸಿಕೊಂಡು ನೃಪನುಡಿದನೀ ।
ಮಿಂಡಚರರರಸುತನ ಕೊಂಡರದು ಲೇಸು ನಿಮ ।
ಗಂಡಲಿದು ಫಲವೇನು ಪುಂಡಾಟಿಕೆಯು ಮನಂ
ಗಂಡೆ ನಿನಗಿದು ನೀತಿಯೆ ॥

೧೫

ಕೇಳು ಬಸವೇಶ ಧರೆಯಾಳುವದು ಸಾಕು ಪೊಂ |
ಜಾಳಿಗಿಯು ಪಲ್ಲವಗೆ ಪೇಳಿಗಿಯ ತೆರದಿತ್ತಿ |
ಹೇಳುವರು ನಿಮಗಾರು ಥಾಳಿ ಘನವಾಯ್ತೆನಲು
ತಾಳರಸ ಪಿಸುನಗೇಳಿ ||
ಹಾಳಾಗಬೇಡ ಸತ್ಶೀಲ ಸಂಪನ್ನರೀ |
ಭಾಳಾಕ್ಷ ಭಕ್ತಗಣ ಖೂಳರೇಂ ಪರರರ್ಥ |
ಕೀಳಾಸೆಗೈಯಲ್ಕೆಪಾಲ ಬಿಡು ಬಿಂಕಾವಕಾಲ
ದೊಳಗಾಗದಿದನು ||

೧೬

ಧರೆಯೆದ್ದು ಮೇಲ ಕಂಬರಹ್ಹಾರಿ ಪೋದರುಂ |
ವರುಣ ದೆಶೆಯೊಳು ಸುಧಾಕರ ಭಾನು ಮೂಡೀಂದ್ರ |
ಹರಿಯಲ್ಲಿ ಮುಳುಗಿದರು ಗಿರಿಗಳೇಳಸ್ಥಲ ಬಿಟ್ಟು
ಚರಿಸಿದರು ಬಿರಿಗಾಳಿಗೆ ||
ಶರಧಿ ಸಪ್ತಗಳೊಮ್ಮೆ ಬರುತ ಪೌರ್ವಾನಲಂ |
ಉರಿಸಂದಿ ಆಕಾಶಧರೆಗುರುಳಿದರು ಮಾರ |
ಹರ ಶರಣರೆಂದೆಂದು ಪರದ್ರವ್ಯಕೆಳಸರಿಲೆ ನರ
ನಾಥ ಕೇಳುನಿರುತ ||

೧೭

ಎನುತಾಡಿ ತರಿಸುತ ಧನದಖಿಳ ಪೆಟ್ಟಿಗೆ ಗ |
ಳನು ತೆರೆದು ತೋರಿಸಲ್ಗಣಿತಕ್ಕೆ ಮೀರಲಾ |
ಹಣ ಕಂಡು ಕೊಂಡಾಡೆ ಜನರೆಲ್ಲ ಬೆರಗಾಗಿ
ಜನಪ ವೃಷಭನ ಪಾದಕೆ ||
ಮಣಿದು ಮಣಿಕನಕಾಭರಣ ವಸ್ತ್ರಗಳನಿತ್ತು |
ಮನದಣಿಯೆ ಕೈ ಮುಗಿದು ಜನಕನೆನ್ನಪರಾಧ |
ಯಣಿಸದಿರು ಮುಂದೆ ಪೈಶುನಗೈದವರ ರಸನೆ
ಯನು ಕೊರೆಸುವೆನು ನಿಶ್ಚಯಂ ||

೧೮

ಕ್ಷಿತಿಪಾಲನಿಗೆ ಮನ್ನಿಸುತ ದಂಡಿಗೆಯನೇರು |
ತತುಳ ವಿಭವದಿ ಬಂದು ಶತಸಹಸ್ರತೊಬಂತ್ತು |
ಘುತು ಸಹಸ್ರಚರರ ಸಂತತಿ ತೃಪ್ತಿ ಬಡಿಸುತಲಿಯತಿ
ಭಕ್ತಿ ಗೈಯ್ಯುತ್ತಿರಲು ||
ಸಿತಗಚರ ಬಂದು ಪೆಂಡತಿ ಕರ್ಣತಾಟಂಕ |
ನತನಗೆಯು ಕೊಡುಯೆಂದರತಿತೋಷದಿಂದಿತ್ತು |
ಕೃತಕೃತ್ಯನಾಗಿ ಚರವಿತತಿ ಮನ ಬಯಕೆಯಂ
ಸತತ ನಡೆಸುತಿರ್ದನು ||

೧೯

ಪರಿ ಪರಿಯ ಜಂಗಮರ ಪರಿಚರ್ಯಯಂ ಗೈವು |
ತಿರಲೊಂದು ದಿನನೋರ್ವ ಚರ ಬಂದು ಪಂಕ್ತಿಯೊಳು |
ಕರೆದು ಬಸವನನೆನಗೆ ಬರಡಾವು ಪಾಲ್ಬೇಕು
ಕರೆದು ನೀಡೆನೆ ಕೇಳುತಾ ||
ಹರುಷಂ ತಾಳ್ದೊಂದು ಕರುತಂದು ಹಿಂಡಲ್ಕೆ |
ಗುರುಬಸವರಾಜನಾ ಪರುಷ ಕರಸ್ಪರ್ಶದಿಂ |
ಸುರಿಯೆ ಪಯ ನೀಡುತಾವರ ಜಂಗಮನ ತೃಪ್ತಿ
ಕರಸಿ ಕೌತುಕವಿತ್ತನು ||

೨೦

ಮೊರಟದೊಳ್ ಬಂಕಯ್ಯನಿರುವ ಮನೆಗೋರ್ವ ಶಿವ |
ಶರಣ ಬರೆ ಕಂಡೆದ್ದು ಕರೆದು ಕುಳ್ಳಿರಿಸುತಲಿ |
ಚರಣವಂದೊಳೆದು ಶಂಕರ ಪೂಜೆಗೈವುದೆನು
ತಿರೆ ಕೇಳುತವರೆಂದರು ||
ಬರಡಾವು ಪಾಲು ಮೇಣ್ ಕೊರಡು ಪತ್ರಿಗಳನೇ |
ನಿರುವದೆನಲಿತ್ತು ಬಲು ಮೆರೆದುದನೆ ಕೇಳ್ದಿವಂ |
ದುರಮಿದನು ಕಂಡೆವಿಂದರರೆ ಕೌತುಕವೆಂದು
ಪುರ ಜನರು ಕೊಂಡಾಡಲು ||

೨೧

ಮುಂದೆ ಭಾಂಡಾರಿ ಮತ್ತೊಂದು ದಿನ ಲಿಂಗದ |
ನಂದದೊಳಗಿರುತಿರಲು ಬಂಧಿಕಾರರು ಗಳದಿ |
ಬಂಧಿಸುತಬದನಿಘಲ ಬಂದವರ ಕಂಡು ಬಾಲೇಂ
ದುಧರ ಭಕ್ತರೆಂದು ||
ಸಂದೇಹಬಿಟ್ಟು ಪದಕೊಂದಿಸುತ ಲಿಂಗಾರ್ಚ |
ನೊಂದೆ ಮನದಿಂಗೈಸಲಂದವರ ಪೂರ್ವಳಿದು |
ನಂದಿಗಮಭಕ್ತಜನವೃಂದದೊಳು ಬೆರೆಯಲು
ಜನಂದಳೆದರಾಶ್ಚರ್ಯಮಂ ||

೨೨

ಮತ್ತೊಂದು ದಿನ ಬಸವುದಾತ್ತ ಮಹಿಮನು ತೈಲ |
ನೊತ್ತಿಯರಕೊಳ್ಳುತಿಹ ಪೊತ್ತು ಜಂಗಮು ಬಂದು |
ಮುತ್ತೊಕ್ಕುಳಂ ಬೇಕು ನಿತ್ಯ ಲಿಂಗಾರ್ಚನೆಯ ಪೂತ್ತಿ
ಡುವ ರಂಗೋಲಿಗೆ ||
ಹತ್ತು ಖಂಡುಗ ನೀಡೆನುತ್ತ ಕಾಡಲು ಬಸವ |
ಚಿತ್ತತೋಷದಿ ಜೋಳದತ್ತ ನೋಡುತ ದಿವ್ಯ |
ಮುತ್ತು ಮಾಡುತಲವಗ್ಗಿತ್ತುದಂ ನೋಡೆ ಜನರ
ತ್ಯಾಶ್ಚರ್ಯಂಗೊಂಡರು ||

೨೩

ಸಾಂಗಮಾಗಿರೆ ಭಕ್ತಿಯಂ ಗೈಯುತಿರೆ ನೋಡ ।
ಲಂಗಜಾರಾತಿ ಸಲೆ ಜಂಗಮಾಕೃತಿವೆತ್ತು ।
ಮಂಗಳಪುರಕ್ಕೆ ಬಿಜಯಂಗೈದು ಬಸವರಾಜಂಗೆನ್ನ
ಫಾಲಿಗೊಂದು ॥
ಕಂಗಳಂ ಕೊಡುಯೆಂದರ್ದ್ಧಾಗಲೆಂದು ಮುಕು ।
ರಂಗೊಟ್ಟು ತೋರಿಸುತೆ ಕಂಗಳಿವೆ ಮೂರ್ನಿನಗೆ ।
ಸಂಗಯ್ಯ ನೋಡು ಪೆರೆಪಿಂಗದಿರು ಬೇಡು ಮತ್ತೇಂ
ಗೊಡುವೆನಾಂ ತಡೆಯದೆ ॥

೨೪

ಗಾಢನದು ಕಂಡು ಶಿವ ನೋಡುತಿರೆ ಬಿಡು ಭೀತಿ ।
ಬೇಡ ಸಲೆ ಬಾಲಶಶಿಚೂಡ ನಿನಗೇನೇನು ।
ಬೇಡೆನಾಂ ವಂಚಿಸದೆ ನೀಡುವೆನು ನಿನ್ನಾಣೆ ಬೇಡು
ಮತ್ತೇನಾದೊಡೆ ॥
ಓಡದಿರು ನಿಲ್ಲು ನಗೆಗೂಡಿದೊಂದೆರಡು ಮಾ ।
ತಾಡು ನಿನ್ನವರನಾಂ ಪಾಡಿ ಭಕುತಿಯಲಿ ।
ಕೊಂಡಾಡಿ ಪಡೆದಿಹ ಭಾಗ್ಯನಾಡೆ ತುಂಬಿಹುದು
ಮನೆನೋಡೆಂದು ಗೆಲಿದ ಶಿವನ ॥

೨೫

ಧರಣಿಪತಿ ತನ್ನ ಸತಿಯರ ಜಂಗಮರ ಮಾಡಿ ।
ಕರೆದು ಬಸವನಿಗಿವರು ಬರಬಹುದೆಯಿಲ್ಲೆಂದು ।
ಪರಿಹಾಸದಿಂದಾಡಲುರೆ ಕೃತಕವೆಂದರಿದು
ಚರಣಕಾನತನಾಗಲು ॥
ಚರದೇವರಾಗಿ ಬಸವರಸ ನೋಡ ಪೋಗಲ್ಕೆ ।
ಬೆರಗಾಗಿ ಸಾಷ್ಟಾಂಗವೆರಗಿ ದಂಡಾಧೀಶ ।
ಕರುಣದಿಂದರುಹೆನ್ನ ಹರದಿಯರ ಪರಿ ತನ್ನ
ದುರುಳತನವಂ ನೋಡದೆ ॥

೨೬

ಎನೆ ಕೇಳಿ ಬಸವರಸ ಮಿನುಗೆ ಮುಗುಳ್ನಗೆ ಕೇಳು ।
ಜನಪಾಲ ನಿನ್ನರ್ಧತನುವಿಯರು ನಿನ್ನರಸು ।
ಮನೆಯೊಳಿರುತಿಹರೆಂಬುದನು ಕೇಳಿ ಪೋಗಿಯಾ
ವನಜ ಮುಖಿಯರ ನೋಡುತಾ ॥
ಘನಹರುಷದಿಂದ ಬಸವನ ಮನ್ನಿಸಿದ ದಿವ್ಯ ।
ಕನಕಾಂಬರಾದಿ ಸಲೆ ಮಣಿ ತೊಡವುಗಳನಿತ್ತು ।
ಜನರ್ಗೈದೆಯಿದುವೆ ನೂತನ ಮಹಿಮೆಯೆಂದ್ದೊಗಳ
ಲನಘ ಶಿವಸುಖದಿರ್ದನು ॥

೨೭

ಕನ್ನದೊಳ್ಪೊಮ್ಮಯ್ಯನೆಸ್ನುವ ಶಿವೈಕ್ಯಚರ ।
ರನ್ನು ತೃಪ್ತಿಸಲು ಧನಸೂನ್ಯಮಾಗಲಿದು ಪಗ ।
ಲೆನ್ನದಲೆ ಭಕ್ತಿ ಬಿಟ್ಟನ್ಯವರಿಯದ ಸುಸಂಪನ್ನ
ಮತಿ ಪರವಶದೊಳು ॥
ನನ್ನಿಯಿಂ ಬಂದು ಬಸವಣ್ಣಗೆಂದನು ತೋರು ।
ನಿನ್ನರಸು ಭಾಂಡಾರ ಕನ್ನನಿಕ್ಕುವೆ ವೃಷಭನೆನ್ನೆ ।
ಶರಣರನುಡಿಯು ಮನ್ನಿಸೆದೆ ಪೋದಡಿಂದಾನ್ನರಕಿ
ಯೆಪ್ಪೆನೆಂದು ॥

೨೮

ಕರಮುಗಿದು ಸೇವಕನ ತೆರದಿಂದ ಮುನ್ನಡಿದು ।
ಅರಸನಾಬೊಕ್ಕಸಂ ಕರದಿಂದ ತೋರಿಸ ।
ಲ್ಕೊರೆದು ಬತ್ತಿಯು ಬೀಗ ಮುರಿದು ಧನಕೊಂಡು ಕರ
ಚರಣ ಸೋಂಕಿದೆಡೆ ಚಾಮಿ ॥
ಕರಮಾಗಿ ಘನಮಹಾತ್ಮ ಭರದಿಂದ ಪೋಗಲೀ ।
ಪರಿಕಂಡು ಊಳಿಗದವರು ನರ ಪೊಗರು ಪೊಲ್ಕೆ ।
ತ್ವರದಿ ಬಸವರಸನಂ ಕರೆಸಿ ಕೇಳಿದನಿಂಥ ದುರುಳ
ತನ ಥರವೆ ನಿಮಗೆ ॥

೨೯

ಲಿಂಗವಂತರು ಪೆರರ ಪೆಂಗಳಂ ಮೇಣಾರ ।
ಪುಂಗಳಂ ಕನಸಿನೊಳಗಂಗಣಿಸರೆಂದೆಂಬೊ ।
ದ್ಘಾಂಗಿರಲಿ ನಾ ಕಳ್ಳರಿಂಗೆ ಸಂತತಶಾಸನಂ
ಗೈವನಾದೆನ್ನಯ ॥
ಬಂಗಾರ ಬೆಳ್ಳಿ ನಾಣ್ಯಂಗಳಂ ಕದ್ದ ಮೇ ।
ಲ್ಹಾಂಗೆ ನಂಬಲಿ ಸಾಕು ಜಂಗಮರ ಥಾಳಿ ಘನ ।
ನುಂಗದೇಮ್ಮಂ ಬಿಡದು ಹೀಂಗೆಂತಮ್ಮಾಳ್ಕ
ಭೂಪಂಗವಿಶ್ವಾಸದಿಂದ ॥

೩೦

ನೀನಡಿವದಿದನು ಬಹುಮಾನವೇಂ ಪೇಳೆನಲು ।
ಭೂನಾಥ ಬಿಡುಯಿಂಥ ಕೇಣು ನುಡಿಗಳು ಗಳಹ ।
ನೇನು ಫಲ ವರದೇವ ಧೇನುಸುರಮಣಿಯುಃ ಸಂತಾನ
ಮರುಜವಣೆ ಪರುಷಂ ॥
ತಾನೊಲ್ದು ಬಂದರಸಮಾನವಂ ಗೈವವರ ।
ಸ್ಥಾಣುಭಕ್ತರು ಲಿಂಗಧ್ಯಾನ ಚಿತ್ತರು ಸಲೆ ಶಿ ।
ವಾನುಭವಿಗಳು ನಿನ್ನ ಹೀನಧನಕೆಳಿಸುವರೆ
ನೀನೇನು ಬಲ್ಲಿಯವರಾ ॥

೩೧

ಭಿನ್ನಮತಿ ಬಿಟ್ಟು ಕೇಳನ್ಯ ಧನ ಕೊಳ್ಳಲೇಂ ।
ಕನ್ನದಾಬೊಮ್ಮಯ್ಯ ಪುಣ್ಯಹೀನನೆ ನೃಪತಿ ।
ಕಣ್ಣಿಂದ ನೋಡು ನಡೆಯೆನ್ನುತಲಿ ಕರೆತರಲು ಕನ್ನ
ಕೊರೆವಾಗ ಪಿಡಿವಾ ॥
ಮಣ್ಣು ಕಲ್ಲೆಲ್ಲ ಪೊಸ ಚಿನ್ನ ಮಾಗಿರುತಿರಲು ।
ತನ್ನ ಬೊಕ್ಕಸದ ಧನ ನ್ಯೂನಮಿಲ್ಲದೆ ಪೆರ್ಚ್ಚಿ ।
ದನ್ನು ಕಾಣುತೆ ತಪ್ಪು ಮನ್ನಿಸೆನ್ನುತಲಿ ಬಸವಣ್ಣನವರ
ಡಿಗೆರಗುತೆ ॥

೩೨

ಚಾರು ಬೊಮ್ಮಯನ ಪದವಾರಿಜಕ್ಕೆರಗಿ ನೃಪ ।
ಭೂರಿಮಣಿ ವಸ್ತ್ರಾಲಂಕಾರಗಳನಿತ್ತು ಸಲೆ ।
ಸಾರಿಸಿದ ಪುರದೊಳಗುದಾರ ಮತಿ ಬಸವನಂಘ್ರಿ
ದಘಜೀವಿ ತಲೆಯಾ ॥
ಪಾರಿಸುವೆನೆಂದಿತ್ತು ಪಾರಿತೋಷಕ ದಂಡಿ ।
ಗೇರಿಸುತಲೀಶ್ವರಾಗಾರಕ್ಕೆ ಕಳುಹಲ್ಕ ।
ಪಾರತೋಷದಿ ಭಕ್ತಿವಾರುಧಿಯ ಶಶಿಯಂತೆ
ರಾರಾಜಿಸುತಲಿರ್ದನು ॥

೩೩

ಲಿಂಗ ನಿಷ್ಠಾ ಪರನು ಜಂಗಮವೆ ಸಾಕ್ಷಾತು ।
ಅಂಗಜಾರಾತಿಯೆಂಬಂಗ ಬಲದಿರಲೊಮ್ಮೆ ।
ಜಂಗಮಮ್ಮನೆ ಬಾಗಿಲಿಂಗೈದೆ ಪೋಗಲಸುವಂಗಳಿದು
ತಿರುಗಿ ಬರಲು ॥
ಜಂಗಮದ ಕೂಡೆಯಾತಂಗೆ ಜೀವಂ ಬಂದು ।
ಮಂಗಳಾತ್ಮಕನಾಡೆ ಸಂಗಮನೊಳೈಕ್ಯಾದ ।
ಜಂಗಮದ ಭಕುತಿಯಿದು ತುಂಗ ಶರಣರಿವರ್ಗ
ಭಂಗನೆರೆ ಕೇಳೆಂದನು ॥

೩೪

ಅಂಬುಜಾಸ್ತ್ರನ ರತಿಯೊಳಂಬುಜಾನನೆ ಪರವೆ ।
ಯೆಂಬಸತಿಯೊಡನಿರ್ದು ಕುಂಭ ಕುಚವಂ ಕಂಡು ।
ಕಂಬಲ ಶತಕರ್ನನೆಂಬ ಘನ ವಿಶ್ವಾಸದಿಂ ಪೂಜೆ
ಗೈಯ್ಯುತಿಪ್ಪಾ ॥
ನಂಬಿಗೆಗೆ ಸೌಂದರ್ಯನಂಬೆಣ್ಣಗೊಲಿದು ಹೇ ।
ರಂಬಪಿತನಾಗಲಾರಂಭೆ ಕುಚದೊಳ್ಮೂಡು ।
ತಂಬೊನ್ನ ಸಹಸ್ರಿತ್ತನೆಂಬೊಡಿದು ಸಾಮಾನ್ಯವೇಂ
ಭಕ್ತಿಯೊಳಗೆ ಶರಣಾ ॥

೩೫

ಸುಲಭ ನಿಂತಿರುತಿರಲು ಕಲಿಕಾಮನೆಂಬೋರ್ವ ।
ನಿಳೆಯಾಣ್ಮ ಕೇಳಿ ಮಮ್ಮಲ ಮರುಗಿ ಸೂಳೆಯರ ।
ಬಳಿಗೆಲಸಕಾ ಶಿವನನಲಸದಿರಿಸಿದನೆ ಭಳಿ ಭಳಿರೆಂದು
ಪಂಥಗೈದು ॥
ಛಲದಿಂದ ಸೌಂದರನ ಪೊಳಲಿಂದ ಬಂದವರ ।
ತಲೆಗಡಿದು ನಂಬೆಣ್ಣನೊಳು ಕಾದಿ ಕೊನೆಗೆ ಶಿವ ।
ನೊಳು ಬೆರೆದು ಪ್ರಮಥಕುಲತಿಲಕನಾಗಿರುತಿರ್ಪನೆಲೆ
ಶರಣಬಸವ ಕೇಳಾ ॥

೩೬

ಮೆರೆನಿಂಡನೆಂದೆಂಬ ಹರಕಥಾಕಾರಿ ಶಿವ ।
ನಿರುಳಕಥೆಮಾಡುತಿರೆ ಶರಣಾರ್ಥಿಯೆನದೆ ಸಾಂ ।
ದರ ಭರದಿ ಪೊಗಲು ಗೋಪುರ ಭಕ್ತರಿಂದವನ ಚರಿತೆ
ನಿಜನಾಮವರಿತು ॥
ಗುರುವಬಿಡಿಸುವೆನೆಂದು ದುರುಳ ನಂಬಿಯು ಸಹಿತ ।
ಹರನು ಶಂಕರ ಭಕ್ತರ್ದ್ದೊದಗೆನಲು ಬಂದಾತ್ಮ ।
ಚರಣಕಾನತನಾದ ವರನಂಬಿಯಂ ಪೊರೆದು ಬೆರದ
ಗಣವರ ಪದದೊಳು ॥

೩೭

ಚರರೂಪಿನಿಂ ಬಂದು ಪುರಹರನು ಕಾಂಚಿಯೊಳು ।
ಚಿರುತೊಂಡಗೆಂದನೆಲೆ ವರಭಕ್ತ ಹಸುವಿನಿಂ ।
ತರಹರಿಪೆನಾದೊಡೊಂದಿರುವದೈ ರುಜೆಯದಕೆ ನರ
ಮಾಂಸನುಣ ಹೇಳಿದರ್ ॥
ನರವಂಶಕೊಬ್ಬ ಸುಂದರ ಪಸುಳೆ ತಾಯ್ತಂದೆ ।
ಹರುಷದಿಂದಾಡ್ಯಾಡಿ ಕೊರದುಣಿಸಬೇಕೆನಲು ।
ತರುಳನಂ ಕೊಂದುಮಾವರಗೊಲಿಸಿ ಮೆರೆದ ಸುಸ್ಥಿರ
ಪದವಿಗೊಂಡು ಶರಣಾ ॥

೩೮

ಆ ಸಮಮುಗ್ಧನು ರುದ್ರಪಶುಪತೆಂದೆಂಬೋರ್ವ ।
ಪಶುಪತಿಯ ಶರಣಗೇಳ್ವ ಸಮ ಪೌರಾಣದೊಳು ।
ವಿಷಧಾರಣದ ಲೀಲೆಯುಸುರುತಿರೆ ಕೇಳಿ ಸಂತಸ
ವಿವರ್ಜಿತನಾಗುತೆ ॥
ಅಸುಗಳಿಯಲೆಂದರಿಜ್ಜುಗಿಸಲಾಗ ಶಿವನೊಲಿದು ।
ಶಿಸುವೆ ಬಾರೆಂದಕಂದ ದೆಶೆಯೊಳ್ಹರುಷದೊಳು ಕೂ ।
ಡಿಸಲು ಸಲೆ ಶಾಶ್ವಿತನುಮಿಷ ದಿಟ್ಟಯಿಂದಲಾ ವಿಷಗಳಂ
ನೋಡುತಿಪ್ಪಂ ॥

೯೯

ತಿರುನೀಲಕಂಠ ಕುಶವರಗಾತ್ರಸಲೆ ಮುಟ್ಟ |
ದಿರುಯೆನಗೆ ನಿನಗೆ ಶಂಕರನಾಣೆಯೆಂದಿಡಲು |
ಹರಿಯದಲೆ ತೊರೆದು ಸತಿ ಬರಿಸತೊಂಬತ್ತಾಗೆ
ನರೆಗೂಡಲಂಬಂದವು ||
ಮೆರಿಸಲೆಂದಿಚ್ಛೈಸಿ ಹರಬಂದು ಗಿನ್ನಲೊಂ |
ದಿರಿಸಿ ಮಾಯಂಗೈದು ತಿರುಗಿ ಬೇಡುತ ಕಾಡಿ |
ಸರಸಿಯೊಳು ಪೋಗಿಸೇಕಿ ಕರಿಸಿ ಶಪಥಂ ಬಡಿಸಿ
ಹರಿಯವಿತ್ತವರ ಪೊರೆದಂ ||

೮೦

ಯಳೆಯಾಂಡ ಗುಡಿಮಾರ ಬಲುಭಕ್ತಿಗೈದು ಸಿರಿ |
ಕಳಕೊಂಡು ಬಡತನಂದಳೆದಿರಲ್ಕೊಂದು ದಿನ |
ಮಳೆಯೊಳಗೆ ನಿಜರೂಪನುಳಿದೀಶ ಬಂದು ನಾ |
ಬಲು ಹಸಿದೆನೆಂಪಾಡಲು ||
ಪೊಲದೊಳಗೆ ಚೆಲ್ಲಿರ್ದ ಕಳಮೆ ಬೀಜಾಯಿದಂ |
ಬಲಿಮಾಡಿಗುಡಿಸಿ ಮನೆಗಳು ಬಿಚ್ಚಿ ಸುಟ್ಟು ಛಳಿ |
ಗಳಿಯಲ್ಕೆಯೊಲಿದ ಶಿವನೊಳು ಬೆರೆದು ಸಕುಟುಂಬ
ಕಲಧೌತ ಗಿರಿಗ್ಹೋದನು ||

೮೧

ನಿಚ್ಚಟದ ಭಕ್ತಿಯುತ ಸಚ್ಚರಣಮರನೀತ |
ಎಚ್ಚರ್‍ಧದ ಭಕ್ತಿಗೊಲಿದಚ್ಚಿ ಮಾರನು ನಿಜಂ |
ಮುಚ್ಚಿ ಬಂದಿದು ಪರುಷ ಕಚ್ಚುಟಂಬಲು ಜೋಕೆ
ಬಚ್ಚಿಡೆಂದ್ಹೇಳಿ ಜಗದಾ ||
ಅಚ್ಚಿಮಾಡಲ್ಬಂದು ಎಚ್ಚರಿಸಲಿಲ್ಲದಿರೆ |
ಬಿಚ್ಚಿಯದೆತಾಳಿ ಧೃತಿ ನಿಶ್ಚಯದೊಳೆಲ್ಲತುಲ |
ಖಚ್ಚಿತೂಗಲ್ಕೆ ಶಿವಮೆಚ್ಚಿ ಕೈಲಾಸಕೊಯ್ದುಚ್ಚ
ಗಣಪದವಿತ್ತನು ||

೮೨

ಶೇದಿರಾಜೆಂಬ ಶಿವಪಾದೈಕ್ಯಗೊಂಡು ದಿನ |
ಕಾದಲಾರದಲೋಡಿ ಪೋದಪಗೆ ಚರನಾಗು |
ತೈದೆನಿನಗಾಗಮಾರ್ಥೋದಿ ಪೇಳುವೆನೆಂದು ವೈದು
ಯೇಕಾಂತದೊಳಗೆ ||
ಭೇದಿಸದೆ ಗಲಗಮರಿಯಾದೆಯಿಂ ಕಳುಪಿ ಸಲೆ |
ಸಾಧು ಶಿವಭಕ್ತಿ ನಿಂದ್ಯೈದೆ ಕೀಳಿಸಲಾಗ |
ಮಾದೇವನದರಿಂದ ಮೈದೋರಿ ಕೈಲಾಸಕೊಯ್ದು
ಗಣಪದವಿತ್ತನು ||

೮೩

ದಾಸಿತನುಜಾತ ಚರವೇಷವಂ ತಾಳಿಬರ |
ಲೀಶಚರನೆಂದು ಭೂಮೀಶ ಕಲಿಕಂಭ ಸಂ |
ತೋಷದಿಂ ಪದದೊಳಿವಡಾ ಸುದತಿ ಕಂಡು
ನಮ್ಮಿಸಿರಿಗಿ ಮಗಮಲ್ಲನು ||
ದಾಸನಿವ ನಮಗೆನಲು ರೋಷವೆಗ್ಗಳಿಸುತಿದು |
ದೋಷಘನವೆಂದು ಕೂರಾಸಿಯಿಂ ಕಡಿಯಲ್ಪ |
ರೇಶ ನಿಜದೋರಿ ಕೈಲಾಸದಲಿವರ ಗಣಾಧೀಶ ಪಟ್ಟವ
ಗಟ್ಟಿದಂ ||

೮೪

ನಲ್ಲಮೆನೆ ಭಕ್ತಾಂಶದಲ್ಲಿ ಪುಟ್ಟದ ಸಾಂಖ್ಯ |
ಪುಲ್ಲಶರಹರನ ಪದಪಲ್ಲವಾರ್ಚನಗೈಯ್ಯ |
ಲಿಲ್ಲಾರು ಪೂರ್ವದೊಳು ಕಲ್ಲಿನಿಂದೆಂದು ಬಹು
ತಲ್ಲಣಂಗೊಂಡು ತಾನೆ ||
ಕಲ್ಲಿನಿಂ ಪೂಜೆಗೈವಲ್ಲಿ ರುಜೆ ಬಂದಡಸಿ |
ನಿಲ್ಲಲಾನೇಮ ಮುಂದೊಳ್ಳಿತಾಗಲು ಪೊಡಿಯೆ |
ಲಿಲ್ಲದಿರೆ ಗಣಿತಕ್ಕೆ ಕಲ್ಲು ತಲೆಗಡಿದು ಶಿಲೆಯೊಲ್ಲಭ
ನೊಳೇಕಾದನು ||

೮೫

ಕಾರಿಕಾಲಾಂಬೆಂಬ ಮಾರಾರಿ ಶರಣೆ ಶಶಿ |
ಧಾರಿಗಮೃತದ ಫಲಮುದಾರ ಮತಿಯಿಂದಿತ್ತು |
ಕ್ರೂರಪತಿ ಬೇಡಲು ವಿಚಾರಿಸದೆ ಕೊಟ್ಟು ಸಂಸಾರವಂ
ತೆಜಿಸಿ ನಡೆದು ||
ಚಾರುಶರಣರು ಪೋದ ದಾರಿಯಿದು ತುಳಿಯಲ್ಕೆ |
ಬಾರದೆನ್ನುತಲಿ ತಲೆಯೂರಿ ನಡೆದಾಶಿವನ |
ಸೇರಿದಳು ಭಕ್ತರೊಳು ಮೀರಿದವಳಿವಳೆಂದು
ಸೂರಿಜನ ಕೊಂಡಾಡಲು ||

೮೬

ಸೋಮಾಸಿಮಾರವರ ಸೋಮವಂ ಗೈವಾಗ |
ಸೋಮಪೂಜೆಗೆ ನೆನಿಯೆ ಸೋಮಶೇಖರ ಬರಲು |
ತಾಮಾಜೆ ರೂಪನದು ನೀ ಮಹಿತಮತಿ ಕಂಡು |
ಪ್ರೇಮದಿಂ ಕೊಂಡಾಡುತೆ ||
ಶ್ರೀಮಹಾದೇವ ಬಿಡು ನೀ ಮೋಸವೆಂದು ಪದ |
ತಾಮರಸಗಳಿಗೆರಲಾ ಮದನ ಹರನೊಲ್ದು |
ಹೇಮಾದ್ರಿಗೊಯ್ದು ಗಣಸ್ತೋಮದೊಳಗಿಟ್ಟನುದ್ಧಾಮ
ಮತಿ ಕೇಳು ಶರಣಾ ||

೪೭

ಕಿರಿಗೂಲಿಗೈಯ್ಯುತಿಪ್ಪರಿವಾಳ ತಾಂಡ ತಾಂ ।
ದೊರೆದನಿತು ಗಂಧಕ್ಕಿ ಹರಗುಳಿದವೆನಗೆಂಬ ।
ಪರಿನೇಮದಿಂದ ಕೆಲಬರಿಸ ನಡೆಸಲ್ಕೆ ಶಂಕರನವನ
ದೃಢ ನೋಡಲು ॥
ಎರಡ್ಹತ್ತುದಿನ ಪೊಡಿಗೆ ದೊರಕದಿರಲುಪವಾಸ ।
ದಿರುತದೋರೆದ್ಹರನೆಲ್ಲು ತರುತಿರಲು ಬಿರಿಘಾಳಿ ।
ಗುರುಳೆ ನೆಲದೊಳು ನೆಲ್ಲು ಸುರಿಯಲ್ಕೆ ಕೊರಳರಿದು
ಹರನೊಳಗೆ ಬೆರೆದ ಶರಣಾ ॥

೪೮

ಕೂಲಕರಧರಭಕ್ತ ಶೀಲಗುಣ ಶಿಂಧು ಬ ।
ಲ್ಲಾಳನೆಂದೆಂಬ ಧರೆಪಾಲ ಶಿವಭಕ್ತಿಯೊಳು ।
ಮೇಲೆಂಬುವವನು ಶಶಿಮೌಳಿ ನಾರದಮುನಿಪ ।
ಪೇಳುತಿರೆ ತೋಷದಿಂದ ॥
ಕೇಳಿಬಂದವನಸತಿ ಕೇಳಿಗೈಯ್ಯಲ್ಕೆಂದು ।
ಕೇಳಿದರೆ ಕೊಡಲು ಎಳೆಬಾಲನಾಗುತಲಿ ಮೊಳೆ ।
ಪಾಲುಂಡು ನಿಜದೋರಿ ಕೈಲಾಸಕೊಯ್ದು ಜಿತಕಾಲ
ಗಣಪದವಿತ್ತನು ॥

೪೯

ತ್ರಿಣಯಭಕ್ತನು ಪಗಲ್ತೋಣೆಯಾಂಡ ಶಿವನ ಮ ।
ಜ್ಜನದ ಮೀಸಲಜಲಕೆ ದಿನದಿನಕದೊಂದು ನೂ ।
ತನ ಕೂಪತೆಗಿಸಿ ಮನೆಧನಮೆಲ್ಲ ಸಮಿಯೆ ಬಡ
ಮನಮಾಗದೆಂದಿನಂತೆ ॥
ವನುತೆ ತಾನುಂ ವರತೆಯನು ತೆಗೆದು ನಡಿಸುತಿರ ।
ಲನಿತಕೆ ನಿಧಾಘಮತಿಘನವಾಗೆ ದೊರಿಯದಿರ ।
ಲ್ಹನಿ ನೀರು ಜೀವಕ್ಕೆ ಮುನಿಯುತಿರಲೊಲಿದು
ಶಿವಗಣಪದವನಿತ್ತನವಗೆ ॥

೫೦

ಇಳೆರಥನಭಕ್ತ ಕೊಂಗುಲಿಯ ಕಲಿಯಾಂಡ ಗು ।
ಗ್ಗಳ ನೇಮದಿಂದ ಧನಕಳಕೊಂಡು ಬಡತನದಿ ।
ನಿಲೆನೇಮುಮುಪವಾಸ ಕೆಲ ದಿವಸಮಿರ್ದನಿತರೊಳು
ಪಗಲ್ತೋಳ ನೃಪನಾ ॥
ಪೊಳಲ ಶಿವಕೊಂಕಿದು ತಿಳಿದು ತಾಪೋಗಿ ಗು ।
ಗ್ಗಳತರಿಸಿ ಸುಡಲಿಕ್ಕೆಯೊಳಿತಾಗದಿರೆ ಗಳಕೆ ।
ಮೂಳಿದು ಸಸಿನೆಸಗೆ ಶಿವನೊಳು ಬೆರೆದು ಪ್ರಮಥಕುಲ
ತಿಲಕಾದನೆಲೆ ಶರಣನೆ ॥

೫೧

ಖಂಡೇಂದು ಧರಭಕ್ತಿ ಮಂಡಿಯೆನಿಸುವ ಚೋಳ ।
ಮಂಡಲದೊಳೊರ್ವ ಶಿಲೆಯಾಂಡ ನಾಮಕಯೋಗಿ ।
ದಂಡಧರದಮಭಕ್ತಿ ಮಂಡಲದದೆನಿಸಿ ಭೂಮಂಡ
ಪಗಳಲ್ತೋಳನಾ ॥
ಚಂಡದೇಗುಲವನ್ನು ಕಂಡಿದೆನಿತೆನ್ನ ಹೃ ।
ನ್ಮಂಡಲದಿ ನೋಡೆಂದು ಚಂಡಕರತೇಜ ಮೊಳ ।
ಕೊಂಡ ಗೃಹತೋರೆ ಜಗಕೊಂಡಾಡೆ ಗಣದಪರಿ
ಗೊಂಡನವ ಶಿವನನೊಲಿಸಿ ॥

೫೨

ಕರಿಗೊರಲಪಾದಕಿಂಕರ ಶಿರೋಮಣಿ ಯಂಬು ।
ವಿರಿ ಭಕ್ತನಾವಗಂಪರಸಮಯಿಗಳ ಕೊಲ್ವ ಬಿರಿದೆತ್ತಿ ।
ನೆರೆಮೆರೆಯುತಿರಲೋರ್ವನೊಮ್ಮೆ ಶಂಕರನಿಂದೆ
ಗೈಯ್ಯಲವನಾ ॥
ಶಿರಗಡಿದು ಬಂಧುಗಳ ಹರಭಕ್ತರಂ ಮಾಡಿ ।
ಹರಣವಿತ್ತರಸು ಮದಕರಿ ಸೀಳ್ದು ಭಕ್ತನಂ ।
ಪೊರೆದು ನೃಪನುತಿಗೊಲ್ದು ಶಿರವರಿವುತಿರಲು
ಮಾವರನು ಗಣಪದವಿತ್ತನು ॥

೫೩

ಸ್ಥಾಣುಪದಭಕ್ತ ಘನನೇಣಾದಿನಾಥ ಸ ।
ತ್ರಾಣ ಶಿವಲಾಂಛನದ ಶೂನ್ಯರಾಗಿಪ್ಪ ರಿಪು ।
ಮಾನವರ ಕಡಿದವರ ಪ್ರಾಣಧನದಿಂ ಚರರಿಗೇನಾ
ದೊಡಿತ್ತು ಮೆರೆದು ॥
ತಾನಿರಲು ತಂದಿಯಸು ಹಾಸಿಗೈದಾ ವೈರ ।
ರ್ಹೀನ ನರಭಕ್ತರೋಲ್ತಾನೈದೆ ಬರಲವಗೆ ।
ಪ್ರಾಣವಪ್ಪಿಸಲೊಲ್ದು ಮೌನಿಜನವಂದ್ಯ ಗಣಸ್ಥಾನ
ದೊಳಗಿತ್ತನವನಾ ॥

೫೪

ಮನುಮಥಾರಿಯ ಭಕ್ತ ಮೊನೆಯಾಂಡ ಶಿವನ ಲಾಂ ।
ಛನರಹಿತ ರಾವುತರ ಹನನಗೈಯ್ಯುವದೊಂದು ।
ಪಣಗೈದು ಪಗಲ್ತೋಳಜನಪ ಸೇವಿಲೆ ಬಂದ ಧನದಿಂದ
ಚರ ತೃಪ್ತಿಯಂ ॥
ದಿನದಿನಂಗೈಯ್ಯುತೊಂದಿನ ರಣದಿ ಜಯಶೀಲ ।
ನೆನಿಸಿರಲು ತ್ರಿಣಯ ಭಕ್ತನ ವೇಷದಿಂ ಬರಲು ।
ತನುವಲೊಪ್ಪಿಸಲವಗೆ ಧನದಸಖ ನಿಜದೋರಿ ಗಣ
ಪದವಿಯಂ ಕೊಟ್ಟನು ॥

೫೫

ಮೃಡಭಕ್ತ ಸಗಲ್ಪೋೞ ಪೊಡವಿದುಂಬಲು ಶಿವನ ।
ಗುಡಿ ನಿಬಿಡವೆನಿಸಿ ಭಸಿತಿಡುವಕ್ಷ ಮಾಲೆಗಳು ।
ತೊಡವರಿಗೆ ಶಿವನೆಂಬ ದೃಢಮತಿಯು ಬಲಿದಿರುತೆ
ಪೊಡವಿಪತಿ ಪಾಂಡ್ಯನೊಡನೆ ॥
ನಡಿಯೆರಣಮೊಂದು ಗಡಿವನಗೆ ಕೊಡುತಿರಲು ।
ಪಿಡಿಪೊನ್ನುಮದರೊಳಗೆ ಜಡಿದೆಲೆಯುದೊಂಡು ಬರೆ ।
ಕಡಿಪಾತ್ರಶಿರ ನಿವಾಳಿಡುತೆ ಶಿವನೊಲಿಸಿ ಗಣರೊಡೆಯ
ನಾದನು ಭೂಮಿಸಾ ॥

೫೬

ಮಲಹರನ ಪದಭಕ್ತ ಕಳಚಂಗ ಪೇರ್ಮ್ಯಾಳೆ ।
ಶಲದಿ ಜನ್ಮದ ಪುಣ್ಯ ಬಲದಿಂದ ಪೊಕ್ಕೊಂದು ।
ಹಳುವದೊಳು ಕರಿಜನ್ಮಕಳಿಪಾತ್ರ ವೈರಿಯಂಗೆಲಿ
ಯುತಾಯಕ್ಷಮುಖದಿ ॥
ತಿಳಿದು ಪೂರ್ವದ ವೃತ್ತ ಬಲು ಭಕ್ತಿಯಿಂದ ತಿಂ ।
ಗಳ ಕಲಾಸೂಡಿದನ ಪುಳುಕಾಂತು ಪಾಡುತಿರ ।
ಲೊಲಿಮು ಶಿವಪ್ರಮಥ ಕುಲತಿಲಕನಂ ಮಾಡಿದನು
ಮಲಘಮತಿ ಶರಣ ಕೇಳಾ ॥

೫೭

ವಾಗೀಶಪರಮಾನುರಾಗದಿಂ ಪರಸಮಯಿ ।
ಯಾಗಿರುತಲವನಕ್ಕನಾಗುತೆಲುಸಲಿ ನಾಚಿ ।
ನಾಗಭೂಷಣ ಭಕ್ತನಾಗಿಸಲು ಕೇಳ್ಜೈನರಾಗಲೆಸ
ಗಿಪ ಸರ್ವಮೇಣ್ ॥
ನಾಗಶರನಿಧಿ ಬಾಧೆತಾಗದಿರಲವರು ಬೆರ ।
ಗಾಗಿ ಬಿಡೆ ತಿರುಪಾಡನಾಗಲುಂ ಪಾಡೆ ಜಿತ ।
ನಾಗಪದ ಸಖನೊಲಿದು ಶ್ರೀಗಣಾಧಿಪ ಪದಂ
ಬೇಗನವಗಿತ್ತು ಪೊರೆದಂ ॥

೫೮

ಭೂತಪತಿಭಕ್ತನಃ ಪೂತಿಯ ಮಾಡಿ ಮಾಹೇಶ ।
ಪೂತವಾಗೀಶ ಗುರುನಾಥ ತನಗೆಂದು ಸಲೆ ।
ಯಾತನಾಖ್ಯಕಿಳಕ್ಕೆ ಪ್ರೀದಿಯಿಂದಿಟ್ಟು ವರ
ಚೇತನದಿ ದೀಕ್ಷೆ ಪಡೆದು ॥
ಧೂತಕಿಲ್ಬಿಷ ಗೌರಿನಾಥನಂ ಪಾಡೆ ಮೃತ ।
ಗೀತೆಗಳು ಕೇಳಲಗಜಾತೆ ಬಯಸಲ್ಕಂದಿ ।
ನಾಥ ಬಂದವನ ಕಲಧೌತಗಿರಿಗೊಯ್ದು ಗಣನಾಥ
ಪದವಿಯನಿತ್ತನು ॥

೫೯

ಪುರಹರನ ಭಕ್ತ ಕುಲಚರಿಯ ಮುಂಬರುವ ಸವ ।
ಣರ ಮರಣ ತಿಳಿದು ಸಾಸಿರ ದ್ವಾದಶಂ ಶೂಲ ।
ವಿರಚಿಸುತಲದನೆಸಗಿ ದುರುಳ ಪರಸಮಯಿಗಳ
ಮುರಿದು ಘನತೋಷದಿಂದ ॥
ತಿರುಜ್ಞಾನ ಸಂಬಂಧಿ ಕರುಣದಿಂ ವೈರಾಗ್ಯ ।
ಧರಿಸಿ ಮನವಾದ ಶಂಕರ ನಾಚಿಯಳ ಭೋಗ ।
ಕೊರಳ ಲಿಂಗದಿಗೈಸಿ ಹರನೊಳಗೆ ಬೆರೆದನಲೆ
ಶರಣಪ್ಪ ಕೇಳ್ ಭಕುತಿಲೆ ॥

೬೦

ಹರಚರಣ ನಿಜಭಕ್ತ ವರನಾಟ್ಯ ಮಹಿತಂಡಿ ।
ಗುರುಪ ಶಿವಪೂಜೆಗಾಹರದ ಜನ ಮುಟ್ಟಿರ್ದ ।
ಶರ ತೆಜಸಿ ಪೊಸಭಾವಿ ವಿರಚಿಸುವ ಪೊಳ್ತುಮಾ ಪರ
ಸಮಯಿಗಳು ಕಾಡಲು ॥
ಹರಣಕುರೆಮುಳಿಯೆ ಪುರಹರನೊಲ್ದು ಕಣ್ಣೀಯೆ ।
ದುರುಳರಂ ಮುರಿದು ಸತಿವೆರಸುತಾ ಶಿವನೊಳಗೆ ।
ಬೆರೆದು ಪ್ರಮಥಾಳಿಗಳ ವರನಾದ ಕೇಳೆಂದ ಗುರು
ರಾಯ ಶರಣಪ್ಪಗೆ ॥

೬೧

ವಲಘಾಂಡನೆಂಬ ತಿಂಗಳ ಸೂಡಿದನ ಭಕ್ತ ।
ತಿಲಕ ಚಂದನನೇಮುದಳೆದು ಮನೆಧನವೆಲ್ಲ ।
ಕಳಿಯಲ್ಕೆ ಯಿಪ್ಪತ್ತೆರಳ್ದಿನವು ವುಪವಾಸ ಮಿರೆ
ಸತಿಕನಸಿನೊಳಗೆ ಶಿವನು ॥
ತಿಳುಹಲ್ಕೆ ತೋಷದಿಂದುಳಿದೆನೋಹೋಯೆಂದು ।
ಮೊಳಕೈಯ ತೇದು ಪೊಸಮಳಯಜವು ಶಿವಗೆ ನಿ
ರ್ಮಳ ಭಕ್ತಿಯಿಂದರ್ಪಿಸಲಿಕೆ ಹರನೊಲಿದು ಗಣ
ಕುಲವರರ ಪದವಿತ್ತನು ॥

೬೨

ಧರಣೀಶ ಪಾಂಡ್ಯ ಸುಂದರ ಮಾರಹರ ಭಕ್ತ ।
ಹರದಿ ಮುಂಗಾಯಿಯಕ್ಕರಸಿಯರು ಪಡೆದ ಶಶ ।
ಧರವದನೆ ಶರ್ವಾಣಿಯಿರುತಿರಲು ತೋಷದಿಂ ಚರ
ರೂಪಿನಿಂದೆ ಶಿವನು ॥
ಭರದಿ ಬಂದಾ ಚಾರುತರುಳೆ ಬೇಡಲ್ಕಿತ್ತು ।
ಪರಿತೋಷದಿಂ ಲಗ್ನ ವಿರಚಿಸಲ್ಕೊಂದು ಶಂ ।
ಕರ ತನ್ನ ಪುರಕೊಯ್ದು ಗಿರಿರಾಜ ಮೊನೆಯಂ
ತುರೆ ಭಾವಿಸಿದನಲ್ಮೆಯಿಂ ॥

೬೩

ನೀಲಗಳ ಭಕ್ತ ತಿರುಮೂಲಾಖ್ಯ ಶಿವಭಕ್ತಿ ।
ಮೂಲದಂತಿರಲೊಲ್ದು ಪಾಲಾಭಿಷೇಕದಿಂ ।
ಬಾಲೇಂದುಧರನೊಲಿಸಿ ಮೇಲುಗಣಪದಕೊಂಡು
ಕೈಲಾಸಪುರ ಸಾರ್ದನು ॥
ಕಾಲಜಿತಶರಣ ತಿರುನೀಲಕಂಠ ಪಾಣ ।
ಲಲಿತ ತಿರುಪಾಡುಕೇಳಿಸಲು ವೀಣೆಯೊಳು ।
ಶೂಲಕರಧರನೊಲ್ದು ಪಾಲಿಸುತೆಗಣಪದಂ ಲೀಲೆ
ಯಿಂದಿಪ್ಪ ಶರಣ ॥

೬೪

ಇಂದುಧರಭಕ್ತನಮಿನಂದಿ ಮೂಪೊಳ್ತುಮಾ ।
ಕಂದಜಿತನಂ ಪೂಜಿಪೊಂದು ನೇಮದೊಳಿರ ।
ಲ್ಕೊಂದು ದಿನಮಳೆಗಾಲಬಂದು ಕೆಸರಾಗಲು ತಮಂ
ಧದೊಳು ಶಿವನಗುಡಿಗೆ ॥
ಬಂದುಸಲೆಭಕ್ತಿಗುಣದಿಂದ ಕೊಂಡಾಡಿ ಮನೆ ।
ಗೆಂದು ಬಪ್ಪಡೆ ಬಿದ್ದು ನಂದಿಗಮ ಪೊರೆಯೆನಲು ।
ಬಂದು ಕೈಪಿಡಿದೆತ್ತುತಂ ದಯದಿಪ್ರಮಥಗಣ
ವೃಂದಕೊಡೆಯನ ಮಾಡಿದಂ ॥

೬೫

ಶೀತಕರಧರ ಭಕ್ತ ಪೂತಚಾರಿತ್ರ ನೇ ।
ಖ್ಯಾತ ಮಾಹೇಶ ಗುರುಪಾದುಕೆಯ ಶಿರದೊಳಗೆ ।
ಪ್ರೀತಿಯಿಂ ಧರಿಸಿ ಚರಿಪಾತನಮ್ಮೆರೆಸಲ್ಕೆ
ಭೂತೇಶನೊಲ್ದು ಬಂದು ॥
ಏತಕೊಂದಿಸೆಯನಲು ಚೇತನಿಧಿಯೆನ್ನ ಶಿರ ।
ಕಾತ ಪದಬೇರೆ ತವಪಾದ ಬೇರೆಂದೆಂದು ।
ನಾ ತಿಳಿಯೆನೆನೆ ಮೆಚ್ಚಿ ಶ್ವೇತಾದ್ರಿಗೊಯ್ದು
ಗಣನಾಥ ಪದವಂನಿತ್ತನು ॥

೬೬

ಶ್ರೀಣಯ ಪದಭಕ್ತ ಕಲಿಗಣನಾಥ ಮಾಹೇಶ ।
ದಿನಕ್ಕೈವರಂ ಭಕ್ತರನು ಮಾಳ್ಪ ನೇಮವಂ ।
ತನಗಾಗಲ್ಕಾಗೆ ಕೆಲದಿವಸಮೆಯ ಮುಂದಕೊಂ
ದಿನ ನಾಲ್ವರಿಗೆ ತನ್ನಯಾ ॥
ಹಣಕೊಟ್ಟು ಭಸಿತಮವರ ಹಣೆಟ್ಟುಮಿನ್ನೊಬ್ಬ ।
ನನು ಪುಡುಕುತಿರುತಿರೆ ಶಕುನಿಗಾಗುತ್ತೈ ತಂಗ ।
ಚಿನುಮಯಗೆ ಬಲ್ಪಿನಿಂ ಫಣಿಗೆ ಭಸಿತವನಿಟ್ಟು
ಗಣವರರ ಪದವಿ ಪಡೆದಂ ॥

೬೭

ಭಾವಜಾಂತಕ ಭಕ್ತವಾಹಿಲ್ಯ ಮಾಹೇಶ ।
ಭಾವಪುಷ್ಪದಿ ನಿತ್ಯ ಭಾವಲಿಂಗದ ಪೂಜೆ ।
ಗೈವ ವ್ರತದೊಳಗೋರ್ಮೆ ಕಾವೇರಿ ತಟದೊಳಗೆ
ದೇವ ದೇವನನರ್ಚಿಸೆ ॥
ಕಾವುರದಿ ನುಡಿದ ಚರದೇವರಿಗೆ ಹೃದಯರಾ ।
ಜೀವದೊಳು ಲಿಂಗತವೆ ದೇವತರು ಸುಮತೋರ ।
ಲಾವಸುರದಿಂ ಮಹಾದೇವ ಪೊರೆ ಗುಣ್ಮೆ ಗಣದೇವ
ಪದಕೊಟ್ಟ ಶರಣಾ ॥

೬೮

ವನಜಧರ ಭಕ್ತ ಚಿರುತೊಣೆಯಾಂಡ ಮಾಹೇಶ ।
ವಿನುತ ಪುಷ್ಪದಿ ಶಿವಾರ್ಚನೆಗೈವ ನೇಮದಿಂ ।
ದಿನಗಳೆವುತಿರ್ದನೆಂದಿನದಲೊಂದಿನ ವಿನೂತನ
ಪುಷ್ಪಗಳನು ತಂದು ॥
ಮನುಮಥಾರಿಯ ಪೂಜಿಪನಿತರೊಳು ಸತಿಯಳು ಸು ।
ಮನವೊಂದು ಮುಡಿಯಲ್ಕೆ ಕನಲಿನಾಶಿಕಗೊಯ್ದು ।
ಘನ ಘನಾರ್ಚಿತ ಪಾದನನು ಒಲಿಸಿ ಪಡೆದವರ
ಗಣಪದವಿ ಕೇಳು ಶರಣಾ ॥

೬೯

ಪಿಂಗಲ ಜಟ್ಟಾಭಕ್ತ ತುಂಗಗುಣಯುಕ್ತ ಕುಲ ।
ಚಂಗ ಮಹೇಶ ನಿಜಲಿಂಗ ಪೂಜೆಗೆ ಸುಮ ಸ ।
ರಂಗಳಂಗೈದು ಶಿತರಂಗನಂ ಸಲೆ ಸಲೆ ಮಜ್ಜನಂ
ಗೈವ ಪೊಳ್ತುಮವನಾ ॥
ಅಂಗನಿಯಳೆತ್ತಿ ಸುಮನಂಗಳಂ ಮೂಸಿಸಲು ।
ಕಂಗಳಿಂಕಂಡು ಕೋಪಂಗೊಂಡು ಕರಕಡಿಯ ।
ಲಂಗಜಾರಾತಿಯೊಲ್ದಂಗ ತೋಷದೊಳು ಗಣ
ಪುಂಗ ಪದವಿಯನಿತ್ತನು ॥

೭೦

ಈಶಪದಭಕ್ತ ತಂಡೇಶನೆಂದೆಂಬ ಮಾ ।
ಹೇಶ ಚಿಕ್ಕಂದಿನಿಂ ತೋಷದಿಂ ಶಿವಪೂಜ ।
ನಾಸಕ್ತನಾಗಿರಲು ದೋಷಿ ಪಿತ ಕಂಡವನ ಗೋಸಮೂ
ಹವಮೇಸುವಾ ॥
ದಾಶತ್ವಕಿಡಲು ಮಳಲೀಶಾರ್ಚಗೈಯ್ಯುತಿ ।
ಪ್ಪಾ ಸುದ್ದಿ ಕೇಳಿ ಪಿತನಾಸುರದಿ ಬಂದು ಪಾ ।
ಲ್ನಾಶಾದುವಕೊದಿಯೆ ರೋಷದಿಂ ಕಡಿದು ತಲೆಈಶ
ಗಣಪದಗೊಂಡನು ॥

೭೧

ಮಲಹರನಭಕ್ತ ಕೋಲ್ಪುರಿಯಾಂಡ ಬಪ್ಪ ಬರ ।
ದೊಳಗೆ ಶಿವಶರಣ ಸಂಕುಳವ ಪೊರೆವುದೆಂದ್ಹೇಳಿ ।
ಘಳಿಸಿರ್ದ ಧನಕೊಟ್ಟು ಸಲೆ ನೆವಹರವ ಕಾರಣುಳಿದು
ಮನೆತಾಯ್ತೆಂದಿಯಾ ॥
ಘಳಿಲನವ ಪೋಗಲ್ಕೆ ಮಳೆತಡೆದು ದುಷ್ಕಾಲ ।
ದೊಳು ನೆರೆದು ಭವಿಯಪ್ಪ ಬಳಗ ಮುಂಡದು ಕೇಳಿ ।
ತಿಳಿದು ಬಂದುಂಡವರ ತಲೆಗಳಂಗಡಿದು ಗಣ
ತಿಲಕಪದಗೊಂಬನು ॥

೭೨

ಕಳೆಛತ್ರಿಯಾಂಡ ತಿಂಗಳಸೂಡಿದನ ಭಕ್ತ ।
ತಿಕಲ ಗುರುಲಿಂಗ ಚರನಳಿಕಲೋಚನನಿಂದೆ ।
ಗಳು ಕೇಳದಿಪ್ಪ ವ್ರತದಳದಿರುತೆ ಶಿವಭಕ್ತರೊಳ
ಗಗ್ಗಳೆನಿಸುತಿರಲು ॥
ಮಲಹರನು ನರರೂಪದಳೆದು ಬಂದೆಲೆ ಭಕ್ತ ।
ನೆಲಬುಸರದವ ಶಿವೋಪಲಲಿಂಗ ಚರನರೆನೆ ।
ಪಳಿದುದಂ ಬಲುಮುಳಿದು ಕೊಲಲೆದ್ದು ಶಿವನೊಳು
ಬೆರೆದ ಶರಣಬಸವ ॥

೭೩

ಮಾರಹರಪದ ಶರಣ ಚಾರುತರ ಕಲಿಯು ನಾ ।
ಯ್ನಾರಾಖ್ಯ ಪುರಹರಗೆ ನೀರಾಜನದ ನೇಮ ।
ಪೂರೈಸೆ ತನಗುಳ್ಳಸಾರ ಧನ ಸವೆಯಲ್ಲ ಭೀರತನ
ವಂ ಬಿಡುತಲೆ ॥
ವಾರಿತಾ ನೋಡದೆ ಶರೀರವಂ ಕೊರೆದು ಕೆ ।
ನ್ನೀರಿಂದ ತೊಯ್ಸಿ ಘನಸಾರದಿಂ ಝಗಝುಗಿಸು ।
ವಾರುತಿಗಳಂ ಬೆಳಗಲಾರುಮೊಗಪಿತನೊಲ್ದು
ಶ್ರೀ ರಜತಗಿರಿಗೊಯ್ದನು ॥

೭೪

ಪುಲ್ಲಶರಹರ ಪಾದಪಲ್ಲವಾರ್ಚಕ ಕಣಂ ।
ಬುಲ್ಲ ನಂಬಯು ನಿರುತ ಪುಲ್ಲಮಾರಿದ ಹಣಂ ।
ಸಲ್ಲಿಸುತ ಶರಣರಿಗೆ ನಲ್ಲದೀಪಂ ಕಣಂಬುಲ್ಲನಿಂ
ರಚಿಸಿ ಗೌರೀ ॥
ಯೊಲ್ಲಭಂಗಪಿ ಪೊಂದೊಳ್ಳೆ ನೇಮದೊಳಗಿರು ।
ವಲ್ಲಿಯೊಂದಿನದೊಳಾ ಪುಲ್ಲಸುಡದಿರೆ ಕಂಡು ।
ತಲ್ಲಳದಿ ತಲಿಜಡಿಗೆ ಥಳ್ಳುರಿಯ ಪಚ್ಚಲೆಮುದಲ್ಲಣ
ನವಂಗೊಲಿದನು ॥

೭೫

ಮೃಡನಪದ ನಿಜಭಕ್ತ ಕಡಊರ ಕಾರಿ ಸಲೆ ।
ಪೊಡವಿಯೊಳು ನಗದವರ ಬೆಡಗಿನಿನ್ನಗಿಸೆ ಮುದ ।
ಪಡೆದ ಸುಖ ಲಿಂಗಕ್ಕೆ ಕೊಡುವ ನೇಮವ ನೊಂದು
ಪಿಡಿದು ಕೆಲಕಾಲ ಸವಿಯೆ ॥
ಪಡೆದು ನರರೂಪಗಜೆಯೊಡಗೂಡಿ ಬಂದೆನಿತು ।
ನುಡಿದರನ್ನಗದಿರಲು ಮಿಡುಕಿ ಮುಂದೈತಂದು ।
ಒಡಹುಟ್ಟಿದವಳೆಯೀಹಡದಮ್ಮ ನಿಮಗೆಂದು ಗಡ
ನಗಿಸಿ ಮುಕ್ತಿಸಡೆದ ॥

೭೬

ಕಾಲಹರಭಕ್ತ ತಿರುನೀಲನಕ್ಕಂಗೆ ಸ ।
ಲ್ಲೀಲೆನಾಮದ ಸತಿ ವಿಶಾಲಮತಿಯೊಂದು ದಿನ ।
ಶೈಲಜಾಪನ ಪೂಜಿಕಾಲದೊಳು ಶಿವನ ಮೈಮೇಲಿರುವಶ
ಲದಿ ಕಂಡು ॥
ಬಾಲೆಯುಗಳಲು ಪತಿಶಿವಾಲಯದ ಹೊರ ನೂಂಕು ।
ತೇಳುತಿಹ ಹುಗಲ್ಕಂಡು ಗೋಳಾಡಿ ಸತಿ ಪತಿಯು ।
ಬಾಳಗೊರಂಗಿಟ್ಟು ಭಾಳಾಕ್ಷನೊಲಿಸಿ ಕೈವಲ್ಯವಂ
ಪಡಕೊಂಡರು ॥

೭೭

ಮಾದೇವಪದ ಭಕ್ತನಾದನ್ನೈಸನು ವಸನ ।
ನೇದು ಶಿವಭಕ್ತ ಜನಪಾದಕೊಪ್ಪಿಸುತ ದಯ ।
ಗೈದವರು ಕೊಟ್ಟುದಂ ಖೇದವಿಲ್ಲದೆ ಕೊಂಬ ಸಾಧುವ್ರತ
ದೊಳಗಿರುತಿರೆ ॥
ಭೇದವಿಲ್ಲದೆ ಬರಿಸನೇದ ಚಿತ್ರಾಂಬರಂ ।
ವೇದ ಘೋಟಕಗಿತ್ತಡಾದೇವನೆಳೆ ಕೊಡಲು ।
ಮೋದದಿಂ ನಲಿದಾಡುವಾ ದಂಪತಿಗಳಿಗೆ ವಿನೋದ
ಗಣಪದವಿತ್ತನು ॥

೭೮

ಅಳಿಕಾಕ್ಷ ಶರಣ ಚಿರುಪುಲಿಯಾಂಡ ಜಂಗಮರ ।
ನುಳಿದುಣದ ವ್ರತದಿ ದಿನಗಳಿಯೆ ಮುವ್ವತ್ತೆಂಟು ।
ಒಲಿದು ಶಿವಪ್ರಮಥಗಣರೊಳಗಿಟ್ಟವನ ಭಕ್ತಿ ಛಲವ
ನುರೆ ಕೊಂಡಾಡಿದಂ ॥
ಸಲೆ ಮುರುಗನೆಂಬುವಗ್ಗಳ ಭಕ್ತ ಮಾರಮದ ।
ದಳನಮನುಭಕ್ತಿಯಿಂ ಬಲುಜಪಿಸಿ ಪ್ರಮಥಗಣ ।
ಕುಲತಿಲಕನಾದ ಕೇಳೆಲೆ ಶರಣಬಸವೇಶ ಸುಲಭಮತಿ
ಭಕ್ತಕೋಶ ॥

೭೯

ಶಿತಿಕಂಠ ಭಕ್ತನಚ್ಚುತ ಜೂಜಿನಾಟದಿಂ |
ದತಿ ಧನಂಗಳಿಸಿ ಚರತತಿನಿಡುವದಂ ಕೇಳಿ |
ಜಿತಕಾಮ ಬಂದು ಸೋತತುಳ ಜೂಜಾಡಿಗಣಪತಿ
ಪಟ್ಟವಂ ಗಟ್ಟಿದಂ ||
ಅತಿಭಕ್ತನೆಂಬುವಂ ಪ್ರಥಮ ದೊರಕಿದ ಮೀನ |
ಸಿತಿಗಾತ್ರಗೆಂಬೊಂದು ವ್ರತಗೈದು ಕೆಲದಿನಂ |
ಗತಿಸಲೊಂದಿನ ಶಿವಾರ್ಪಿತದ ಝುಷ ಬರಬರಲು
ನತಿಗಳೆದು ಸುಗತಿ ಪಡೆದಂ ||

೮೦

ಹರಚರಣ ಭಕ್ತ ನಾತಿರುಕುರುಪಿ ತೊಂಡ ಶಿವ |
ಶರಣ ಜನರಂಬರಂ ಪರಿತೋಷದಿಂದೊಗೆಯು |
ತಿರೆ ಕೇಳಿ ಬಂದು ಶಂಕರನು ಚರರೂಪಿನಿಂ ಕರಿಚರ್ಮ
ಕೈಗೆಕೊಟ್ಟು ||
ಶರಣ ನೀನಿದು ಶುಭ್ರತರಮಾಗಿ ತೊಳೆವುದೆನೆ ||
ನೆರೆಧನ್ಯನೆಂದೊಗೆಯುತಿರೆ ಕರಿದು ಪೆಚ್ಚಾಗೆ |
ಹರಣಕುರೆ ಮುಳಿಯೆ ಪುರಹರನೊಲ್ದು ಪ್ರಮಥಗಣ
ವರಪದವನಿತ್ತು ಪೊರೆದಂ ||

೮೧

ಶೂಲಿಪದ ಭಕ್ತ ತಿರುನಾಳ ಪೋವಂಮಾಸ |
ಕೂಲಿ ಕೈಕೊಂಡೊಂದು ಶಾಲಿಯೊಂದಿನಕೊಯ್ದು |
ಶೀಲಗುಣ ಪೊನ್ನಂಬಲಾಲಯಾಧಿಪತಿ ಜಿತಕಾಲ
ನೊಳು ತನ್ನ ಮನವಾ ||
ಕೀಲಿಸಿರೆ ಬಂದು ಮೈಮೇಲೆಚ್ಚರಿಲ್ಲದೊಲು |
ನೀಲಗಳ ಸದ್ಭಕ್ತಿ ಮೂಲನ್ನರಿತು ಮನ |
ಲೋಲ್ಯಾಡಿ ಕೊಂಡೊಯ್ದು ಕೈಲಾಸದೊಳು ಗಣರ
ಮೇಲುಪದವಿತ್ತ ಶರಣಾ ||

೮೨

ಮೃಡಪಾದ ಭಕ್ತನೈಯ್ಯಡಿ ಭೂಪನಖಿಳ ಪಾ |
ಳ್ಗುಡಿಗಳಂ ಕಟ್ಟಿಸುತೆ ಕಡೆಗೊಂದು ಸುಪರ್ಣ |
ಗುಡಿ ಕಟ್ಟಿಸೈದನೇರಿ ನಡೆನೋಡಿ ಕಾಣ್ಬನಿತು
ಪೊಡವಿಜಂಗಮರಿಗಿತ್ತು ||
ದೃಢಭಾವದಿಂ ಲಿಂಗದಡಿಪೂಜಿಸುತ ಮುಕ್ತಿ |
ಪಡೆದನೆಲೆ ಶರಣಪ್ಪ ಗಡನೆ ನೀ ಕೇಳೆಂದು |
ನುಡಿದನಾ ಗುರುರಾಯ ಜಿತಮಾಯ ನುತಿಗೇಯ
ಶೀತಕಾಯನುತಿಯುಕ್ತನು ||

೮೩

ಹರಭಕ್ತ ನಡವಘೆಯ ಪೆರುಮಾಳೆಯೆಂದೆಂಬ |
ಧರಣಿಪತಿ ಧನಪಾಲ ಬರದೊಳಗೆ ಮೂರು ಸಾ |
ಸಿರ ಕಣಜ ಧಾನ್ಯದಿಂ ಶರಣರಂ ಪೊರೆದನೆಂದರಿದು
ಚರಮುಖದಿಂದಲಿ ||
ಭರದಿಂದ ಬಂದು ತನ್ನರಸುತನಮುವಗೆ ಧಾ |
ರೆರೆದವನ ಪುಣ್ಯವಂ ನೆರೆಕ್ರಯಕೆಗೊಂಡು ತಾ |
ಪುರ ಬಿಟ್ಟು ನಡಿಯೆ ಪುರಹರ ಬಂದು ಮೈದೋರಿ
ವರ ಪ್ರಮಥ ಪದವಿತ್ತನು ||

೮೪

ಪುರಹರನ ಪದ ಭಕ್ತ ನರಸಿಂಗ ಮೊನೆಯಾರ |
ವರಭಕ್ತಿಗೊಲ್ದು ಶಂಕರ ಬೇಡೆ ಹೇಮಮನ |
ಹರುಷದಿಂದಿಡೆ ಮೆಚ್ಚಿತೆರಿಯೆ ನಿಜರೂಪ ಮದನೆಂದು
ಬಲು ಭಕ್ತಿಯಿಂದಾ ||
ಪರಮ ಯಸ್ಯಜ್ಞಾನಿ ವರಜಡೆಯ ನಾಯ್ನಾರು |
ಪರಿತಂದು ಚರಣದೊಳು ಪೊರಳುತಿರೆ ಮೂವ್ವರಂ |
ಹರಮೆಚ್ಚಿ ಕೈಲಾಸಪುರಕೊಯ್ದುಗಟ್ಟಿದಂ ಸ್ಥಿರ
ಪದಂ ಶರಣಬಸವಾ ||

೮೫

ಮಾರಹರ ಭಕ್ತ ನಾಯ್ನಾರಾಖ್ಯಕಕ್ಕೆಮರ |
ಚಾರು ಶಿವನೆಂದೆರಗಿ ಯಾರಕ್ಕರದ ಮನುವ |
ಭೂರಿತೋಷದಿ ನುಡಿದು ಸಾರಗಣ ಪದಗೊಂಡು
ಶ್ರೀರಜತಗಿರಿಗೈದಿದನು ||
ಚಾರಮನು ತನ್ನ ಪರಿವಾರದೊಡಗೂಡಿ ತುರ |
ಗೇರಿ ಕೈಲಾಸ ಪುರಸೇರಿ ಗಣಪದ ಪಡೆದು |
ರಾರಾಜಿಸಿದನೆಂದು ಸಾರುತಿರೆ ಗುರುಪಾದ ವಾರಿಜಕೆ
ಶರಣೆಂದವನು ||

೮೬

ಭಕ್ತಿಯ ಚರಿತ್ರಮಿದು ಭಕ್ತಿಯಿಂ ಕೇಳೆ ಸ |
ನ್ಮುಕ್ತಿಯಾಗುವದೈದೆ ಭಕ್ತಿಯಿಲ್ಲದ ನರಗೆ |
ಮುಕ್ತಿಯಲ್ಲಿಹುದು ಸದ್ಯುಕ್ತನೊಲು ಮಿಗೆ ಮುಖ್ಯ
ಭಕ್ತಿಯೆ ಕಾರಣವಲಾ ||
ಭಕ್ತಿಗೈವಡೆಬೇಕು ಶಕ್ತಿ ನೀ ತಿಳಿವಡಾ |
ಶಕ್ತಿಯುಂದರೆ ಸತಿಯು ಶಕ್ತಿಯೆನೆ ಸನ್ಮತಿಯು |
ಶಕ್ತಿಯೆಂದರೆ ಬಲವು ಶಕ್ತಿ ಘನಲಗ್ನಕುದ್ಯುಕ್ತ
ನೀನಾಗೆಂದನು ||

೮೭

ವರಪುರದ ಶಿವಲಿಂಗ ಶರಣಬಸವನ ಚರಿತೆ ।
ಗುರುಬಸವಣಾರ್ಯ ಪದಸರಸಿರುಹ ಲೀನಮಧು ।
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸುಖ ಭಕ್ತ್ರಿಯಿಂ. ॥

ವಿರಚಿಸದನೋದಿಸುವ ಬರೆದಗೋದುವಗೆ ಪರ ।
ತರ ಭಕ್ತ್ರಿಯಿಂದ ಪೇಳಿದರೆ ಕೇಳಿದರೆ ತಾಂ ।
ದೊರೆಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ವಸುಸಂಧಿ ಸುಶಿಲಬಂಧಿ ॥

**ಸಂಧಿ ೮ ಕ್ಕೆ ಪದ ೭೫೫ ಕ್ಕಂ ಮಂಗಳಂ.**



ಶ್ರೀ ಶರಣಬಸವೇಶ್ವರ ಪ್ರಸನ್ನ

## ಒಂಬತ್ತನೆಯ ಸಂಧಿ

ಸೂಚನೆ॥ ಗುರುವಿನಪ್ಪಣೆಯಿಂದವರ ನೀಲಲೋಚನೆಯ ।
ಗುರುಬಸವ ಮದುವೆಯಂದ್ದರ್ಷದಿಂದಾದಂತೆ ।
ಶರಣೆಮಾದಾಂಬೆಯರ ಕರ ಗ್ರಹಣಗೈದು ಸಂಸರಣ ಸುಖದಿಂದಿರ್ದನು ॥

೧

ನ್ನಲ್ಲ ಶುಭವಿನುತ ಪದಪಲ್ಲವಂ ಸಲೆ ಭದ್ರ ।
ವಲ್ಲಭಧ್ವಜ ಬೆಟ್ಟ ಬಿಲ್ಲನೆಸಗಿದಕಾಲ ।
ದಲ್ಲಣಂ ಧನದಸಖ ಪುಲ್ಲೆಗೈಪುರ ವಿಜಿತ ಮಲ್ಲಿ
ಕಾರ್ಜುನ ಮಂಗಲಂ ॥
ಕಲ್ಯಾಣಪ್ರದ ಶಿವಂ ಸಲ್ಲೀಲೆಯುತ ಕಣಂ ।
ಬುಲ್ಲ ನಂಬಿಯುವರದ ಬಲ್ಲಿದನೆ ಹಿಮಗಿರಿಜೆ ।
ಕಲ್ಯಾಣದೊಳ್ದಾಳ್ದ ಮುಲ್ಲಾಸ ಶಿವಲಿಂಗನೆಲ್ಲ
ಜಗಕಿತ್ತು ಸಲಹು ॥

೨

ಆಚಾರ್ಯ ನೀನೆನಗೆ ವಾಚಿಸದ ತೆರಲಗ್ನ ।
ವಾಚರಿಸಲಾಗಿ ಶಿವಗೋಚರಿಪನ್ನಾಧ್ಯಗೆನ್ನ ।
ಲೋಚನಕೆ ಪೆಣ್ಣೆ ಪೈಶಾಚೆಂಬ ಸತ್ಪುರುಷವಾಚವಂ
ನರಿದು ಮನಸಂ ॥
ಚಾಚಲೆಂತಯ್ಯೋ ನಾನೀಚ ಸಂಸೃತಿಗೆ ಬಲು ।
ನಾಚುವೆ ವಿರಕ್ತಿಗಘಮೋಚನೆಂಬುವದರಿದು ।
ಪೂಚಮಣಿಬಿಟ್ಟೊಡೆದ ಕಾಚಕೈಗೊಂಬಂತೆ
ಬಾಚುವೆನೆ ಸಂಸೃತಿಯೊಳು ॥

೩

ಸಾನಂದಮಾದಮನೆ ಸೂನಸುಧೆ ರೂಪು ಸತಿ ।
ಮಾನಿನಿಯು ಮೃದುಭಾಷಿ ಮಾನಿತನ ಸಖ್ಯಾತ್ಮ ।
ಮೀನಾಕ್ಷಿಯೊಡಸೆ ರತಿ ತಾನೇಳಿಸಿದುದೆಲ್ಲ ನೂನಲ್ಲ
ದೆಸಗುವ ಚರಂ ॥
ತಾನಾಗಿ ಬಂದವರ್ಗೆ ಮಾನವಂ ನಿತ್ಯ ಶಿವ ।
ಧ್ಯಾನಾರ್ಚನಮೃತಾನ್ನ ಪಾನಭೋಜನವು ಶಿವ ।
ಶಿವಜ್ಞಾನಿಗಳ ಒಡನಾಟವಂ ನಿರುತ ಮಿರಲಾಗೆ
ಧನ್ಯವದು ಗೃಹಸ್ಥಾಶ್ರಮಂ ॥

೪

ಆದರಿಂದ ನಿನಗಭ್ಯುದಯಮಪ್ಪ ಕಾರಣಂ ।
ಮದುವಿಗೆ ಮನಮ್ಮಾಳ್ಪುದಿದು ವಿಹಿತವೆನೆ ಕೇಳ್ದು ।
ಪದಕೆರಗಿ ಮನಬಂದ ವಿಧಗೈವುದೆಂದಂದು ವದಿಸಲಿಕೆ
ಗುರುರಾಯನು ॥
ಮುದದಿಂದ ಕೆಲವುಜನ ಸದ್ಗುಹಸ್ಥರು ಕೂಡಿ ।
ಮದನಹರ ಭಕ್ತಿ ಸಂಪದಯುಕ್ತನಪ್ಪ ಕೋ ॥
ವಿದ ಶಿವಾಗಮದರ್ಥ ವಿದಿತರಿರುವೂರು ಮೇಣ್
ಸದನಗಳ ನೋಡುತ್ತಿದೆ ॥

೫

ಅನಿತರೊಳೆಲ್ಲ ಬಹು ಘನತೆ ಗ್ರಾಮೊಂದು ಶೋ ।
ಧನ ಗೈಯುತಲಿ ಬಂದು ವಿನುತ ಮಾಶಾಳ್ಪಾವಿ ।
ಮನೆ ಶಾಂತಲಿಂಗಪ್ಪನನು ಕಾಂಬೊ ತವಕದಿಂ ಮನೆ
ಶೋಧಿಸುತ್ತೆ ಬರಲು ॥
ಘನನವರ ಕಂಡು ಕರವನಜಗಳ ಮುಗಿಯುತಾ ।
ಸನವಿಕ್ಕಿ ಕುಳ್ಳಿರಿಸಿ ಪ್ರಣುತನಾಗೆದ್ದು ಕೇ ।
ಳ್ದನಗ್ರಾಮಬಂದ ಕಾರಣವೆಲ್ಲ ತುದಿಮೊದಲುಯಿನಿ
ತುಳಿಯದೊಲ್ತೋಷದಿ ॥

೬

ಪೂಗರಡಿಗೆಯರಾವು ಬೀಗತನ ಕೆಂದೆಮ್ಮ ।
ಆಗಮನವಾಯ್ತೆನಲು ರೋಗಿ ಬಯಸಿದ ರುಜೆ ।
ಬಾಗಿಲಂ ಕೇಳುತೆಮಗಾಗಿ ಬಂದವ ಭಿಷಜ ಮೇಗೆ
ಕೇಳುವದೇನದು ॥
ಆಗಲಾಗಲಿಯೆಂದು ಬೀಗನೆಂಟರನು ಶಿವ ।
ಯೋಗಿಗಳ ಕರಸಿ ಸಲೆ ಪೂಗ ಭಸ್ಮದ ಘಟ್ಟಿ ।
ನಾಗವಲ್ಲಿಗಳು ಬಲುಬೇಗದಿಂ ತರಿಸಲನುರಾಗದಿಂ
ದಾಚಾರ್ಯನು ॥

೭

ನಗುತ ಬೆಸಗೊಂಡ ನೀ ಮುಗುಧಿಯನ್ನಮ್ಮ ಶರ ।
ಣಗೆ ಕೊಡಲೊಡಂಬಡಲು ಬಗೆ ಸೂತ್ರ ಪೇಳೆಂದು ।
ಮಿಗೆ ತೋಷದಿಂ ಪೇಳೆ ಬಗೆ ಭಿನ್ನಮಾಗಲಿಕ್ಕಗಣಿ
ತೋತ್ಸವದಿಂದಲಿ ॥
ಮಗಳ ತಂದವರ ಪದಯುಗಳದೊಳ್ಕೆಡಪಲ್ಕೆ ।
ಮುಗುಳ ಶರ ಸತಿಗಿಂದ ಮಿಗೆ ಚಲುವೆಯೆಂದವಳ ।
ಹೊಗಳುತಲಿ ಪಂಚ ಸುಫಲಗಳುಡಿಯೊಳಿಟ್ಟು
ತಲೆನೆಗವಿ ಮುಂದಿರಿಸಿಕೊಂಡು ॥

೮

ವನಜಲೋಚನಿಯ ಕರವನಜವಂ ನೋಡಿ ಯೌ ।
ವನ ಮತ್ತೆ ರೂಪುಲಕ್ಷಣ ಕೊಲ್ದು ಕೋಮಲಯ ।
ಜನುಮನಾಮವ ಕೇಳಿ ಗಣಕೂಟನಾಡಿಗಳು
ಗುಣಿಸಿ ಘಟಿತಾರ್ಥ ಬರಲು ॥
ಫಣೆಗಿಟ್ಟು ಭೂತಿ ನೂತನವಸನ ಉಡಿಸುತಲಿ ।
ಕನಕ ಸರಗಿಯನವಳ ವನಜಗಳಕಿಟ್ಟು ಶೋ ।
ಭನಪಾಡಿ ಸಕ್ಕರಿಯು ಜನಕೆಲ್ಲ ಬೀರಿ ದಕ್ಷಿಣ
ಜಂಗಮರಿಗಿತ್ತರು ॥

೯

ಕಡುಸಂಭ್ರಮದಿ ಗಟ್ಟಿಗಡಬುಣಿಸುತೆಲ್ಲರ್ಗೆ ।
ಉಡುಗೊರೆಯನಿತ್ತು ತಿಥಿ ವೃಢಗೈದು ವೈಶಾಖ ।
ನಡುವಂದು ದಿವಸ ಬಲುಸಡಗರದಿ ಕಳುಹಲ್ಕೆ ನಡೆದ
ಸಂಗತಿಯಲ್ಲವಂ ॥
ಮಡಿಯಮ್ಮನಾದಯ್ಯ ನೋಡಪೇಳೆ ನೀವ್ ಕರಸಿ ।
ದೊಡೆ ಬಪ್ಪೆ ಲಗ್ನಕ್ಕೆ ನಡಿವೆನೆನೆ ಕೇಳುತವ ।
ರಡಿಗೆರಗಿ ಮೈದೊಳಿಸಿಯಡೆಮಾಡಿ ಶಿವಪೂಜೆಗಡಿ
ತೀರ್ಥಪಡದುಣ್ಣುತೆ ॥

೧೦

ಆದೈಯ್ಯ ಮಡಿಯಮ್ಮ ಸಾಧು ಶರಣವರವರ ।
ಸೋದರರು ಗುರುವರನ ಪಾದಪದ್ಮಕ್ಕೆರಗ ।
ಲಾ ದಯಾನಿಧಿಯಾಶೀರ್ವಾದವಂ ನಿತ್ತುತಾಪೋದನಾ
ಕಲಿಕೇರಿಗೆ ॥
ಆ ದಿನಮೊದಲ್ಗೊಂಡು ತೋದು ಬೀಸುವ ದಿವ್ಯ ।
ಗೋದಿಪಿಷ್ಟಕ್ಕಿ ಜವೆ ಮೋದದಿಂ ಥಳಿಸುವದು ।
ಆದರದಿಯಕ್ಕತ್ತೆ ನಾದುನಿಯಕರಸೆಂಬ ನಾದವಾಮನೆ
ತುಂಬಿತು ॥

೧೧

ಬಲು ಹರುಷದಿಂದಮನೆ ಲಲನೆಯರು ಹಾಡ್ಯಾಡಿ ।
ಥಳಿಸುವದು ಕುಟ್ಟುವದು ಗುಳಿಗಿ ಶಾವಿಗೆ ಪರಡೆ ।
ಗಳು ಮಾಡುವುಮ ಕಾಸಿ ತಿಳಿದುಪ್ಪ ಮಡಗುವದು
ಸಲೆಗೈವಯಬಲೆಯರನು ॥
ನಿಲಗೊಡದೆ ಕಾಡಿ ಕೈಗಳು ಪೊಟ್ಟೆಯೊಳಗಿಡಿಸಿ ।
ಕೆಲಸಗೆಡಿಸಿದ ಖೋಡಿ ಥಳಿಯಂಬರಕ್ಕಸನ ।
ತಲೆಗಡಿಯಲೆಂದು ಸುಖನಿಳಯನಂ ಮನ್ಮಥನ
ಗೆಳೆಯನನ್ನೆಸದರೆಲ್ಲಾ ॥

೧೨

ಪೊಡವಿ ಜನಕೆಲ್ಲ ಬಲುನಡುಗಿಸುವ ಮಾಗಿಯಿಂ ।
ನಡುಗಿಸದೆ ಬಿಟ್ಟರದು ಮಡಿಯಮ್ಮನಾತ್ಮಜನ ।
ಸಡಗರದ ಲಗ್ನವಂ ಕೆಡಿಸದಲೆ ಬಿಡದೆಂದು ಗಡನೆ
ಮಧುಭೂಪ ತನ್ನಾ ॥
ಪಡೆಗಪ್ಪಣೆಯನಿತ್ತು ಗುಡಿಯ ಪೊಯ್ಸಿದನೊ ಕೆಂ ।
ಪಿಡಿದ ತಳಿರುಗಳೊ ಇಂಗಡಿಸಲಿಕೆ ಬಾರದೆಂ ।
ದಡಿಗಡಿಗೆ ಪಿಕ ಬಳಗ ನಿಡುಸರದಿ ಕೂಗಲಾರಡಿಗಳತಿ
ಧನಿಗೊಟ್ಟವು ॥

೧೩

ಚಾಗಿಗಳೆ ದಿವ್ಯ ಸುಖಭೋಗಿಗಳೆ ಮಹಂತ ಶಿವ ।
ಯೋಗಿಗಳೆ ಪರಮಾನುರಾಗಿಗಳೆ ಶ್ರೇಷ್ಠ ಗುಣ ।
ಸಾಗರರೆ ನಿರುತಶೈವಾಗಮ ವಿಚಾರಪರಸಾಗಿ ಗುಣ
ಭಿಕ್ಷುಗಣರೆ ॥
ಮಾಗಿಯಮ್ಮುರಿದ ಮಧುಸಾಗ ಮದಮಧ್ಯದೊಳ ।
ಗೀಗೆ ಶರಣನ ಲಗ್ನವಾಗುವದು ನೋಳ್ಪಡತಿ ।
ಬೇಗಿಬರ್ರೆಂದು ಸಲೆ ಕೂಗಿಕರೆವಂತುಲಿಯೆ ಕೋಗಿಲೆ
ಗಳಿಳಿಯ ಜನಕೆ ॥

೧೪

ಕರಿಯಲದು ಕೇಳಿ ಘನ ಹರುಷದೊಡಗೂಡಿ ಬಾ ।
ಯ್ದೆರಿಯೆ ದಾಳಿಂಬ ಮಧುಕರ ಬಳಗ ಮತ್ತೆ ।
ಝೇಂಕರಿಸೆ ಜೇನ್ನೊಣ ಚಾರು ಶರಣಬಸವನ ವಿವಹ
ಕಿರದೆ ನೆರವಾಗಲೆಂದು ॥
ನೆರವಿಟ್ಟನೋ ಸಕಲಸರಸಿಯೊಳು ವಿದಳಿತ ಸು ।
ಶರಜ ಬಳಗವು ವಿಭಾಕರನೆಂಬ ಮಾಳ್ಕೆಯಿಂ ।
ಧರಣಿಯೊಳಗಿಪ್ಪಖಿಳ ಸರಸಿಜಾಕಾರಗಳು
ನೆರೆ ಶೋಭೆಯಿಂ ಮೆರೆದವು ॥

೧೫

ಮೊಲ್ಲೆ ಮಾವಸುಗೆ ಕಂಕಲ್ಲಿ ಮಾಧವಿ ನಾಗ |
ವಲ್ಲಿ ಪುನ್ನಾಗ ಮುಖಬಳ್ಳಿ ತರುಗಳಿಗೆ ನವ |
ಪಲ್ಲವಗಳ್ಹುಟ್ಟಿ ಜಗಕುಲ್ಲಾಸನಿತ್ತವತಿ ಸಲ್ಲಲಿತ
ಸುಗ್ಗಿಯೊಳಗೆ ||
ಎಲ್ಲೆಲ್ಲಿ ಪರಿಣಯದ ಸೊಲ್ಲು ಕನ್ನೆಯರ ಕೈ |
ಕೊಳ್ಳುವಾವಾಗ್ವರಗೆ ಸಲ್ವ ದಕ್ಷಿಣೆ ಮಾತು |
ಬೆಳ್ಳಿ ಬಂಗಾರ ಮಡಿಕೊಳ್ಳುವಾನುಡಿ ನುಡಿವರುಲ್ಲಾಸ
ದಿಂದೆಲ್ಲರು ||

೧೬

ಮೊಲ್ಲಿಮಾಮರಕೆ ವನಮೊಲ್ಲಿಯಸುಗಿಗೆ ಸೋನು |
ವಲ್ಲಿ ನೀರಲಕ್ಯಾಲವಳ್ಳಿ ಪುನ್ನಾಗ ಕೆಂ |
ಬಲ್ಲಿ ಕೆಮ್ಮುರನಾಗವಲ್ಲಿ ಪೂಗಕೆ ಜಾಜಿವಲ್ಲಿ
ಕೇತಕಿವೃಕ್ಷಕೆ ||
ಸಲ್ಲಲಿತ ಮಾಧವಿಯ ಬಳ್ಳಿ ಮಂಪಾರಕರ |
ನಲ್ಲ ವೃಕ್ಷಕ್ಕಮರವಲ್ಲಿ ಕದಳಿಗೆ ದ್ರಾಕ್ಷ |
ವಲ್ಲಿಗಳನುತಿಪೆತ್ತು ಸಲ್ಲಗ್ನವಾಗಿಪ್ಪವೆಲ್ಲೆಡೆಯೊಳಂ
ಪಾವಗಂ ||

೧೭

ತಳಿರಗುಡಿ ತೋಣಂಗಳು ಮಾವು ಮಿಡಿ ಜಗಲಿ |
ಪಳಕು ಕುಟ್ಟಿಮ ಫಣಿಗೆ ತಿಲಕ ಕುರುವಕಭೂತೆ |
ಸಲೆ ಕೇತಕಿಯಧೂಳಿಯಲರ್ದ ಪೊಂದಾವರೆಯ
ತಲೆಗೆ ಭಾಸಿಂಗಾಗಲು ||
ಅಳಿರವದ ಶೋಭನಂ ಗಿಳಿವರದ ಮಂತ್ರ ಕೋ |
ಕಿಲವಠದ ವಾದ್ಯಖಗಗಳ ರವದ ಜನರ ಗೊಂ |
ದಳ ನುಡಿಗಳೊಡನೆವನ ಲಲನೆ ಮಾಧವನೊಡನೆ ತಳೆದ
ಳೈ ಲಗ್ನದೊಸಗೆ ||

೧೮

ಸಾರತರ ಸೌಖ್ಯದಾಗಾರ ಮಧುಕಾಲಮತಿ |
ರಾರಾಜಿಸುತ್ತಿರಲು ಚಾರು ಚಂದ್ರಿಕೆಯೊಳಗೆ |
ಆರೈಸುತಿನಯರಂ ಸೇರಿಚಂದನದಿ ತಂಪೇರಿ
ಸುತ ಮೈಗೆ ಗಳಕೆ ||
ನೂರುದಳಮಲ್ಲಿಗೆಯ ಹಾರಗಳ ನಿಟ್ಟು ಸವಿ |
ವಾರಿನೋಟದಿ ನೋಡಿ ಮಾರರತಿಗೊಡುತಲಿ ವಿ |
ಹಾರಿಸುವರಖಿಳ ಪುರಕೇರಿ ಕೇರಿಗಳೊಳಗೆ
ನಾರಿಯರು ಸಂಭ್ರಮದಲಿ ||

೧೯

ದಿನಕರನು ದಿವ್ಯ ಮರುತನ ಕೂಡು ತುತ್ತ ರಾ |
ಯನ ನಾದುದಂ ನಾಕಜನ ಕೇಳಿ ಸುಮನ ಮಳೆ |
ಯನುಗರೆದರೆಂಬಂತೆ ವನವನದ ವೃಕ್ಷಗಳ
ಕೊನೆಯೊಳಗೆ ಕುಸುಮಸೆಯಲು ||
ಮನೆಮನೆಗೆ ಮಂಗಳಧ್ವನಿ ವಾದ್ಯಘರ್ಜನಂ |
ತನತನಗೆ ಪಾಡ್ಯ ಶೋಭನ ನೃತ್ಯ ಗೀತ ದ |
ಕ್ಷಣೆ ಕೊಡುವ ಕೊಂಬುವರ ನಿನದವಂ ಬೀಗ
ಬಿಜ್ಜರ ಬಿನದವೆಲ್ಲೆಡೆಯೊಳು ||

೨೦

ಹಸೆ ಜಗುಲಿ ಮೇಲೆ ರಾಜಿಸುವ ಮಂಟಪ ದಿವ್ಯ |
ವಸನಮಣಿಮಾಲೆ ಸಲೆ ಕಸವರಾಭರಣಗಳು |
ಹೊಸೆವ ಶಾವಿಗೆಯು ಬಾಜಿಸುವ ಬಾಜಂತ್ರಿ ನೃತ್ಯ
ಸುವ ವಾರಂಗನೆಯರು ||
ನೊಸಲಬಾಸಿಂಗ ತಲೆ ಕುಸುಮದಂಡಿಗಳು ಶೋಭಿ |
ಸುವ ಮದವಕ್ಕಳಿಂದ ಶರುಭಾಷ್ಟಕದ ಸಂ |
ತಸದವರ ನೋಡಲ್ಕೆ ದೆಸೆದೆಸೆಯೊಳೆಸದವಾ
ಪೊಸವಸಂತಾಗಮನದೊಳು ||

೨೧

ಆ ಸಮಯದೊಳಗಖಿಳ ಲೇಸವಂನೊಳಕೊಂಡ |
ವೈಶಾಖಮಾಸಬರೆ ತೋಷದಿಂ ನೆರಹುತೆ |
ಲ್ಲಾ ಸರಕು ಕರಸಿದಮಹೇಶ ಪದಶರಣರಂದಾ ಸಕಲ
ಬಾಂಧವರನು ||
ಮಾಶಾಶ ಪುರವಕ್ಕಾ ಶಾಂತಲಿಂಗಪ್ಪ |
ದೇಶಿಕರ ಕರೆಸಿ ನಿರ್ದೋಷಮಾದೊಂದು ಸ |
ದ್ವಾಸರದನಿವಹಾವಿಶೇಷ ಮೂಹೂರ್ತ ಕೇಳೆ ಭಾಷಿಸಿದ
ನೀ ಪರಿಯೊಳು ||

೨೨

ಗುರುಲಗ್ನದಲ್ಲಿ ಭಾಸ್ಕರನು ದಶಸಂಖ್ಯೆಯೊಳ |
ಗಿರೆ ಕುಜನು ಹನ್ನೊಂವಕಿರುತಿರುವ ಲಗ್ನ ಶಂ |
ಕರ ಗಿರಿಜೆ ಲಗ್ನವೆಂದಿರುವದಿದರಂತೆಸಗೆ ಸಿರಿ ಸುತರು
ಸತ್ಸಂಪದಂ ||
ದೊರಕೊಳುವದದರಿಂದ ವಿರಚಿಪುದು ನೀನೆನಲು |
ಪರಮಾಸುರಾಗದಿಂ ಬರಸಿ ಪತ್ರಗಳು ಸ |
ದ್ಗುರುವರಗೆ ಗೌರಿಶಂಕರ ಪ್ರಮಥಗಣಕೆ ಸೋದರ
ಬಂಧುವರ್ಗಗಳಿಗೆ ||

೨೩

ಅರಳುಗುಂಡಿಗಿಗೊಂದು ಬರೆದು ಶ್ರೀಮುಖ ಚಾಮಿ ।
ಕರದಕ್ಷರಿಂದಾನೆ ತುರಗ ದಂಡಿಗೆಗಳನು ।
ವರಛತ್ರ ಚಾಮರಮು ಹರುಷದಿಂ ಕಳುಹಲ್ಕೆ
ಚರರೈದು ಪತ್ರಕೊಡಲು ॥
ಕರದೊಳಗೆಕೊಂಡು ಶ್ರೀಶರಣಬಸವಂಗೆಮ್ಮ ।
ತರುಣಿಯಂನೊಲ್ದು ಧಾರೆರದು ಕೊಡೆವೆವು ನಿಮ್ಮ ।
ಪುರಜನಂ ಸಕುಟುಂಬ ಪರಿಜನಂ ಬರುವದೆಂದಿ
ರುವದಂ ನೋಡಿಕೊಂಡು ॥

೨೪

ಆದರದಿ ಕರಸಿಕೊಂಡಾದಯ್ಯ ಗುರುವರನ ।
ಪಾದಕೀ ಸಂಗತಿಯನೋದಿ ತಿಳಿಸುತ ತನ್ನ ।
ಸೋದರರನತ್ತಿಗೆಯ ನಾದುನಿಯರಾಪ್ತ ಜನಮೋ
ದದಿಂ ಕೂಡಿಕೊಂಡು ॥
ಸಾಧುಶರಣನ ಸಹಿತ ಮಾದೇವಿ ಪಿತನೂರ ।
ಹಾದಿ ಹಿಡಿಯಲು ಶಕುನಮಾದವತಿ ಶುಭತರದ ।
ಊದುತಿಹ ಕಹಳೆ ಸನ್ನಾದೆ ಮುರುಜದ ದಿವ್ಯ
ನಾದದೊಡ ನಡೆಗೊಂಡರು ॥

೨೫

ಬರುವ ಮಾರ್ಗದೊಳು ಝುಳಕಿರದೆ ಜನ ಬಳಲಿದರೆ ।
ಶರಣಗದರಿಂ ಕುಂದು ಬರುವದೆಂದರಿದು ಶಂ ।
ಕರ ರಚಿಸಿದುದ್ಯಾನ ಪರಿಶೋಭಿಸುತ್ತಿರಲು ಕರಿಯ
ಲೆದುರೈತಪ್ಪುವಾ ॥
ಚರನೆಂಬುವೋಲ್ಮಂದ ಮರುತ ನೈತಂದಂಗ ।
ಸ್ವರುಷನಂ ಗೈದವರ ಹರುಷದೊಳಗದ್ದುತಲಿ ।
ಬರಮಾಡಿಕೊಳೆ ನಿಬಿಡತರ ಛಾಯೆ ತರುಗಳಾ
ನೆರಳಿನೊಳಗಿಳಿದೆಲ್ಲರು ॥

೨೬

ಎಳೆದಳಿರಮೆಲಿವ ಕೋಕಿಳಗಳಂ ಸುಮಕೆರಗು ।
ವಳಿಗಳಂ ಪಾಡಪ್ಪಿಕೊಳುವ ಕಲಕೀರ ಸಂ ।
ಕುಳಮರಕಡರ್ದ ಮಂಗಳ ಮೊಲ್ಲಿವಲ್ಲಿ
ಪೂಗಳು ಕುಡಿಗಳುಮ್ಮಿಡಿಗಳುಂ ॥
ಸುಳಿಯ ಕೆಲಬಯೋಗಿಗಳ ಭೋಗಿಗಳ ಮನಂ ।
ಸೆಳೆದವದರಿಂ ಮಾರನೊಲುಮೆ ಭೂತೆಂದಿವಕೆ ।
ಸಲುವನಾಮೆಂದಂದು ಸಲೆಪೊಗಳಿ ನಿಬ್ಬಣವ ನಿಳುಹಿ
ನೆಳಲೊಳು ಮರಗಳಾ ॥

೨೭

ವಾರಿಜಾಂಬಕಿ ಸಖಿಗೆ ಸಾರಿದಳದಿನಿತು ನೀ ।
ಧಾರುಣಿಯ ಸುರರಿಡುವ ಸಾರದೊಳಗೊಂದು ಪನಿ ।
ಸಾರಿ ತಲ್ಪಿದುದುಂಟೆ ವಾರಿಜಾಪ್ತಂಗೆ ನಿಷ್ಕಾರಣೀ
ಶ್ರಮವೆನ್ನುತೆ ॥
ಏರಲಂಬರಕೆ ಮಿತಿಮೀರಿ ಬೆಳದಿವೆ ನೋಡು ।
ನೀರು ತಲೆಯೊಳು ಪೊತ್ತು ಸೂರ್ಯಂಗರ್ಘ್ಯಂಗೊಡುವ ।
ಚಾರುಕಲಶನಲೆಸವ ನಾರಿಕೇಳಂಗಳಿವು ನಾರಿ
ಕೇಳೆಂದಳವಳು ॥

೨೮

ಎಳೆಮಿಡಿಯು ಪರ್ಣಸಂಕುಳ ಪಚ್ಚಮೇಣ್ಪಕ್ವ ।
ಫಳಮಳಿಗಳಂ ನೀಲಿಗಳು ಪಾಡುಮತ್ತೆ ನವ ।
ದಳಿರ ಪದರಾಗ ಪವಳ ವಜ್ರಮೌಕ್ತಿಕಂಗಳು
ಸುಮನವಾಗೆಸೆಯಲು ॥
ತಿಳಿದು ನೋಡಲಿಕಿಂದಿನಳಕಾ ಪುರೀಶನಾ ।
ನಿಳಯ ಭಾಂಡಾಗಾರದೊಲು ಶೋಭಿವೆತ್ತನೀ ।
ರಲಮರಗಳಂ ನೋಡು ಲಲನೆಯೀಕ್ಷಿಸುವ
ಕಂಗಳಿಗೆ ಮಂಗಳವೀವವು ॥

೨೯

ಈ ಕಾಲದೊಳು ಜನ ವಿಭಾಕರನ ತಾಪದಿಂ ।
ದಾಕುಲದ ಮಾರ್ಗಶ್ರಮ ನೂಕಲೈತಂದು ಹಿಮ ।
ಪಾಕನೆರಳಿನೊಳೊರಗಿ ಶೋಕ ಸಂತಾಪ ನಿರ್ಮೋ
ಕವಂಗೈವ ಬಗಿಗೆ ॥
ನಾಕಜನರೀಮರಕನೇಕಾಗ್ರ ಗಣಕೊಟ್ಟ ।
ಶೋಕನಾಮವನಿಟ್ಟು ಲೋಕಕಕೆ ಸುಖೀಯ್ಯದಿರ
ಲೇಕೆಂಬುವರು ಜನರಶೋಕೆಂದು ಸಖಿಗೋರ್ವ
ರಾಕೇಂದು ಮುಖಿ ಪೇಳ್ದಳು ॥

೩೦

ಆಲಮರವಖಿಳ ಜಲಮೂಲ ಬೊಮ್ಮದ ಮಾಳ್ಕೆ ।
ಯೊಲಣುವ ಬೀಜದಿ ವಿಶಾಲಮಾಗೊಪ್ಪುವವು ।
ಸಾಲುಸಾಲೆಸವ ನಂದ್ಯಾಲ ನಾರಂಗ ಹಿಂತಾಲಂಜಿರಂ
ಜಂಬಿರಂ ॥
ತಾಲಕಂಕಲ್ಲಿಯು ತಮಾಲ ಖರ್ಜುರ ಕೌಂಗ ।
ದಾಳಿಂಬ ಪುನ್ನಾಗ ಪಾಲಾಶ ದವನ ಮುಡಿ ।
ವಾಳಮಾಲೂರ ಬಾಳೆ ನೋಡೆಂದೋರ್ವ ಬಾಲೆ
ಸಖಿಯುಳಿಗೆಂದಳು ॥

೩೧

ಹೀಗೆನುತ ಸಂಚರಿಪನಾಗನಡಿಯರ ಕಣ್ಗೆ ।
ಪೂಗೊಳಂ ಕಾಣಿಸಿತು ಸೌಗಂಧಿಕ ಕಮಲ ಪ ।
ರಾಗದಿಂ ಸುಮನ ಮಧುಭೋಗಗಳ ಝೇಂಕಾರ
ರಾಗಮು ಮರಾಳಾಳಿಯಾ ॥
ವೇಗವದು ಕಾಣುತನುರಾಗ ಪುಟ್ಟಲು ಚಿತ್ತ ।
ಕಾಗಜಲಕೇಳಿಗೆಮನಾಗಲೊಳ ಪೊಕ್ಕರತಿ ।
ಬೇಗ ಮನ್ಮಥನ ಮದನಾಗ ಬಳಗಂ ಬಂದು ದೀಗೆನ್ನ
ಲವರೆಸೆದರು ॥

೩೨

ದಶನ ನಗೆಯಿಂ ಮುತ್ತು ಪಸುರುಡುಗಿಯಿಂ ಪಚ್ಚ ।
ದೆಸಕಧರಕರದಿ ಕೆಂಪೆಸಗಿ ಮೈಬಣ್ಣದಿಂ ।
ಕಸವರದಕಾಂತಿ ಕಾಣಿಸಿ ಕೇಶಪಾಶದಿಂದಸಿತ
ಮಣಿಗಣಮೆಂಬುವೋಲ್ ॥
ಬಿಸರುಹಾಕ್ಷಿಯರು ಸಂತಸದಲೊಬ್ಬೊಬ್ಬರಿಗೆ ।
ರಸಪಸಿಗಳಂ ಸುರಿಸಿ ಕುಸಿಸಿ ಕೈಕಾಲ್ ಜಗ್ಗು ।
ತಸವಸದಿ ತಲೆತೋಯ್ಸಿ ಮುಸುಡಮೂಗ್ಸಿಡಿ
ಹುತುಬ್ಬಸವೆಸಗುತೀಶಾಡುತೆ ॥

೩೩

ಈ ಪರಿಯ ಕ್ರೀಡಿಪ ಕಲಾಪ ಮುಖಿಯರ ಕಂಡು ।
ಸೋಪಾನ ದಿವ್ಯ ಚಂದ್ರೋಪಲಗಳಂ ಕರಗ್ಯ ।
ದೇ ಪಯಂ ಸರಸಿಯೊಳು ವ್ಯಾಪಿಸಿರಲದರಿಂದ
ತಾಪವೆಗ್ಗಳಮಾಗಲು ॥
ಆ ಪದ್ಮಗಳು ಬಾಡಿಪೋಪುದಂ ಕಂಡು ತವೆ ।
ಕೋಪದಿಂದ್ಲೊರಗೆ ಬರೆವ್ಯೆಪತ್ತಿಶೋಭಿಸುವ ।
ತಾಪತ್ಯೊಳಗಿಪ್ಪ ಶಿವಚಾಪ ಕುಚಗಳು ಕಂಡು
ಕೂಪರೆದೆ ಕಳವಳಿಸಲು ॥

೩೪

ಮಡದಿಯರು ತೊಯ್ದ ತಮ್ಮುಡಿಗಿಕಳೆದಿಟ್ಟೊಗೆದ ।
ಮಡಿಯುಟ್ಟು ಕಂಚುಕಂ ತೊಡುತೆ ಫಣಿಯೊಳು ಭಸಿತ
ತೊಡಿವನಿತಕೈತಂದು ಸುಡಿದರೋರ್ವ್ವಳು ಬೇಗ
ನಡಿರಿ ಸರ್ವ್ವರುಗೈವರು ॥
ಮೃಡಪೂಜೆಯನೆ ಕೇಳಿ ಗಡನೆದ್ದು ಧನುಗಳಂ ।
ಪಿಡಿದು ಭಟರಂತೆ ಸಲೆಕಡಿದು ಕರವೀರಗಳ ।
ಕಡುವೀರರಂತೆ ತವೆ ತುಡುಕಿ ಪಾದರಿಯರಸು
ಪಡಿಗುಪ್ತ ಚರರಂದದಿ ॥

೩೫

ಬಭುಲ ಕಗ್ಗೊರಲಿ ಚಂಪಕ ಗರುಕೆ ಬನ್ನಿ ಕುರು ।
ವಕನೆಲ್ಲಿ ಸೇವಂತಿಲಿಕುಚಯಿರುವಂತಿ ಸುಮ ।
ಕಕುದ ಮಂದಾರ ಕೇತಕಿ ಚಂದನರವಿಂದ ಮುಕುಳ
ವರೆ ಬಿರಿದಿರುತಿಹಾ ॥
ಸುಕರಸುರಹೊನ್ನೆ ಬಂದುಗೆ ಲಕ್ಕಿ ಮೇಣ್ಣ ಸಂ ।
ತಿಕ ಮುತ್ತರಣಿದಳ ವಿಚಿಕಿಲ ಮುಖಸುಮಪತ್ರಿ ।
ನಿಕರವಾಯ್ತಂದು ಬಲುಭಕುತಿಯಿಂದಿಡಲು
ಶಶಿಮುಖಿಯರಾಶಿವಪೂಜೆಗೆ ॥

೩೬

ರಾಜೀವಲೋಚನದ ರಾಜಮುಖಿಯರು ತಂದ ।
ರಾಜೀವಮುಖ ಸುಮನರಾಜಿಗಳು ಕೈಕೊಂಡು ।
ರಾಜ ರಾಜಾಪ್ತನಂ ಪೂಜಿಸುತೆ ಚರಪದ ಸರೋ
ಜೋದಕಂ ಸಲಿಸುತೆ ॥
ಭೋಜನೆಸಗುತ ಕಳೆದು ಭೋಜನೆಳೆಲೊಳುದಣುವು ।
ಬಾಜಿಸುತ ಲೂದಿಸುತ ರಾಜಗಜಪಲ್ಲಕ್ಕಿ ।
ತೇಜಿ ಭಂಡಿಗಳೇರುತೋಜೆನಡೆಗೊಂಡುದಂದಾಜನ
ಪದಂ ನೋಡುತೆ ॥

೩೭

ಇವರು ತಮ್ಮೂರ್ಗೆ ಬರುವವಧಿಯೊಳು ಮಾಶಾಳ ।
ದವರು ನಾನಾಬಣ್ಣ ವಿವಿಧ ಚಿತ್ರಂಗಳಂ ।
ಜವದಿಂದ ಬರಿಶಾತ್ರ ಭವನವಂ ಶೃಂಗರಿಸಿ ನವ
ತಳಿರ ತೋರಣಗಳಿಂ ॥
ಪವಳಮೌಕ್ತಿಕ ರೇಶ್ಮಿ ಜವಳಿ ಜಾಲಾರಿಗಳ ।
ನಿವಹದಿಂ ಮೇಲ್ಕಟ್ಟು ನವರತುನದಿಂದಲಾ ।
ಶಿವಮಂಟಪಖಿಳ ಮಾನವ ಜಾತಿ ನಯನಕುತ್ಸವ
ನಿತ್ತು ಸಲೆ ಮೆರೆಯಿತು ॥

೩೮

ಹಂದರವ ರಚಿಸುತಲ್ಲೊಂದೆಡಿಗೆ ಧೇನುಮಲ ।
ದಿಂದ ಬೋಳಿದ್ಯೆದು ಬಣ್ಣಂದುಂಬಿ ಮೇಲ್ದೆಸಿಗೆ ।
ಚಂದಳಿರ ಮುಕುರಮರವಿಂದ ತೋರಣ ಕಟ್ಟಿ
ಬಂಧು ಜನಕೂಡಿಕೊಂಡು ॥
ನಂದಿಮುಖಸೈದಖಿಳ ಮಂದಿಗನ್ಮೃತಾನ್ನಘೃತ ।
ದಿಂದ ಸಲೆ ತಣಿಸಿ ಚರವೃಂದ ಮನ್ನಿಸಿ ರಜತ ।
ಕಂದಲಂ ನವರತ್ನನಂ ದಕ್ಷಿಣಿಡುತಲಾನಂದವಂ
ಪೆಚ್ಚಿದರು ॥

೩೯

ಕವಿಗಮಕಿ ವಾಗ್ಮಿನಟ ಸುವಿಟ ವಿದೂಷಕ ಪೇ ।
ದವ ನೋದುವೈಯ್ಯಗಳು ಸುವಿಚಾರ ಸಂಪನ್ನ ।
ವಿವಿಧಶಾಸ್ತ್ರಜ್ಞ ಶಾಂಭವ ಮುಖ್ಯ ಮುದ್ರಿಯನ್ನ
ವಲೋಕಿಸುವರಾಪ್ತರು ॥
ಸುವಿವೇಕರು ಶಿವಾನುಭವರು ಪಟ್ಟಾಧ್ಯಕ್ಷ ।
ರು ವರಚರಮೂರ್ತಿಗಳು ತವೆದೇಶಿಕರುನಾಡೆ ।
ಜವದಿಂದ ಲಗ್ನದುತ್ಸವಕೆಂದು ಬಂದವರ್ಗೆ ಭವನ
ನೆರಿಯವು ವಾಸಕೆ ॥

೪೦

ವಾರಿಜಾಕ್ಷಿಯರು ಕತ್ತೂರಿಯನ್ನೆಲಗಟ್ಟ್ವ ।
ಸಾರಿಸುತೆ ಕುಂಕುಮದ ಕಾರಣೆಗಳಂ ಗೈದು ।
ಪಾರಿಜಾತಾದಿ ಸುಮಹಾರಗಳನೆಸಗಿ ಮೇಲೇ
ರುಗಟ್ಟಿಲ್ಲೊಡೆಯೊಳು ॥
ಕೇರಿಕೇರಿಗಳ ಬಾಜಾರ ಬೀದಿಯೊಳು ಪ ।
ನ್ನೀರಿನಿಂ ಥಳಿಗೊಟ್ಟು ನೀರಜಗಳಿಂ ಗೈದ ।
ತೋರಣವುಗಟ್ಟಲಾ ಸೌರಂಭನೆಂಟರಾ ಊರ
ತಾನತಿ ಶಣಸಿತು ॥

೪೧

ಭಾವಶುದ್ಧದೊಳಳಿಯ ದೇವಮುಖರಿರಲಿ ಕೊಂ ।
ದಾವಾಸಗೈದು ನಾನಾವಿಧದ ಸರಕುಗಳು ।
ತೀವಿಟ್ಟು ಶೃಂಗರಿಸಿ ಮಾವುಮುಖ ತಳಿರದಿಂದಾ
ವಾವ ಕೇರಿದಾರಿ ॥
ತಾನಿನಿಕ್ಕೆಲ ನಡಿಸಿ ದೀವಟಗಳಲ್ಲಲ್ಲಿ ।
ಬಾವಟಗೆಗಳ ಕಟ್ಟ ಸಾವಧಾನದೊಳಿರಲು ।
ಶೀವಾಂತ ಬೀಗರರೈದಾವಾರ್ತೆ ಕೇಳಿ ಸಲೆ
ಬಾವಿಮನೆ ಶಾಂತಪ್ಪನು ॥

೪೨

ಎದುರಗೊಳಲೆಂದೆದ್ದು ಸದುಗೃಹಸ್ಥ ಶಾಸ್ತ್ರಜ್ಞ ।
ಬುಧಜನಾಗಮದಿ ಕೋವಿದಮುಪ್ಪರಿಂ ಗೂಡಿ ।
ವಿಧವಿಧದ ವಾದ್ಯದಿಂದೊದರುತಿಹ ಕಹಳೆ ನೃತ್ಯದ
ಪಾತ್ರ ಮೇಳದಿಂದ ॥
ಮುದದಿ ನಡೆತಂದು ಶಿವಸದನ ಸಮ್ಮುಖ ವರನ ।
ಪದಪೂಜೆಮಾಡಿ ಪೊಸಪೊದಕಿ ಪೊನ್ನುಂಗ್ರ ಸರ ।
ಪದಕ ಮೊದಲಾದ ಸಂಪದಕೊಟ್ಟು ಕೂಡಿಸುತೆ
ಕುದರಿ ಮೇಲ್ಕರತಂದರು ॥

೪೩

ಅಳಿಯನನ್ನೇಮಿಸಿದ ನಿಳಯದೊಳಗಿಳುಹೆ ಮಂ ।
ಗಳಸ್ನಾನವಗೈಸಿ ಬಿಳಿ ದುಕೂಲವನುಡಿಸಿ ।
ತಳೆದು ಮುಖದೊಳು ಭೂತಿಗಳದಿ ರುದ್ರಾಕ್ಷಿ ಸರ
ತಲೆಗೊಂದು ಜರತಾರಿಯಂ ॥
ಸಲೆಸುತ್ತಿ ದಿವ್ಯತರ ನಿಲುವಂಗಿ ತೊಟ್ಟು ಕಂ ।
ದಲ ಲಿಂಗದಾಕಾರದಳೆದ ಕಾಯ್ಧರಿಸಿ ಪೆಗ ।
ಲೊಳು ಶಾಲುಪೊರಿಸುತಂಗುಲ ದಶಕದೊಳಗುಂಗ್ರ
ಗಳು ಕಂಠದೊಳು ಸರಗಳು ॥

೪೪

ದೋರ ಮೌಕ್ತಿಕದ ಸರಚಾರು ಮಣಿಮಾಲೆ ಕೇ ।
ಯೂರ ಕಿವಿಯೊಂಟೆಯುಡುದಾರ ಕೈಕಡಗ ರುಳಿ ।
ಯೋರಣದ ನವರನ್ನಹಾರಗಳು ಫಣಿಗೆ ಬಂಗಾರ
ಬಾಸಿಂಗ ಧರಿಸಿ ॥
ಸಾರಕಂಠಿಯು ಚಂದ್ರಹಾರಗಳು ತೋಡಿಸಿ ಮೇ ।
ಣ್ಪಾರಿಜಾತಂತೆ ಭೃಂಗಾರಿ ಶೇವಂತಿ ಮಂ ।
ದಾರಂ ಯಿರುವಂತಿ ಬಕುಳಾರಂಗಳಂಗಳಕೆ ಸೇರಿಸುತೆ
ಸಲೆತೋಷದಿ ॥

೪೫

ನೀರಜವು ಮುಡಿಸಿ ಘನಸಾರ ಕತ್ತುರಿಯ ಮೈ ।
ಸೂರ ಬಿಲ್ಲಿಯು ಬೆರೆದ ಸಾರಗಂಧವು ಮೈಗೆ ।
ಸಾರಿಸುತೆ ಮಲ್ಲಿಗಿಯ ಹಾರಗಳಗಿಟ್ಟು ಶೃಂಗಾರಗೈದಾ
ಮೋದವು ॥
ಚಾರುಶರಣಪ್ಪನ ಉದಾರಗುಣ ಪೊರಸೂಸಿ ।
ತೀ ರೀತಿಯೆನಲಿಕೆ ಸಮೀರನೊಳಕೊಂಡು ಸಂ ।
ಚಾರಿಪನು ನೆರೆದ ನರನಾರಿಯರಿಗದನು ಸಲೆ
ಬೀರುವನೋ ಯನಲೆಸದನು ॥

೪೬

ಹರುಷದಿಂ ಬಂಧುಜನ ನೆರವಿಂ ಕೂಡಿಸಲೆ ।
ಪುರಜನರ ಪಂಕ್ತಿ ಭೋರ್ಗರಿವಖಿಳ ವಾದ್ಯದ ।
ಬ್ಬರದಿ ಮದಲಿಂಗನಂ ಕರೆದೊಯ್ದು ಕೂಡ್ರಿಸುತೆ ವರ
ಮಂಟಪದ ಸ್ಥಾನದಿ ॥
ಕರಿಯ ಕಂಬಳಿಮೇಲೆ ಸುರವಿ ತಂಡುಲ ಹಸಿಯು ।
ವಿರಚಿಸಿ ಸಮೀಪಿಸಿತು ವರಮೂಹೂರ್ತವೆನೆ ಕೇಳಿ ।
ಗುರುವಾಕ್ಯಮಗಳ ಶೃಂಗರಿಸಿ ತರಹೇಳಿದಂ ತ್ವರ
ಶಾಂತಲಿಂಗಪ್ಪನು ॥

೪೭

ಅಂದುದಂಕೇಳಿಯರವಿಂದ ಮುಖಿಯರು ಗಡನೆ ।
ಬಂದು ಮಹಾದೇವಿಗಾನಂದದಿಂ ಮೈಗೆಲ್ಲ ।
ಗಂಧೆಣ್ಣೆ ಪೂಸಿ ತಲೆಯಿಂದ ಪನ್ನೀರೆರೆದು ಮಿಂದ
ಮೇಲ್ದಿವ್ಯಾಂಬರಂ ॥
ತಂದುಡಿಸುತಲಿ ಕಂಚುಕಂ ತೊಡಿಸಿ ಗೌಲಗರು ।
ಚಂದನಂ ತೀಡಿ ಭಸಿತಂ ಧರಿಸಿ ಪುರ್ಬುಗಳ ।
ಸಂದಿಯೊಳು ಮೃಗಜಗೆರೆ ಪೊಂದಿಸುತ ಫಣಿಯೊಳಗೆ
ಚಂದ್ರ ತಿಲಕವನಿಟ್ಟರು ॥

೪೮

ಅರಸಂಚೆಗತಿ ಗಂದುಗಿ ರುಳಿ ಪೈಜಣವೇಕೆ ।
ಸುರಪ ಕರಿಯೋಲ್ನಡಿಗೆ ಬರಲೆಂದು ಚಾರುತರ ।
ಹರಿಕಟಿಗದ್ಯಾತಕೀ ಹರಿರತ್ನ ದೊಡ್ಯಾಣಗಿರಿ
ಕುಚದಘನ ಭಾರವಂ ॥
ಪೊರಲೆಂದುದೋರೆ ಕೈಹರಡೆ ಕಂಕಣವೆಲ್ಲ ।
ಶಿರಸಲದ ಸುಮನಗಳ ಸರಕೇಕೆ ಗೃಹಿಪುದಕೆ ।
ಕರಪಯೋಧರಕಿನಿತು ಸರವ್ಯಾಕೆ ಸ್ಪರುಶನಕೆ ಶರಣ
ತಲೆಮಣಿ ತನುವಿನಾ ॥

೪೯

ಶ್ರೀಕಾರ ಶೃತಿಗಳಿಗದೇಕೆ ಭೂಷಣವು ಮವ ।
ಲೋಕ ನಕ್ಕರತಿ ಸಲೆ ಈ ಕನ್ಯ ತಲೆಮಣಿಗ ।
ದೇಕೆ ತಲೆಗಿಂದೊಂದು ಮೌಕ್ತಿಕದ ದಂಡಿಯನೆ
ಬೇಕುಮದು ಶುಭಕಾರ್ಯಕೆ ॥
ಕೋಕನವ ಗಂಧ ಮೈಗ್ಯಾಕೆ ಕಸ್ತುರಿಗಂಧ ।
ವೇಕೆ ಚಂಪಕ ಮೊಲ್ಲೆ ಶ್ರೀಕರ ಸರಂಗಳಿಂ ।
ದಾಕೆ ಸಖಿಯರು ಕೇಳಿ ಲೋಕೋಪಚಾರಕೆಂದಾ
ಕೆಳದಿಯರು ನುಡಿದರು ॥

೫೦

ನಾಗಗಮನೆಯರು ಸಲೆರಾಗದಿಂ ಸದ್ಗಂಧ ।
ಪೂಗಳ ಸರಂಗೈದು ಸೋಗೆ ಮುಡಿಯೊಳು ಧರಿಸಿ ।
ನಾಗಸಂಪಿಗಿ ಪೋಲ್ವ ಮೂಗಿನೊಳು ಮೌಕ್ತಿಕದ
ಮೂಗುತಿಯನಿಡೆ ಗಗನದಾ ॥
ಭಾಗ ಶಶಿ ತನ್ನವರಿಗಾದವರ ವಶನೆಂದು ।
ನೀಗಿವಳಮೊಗ ಸಸಿಗೆ ಈಗೆ ಕವಿ ಬಹುರೂಪ ।
ನಾಗಸೇರಿದನೆಂಬೊ ಹಾಗೆಣಿಸಲೊಪ್ಪಿದಳು ಐಗಣೆ
ಯನರಸಿಯಂತೆ ॥

೫೧

ತಳಿರಡಿಯು ಬಾಳೆದೊಡೆ ಮಳಲ್ದಿನ್ನೆ ಪೊರವಾರ ।
ಗಳು ಸಿಂಹಕಟ ನಿಮ್ನಸುಳಿನಾಭಿಯಳಿವಾಸೆ ।
ತೆಳುವಸರುನಳಿತೋಳು ಕಲಧೌತ ಕಲಶ ಕುಚಗಳ
ಶಂಖ ಸಾದೃಶ್ಯದಾ ॥
ತಿಲಕುಸುಮ ನಾಸ ಚಂದಳಿರದುಟಿ ಸೋಗೆ ಗಂ ।
ಗಳ ಗಾನ ಕಲಕಂಠ ಗಿಳಿವಾಣಿ ಪಿಚುಮಂದ ।
ದಳ ಪೂರ್ಬೆ ಅರ್ಧತಿಂಗಳ ನಿಟಿಲೆ ಸುಲಿಪಲ್ಲು
ಅಳಿಕಚದ ಶೋಭಾಂಗಿಯ ॥

೫೨

ನಳಿನಯನಿಯರು ಹೆಂಗಳ ಶಿರೋರನ್ನೆಯಂ ।
ಥಳಿಲನೊಡಗೊಂಡು ಮಂಗಳ ಮಂಟಪಕೆ ತಂದು ।
ಸುಲಭ ಶರಣಪ್ಪನಾ ಬಲದೆಸೆಯೊಳಿರಿಸಿ ಗುರುತಿಲಕನಾ
ಪೊಳ್ತು ಸಂಚಾ ॥
ಕಲಶಸ್ಥಾಪನ ದೀಕ್ಷದೊಳು ಮಾಳ್ಪತೆರಗೈದು ।
ಬಿಳಿದರ್ಭೆ ಮುದ್ರೆಯುಂಗುಲಕಿಟ್ಟು ವರನ ಕೈ ।
ಯ್ಯೊಳು ಕನ್ಯಕರಕಮಲ ಕಲಸಿ ಮಠದೊಡೆಯರಿಂ
ಸಲೆ ತೋಷದಿಂದಲಾಗ ॥

೫೩

ಎರಡು ಮೂರ್ಕೊಂಬಿನೆರಡರಿಸಿನವು ಕಲಶಕ್ಕೆ ।
ಯಿರದೆ ಸುತ್ತಿದದಾರ ಹುರಿಗೈದರಿಂ ಕಟ್ಟಿ ।
ವರ ಕಂಕಣಕೆ ಪೂಜೆ ವಿರಚಿಸುತೆ ಮನುವನು
ಚ್ಚರಿಸುತಂದೀ ತೆರದೊಳು ॥
ನಿರುತ ಮಹನಾಥ ಪರತರ ಭಕ್ತಿರಸ್ತು ಶಂ ।
ಕರ ಸಾಕ್ಷಿ ಕೃತಮ ಮಂಧರ ಕಂಕಣೆಂದು ಕಾ ।
ಶ್ಮಿರ ವಸತಿ ಕನ್ಯಸುಂದರಲಂಕೆ ವರನೆಂದು
ಗುರುವೀರ್ವರಿಗೆ ಧರಿಸಿದಂ ॥

೫೪

ವರಸತ್ತ್ರೀನೋತ್ತ್ರಂಬುರುಮಂತ್ರದಿಂದ ವಧು ।
ವರರು ಜೀರಿಗೆ ಬೆಲ್ಲ ಕರದಿಕೊಂಡು ಭಯತರ ।
ಶಿರದ ಮೇಲ್ ಪ್ರತಿಯೊಬ್ಬರೆರಿಯಲ್ಕೆ ತ್ವರದಿಂದ
ವರನತ್ತೆ ಮಾವಂದಿರು ॥
ಗರಿಕೆ ಬಿಲ್ವಾಕ್ಷತೆಗಳಿರಿಸಿ ಶುದ್ಧೋದಕದಿ ।
ವರನ ಬಲಗೈಮೇಲೆಯರಡು ವಧುವಿನ ।
ಕರಗಳಿರಿಸಿ ಕೆಳಗೊಂದು ನೀರ್ಧರಿವಾಣವಿಟ್ಟು
ಸಲೆ ವರಶಾಂತಲಿಂಗಪ್ಪನು ॥

೫೫

ತನ್ನಸತಿಸಹವಾಗಿ ಕನ್ಯಾಂಸುಸಂಪ್ರವದೆ ।
ಯೆನ್ನುತಲಿ ಕನಕಸಂಪನ್ನ ಸರ್ವಾಭರಣ ।
ಚಿನ್ನಭೂಷಿತೆಯಳಂ ದಿವ್ಯ ದಾಸ್ಯಕಿತ್ತು ಚನ್ನ
ಶಿವಸಾಯುಜ್ಯದಾ ॥
ಉನ್ನತಪದಂ ಬಡೆಯೆ ಕನ್ಯದಾನಂ ಕರಿ ।
ಪ್ಯೆನ್ನುತಿಹ ಸಂಕಲ್ಪವಂ ನೋದಿಧಾರೆರಿಯೆ ।
ಕನ್ಯ ಪ್ರತಿಗೃಣ್ಹಾಮಿಯೆನ್ನ ತೆರಳ್ದೊತ್ತು ನೀರಂ
ನೆರೆದ ಮದಲಿಂಗನು ॥

೫೬

ಕಲಧೌತ ಸಹಿತ ಮಂಗಲಸೂತ್ರವಂ ಹಾಲಿ ।
ನೊಳಗದ್ದಿ ಗುರುಹಿರಿಯರಲಘು ಮುತ್ತೈದೆಯರು ।
ಬಲಹಸ್ತ ಮುಟ್ಟಿವರಗಳದೊಳಗೆ ಸರ್ವಮಂಗಳ
ಮಂತ್ರದಿಂ ಕಟ್ಟಿದಂ ॥
ಕಲಧೌತ ಪಾತ್ರೆಯೊಂದರೊಳು ಸಲೆ ಸುರವಿದಾ ।
ಕಳಪಾಲು ಘೃತದಿ ಕೈಗಳನದ್ದಿ ವಧುವರರು ।
ನಲಿದು ಮೂರ್ಸಾರಿ ಕೈದೊಳಿದು ಗೋದಿಯ ಪಿಷ್ಟ
ತಳೆದು ಸಲೆ ಸಂತೋಷದಿ ॥

೫೭

ಮತ್ತುದಕೆ ಮಂತ್ರ ಸಲೆಭರ್ತಾ ಸ್ವಸ್ತ್ರೀಯೆ ।
ನುತ್ತಾಡೆ ಪಾತ್ರೆಯೊಳಗಿತ್ತದೇ ಕ್ಷೀರದೊಳು ।
ಮುತ್ತೊಂದು ಪುಡುಕಿ ಮೂರ್ಪೊತ್ತುತವೆ ಸಂತೋಷ
ಚಿತ್ತದಿಂ ದಂಪತಿಗಳು ॥
ಮುತ್ತೈದೆಯರು ಪೇಳ್ವುದತ್ತೆಮಗನ್ಹೆ ಸರಿನಲು ।
ದಾತ್ಮ ಮಹಿಮಾಕಾರ ಸತ್ಯಶರಣೇಶನೆನೆ ।
ಚಿತ್ತೈಪುದೆನಲು ಶರಣೋತ್ತ ಮಾಡಿದನು ಸದ್ವೃತ್ತೆ
ಮಹದೇವಿಯೆಂದು ॥

೫೮

ಬಾಲಿ ಚರಣಾಂಗುಟದ ಮೇಲಿಡಿಸುತಲಿ ವರನ ।
ಕಾಲಂಗುಟೇಕಪದಿ ಮೂಲ ಮನುವಿಂದಲಾ ।
ನೀಲಕಚೆಮಾವಮ್ಮ ಘಾಲಿಟ್ಟು ಶರಣನಾ ಕಾಲಿಗೆ
ನಮಸ್ಕರಿಸಲಾ ॥
ಮೇಲೊಂದು ಪಾತ್ರೆಯೊಳು ಪಾಲುವರಿಸಿನವಕ್ಕಿ ।
ಕಾಳಾಜ್ಯ ಮುಖ್ಯಸಮ್ಮೇಲನೆಸಗುತ ವರನ ।
ಕೈಲೆ ವಧುವಿನ ತಲೆಯಮೇಲೆ ಸುರಿಸುತಲಿ
ಮೂರ್ವಾಳ್ಯೆಯಾ ವಧುವಿನಿಂದಾ ॥

೫೯

ಸುರವಿ ತಂಡುಲ ಹಸ್ತ ಶರಜದಿಂ ತಂಡುಲಂ ।
ಕರಕಂಜ ಧೃತಮೆಂಬುವುರುಮಂತ್ರದಿಂ ಮೇಣು ।
ವರತ ದೇವೆಂಬುವಾ ಪರಮಂತ್ರ ಪಾರ್ವತೀ
ಪರಮೇಶ್ವರ ಧ್ಯಾನದಿಂ ॥
ನೆರವಿ ಜನರರಿಸಿನಂವೆರೆದಕ್ಕಿ ಕಾಳುಗಳ ।
ಪರಸಿ ಕನ್ಯಾವರರ ಶಿರದ ಮೇಲಿಡೆ ಮಹೇ ।
ಶ್ವರಿಯೆಂದು ನಾಶಿಕಾಭರಣ ಮಂತ್ರದಿ ಮುತ್ತು
ಯಿರಿಸಿದರು ನಾಶಿಕದೊಳು ॥

೬೦

ಕಾಯ್ಗಳ್ಮನೋರಥ ನೀಯುತಲಿ ಪೌತ್ರ ಸ ।
ತ್ಕಾಯಜರ ವೃದ್ಯರ್ಥ ಕಾಯ್ವೆವೆಂದರಿದು ಚರ ।
ರಾಯರಿಗೆ ವಧುವರರ ಕೈಯಿಂದ ಮೇಣ್ವರನ
ಕೈಯಿಂದ ವಧುಗೆರಡಿಡೆ ॥
ಶ್ರೀಯಾಂಸು ವರ್ಚಸ್ಯ ಮಾಯುಷ್ಯ ಮಾರೋಗ್ಯ ।
ಮಾಯುಧಾತ್ರಿರುತ ಶೋಭಾಯಸುತ ಧನಧಾನ್ಯ ।
ಮಾಯು ಶತಭವತೆಂದು ಗೈದರಾಗುರು ಮುಖ್ಯರಯ್ಯ
ಗಳಾಶೀರ್ವಾದಮಂ ॥

೬೧

ಅರಿಸಣಡಕಿಯು ಚಾಮಿಕರ ಜೀರಬೆಲ್ಲ ವಧು ।
ವರರವಸ್ತ್ರದ ಕೊನೆಯೊಳಿರಿಸಿ ಗಂಟಿಕ್ಕವರ ।
ಸೆರಗುಗಂಟ್ಹಾಕಿ ಶಂಕರ ಪೊರೆಯಲೇಂ ಧರಿಸಿ ವರ
ಹರಿದ್ರದ ಮನುವನು ॥
ಚ್ಚರಿಸೊಂದು ತಟ್ಟೆಯೊಳು ಹರವಿ ತಂಡುಲ ಮುತ್ತೊ ।
ನಿರಿಸುತಲರುಂಧತಿಯ ದರುಶನವ ಮಾಡಿಸುತೆ ।
ವರಮಂತ್ರ ನುಡಿದರಾ ಚರವರರು ಮೇಣವರ ಗುರು
ವರರದೀ ತೆರದೊಳು ॥

೬೨

ಪತಿವ್ರತಾಲಕ್ಷಣ ಲಕ್ಷತೆಯ ಸನ್ಮಾರ್ಗ ಪ ।
ದ್ಧತಿ ಸೌಖ್ಯದಾಯಿ ಶುಭಕೃತೆ ಮುನಿವಶಿಷ್ಟಾತ್ಮ ।
ಸತಿಯರುಂಧತಿಯಚಲಪತಿ ನಂದನಿಯ
ಕಾಲಜಿತನರಸಿ ಕಲ್ಯಾಣಿಯು ॥
ನುತಜನಕಸುತೆ ದಾಶರಥಿ ಪತ್ನಿ ಬಲದೇವ ।
ಸುತೆ ಬಸವರಾಜ ಸಂಗತೆ ಚಾರುಸತಿಯು ದಂ ।
ಪತಿಗಳಿಗೆ ವರವು ಸಂತತವೀಯ್ಯಲೆಂದು
ಮೇಣ್ನುತಿಸಿದರು ಶಿತಕಂಠನಾ ॥

೬೩

ಅಲ್ಲಿ ಪೂಡಿಪ್ಪೈದು ಸಲ್ಲಲಿತ ಕಲಶಗಳ ।
ಪಲ್ಲಟಿಸುತಿರಿಸುತಂತೆಲ್ಲ ಪರಿಕರಣಗಳ ।
ಸಲ್ಲಮೆನೆ ನೆರಹಿ ಗಣಕೆಲ್ಲನತಳಾಗಿಸುತೆ ಫುಲ್ಲಾಕ್ಷ
ಮಾದಮ್ಮನಾ ॥
ಫುಳ್ಳಿರಿಸಿ ದೇಶಿಕರ ವಲ್ಲಭನು ದೀಕ್ಷೆಯಂ ।
ಸುಲ್ಲಾಸದಿಂ ಮಾಡಿಸೊಲ್ಲಿಸುತೆ ಕಿವಿಗೆ ಘುಮು ।
ಪಲ್ಲಣನ ಮನುಭೇದಮಿಲ್ಲ ಪತಿ ಲಿಂಗದೊಳ
ಗೆಳ್ಳಿನಿನಿತೆಂದಾಡಿದಂ ॥

೬೪

ನಾಗವೇಣಿಯರು ಇಂಪಾಗಿ ಮಂಗಲ ಪಾಡು ।
ತಾಗ ಮದುಮಕ್ಕಳಂ ನಾಗಶಿರದೊಳು ಮೆರಸಿ ।
ನಾಗತಾಂಬೂಲವವ ಪೂಗದಕ್ಷಣೆಗಳಂ ಬಾಗಿ ।
ಚರಕುಲಕೀಯುತೆ ॥
ನಾಗವಲಿಯಂ ಮಾಡಿ ಬೀಗರಂ ಬೀಳ್ಕೊಡುವ ।
ದಾಗ ಮಗಳಂ ಕರೆದು ಪೋಗುವಡೆ ನಿಮ್ಮೂರಿ ।
ಗೀಗೆ ಸಮಯವು ತಾಯಿ ನೀಗದಿರು ಗುರವಚನ
ಬಾಗಿ ನಡೆಯಲ್ಲರೊಡನೆ ॥

೬೫

ನಾಪುನತ್ತ್ರಗಿ ಭಾವಮೈದುನರ ಸಂಗಡಂ ।
ಭೇವಬುದ್ಧಿಯು ಬೇಡ ಆದರದಿ ಮಾವತ್ತೆ ।
ಪಾದಸೇವೆಯ ಮಾಡುವಾದಿಸದಲ್ಲಿರಿಯರೊಳು
ಮೋದದಿಂದುಡಿ ವಾಳ್ಗಳೋಳ್ ॥
ಸೋದರರ ಮಮತೆ ಸಂಪಾದಿಪುದು ಯಲೆಗಾರ ।
ಮೇದಾರ ಪೂವಡಿಗ ಪಾದರಿಗರಿಪ್ಪ ಮನೆ ।
ಹಾದಿಗ್ಹೋಗಲಿ ಬೇಡ ಮಾದಮ್ಮ ನಿರುತ ನೀಂ
ಕಾದುಕೊಂಡಿರು ಪತಿವ್ರತಂ ॥

೬೬

ಹಿತವಚನ ಕೇಳು ಮುಮಸುತೆಯೆ ಸಲೆ ಪ್ರೇಮದಿಂ ।
ಪತಿಕಾರ್ಯ ಮಂತ್ರಿಗೃಹಕೃತಿಗೆ ತೊಳ್ತಣ ಬಡಿಪ ।
ವ್ರತಕೆ ಮಾತೆಯೊ ರಂಭೆರತಿಯೊಳಗೆ ಸದ್ಧರ್ಮಜತೆ
ಯೊಳನುಕೂಲಾಂಗಿಯು ॥
ಕ್ಷಿತಿಗೆ ಸಮಶಮೆಯೋ ಮಾನಿತೆ ಜನಪವಾದ ವಿರ ।
ಹಿತೆ ಸುಜನವಿನುತ ಚಾರಿತೆಯು ಪತಿವ್ರತ ಪ ।
ದ್ಧತಿಗೆ ಸಲೆ ದೇವತಾತ ತಿನುತಿಪುದೆನಲು ಸತ್ಕೃತ
ಮೆನಿತೋ ಧರೆಯೊಳನಳಾ ॥

೬೭

ಪತಿಯೊಡನೆ ಕಾಟ ಪರಪತಿಯೊಡನೆ ಕೂಟಮನೆ ।
ಕೃತಿಯೊಳಗುದಾಸ ಮುಪಕೃತಿಯೊಳಗ ಸಾಸ ಶಿವ ।
ನುತಿಗೆ ಬೇಸರವಾರಿ ನುತಿಯೊಳಾಸುರ ಮುಳ್ಳಮತಿ
ನಿರುತಮಿರುತ ಮತ್ತೆ ॥
ಮಿತರಹಿತ ಭಾಷೆ ದುರ್ಗತಿಯೊಳುಭಯತರ ಸಂ ।
ತತಿ ನರಕಕಿಡುವದುಸ್ಸತಿಯೆನಿಪ ದುರ್ಗ ನಿ ।
ವ್ರತಿಯಪ್ಪುವನಕತತ್ಪತಿಗೆ ಸದ್ಗುೃಹಜನಕೆ ಹಿತ
ಮಾಗಲರಿಯದೆಂದು ॥

೬೮

ತರುಳೆ ಕೃಷಿಕನುಪೊತ್ತ ಹೊರೆಯು ಮನೆಕಡಿಗೆ ಬರ ।
ಬರುತ ಭಾರಾಗಿಪ್ಪ ತೆರನಂತೆ ಮನೆಯೊಳಗೆ ।
ಹೆರವರಿಂದಿಟ್ಟ ಕಸವರದರಿಕೆ ಮಗಳೆಯಿದುವರಿಗೆಮ್ಮ
ಗೃಹದಿ ನಿನ್ನಾ ॥
ಯಿರುವಾಯ್ತು ಕೃತಕೃತ್ಯ ತರನಾದೆ ನಿನ್ನನಾ ।
ಶರಣನಿಗೆ ಕೊಟ್ಟೆಂದು ಗುರುಜಘನೆ ಭಾವಿಸಾ ।
ಪುರುಷನೇ ದೈವವೆಂದು ನೆರೆನಂಬಿ ನಡೆಯೆಂದು ವರ
ಶಾಂತಲಿಂಗಪ್ಪನು ॥

೬೯

ನುಡಿದ ಮಡಿಯೆಮ್ಮಗೆನ್ನೊಡ ಹುಟ್ಟಿದವಳೆ ಯೀ ।
ಹುಡುಗೆ ಮನೆಕೆಲಸದೊಳಗೆಡವಿದರೆ ಕೋಪದಿಂ ।
ಬಡಿಯದಲೆ ಗಲ್ಲಗಳ ಪಿಡಿದು ಬುದ್ಧಿಯುಗಲಿಸಿ
ಪಡಿದುಕೊ ಸುಕೃತವೆನಲು ॥
ಗಡನೆ ಮುಹದೇವಿಯರ ಹಡದಮ್ಮ ಬಂದು ನಾ ।
ಹಡದದ್ದು ಸಟೆ ನಿನ್ನ ಉಡಿಥಿಟವು ನೀನಿನಳ ।
ಹಡೆದ ಮಗುವೆಂದು ಕೈಪಿಡಿದು ಕಾಪಾಡೆಂದು ಕಡು
ಮಮತೆಯಿಂ ಪೇಳುತೆ ॥

೭೦

ಸುರಿಸಿ ಕಣ್ಣೀರು ಮುಖತಿರುಗಿ ನೋಡೆಂದ್ಹೇಳಿ ।
ಬರುತೆ ನಿಲ್ಲೆಂಬುತಖಿಳರಿಗಾಡಿ ಹೋಗೆ ಕಣ್ಮರೆಯಾಗು ।
ವರೆಗೆ ವೈಮರೆದಿದ್ದು ಎಚ್ಚತ್ತು ತಿರುಗಿ ಮನೆ ಕಡೆ
ಬಂದರು ॥
ಇರಲಿತ್ತಲವರು ಪೂಗರಡಿಗಿಗೆ ಪೋಗಿಸಲೆ ।
ಹರುಷದಿಂದಿರುತಿರಲು ವರಕ್ರಿಯಾಚರಣೆಯಂ ।
ಶರಣನಿಗೆ ತಿಳುಹಿದನು ಮರಣಭವ ಗೆಲಿಯಲಿಕೆ
ಗುರುರಾಯ ಕರುಣದಿಂದ ॥

೭೧

ಆರು ಚಕ್ರಂಗಳಾಧಾರವಳ ನಾಲ್ಕಾದಿ ।
ಯಾರು ಪ್ರಣಮಂಗಳು ನಕಾರಾದಿ ಭಕ್ತಾದಿ ।
ಯಾರು ಠಾಣಗಳು ಮುಖಮಾರು ಘ್ರಾಣಾದಿ
ಶಕ್ತ್ಯಾರು ಕ್ರೀಯಾ ಮುಖ್ಯಗಳ್ ॥
ಆರು ಶ್ರದ್ಧಾದಿ ಭಕ್ತ್ಯಾರು ಚಿತ್ತಾದಿ ಕರ ।
ವಾರು ಗಂಧಾದಿ ದ್ರವ್ಯಾರು ಸದ್ಗಂಧಾದಿ ।
ಚಾರು ಶೇಷವು ದೈವತಾರು ಬೊಮ್ಮಾದಿ ಗುಣವಾರು
ಕಠಿಣಾದಿಗಳನು ॥

೭೨

ಆರುಧರೆ ಮುಖತತ್ವವಾರು ಪೀತಾದಿ ವ ।
ರ್ಣಾರು ಶೃತಿ ಋಗ್ವಾದಿ ತಾರಕಾಕೃತಿ ಮುಖ್ಯ ।
ಮಾರು ಕಾಂತಿಯು ಕರ್ಮಧಾರಣಾದಿಗಳಾರು
ನೂರೊಂದು ಸ್ಥಲ ಮೇಣ್ದ್ವಯಾ ॥
ನೂರರಿಮ್ಮೇಲೆ ಪದಿನಾರು ಸು ಸಕೀಲಗಳು ।
ಈರದಶಮೇಕ ಸಾವಿರ ಮೇಲಾರು ಶತ ।
ಚಾರು ಜಪಗೈವ ವಿಸ್ತಾರವಂ ನರುಹಿದನು ಆರಾಧ್ಯ
ಶರಣಪ್ಪಗೆ ॥

೭೩

ತ್ರಿವಿಧ ಲಿಂಗವು ಮತ್ತೆ ನವಲಿಂಗ ಜಪಗಳಿಂ ।
ನವಕೆ ಪ್ರದಕ್ಷಿಣ್ಯಭವ ಉತ್ಪತ್ತಿಯು ಲಯದ ।
ವಿವರವನು ತಿಳುಹುತಲೆ ತವೆ ದಶಪದೋದಕನು
ಭವ ಪೇಳ್ವೆ ಕೇಳೆಂದನು ॥
ಕುವರಗುರು ಪಾದೋದಕವನು ಮೊದಲಿನದು ಹ ।
ಸ್ತವು ಬೆರಿಸೆ ಸ್ಪರ್ಶೋದಕವದೆನಿಸಿ ಬೆರಳೈದು ।
ಹವಣೆಯಿಂದಿಟ್ಟು ಕೊಳಲವ ಧಾರದುದಕವದು
ಶಿವಲಿಂಗದಲ್ಲೆರಿಯಲು ॥

೭೪

ಅದು ಮಜ್ಜನೋದಕಂ ಮುದದಿ ಕರದೊಳಗೆ ನಿಂ ।
ದುದುವೆ ಲಿಂಗೋದಕಂ ಪದುಳದಿಂ ಸೇವಿಸ
ಲ್ಕದು ತಿಳಿವದಾಪ್ಯಾಯನುದಕದ್ರವನ್ನು ತೆಗಿವದುವೆ
ಪರಿಣಾಮೋದಕಂ ॥
ಚದುರ ನಯನದಿ ಮಸ್ತಕದಿ ದ್ರವವ ತಲ್ಪಿಸುವ ।
ದಿದುವೆನಿ ನಿರ್ನಾಮೋದಕವದರಿಂದ ಕೊನೆಗೆ ಕೊಂ ।
ಡುದು ಸತ್ಯದುದಕ ಕೋವಿದ ಲಾಲಿಸುವದು ಶೇಷದ
ವಿವರ ಪೇಳ್ವೆನಿನ್ನು ॥

೭೫

ವರಸುಗಂಧವು ಮತ್ತೆ ಸುರಸರೂಪವು ಮೇಣು ।
ಸ್ಪರುಶನವ ಶಬ್ದವಂ ನೆರೆ ತೃಪ್ತಿಯಾನಂದ ।
ವಿರಳಾಖ್ಯ ಸಲೆ ನಿರಾಳಕುರೆ ಮಾಯೆರಹಿತ ಶಂಕರ
ನಿರಂಜನ ಶೇಷವು ॥
ತರುಳಯಿವು ಹನ್ನೊಂದು ವರಪ್ರಸಾದಂಗಳಂ ।
ಗುರುವಿನಿಂ ತಿಳಿದು ಸಲೆ ಚರರಿಂದ ಕೊಳಲು ಭವ ।
ಮರಣಸಂಕಟವು ಪರಿಹರಿಸಿ ತಾ ಪಡಿವನೈ ಸ್ಥಿರ ।
ಮುಕ್ತಿಯೀ ಧರೆಯೊಳು ॥

೭೬

ದೇಶಿಕನು ತಿಳುಹಿ ಸಲೆ ತೋಷದಿಂ ಲಿಂಗಾಂಗ ।
ವಾಸ ಕೀಲಗಳ ರಹಿತಾಸೆ ಜಂಗಮನಿಂದ ।
ಶೇಷವಂ ಕೊಡಿಸಿ ಭವಪಾಶ ಪೋಯ್ತೆಂದಂತೆ ವಾಸೆ
ಶರಣಪ್ಪಗಾಡಿ ॥
ಆಶೀರ್ವಚಂಗೈದು ಸೂಸುತಕ್ಷತೆನಿರುತ ।
ಲೇಸನಾಗೆಂದು ನಿಜವಾಸ ಕಲಕೇರಿಗು ।
ಲ್ಲಾಸದಿಂ ಪೋಗಲ್ಕೆ ಈಶಾರ್ಚನಂ ಚರರ ದಾಸೋಹ
ಮಾಡುತಿರ್ದಂ ॥

೭೭

ಪಂಚೌಷಕಾಲದಿಂ ಮುಂಚೇಳ್ವ ಪೊಳ್ತುಸಲೆ ।
ಪಂಚಾಸ್ಯನನ್ನುತಿಸುತಂ ಚರಕೆ ಮಣಿದು ತಲೆ ।
ಯಂ ಚರಣಕಿಟ್ಟು ಕರವಂಚಾಚಿ ಲಿಂಗ ನಿರ್ವಂಚನದಿ
ನಮಿಸಿ ಮತ್ತೆ ॥
ಸಂಚೈಸೆ ಶೌಚಾದಿಯಂಚಿತ ಕ್ರಿಯೆ ಮಾಲೂ ।
ರಂ ಚಲ್ವಶಮೆಗರುಕೆ ಮುಂಚಗಗ್ಗುರಲೆದಳ ।
ಕೊಂಚೆವಾಡದ ಪುಷ್ಪ ಸಂಚಯವತಂದು ಶರಪಂಚ
ಹರಪೂಜೆಗೆಂದು ॥

೭೮

ಗಂಗೇಚ ಯಮುನಾಯ ತುಂಗಭದ್ರಾಯೆಂದು ।
ಮಂಗಲ ಸುಚೇಲ ಸ್ನಾನಂಗೈವ ತೆರಡು ವಸ ।
ನಂಗಳು ಯುವಂಚೆಂಬ ತುಂಗ ಮಂತ್ರದಿ ಧರಿಸುದಾಂಗೆ
ಯೋ ಸರ್ವಜ್ಞನೆಂ ॥
ದಂಗ ಜಾಂತಕನರ್ಚನಂಗೈವ ಗೃಹಪೊಕ್ಕು ।
ರಂಗೈದನುಳ್ಳಾಸನಂ ಗಡನೆ ಸಾರ್ದು ಜಲ ।
ವಂಗುಳಿಗಳಿಂ ಪ್ರೊಕ್ಷಣಂಗೈದು ಶಿವಲಿಂಗ ಸಂಗೋಂ
ಪೃಥುವ್ಯಾಯನೆ ॥

೭೯

ಮನುನುಡಿದು ಮುಚಿಸೂದನನ ದಿಕ್ಕಿಗಾಗಿ ಮೊಗ ।
ವನು ಕರಿಸಿ ವರಗಜಾನನ ಸ್ಮರಣೆ ಭವ ಸಂಚಿ ।
ತೆನುವ ಮಂತ್ರದಿಗೈದು ಪ್ರಣವ ಪಂಚಾಕ್ಷರಿ ಪಠಣ
ದಿಂದಲಖಿಳ ಕುಸುಮ ॥
ಘನುಪತ್ರೆಗಳು ಶೋಧಿಶ್ಯನುಗೊಳಿಸೆ ಲಿಂಗ ಮ ।
ಜ್ಜನವೆರಿದು ವಿಭೂತಿಯನು ಧರಿಸಿ ಗುರುದತ್ತ ।
ಮನು ಜಪಿಸುತಲಿ ಸಜ್ಜೆವನೆಗಿರಿಸಿ ಲಿಂಗವಂದನು
ರಾಗದಿಂ ಶರಣನು ॥

೮೦

ಕಲಶಮುಖ ರುದ್ರಾದಿ ಸುಲಲಿತದ ಮಂತ್ರದಿ ಸ ।
ಕಲದೇವ ಮಾತೃಗಣಿ ನೆಲೆಗೊಳಿಸಿ ಪೂಜಿಸುತೆ ।
ಕಲಶಂ ಶಂಭುಪದಸಲಿಲ ಗಂಗಾ ಕೋಟಿಗಳಿಗೆಗ್ಗಳೆಂ
ಬುವದನು ॥
ಕಳೆದು ಜಂಗಮುಪಾದ ತೊಳೆದು ಮೇಣ್ಗುರು ಪಾದ
ಜಲಗೈದು ಬೆರಸಿ ತವೆಕಲಶದೊಳಗುಪಕರಣ ।
ಗಳಿಗೆಲ್ಲ ಪ್ರೋಕ್ಷಿಸುತೆ ಸಲೆಭೂತಿ ಪತ್ರಿ ಸುಮಗಳು
ಧರಿಸಿ ಧೂಪಗೊಟ್ಟು ॥

೮೧

ಬಲಗೈಲೆ ಭೂತಿಯನೆರೆಳೆ ಮುದ್ರೆಯಿಂದೆತ್ತಿ ।
ಸಲೆ ಪಂಚವರ್ಣ ನುಡಿದಿಳುಹುತಂ ವಾಮ ಕರ ।
ದೊಳು ಪೂಜೆಮಾಡುತ ಕದಳೆ ಮುದ್ರೆಯಿಂ ಹೃದಯ
ತಲೆ ತೋಳು ಮುಖ್ಯಮಾದ ॥
ನೆಲೆಗೆಸೆದು ಭಕ್ತಿಯಿಂ ತಲುಪಿಸುತೆ ಶ್ರೀಕಾರ ।
ಸಲೆ ಮಂತ್ರದಿಂ ನಮಿಸಿ ತಳೆದು ಹೂ ಪತ್ರೆಗಳ ।
ನಿಳುಹಿ ಮತ್ತೆತ್ತಿ ಶಿರದೊಳಗೀಶಾನಾದಿ ಮನುಗಳ
ಪಠಿಸುತಾ ಸುಲಭನು ॥

೮೨

ಉದುರಿಸುತೆ ಭಸ್ಮವನು ವದನದೊಳು ತತ್ಪುರುಷ ।
ಹೃದಯದೊಳ ಘೋರ ಗುಹ್ಯದಿ ವಾಮದೇವ ಮಂತ್ರದಿ
ಸದ್ಯೋಜಾತದಿಂ ಪದದೊಳುದ್ಧೂಳನಂ ಮುದದಿಂದೆ
ಗೈದು ಮತ್ತೆ ॥
ಕೆದರದಲೆ ಕರದಿಂದಲುದರದಲೆ ಕೆಲಕೆ ಸಂ ।
ಪದ ಕೊಡುವದೆಂದರಿದು ಸದುಭಕ್ತಿಯಿಂದ ಬಹು ।
ಮೃದುಳತರ ಭೂತಿ ಕೈತೊದಳದಲೆ ಧರಿಸ ಕೋವಿದ
ಪಡೆದ ಸಕಲೇಷ್ಟವಂ ॥

೮೩

ಮತ್ತೆ ಯೋಂ ಹ್ರಾ ವೋಂ ಮೆನುತ್ತೆ ಮೇಣ್ಸರ್ವಜ್ಞ
ಶಕ್ತಿ ಧಾಮ್ನಾಯೆ ಯೆನುತ್ತಂಗುಟಾದಿ ಕರ ।
ನೆಸ್ತ್ರವಂಗೈದು ಎದೆನೆತ್ತಿ ಮೊದಲಾದರೊಳುಮತ್ತದೇ
ಮಂತ್ರದಿಂದ ॥
ಪತ್ತಿಸುತೆ ಕೌಚಂ ಶಿವಸ್ತ್ರಾದಿ ಮಂತ್ರದಿಂ ।
ದುತ್ತು ಮನುದಿಗ್ ಬಂಧನುಕ್ತಮೆನಲೆಸಗಿ ಮೂ ।
ರ್ಧ್ನೊತ್ತು ಚಪ್ಪಳಿಸಿ ಕೈಯೆತ್ತಿ ಚುಟಕಿಯನು ಸಲೆಚಿತ್ತ
ತೋಷದಿ ಗೈಯ್ಯುತೆ ॥

೮೪

ಪ್ರಣವ ಪಂಚಾಕ್ಷರಿ ಪಠಣದಿ ಸ್ನಾನಂಗೈದು ।
ವಿನುತ ಕ್ರಿಯಾಯುಷ್ಯ ಮನುವನುಚ್ಚರಿಸಿ ಪೂ ।
ರ್ಬಿನ ಕೆಳಗೆ ವಾಮದಕ್ಷಣಕೆ ಚಾಚದಲೆ ಪರಿಗಣಿತ
ದಂಗುಷ್ಠಾದಿ ತಾ ॥
ರ್ಜನಮಿಕಂ ಮಧ್ಯಪಾವನನು ಲೋಮ ವಿಲೋಮ ।
ವನುಗೊಳಿಸಿ ತ್ರೈಪುಂಡ್ರ ಫಣಿಗೆ ಧರಿಸುತೆ ತ್ರ್ಯಂಬ ।
ಕೆನುವ ಮಂತ್ರದಿ ಮೈಗೆ ಗಣಕೆ ಮೂವತ್ತೆರಡು ಘನ
ತಾಣದೊಳು ಧರಿಸಿ ॥

೮೫

ಆಯತದಿ ವಸ್ತ್ರನೆಡೆಗೈಯೊಳಗೆ ಪಾಸ್ಯಲ್ಲಿ ।
ಕಾಯಜಹರಾಕ್ಷೆಯ ನಿಕಾಯ ಸರಗಳನಿರಿಸಿ ।
ತೋಯ ಮೊದಲಾದ ಸಂದೋಹದಿಂ ಪೂಜೆಯಂ
ಗೈಯುತಲಿ ಭಕ್ತಿಯಿಂದ ॥
ಮಾಯಹರ ಸುರಾದ್ರಾಕ್ಷಾಯೆ ವರವೃಕ್ಷ ಬೀ ।
ಜಾಯೆಯೆನುಚ್ಚರಿಸಿ ಬಾಯಿಂದ ನಮಿಸುತು ಶಿ ।
ಖಾಯಮೇಕಂ ಶ್ರೀಶಿವಾಯ ಮುಖ್ಯಂದೆಲ್ಲ
ಕಾಯದೊಳು ಧರಿಸಿಕೊಂಡು ॥

೮೬

ಇತ್ಯ ಹಾ ಭಗವಾನೆನುತ್ತ ಶಿವಶಂಭು ಪ್ರ ।
ವರ್ತಮಾನಸೆಂದು ಬಿತ್ತರಿಸಿ ಸಂಕಲ್ಪ ।
ಚಿತ್ತತೋಷದಲಿ ಶ್ರೀಮತ್ ಪರಬ್ರಹ್ಮಸ
ಗುರೋತ್ತಮನ ಧ್ಯಾನಗೈದು ॥
ಎತ್ತಿ ಘಂಟೆಗಳಾಗಮಾರ್ಥ ದೇವತರಿಂಗೆ ।
ನುತ್ತಬಾಜಿಸಿ ಪುಷ್ಪಯುಕ್ತ ಕರದಿಂ ಲಿಂಗ ।
ವೆತ್ತಿ ಗೋಮುಖನಂಗುಟತ್ತರಿಸಿಯಾಯಂ ಮೆಹಸ್ತ್ರಂ
ದು ಮಜ್ಜನೆರದು ॥

೮೭

ಭಸಿತಗಂಧಂ ಪತ್ರಿ ಕುಸುಮಾಕ್ಷತೆಗಳಾಗ ।
ವಸನಾಕ್ಷಮಾಲೆ ಸಂತಸದಿಂದೆ ಧರಿಸುತ ।
ರ್ಪಿಸುತ ಧೂಪೇಕೋನ ದಶಲಿಂಗ ಜಪವು ಗುರು
ಉಸರಿದೊಲು ಗೈದು ಮತ್ತೆ ॥
ಅಸಮಾಕ್ಷಮಾಲೆ ಪೂಜಿಸಿ ದೇವ ದೇವೆಭ್ಯೋ ।
ವಿಸರುಜಿಸುತಾರ್ಘ್ಯ ಸಮನಿಸಿ ಪಾದ್ಯ ಪಾಪೌ ಸ್ಸ ।
ನಸುರುತಾಚಮನ ಸಲ್ಲಿಸುತಿಶ್ವತಚ್ಚಕ್ಕೈ ಸೆವ
ಮನುವುಚ್ಚರಿಸುತೆ ॥

೮೮

ಸ್ವಾದುಃ ಪವಸ್ವವೆಂದೋದಿ ಮಧುಪರ್ಕವಂ ।
ಪೊಯ್ದು ಸಲೆಯಾಪ್ಯಾಯೆ ಸ್ವಾದಿಪಾಲೆರಿದುಘನ ।
ಮಾವ ಸದ್ಯೋಜಾತ ಆದಿಮಂತ್ರದಿ ನಿರ್ಮಲೋದಕದ
ಸ್ನಾನಗೈಸಿ ॥
ಓದಧಿಃಕ್ರಾವಿಣ್ಯಗೋಧಧಿಯ ನೆರೆದು ತವೆ ।
ಸ್ವಾದುಜಲ ಮಜ್ಜನಂ ಗೈದ್ವಾಮ ದೇವ ನಿಂ ।
ಮೋದದಿಂ ಶುಕ್ರಯೆಸಿಜೋತೆಂದು ಘೃತವು
ಗಂಗೋದಕವಘೋರಮನುವಿಂ ॥

೮೯

ಪೂತತಾನೆರೆದು ಮಧುವಾತಾ ಋತಾಯೆಂದು ।
ಸಾತಿಶಯ ಮಧು ನೀಡುತೋತು ತತ್ಪುರುಷದಿಂ ।
ಪ್ರೀತಿಯಿಂ ಜಲವೆರಿದು ತಾ ತವೆ ಭೂರ್ಭುವಸ್ಸು
ನೀತಮನು ನುಡಿದು ಶರಣಾ ॥
ನಾಥತವೆರಾಜಯಿಂ ಶೀತೋದ ಕೀಶಾನ ।
ಮಾತುಮನು ನುಡಿಯುತ ಪುನೀತ ಮಜ್ಜನ ಗೈದು ।
ಭೂತಿಜಲ ಓಂಹ್ರಃ ಗುಪ್ತಾಯೆಯೆಂದೆಲ್ಲ ಶ್ರಾತ
ಕರ್ಮದಿ ಗೈಯ್ಯುತೆ ॥

೯೦

ಮೊದಲಿಗೋಂಕಾರೊಂದೆಯದರಿಂದ ಹೌವ್ವಾದಿ ।
ತುದಿಯೊಳೀಶಾನಾದಿ ಮೃದುಗಂಧ ಸುಮ ಸ್ವರ್ಣ ।
ಪದುರನ್ನ ಮೂಲಮಂತ್ರದ ಜಲದಿ ಸಲೆ ಪಂಚ ವಿಧ
ಮಜ್ಜನಂ ಗೈಯುತೆ ॥
ಚದುರಹ್ರಮ್ಮಾದ್ಯೈಳ್ಳಿನುದ ಕೆರೆಯುತಿಂತೇಳು ।
ಉದಕವಭಿಕ್ಷೇಕಮಂ ಪದುಳಮೆನಲೆಸಗೆ ಸ ।
ಮ್ಮುದದೊಳ್ತ್ರಿಯಂಬಕೆಂಬುದು ಪಠಿಸಿ ರುದ್ರಸೂಕ್ತ
ದನಮುಕಮುಕಗಳನು ॥

೯೧

ಅಂಗುಷ್ಟದ್ವಯುವಮಾದಿ ಸಂಗರುದ್ರಧಿದ್ಯೆವ ।
ತಂಗಳಂ ಕಲ್ಪಿಸುತೆ ಹಾಂಗೆಸಲೆ ಸಂಪೂರ್ಣ ।
ಲಿಂಗಮಯ ಶಿವಭಕ್ತಿಯಂಗಣಿಸೆ ದ್ರವತೆಗೆಯುತಂ
ಗಡನೆವಸ್ತ್ರವುಡಿಸಿ ॥
ಲಿಂಗಕೋಂ ಹ್ರಾಂ ಹೃದಯ ಯಂಗಮನುವಿಂ ಭಸಿತ ।
ಸಂಗೊಳಿಸುತೋ ಹ್ರಾಂ ಮುಂಗೋಪ ಮಂತ್ರದಿಂ ।
ತುಂಗ ಪರಮಾನಂದದಿಂ ಗಂಧವಂಧರಿಸುತ್ತಂಗಜಾರಿಗೆ
ಯಕ್ಷತಂ ॥

೯೨

ಹರಸಿಗಾ ಖಂಡ ತಂಡುಲ ಮಂತ್ರದಿಂದಿಟ್ಟು ।
ಸುರಸ ಸೇವಂತಿಕೆಂಬುರುವಾಕ್ಯದಿಂ ಸುಮನ ।
ವರಬಿಲ್ವ ಮುಖ್ಯಪತ್ರರಿಗಳಂ ಕರವೀರಯಿರವಂತಿ
ಗಿರಿಚೂತಕಂ ॥
ಸುರಹೊನ್ನೆ ಮುಖ್ಯ ಪೂಸರಗಳಂ ಧರಿಸಿ ಪರ ।
ತರೆ ವನಸ್ಪತಿ ರಸೋತರ ಮಂತ್ರದಿಂ ಧೂಪ ।
ವರಪಿಸುತ ಘಟ್ಟೆ ಮನೋಹರ ದೀಪವರ್ಪಿಸುತೆ
ತರತರದ ದೀಪಾರುತಿ ॥

೯೩

ಚಿತ್ತಜಾತಂಗೆ ರುದ್ರ ಬತ್ತಿ ಮೇಣಾಕಡ್ಡಿ ।
ಬತ್ತಿಯದರಿಂದ ಹೂಬತ್ತಿ ಮೊದಲಾದೇಕ ।
ಬತ್ತಿಸಾಸಿರತನಕ ಮತ್ತೆ ಘೃತ ತೈಲಪಾಬತ್ತಿ
ಮಂಗಳರವದೊಳೂ ॥
ಯೆತ್ತಿ ಪದಗಳನು ಪಾಡುತ್ತೆ ಕರ್ಪುರ ಬೆಳಗಿ ।
ಚಿತ್ತತೋಷದೊಳಾರ್ಘ್ಯ ಪ್ರತ್ಯೇಕ ಮೊಂದೊಂದ ।
ಕಿತ್ತು ಶರಣಪ್ಪತಾನತ್ಯಧಿಕ ಭಕ್ತಿಯಿಂ ಚಿತ್ತ
ತೋಷದಿಂದಾಳುತೆ ॥

೯೪

ಈಶನಿಗೆ ಸುಸ್ವಪ್ರಕಾಶ ಮಹತೇಜಾಯೆ ।
ಭಾಷೆಯಿಂದರ್ಪಿಸುತಲಾ ಸುದೀಪಗಳೆಲ್ಲ ।
ತೋಷದಿಂಚಂದ್ರಾರ್ಘ ಭೂಷಮೆಂಬುದು ನುಡಿದು
ಲೇಸಮೆನೆ ಘನಸಾರದಾ ॥
ಭಾಸುರದ ಜೋತಿ ಸುವಿಲಾಸದಿಂದೊಪ್ಪಿಸುತೆ ।
ಮೀಸಲದ ನೈವೇದ್ಯಮಾ ಷಡ್ರಸೋಪೇತು ।
ಮೇಶಗರ್ಪಿಸಿ ಸಪೂಗೀ ಸುಫಲ ತಾಂಬೂಲಂದಾಶ
ವಸನಂಗಿತ್ತನು ॥

೯೫

ವರ ಹಿರಣ್ಯಾದಿ ಚಾಮಿಕರ ಪುಷ್ಪದಕ್ಷಿಣೆ ಗ |
ಛುರೆಯುತ್ತರೀಮಂ ಸುಪರಿಧಾನದಿಂ ವಸನ |
ನೆರೆಮಲ್ಲಿಕಾಮಾಲಿ ಕೊರಳಿಗೆ ತಮಾಲ ಕಸ್ತುರಿಕೇಸರೋ
ಯೆನ್ನುತಿ ||
ಪರಿಮಳದ್ರವ್ಯವಂ ನರುಪಿಸಿಯ ರೂಪಿನುತು |
ಸುರಿದರ್ಪಣಂ ತೋರಿ ವನಗವ್ಪೋದ್ಭವದಿಜಾ |
ಮರ ಬೀಸುತಲಿ ಸುರಾಸುರ ನಮಸ್ಕಾರ ಶಂಕರ
ಗಾಲವಟ್ಟದಿಂದಾ ||

೯೬

ಅಸವಸದಿ ತಿರುವಿ ಸಂತಸದಾಗಮಾರ್ಥಸುರ |
ವಿಸರಕೆನೆ ಘಂಟೆ ಬಾಜಿಸಿ ಚಾರುತೋಷದಿಂ |
ಸ ಶಿವಾಯೆನಮತೆ ದ್ವಾದಶ ನಾಮದಿಂದ ತವೆ ಕುಸು
ಮಾಂಜಳಿಯುಗೈಯ್ಯುತಿ ||
ಪಶುಪಗೆ ಪ್ರಕೃಷ್ಟ ಮೆಂದೆಸೆಗೆಪ್ರಾದಕ್ಷಣಂ |
ಕುಸುರ ಶರಣಂ ನಾಸ್ತಿ ಅಸಮಾಕ್ಷ ತವಶರಣು |
ವಿಷಜಾಕ್ಷಸಖ ಮಹಾರ್ನಿಶ ಪಾತು ಪಾತು ಪಾಲಿಸು
ಯೆಂದುಬೇಡಿಕೊಂಡು ||

೯೭

ನಮತೇ ಮಹಾದೇವ ನಮತು ಶಂಭುವೆ ಸದಾ |
ನಮತೇ ಕೃಪಾಸಿಂಧು ನಮತೇ ಮಹೇಶ ಶಿವ |
ನಮತೇ ಶಿವಾಪತಯೆ ನಮತೆ ನಮ ಧೂರ್ಜಟೇನ
ಮ ಪ್ರಪನ್ನೈಕ ಬಂಧು ||
ನಮತೇ ತ್ರಿಶೂಲಕರ ನಮತುತೇ ನಿಖಗಳ |
ನಮತು ಪಿನಾಕಿ ಭವನಮತು ಶಶಿಖಂಡಧರ |
ನಮತೇ ವಿಶ್ವೇಶ್ವರಾಯನನು ನಂದಿ ವಾಹನಾಯನಮೊ
ಯೆಂದು ಪೊಗಳಿ ಮತ್ತೆ ||

೯೮

ಪೂತ ಹಿಮಗಿರಿ ತನುಜೆ ನಾಥಮುನಿಮನವಾರಿ |
ಜಾತಸಲೆ ಸುಂದರ ನಿಕೇತನಘಕಲಿಮಲ ವಿ |
ಘೂತ ದಾನವದೇವ ವ್ರಾತ ವಿನಮಿತ ಪಾದಶಾತ
ಕುಂಭಗಧನ್ವನೇ ||
ಭೂತಗಣ ರುದ್ರ ಗಣದಾತ ಶಂಕರ ವೀರ |
ತಾತಗಾಂಗೆಯ ಗುಣ ಪ್ರೀತ ತ್ರಿಪುರಾರಿಯಜ |
ಸೂತ ಭೃದ್ಭಾನು ರವಿ ಶೀತಕರ ಲೋಚನಂ ಪಾತು
ಪನ್ನಗ ಭೂಷಣಾ ||

೯೯

ದೇವಶಿವ ದುರಿತವನದಾವ ನತ ಕಲ್ಪತರು |
ಕಾವಜಿತ ಪಾದ ರಾಜೀವಹರಿ ನಯನಾಂಕ |
ಭಾವಭವದೂರ ಸಂಜೀವ ಶರಣಾಘ ಮಾದೇವ
ವರದಾಭಯಕರಾ ||
ರಾವಣಾರ್ಚಿತ ಪೂರ್ವದೇವ ಸುರಮನುಜಾ |
ಯಾವನತವ್ಯೋಮ ಕಜದೇವ ಗಂಗಾಧರಂ |
ಪಾವನಂ ಹಿಮಕರ ಕಲಾವತಂಸಂ ಸತತ ಕಾವುದೈ
ಕರುಣಾನಿಧೇ ||

೧೦೦

ಭಾಲಾಕ್ಷ ಭವಜಿತಕಾಲ ಮದಶಾಸನಂ |
ಶೂಲಕರ ಶುಭದಗಳ ಹಾಲಾಹಲಂ |
ಗೌರೀಲೋಲಲೋಕೈಕಖಿಳ ಮೂಲಕಾರಣ
ರುಂಡಮಾಲಾಕ್ಷ ಮಾಲಾಧರಾ ||
ಶೈಲಧನು ತಾಂಡವ ಸುಲೀಲಾವಿನೋದ ಮುನಿ |
ಪಾಲಪಾಲಕ ವರದಯಾಲ ಭಿಕ್ಷಾಟನ ಸು |
ಶೀಲ ನತ ಸೌಖ್ಯಾಲವಾಲ ವಾಮನ ವಿನುತ ಪಾಲಿಸೈ
ಪರಮಾತ್ಮನೆ ||

೧೦೧

ತ್ರ್ಯಕ್ಷ ತ್ರೈಜಗಿ ನಿರುತ ರಕ್ಷಸಚ್ಚರಣ ಜನ |
ಕುಕ್ಷಮಂದಿರ ಶಂಭು ಪಕ್ಷಗಮನೈಲ ಬಿಲ |
ಪಕ್ಷ ಸಂಸ್ತುತ್ಯ ಜನಮೋಕ್ಷದಂ ಮಾರಮದ
ಶೀಕ್ಷಶಿವ ಸಲೆ ಶಾಶ್ವಿತಂ ||
ಊಕ್ಷಗಮ ಪೂಜಿತ ಜಿತಾಕ್ಷ ಸಂಕುಳ ನಿರಾ ||
ಪೇಕ್ಷ ನಿರ್ಮಾಯ ವಿಷಭಕ್ಷ ಭವದೂರ ಹರ |
ಅಕ್ಷಯಂ ಕರುಣಾಕಟಾಕ್ಷದಿಂದೀಕ್ಷಿಸುತ
ರಕ್ಷಿಸೈ ರಾಮನಾಥಾ ||

೧೦೨

ಹರನೆ ಖಲದೈತ್ಯ ಸಂಹರನೆ ಧೃತ ಖಂಡೇಂದು |
ಕರನೆ ವರ ಪಾವನಾಕರನೆ ಸುರಗಂಗಾಂಬ |
ಧರನೆ ಹಿಮನಗಜಾತೆ ವರನೆ ಪರತರ ಪರಾತ್ಪರನೆ
ಪಾವಕಲೋಚನಾ ||
ಶರಣಜನ ಹೃದಯ ಮಂದಿರವಾಸನಖಿಳ ಜಗ |
ಭರಿತ ಭವನಾಶ ನಿರ್ಜರನುತ್ಯ ನಿಂಪ್ರಸುತ |
ಶರದಾತ ವೀರೇಶ ಕರಿವದನ ಗುಹತಾತ ಪೊರೆ
ಕೃಪಾಕರ ಶಂಕರಾ ||

೧೦೩

ಸುರಪಸ್ಸೈಸಿರಿಗಾಗಿ ಶರಧಿ ಮಥನವು ಸುರಾ ।
ಸುರರು ಅತ್ಯಾಶೆಯಿಂ ವಿರಚಿಸುವ ಪೊಳ್ತು ನಿ ।
ಬ್ಬರದಿ ಪುಟ್ಟಿದ ಭಯಂಕರ ವಿಷದ ಜ್ವಾಲೆಯೊಳು
ಧರೆದಿಕ್ಕು ನಭಗಳೆಲ್ಲಾ ॥
ಭರದಿ ಛಿಣಿ ಛಿಟಲೆಂದು ಉರಿಯುತಿರೆ ತಾಳದಲೆ ।
ಹರಿಯಜಾದ್ಯರು ನಿಮ್ಮ ಮೊರೆ ಹೊಗಲು ವಿಷ ಗಳದಿ
ಧರಿಸದಿರೆ ಸುರರಸತಿಯರ ಹಣೆಯಕುಂಕುಮಿಂದಿ
ರುವುದೇಂ ಪೇಳ್ ಶಂಕರ ॥

೧೦೪

ಈಶ ಪರತರ ಪಾರ್ವತೀಶ ಪನ್ನಗರಾಜ ।
ಭೂಷ ಭುವನಾಧಾರ ಶ್ರೀಶೈಲವಾಸ ನತ ।
ಕ್ಲೇಶ ಹರಸುರವರ್ತ್ಮಕೇಶ ಜಿತ ಕಾಮ ಕೀನಾಶ
ಕರಿ ಪಂಚಾನನ ನಾ ॥
ಕೇಶವಾರ್ಚಿತ ಪದಕುಶೇಶಯ ಸುಭಕ್ತಜನ ।
ತೋಷ ಜರೆಮರಣ ಭವನಾಶನೀ ನೆನ್ನಾತ್ಮ ।
ದೋಷವೆಣಿಸದೆ ನಿನ್ನ ದಾಸನೆಂದೆನಿಸಿ ಸಲೆ ಪೋಷಿಸೈ
ಪಂಸಾಧವಾ ॥

೧೦೫

ತಾನಿನಿತು ನುತಿಸಿ ಪರಿಧಾನವಂ ಗೈದು ಶಿವ ।
ಧ್ಯಾನಪರವಶದಿ ಬಹುಲೀನವಂಗೊಳಿಸುತಲಿ ।
ಮಾನಸದ ಲಯವೆಸಗಿ ಪ್ರಾಣಲಿಂಗದಿ ಮಂತ್ರಹೀನಂ
ಕ್ರಿಯಾಭಕ್ತಿಯಿಂ ॥
ಹೀನನೆಂದಾರ್ಘ್ಯವಂ ಸಾನುರಾಗದಿ ಕೊಟ್ಟು ।
ಮಾನಸಿಧಿ ನೈರ್ಮಾಲ್ಯಮೇ ನಿರ್ಮಲೆಂದೆತ್ತಿ ।
ಘ್ರಾಣಿಸುತೆ ಮತ್ತೆ ತಲೆ ತಾಣದೊಳಗಿಟ್ಟು
ಸುಮ್ಮಾನದಿಂ ತೊಡೆಗಿಳುಹುತೆ ॥

೧೦೬

ಬಳಿಕ ಲಿಂಗಕೆ ಮಜ್ಜ ನೆರದೊರಸಿ ಭೂತಿಯಂ ।
ತಳಿದು ಜಪಗೈದು ಮಂಗಳ ಮೂರ್ತಿಯಂ ಸಜ್ಜೆ ।
ನೆಲೆಗಿರುಸುತೊಂದು ಅಳಕರಿವ ಪೋಳ್ತ ತಿಥಿಗಳು
ಬರುವದಾಪೇಕ್ಷಿಸಿ ॥
ನಿಲದೆ ಚೈತನ್ಯ ಮೆಂಬಲಘಮಂತ್ರಂಡೆದುರೆ ।
ನೆಲದಿ ಸಾಷ್ಟಾಂಗೆರಗಿ ಕೊಳುತಪ್ಪಣೆಯನೆದ್ದು ।
ಸುಲಭ ಜಂಗಮ ಪಾದ ಸಲಿಲವಂ ನಾತ್ಮಗುರು ತಿಳುಹಿ
ದೊಲು ಪಡೆದುಕೊಂಡಾ ॥

೧೦೭

ಮೇಲೆ ಭವಬೀಜಂ ಕುಠಾರಾಯದಿಂ ನಮಿಸು ।
ತಾಲಲಿತ ಚರಪದಸಲಿಲವಂ ಅಜ್ಞಾನ ।
ಮೂಲಹರನೆಂದಾಡಿ ನಾಲಿಗಿಗೆ ಸೇರಿಸುತೆ ಕಾಲಭಯ
ಪರಿಹರಿಸಿದಂ ॥
ಶೀಲಸಂಪನ್ನ ಗುರುಪೇಳಿದದಶೋದಕದ ।
ಕೀಲದಂತೆಸಗುತಾ ಕಾಲಕ್ಕೆ ಬಂದಚರ ।
ಜಾಲಕ್ಕೆ ನಮಿಸಿವರಶಾಲ್ಯಾನ್ನ ಷಡ್ರಸದ ಮೇಳಗಳ
ನಡೆಬಡಿಸುತಾ ॥

೧೦೮

ಈಶಚರರೊಡಗಳಡಿ ಬೇಸರದೆ ಜಂಗಮದ ।
ಶೇಷವಂ ಹನ್ನೊಂದರಾ ಸಕೀಲದಿ ಸಲಿಸಿ ।
ಲೇಸುಪನ್ನೀರಂ ಸುವಾಸತಾಂಬೂಲವಂ ತೇಸುದಕ್ಷಿ
ಣವಿತ್ತನು ॥
ದೋಷಹರ ಚರರಿಗೆ ನಿವಾಸ ಧನಧಾನ್ಯ ಸತಿ ।
ಪಾಸಿಕೆ ತುರಂಗ ಪದ ಭೂಷ ಕೊಡೆ ಗೋಮಹಿಷಿ ।
ಭೂಷಣಾಂಬರ ಕೊಟ್ಟು ದಾಸೋಹವಾಳ್ಪನಾಯೂ
ಸಮನಿನಿತಿಲ್ಲದಂತೆ ॥

೧೦೯

ಚರರೇನು ಬೇಡಲಂತರಿಸದಂತಿತ್ತು ಶಂ ।
ಕರ ಪೂಜೆ ಮೂರ್ವಾಳ್ಯ ವಿರಚಿಸುತೆ ಪೂಜೋಪ ।
ಕರಣಗಳು ಪತ್ರಿ ಸುಮುಸರ ಧೂಪಬತ್ತಿಗಳ
ನೆರಹುತಲಿ ಮನಿಗೆ ಬಂದಾ ॥
ಶರಣರೊಳು ಷಟಸ್ಥಲಾಚರಣೆ ಸಂಗೋಷ್ಟಿಯಿಂ ।
ದಿರುತ ಮನೆಕೃತ್ಯವಂ ಮರೆತ ಕಾರಣದಿ ಬಲು ।
ಕಿರಿಕಿರಿಯು ಪುಟ್ಟಿ ಮನೆಯರಡಾಗಲೆಣಿಸುತಾ
ಶರಣಪ್ಪಗಿಂತೆಂದರು ॥

೧೧೦

ಬೇಡಿ ತಿಂಬುವರೊಡನೆ ಕೂಡಿ ನೀ ಹಾಳು ಮಾ ।
ತಾಡಿ ಮನೆ ಧನಧಾನ್ಯ ನೀಡುತೆಮ್ಮನು ಪಾಳು ।
ಮಾಡಿದೈಸಾಕುಮುಂದಾಡಬಾರದು ತಿಳಿದು
ನೋಡಬಾರದೆ ಮನಸಿಗೆ ॥
ನಾಡು ನಾಡಿನ ಪಕ್ಕಿಗೂಡಿನೊಳು ಧಾನ್ಯಗಳು ।
ಕೂಡಿಸುವ ದಿನದಿ ಶಶಿಚೂಡನರ್ಚಿಸಿ ಗೈದು ।
ನೋಡದಲೆ ಹೊಲಮನೆಯು ನಾಡೆದನ ಕರುಗಳಂ
ಮೂಢರಿಗೆ ಗುರುವಾದೆಲಾ ॥

೧೧೧

ವರಪುರದ ಶಿವಲಿಂಗ ಶರಣಬಸವನ ಚರಿತೆ ।
ಗುರುಬಸಣಾರ್ಯ ಪದಸರಸಿರುಹ ಲೀನಮಧು ।
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ॥
ವಿರಚಿಸಿದನೋದಿಸುವ ಬರೆದಗೋದುವಗೆ ಪರ ।
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ ।
ದೊರಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ನಿಧಿ ಸಂಧಿಬುಧ ಬಂಧಿಯು ॥

**ಸಂಧಿ ೯ ಕ್ಕೆ ಪದ ೭೬೬ ಕ್ಕಂ ಮಂಗಳಂ.**



ಶ್ರೀ ಶರಣಬಸವೇಶ್ವರ ಪ್ರಸನ್ನ

## ಹತ್ತನೆಯ ಸಂಧಿ

ಸೂಚನೆ॥ ಅಂಸಗೊಂಡಂಕಣೆಯೊಳುಂ ಸುರಿಸಿ ಧ್ಯಾನ ನಿ ।
ಸ್ಸಂಶದಿಂ ತಸ್ಕರರ ವಂಶಕ್ಷಣ ವಿಡುತಲಹಿಧ್ವಂಸ ।
ಜಂಗಮುಗುಳಿಸುತಂ ಶಬರರಂ ಕಾಯ್ದು ಹಂಸನಿಂ ಋಣಕೊಡಿಸಿದಂ ॥

೧

ಸಾಂಬ ಕುಣಿಸುವೆನೆ ನಾ ಕುಂಬಾರನೊಲ್ಮಿನಗೆ ।
ನಂಬಿ ತೆರಕುಂಟಣಿಗನೆಂಬೆನೆ ಹಲಾಯುಧನೋ ।
ಲೇಂ ಬಿಗಿಸೆನೆ ನಿನ್ನ ಕಂಭಕ್ಕೆ ಕ್ರೋಧದಿಂ ನಂಬೆ
ವ್ವೆಯೋಲ್ ನಿನ್ನಯಾ ॥
ಹಂಬಲೇಂ ತೊರೆವೆನೆ ವಿಡಂಬನಂ ಗೈವೆನೆಂ ।
ದೆಂಬಿಯೇಂ ಮಿಂಡನೊಲಾಂಬಡಿಯೆ ಸಾಂಖ್ಯನೋಲ್।
ಜಂಭಾರಿಸುತನಂತೆ ಯುಂಬುವಿಂ ಪೊಡಿಯೆ ನಾ
ನಿಂಬುಗೈಯೆನ್ನೆದೆಯೊಳು ॥

೨

ಹಣವಿರುವ ಪರಿಯಂತರುಣುವರಿಗೆ ಕೊರತೆಯೇ ।
ನುಣುತುಡುತ ತೃಪ್ತಾಗಿ ದಿನಕರನ ತೇಜ ಸ ।
ದ್ಗುಣ ವಂತನೆಂಪಾಡಿ ಘನ ಪೊಗಳುತಂತದೇ
ಧನಸವೆದ ನಿಮಿಷದೊಳಗೆ ॥
ಹೆಣನೆಂದು ನಾಡೆ ದುರ್ಗುಣಿಯೆಂದು ದೊಡ್ಡ ಪೈ ।
ಶುನನೆಂದು ಧಿಃಕರಿಸಿ ಹಣಿಕಿ ನೋಡಿದರೆ ಭೂ ।
ತೆನುತೋಡಿ ಪೋಗುವರು ಪೆಣತಿಮಗ
ಬಗಿಯರ್ಥೈಧನ ಮುಖ್ಯ ಜಗಜೀವನ ॥

೩

ಸಲೆ ಸುಗ್ಗಿ ಸೌಖ್ಯದೊಬ್ಬುಳಿಯಡವಿಯೊಳಗೆಲ್ಲ ।
ಬೆಳೆದ ಬೆಳೆ ನೋಡೆ ಕಂಗಳಮನೋಹರವು ।
ಭೂಲಲನೆ ಪಸರುಡಿಗಿಯುಂ ತಳದಂತೆ ಶೋಭಿ
ಪುದು ಗಿಳಿಗೀಜಗಂ ಸಾರಿಕೆ ॥
ಬೆಳುಕಾಗಿ ಕಬ್ಬಕ್ಕಿಗಳ ಸೋವಲೆಂದಟ್ಟ ।
ದೊಳು ನಿಂತ ಪಾಮರರ ಕಲ ಕಲ ಧ್ವನಿಯೆತ್ತು ।
ಗಳ ಮೇಸುತಿಪ್ಪವರ ವಲವು ನೇತ್ರಾನಂದಗೊಳಿ.
ಸುತಿರುವದು ಸಕಲರಾ ॥

೪

ಹೀಂಗಿಪ್ಪ ದಿನದಿ ನೀ ಕಂಗಳಂ ಮುಚ್ಚಿ ಶಿವ ।
ಲಿಂಗಾರ್ಚನೆಯು ಮತ್ತೆ ಜಂಗಮರ ದಾಸೋಹ ।
ವಂಗೈವುತಿರ್ದು ಕ್ಷೇತ್ರಂಗಳಂ ನೋಡದಿರುವಾ
ಇಂಗಿತವದೇನೆಮ್ಮ ॥
ಸಂಗಡಿದು ಸರಿಯೆ ಭಾಗಂಗೊಂಡು ಪಿತಮಾತೆ ।
ಯಂಗನೆಯು ಬೇರಿದ್ದು ತುಂಗನೀ ಮನಸು ಬಂ ।
ದ್ದಾಂಗೆಸಗಲದರಿಂದ ಭಂಗವೇಂ ಪೇಳೆಮ್ಮಗೆಂದು
( ನುಡಿದರಾಗವರು) ॥

೫

ಆಗಲೇಳ್ ನಿಮ್ಮಯ ಮನೋಗತಿದ್ದಂತೆಂದು ।
ಭಾಗವಂ ಕೊಂಡು ಮಹಾಭಾಗ ಸಲೆ ಲಿಂಗೋಪ ।
ಭೋಗದಿಂದಿರ್ದು ದಾಸೋಗವಂ ಮಾಡುತಲಿ
ಪೋಗದಿರೆ ಹೊಲದ ಕಡಿಗೆ
ಆಗನೆರೆಯವರು ಶಿವಯೋಗಿಗಾಡಿದರು ನೀ ।
ವ್ವೀಗೆ ದಿನಗಳುಗಳಯೆ ಸಾಗುವದೆ ಸಂಸಾರ ।
ಕಾಗಿ ದುಡಿಯದಲೆ ತಾನಾಗಿ ಭಾಗ್ಯಂ ಬಪ್ಪುದ್ದಾಳಿಗೆ
ತಿಳಿಯದೆ ಮನಸಿಗೆ

೬

ಬಂದ ಹೋದವರು ಕಾಡ್ದಂದಿದನ ಹಕ್ಕಿ ಬೆಳೆ ।
ತಿಂದುದಕೆ ಯಣೆಯಿಲ್ಲಯಿಂದುನಾವ್ಸಹಿಸದೈ ।
ತಂದು ಪೇಳಿದೆವಿನ್ನು ಮುಂದೆ ನಿನ್ನಯ ಚಿತ್ತ ಬಂದ
ತೆ ಮಾಡೆಂದರು
ಎಂದುದಂ ಕೇಳಿ ತಾನೊಂದು ದಿನ ಹೊಲದ ಕಡೆ ।
ಬಂದು ಕಾಣುತೆ ಪಕ್ಷಿವೃಂದವಂ ಪಶುಗಳಾ ।
ನಂದ ದಿಮ್ಮೆಯ್ಯುದನಿದೊಂದೂನ ನೀರಿಲ್ಲವೆಂದು
ಯೋಚಿಸಿ ಶರಣ

೭

ಮನನೊಂದು ತಂದು ರಂಜಣಿಗೆಗಳ ಹೊಲದ ಸು ।
ತ್ತನೊಳಿರಿಸಿ ನೀರ್ದುಂಬಿ ದಣುವಿಲ್ಲ ಪಕ್ಷಿಗಳಿ ।
ಗೆನುವಂತೆ ಮಾಡಿಯೊಲೆಗುಣಿ ತೋಡಿ ಪಥದಿ
ಸೀತನೆ ತಿನ್ನಲಖಿಳರೆಂದು ॥
ದನಗಳಂ ಕರೆಕರೆದು ತಿನುವದೀಯಡೆ ನಿಮಗೆ ।
ತೆನೆಗಳಿವೆ ನೀರು ಮಂತಣಿಗಳಿವೆ ಬಿಟ್ಟನೆರೆ ।
ಜನರ ಹೊಲಕ್ಹೋಗದಿರಿ ಹನನಗೈವರು ದುಷ್ಟರೆನುತಾ
ಡಿ ಮೇಸುತಿಹನು ॥

೮

ಶಿಷ್ಟ ತಾನಿಷ್ಟುಗೈವಷ್ಟಕ್ಕೆ ಪರಹೊಲಕೆ ।
ಚಿಟ್ಟಗುಬ್ಬಿಯು ಪೋಗಿ ಮುಟ್ಟದಿರೆ ಬೆಳೆಕಂಡು ।
ತುಷ್ಟಿಯಿಂ ಕವಣೆಗಳು ಕಟ್ಟಿ ಮಂಚಿಕೆ ಕಾಲ್ಗೆ
ಥೇಷ್ಟ ನಿದ್ರಿಯಗೈವ್ವರು ॥
ದುಷ್ಟಜನರಿವನ ಧೃತಿಯೆಷ್ಟು ನೋಡುವೆವೆಂದು ।
ಬಿಟ್ಟು ದನಗಳ ಕಣ್ಣಿ ಅಟ್ಟೆ ಶರಣನ ಹೊಲಕೆ ।
ನಷ್ಟಗೈವದಕೆ ತಾಂ ಕಷ್ಟಗೊಂಬುವನೆಯದೃಷ್ಟ
ನಂಬಿದ ಶರಣನು ॥

೯

ಹಾದಿಗ್ಹೋಗುವರ ಕರೆದಾದರದಿ ಶೀತನಿಯ ।
ಮೋದದಿಂ ತಿನಿಸಿ ಚರಪಾದ ಪರಿಚರ್ಯಮಂ ।
ಗೈದು ತಾನವರಶಿರ್ವಾದವಂ ಪಡೆದು ನಿಷ್ಖೇದದಿಂದವ
ನಿರುತಿರೆ ॥
ಮೇದಿನಿಯ ಜನರೆಲ್ಲ ಸಾಧುಸಾಕ್ಷಾತನಿವ ।
ಹೌದುಯೆನುತಿರೆ ಜನಪವಾದಕಂಜುತಲಿ ಬೆಳೆ ।
ಕೋದು ಗೂಡಿಕ್ಯಾಕ್ಯಳವಾದ ಕಣಮಾಡಿ ನೀರ್ಪೊಯ್ದು
ಹೊಟ್ಟೆಳಿಸಿ ತುಳಸೀ ॥

೧೦

ಮೇಲಿ ತೆನೆಮುರಿಯಲಿಕೆ ಕೂಲಿಯವರನು ಕರಿಯೆ ।
ಕಾಳಿಲ್ಲದಂಕಣಿಯು ಸಾಲವೆಮಗದರಿಂದ ।
ಜೋಳಕೊಟ್ಟರೆ ಬರುವೆ ವಾಲಿಸೆಂದೆಂಬುದಂ ಕೇಳಿ
ಹಾಗಾಗಲೆಂದು ॥
ಹಾಲು ತುಪ್ಪವು ಬಣಬೆ ಮೇಲೆರಿದು ತೆನೆಮುರಿಸಿ ।
ಮೇಳಗೈಸೆಲ್ಲರ್ಗೆ ಕೂಲಿದವಸಿಡೆಬರ್ದೆ ।
ಪಾಲಿಶೆನಗಂ ಕಣೆಯ ಸಾಲ್ಗು ಸಾಲೆಂದವರ್ಗೆ
ಹೇಳಿಯವಗಳೆ ಕೊಂಡಳು ॥

೧೧

ಹರವಿಯಂ ಕಣೆಹಂತಿ ತಿರುವುತಾ ಮದನಕ್ಕೆ ।
ಚರತೃಪ್ತಿಬಡಿಸಿ ಹರಹರ ಪರಾರೆಂದಾತ್ಮ ।
ಕರದಿ ತೂರಲು ಜೋಳ ಸುರವಲಿಕೆ ಹೊಲದಗಲ
ನೆರೆಯದಿರೆ ಪಾಂಥಿಕರನು ॥
ಕರೆಕರೆದು ಕೊಟ್ಟು ಮುದಬೆರೆದಿತ್ತು ಭಂಡಿ ಮೇ ।
ಲ್ಪೊರಿಸುತಗಣಿತರಾಸಿ ತರುವದಂ ಕಾಣುತಾ ।
ಶ್ಚರಿಗೊಂಡು ಸಜ್ಜನರಿದರಿದು ಮಹಿಮೆಯನುತಿರು ।
ತಿರಲು ತೋಷದಿ ॥

೧೨

ನೆರೆಹೊರೆಯ ಹೊಲನೆಲದ ದುರುಳರದು ಕಂಡು ಸೈ ।
ತಿರದೆಮ್ಮರಾಸಿಯಂ ತಿರುವಿಕೊಂಡಲ್ಲದೀ ।
ಪರಿ ಕಾಣ್ಬುದುಂಟೆ ಶಿವ ಸುರಹುವನೆ ಮೇಲಿಂದ ಬರೆ
ಬಯಲ ಭ್ರಮೆ ಮಾತಿದು ॥
ನೆರವಿ ಜನರೊಳು ನ್ಯಾಯ ತಿರುಪಾಗಲೆಂಬುತಾ ।
ಶರಣನಂ ಕರೆಸಿ ಬಲು ಕೆಕರಿಸುತಿರೆ ಕೇಳಿ ।
ಜರೆಯುಟ್ಟದವಳು ಬಂದರರೆಯಿದು ಅನ್ಯಾಯ ಶರಣ
ನೇಂ ಸಾಮಾನ್ಯನೆ ॥

೧೩

ಖಳರೆ ನೀವ್ದುರ್ವಚನಗಳಹದಿರಿ ನಾನಿವರ ।
ಹೊಲದೊಳೊಂದಿನೆ ಕೂಲಿಗೆಳಸಿ ತಂದಂಕಣೆಗ ।
ಳೊಳು ರಾಸಿಗೈದೆನ್ನೆಗೊಳಕೊಂಡೆ ನಾನಾರ ಖಳದ
ಮದನವು ಪೇಳಿರಿ ॥
ಸುಲಭನಿವನೆರೆಹು ಕಂಗಳದ ಶಿವನೆಂಬುದಂ ।
ತಿಳಿಯದೆಲೆ ಮರಿಯಾದಿ ಕಳೆಯುತಲಿ ಯಮನರಕ
ಕಿಳಿಯದಿರಿ ನಿಮಗೆ ಕೈಗಳನೆತ್ತಿ ಸಾರಿದೆನು ತಳುವದಿರಿ
ನಡಿಯನ್ನಲು ॥

೧೪

ನೆರೆದ ಜನರೆಲ್ಲ ಹರಹರಮಿದದ್ಭುತ ಪಿಂತೆ ।
ಯರಿದರಾರಿಲ್ಲಿಂಥ ಚರಿತೆ ಕೇಳ್ವೇಳುತಿಹ ।
ಹಿರಿಯರೊಳರೇಯಿಲ್ಲ ಶರಣಕರ ಪರುಷ ಸೋಂಕಿ
ರಲ್ಯಾವನಾಳೆಂಬುವ ॥
ಕಿರಿನಾಮ ತ್ಯಜಿಸಿ ಶಂಕರನಾಳನೆಂಬ ಉರು ।
ತರನಾಮ ತಾಳ್ದುದಚ್ಚರಿಯೆ ಪಿರಿದೆಂದೆಲ್ಲ ।
ಧರೆ ಪೊಗಳುತಿರಿ ಲಿಂಗಚರಪೂಜೆ ದಾಸೋಹ
ನೆರೆಗೈದು ಸುಖಮಿರ್ದನು ॥

೧೫

ಮತ್ತೊಂದು ದಿನ ಬಹಳ ರಾತ್ರಿಯೊಳಗೆದ್ದಡವಿ ।
ಪತ್ತರಿಗಳಂತೆಯುನ್ಮತ್ತ ಮೊದಲಾವ ಸುಮು ।
ವೆತ್ತುತಿರೆ ಕಳ್ಳರಾ ಪೊತ್ತಿನೊಳು ಬಂದು ಕಾಡುತ್ತೆಂ
ದರೆಲೆ ಶರಣನೆ ॥
ಸತ್ಯ ಸಂಧಾನಿ ಮೇಣುತ್ತಮಂ ಸರಿಯದವ ।
ವಿತ್ತ ನಿನಗುಳ್ಳದೆಮಗಿತ್ತು ಬಿಡುಯನೆ ತೋಷ ।
ಚಿತ್ತದಿಂದೊಪ್ಪುತಾ ಪೊತ್ತದಂತರ ಪೇಳು
ತತ್ತವರು ಮನಿಗ್ಹೋಗಲು ॥

೧೬

ಅನಿತರೊಳಗಾಯೆಂಟು ಜನ ತಸ್ಕರರು ಶರಣ ।
ಮಣಿ ತಮಗೆ ತಂದುಕೊಡುವನ್ನಣವ ಪೂಳಿಡಲೆಂದು ।
ಕುಣಿತೆಗೆವನೆನೆವದಿ ಭೂಖನನ ಗೈವುತ್ತಿರಲು
ಝುಣ್ಣ ಝುಣೆಂಬುವ ರಾವವಂ ॥
ಜನಿಸಲಿಕೆ ನೋಡಿ ಕಣ್ಣಣಿವನಿತು ಧನ ಕನಕ ।
ಮಣಿ ಮುತ್ತು ಪವಳ ಸಂದಣಿಗಳಂ ಕಂಡು ಬೆ ।
ಬ್ಬನೆ ಬೆರಗುವಟ್ಟು ಮಾತು ಮನ ಪೊಗಳ್ಯನಿಬರ
ಮು ತಿಣುಕೆತ್ತಿಕೊಂಡು ಕಡಿಗೆ ॥

೧೭

ಇರಿಸಿ ಕಂಬಳಿ ಪಾಸಿ ಸುರವಿ ಗಂಟಿಕ್ಕೆತ್ತಿ ।
ಶಿರದೊಳಗೆ ಪೊತ್ತು ನಿಬ್ಬರದಿಂದ ಬಂದು ಶಂ ।
ಕರನ ಭಕ್ತನೆದುರಿಳುಹಿ ಕರಗಳಂ ಮುಗಿದು ತಾ
ವರಿಯದೇನುಂಟು ಜಗದಿ ॥
ಗುರುವೆಯೀಧನ ನಿಮ್ಮದರಿಯದಾವ್ ಗೈದ ಬಲು ।
ದುರುಳ ತನ ಮನ್ನಿಸೆಂದೆರಗೆ ಪಾದದೊಳ ವರ ।
ಕರದಿಂದಲೆತ್ತಿ ಕುಳ್ಳಿರಿಸಿ ಪ್ಪೆದಡವ್ಯಂಜದಿರಿ
ಸುಮ್ಮನಿರಿಯಂದನು ॥

೧೮

ಈ ಪರಿಯೊಳಗಲ್ಯಾವೀಪಾದ ನೋಡೆ ನಿ ।
ಕ್ಷೇಪ ಮಣಿಗಣಜಾತ ರೂಪ ದೊರಕಿತು ಗೈದ ।
ಕಾಪಟ್ಯ ಕೃತಕರ್ಮ ಪಾಪರಾಧರಿಗಿನಿತು ಸೋಪ
ಚಾರಂ ಗೈವರೆ ॥
ಪಾಪಿಗಳ ಕಂಡು ಸಲೆ ಕೋಪಿಸುವರಲ್ಲಪಘ ।
ಲೋಪ ಕೇಳ್ನಿಮ್ಮಂತೆ ಕಾಪಾಡುವವರೊಳರೆ ।
ತಾಪ ಸಂಹರನೆ ಚಿದ್ರೂಪ ಸಲೆ ಭೂತ ಸದಯಾ
ಪರತೆ ನಿಮಗೊಪ್ಪಿತು ॥

೧೯

ಎನುತ ಕೊಂಡಾಡುತಾ ಧನವು ಕೈಕೊಳ್ಳುತ ।
ಪ್ಪಣೆ ಪಾಲಿಸೆಂದು ಸಲೆ ಮಣಿವುತಿಹ ಚೋರರಿಗೆ ।
ಮಿನುಗೆ ಮುಗುಳ್ನಗೆ ಪೇಳಿದನು ಮಕ್ಕಳಿರೆ ನಿಮ್ಮ ಹಣ
ಕೊಂಡು ನಾನ್ಗೈವುದೇಂ ॥
ಅನಘ ಚರರಿಗೆ ಕೊಟ್ಟು ತಣಿಸಿರಿದು ಮೊದಲುವಾ ।
ಗ್ರುಣವಾದವೆನ್ನ ಮನೆಹಣ ನೀವು ಕೈಕೊಂಡು ।
ಉಣುವದುಡುವದು ಚೌರ್ಯತನ ಬಿಡುವದೆಂದು
ಸದ್ಗುಣ ಬೋಧಿಸಿದ ನೀ ತೆರಂ ॥

೨೦

ಚೋರರಿರ ಪರಧನಪಹಾರವಂ ಮೇಣನ್ಯ ।
ದಾರ ಲಂಪಟ ಸದಾಚಾರ ನಿಷ್ಕೃತಿಗೆ ಬಲು ।
ಕ್ರೂರರಿಗೆ ನಿಖಿಳ ಸಂಹಾರರಿಗೆಯಮು ನಿಡುವ
ಘೋರ ನಿರಯದಿ ಸತತಂ ॥
ವೀರಶೈವಗೆ ದಾನಶೂರನಿಗೆಯನ್ಯಧನ ।
ನಾರಿಮಹಾತ್ಮೆಯೆಂದಾರೈವಗನ್ಯೋಪ ।
ಕಾರ ನಿಗೆಯಾತ್ಮಧರ್ಮೋರತನಿಗೊಲಿದಿಡುವ
ಮಾರಾರಿ ಶಿವಲೋಕವಂ ॥

೨೧

ಪಿಶುನನಿಗೆ ಜೀವ ಹಿಂಸಿಸುತಖಿಳ ಮೃಗ ಪಕ್ಷಿ ।
ಪಿಶಿತಶನ ಗೈವನಿಗೆ ಪುಸಿಕೃಪಣ ಶಠಮಲಿನ ।
ವಸನೋಪಭೋಗಿಂಗೆ ಪಶುಗಳಂ ನಾಡೆ ಪೋಷಿ
ಸದವನಿಗಸಮಕೃತಿಗೇ ॥
ಅಸಮ ಸಜ್ಜನರ ದೂಷಿಸುತೆ ದಾಲಾಭ ಸಂ ।
ತಸವಿಲ್ಲದವಗೆ ಕಲುಷಿತಮತಿಯ ಪಾಮರಗೆ ।
ನಸಿಮ ಸಂತತಿಯಾಯುಯಶ ಸಿರಿಬಲಿ ನಿಬರ
ಗೆ ವಿಷಕಂಠನೊಲುಮಿಲ್ಲವು ॥

೨೨

ಆದರಿಂದಲಘದಕೃತ್ಯದ ತ್ಯಾಗಮಾಡಿ ಸಂ ।
ಮುದದಿಂದಲಾನಿತ್ತು ಸುಧನವಂ ಕೊಂಡು ಸಂಪ ।
ದದಿಂದ ಕೂಡಿ ಶಿವಪದ ಧ್ಯಾನದಿಂದಾತ್ಮ ಸದನದೊಳು
ಬಾಳಿರೆಂದು ॥
ವದಿಸಿ ಹಣವಿತ್ತಿವರ ಮುದಡಮತಿ ಬಿಡಿಸಲಿಕೆ ।
ಸದಯನಿಂ ಘಿಂದಲಿ ಸುಹೃದಯ ರಾಗದರಾರು ।
ಉದಧಿಯೊಳ್ಬೆರದ ಮಲಿನುದಕದೊಳು ತಿಳಿಯೆ
ಪೂರ್ವದ ದೋಷ ಮಿರುತಿಪ್ಪುದೇ ॥

೨೩

ಕಾಕು ಮನಸಿಂ ಬಂದನೇಕ ಪಾಪಾತ್ಮರಿಗೆ ।
ಶ್ರೀಕರಂಗೈದ ಸಲೆ ಲೋಕಕಾವನ ನಿಮ್ಮ ।
ನೇ ಕಂಡು ಪಿಂಗಿತ್ತೈ ಶೋಕಸಜ್ಜನ ಸಂಗಮೇ
ಕರಂ ಸುಕೃತೆಂಬುವಾ ॥
ವಾಕುಧಿಟ ಧಿಟವೆನ್ನುತಾ ಕಳ್ಳರೆಲ್ಲ ಪರಿ ।
ಪಾಕ ಚಿತ್ತಾಗಿ ತಮ್ಮೊಕ್ಕೆಕಕ್ಕೆ ಧನಸಹಿತ ।
ಲಾಕಾಸ್ಮಿಕಂ ಪೋಗಲೀ ಕರುಣಿ ಲಿಂಗೋಪ
ಭೋಗದಿಂದಿರುತಿರ್ದನು ॥

೨೪

ತೋಷದಿಂ ಮತ್ತೊಂದು ವಾಸರದಿ ಶರಣಬಸ ।
ವೇಶ ಜಂಗಮ ಸಹಿತ ಶೇಷಮಂ ಮುಗಿಯುತಿರ ।
ಲಾಸಮಯ ಶರಣಗಾಯಾಸ ಮೇಯೆನಲು ಹೋ
ಹೋ ಶರಣುಯೆನ್ನೆನ್ನಲು ॥
ರೋಷದಿಂ ಕಣ್ಣು ಕಿಡಿಸೂಸಿ ಜಂಗಮರಿಗೀ ।
ಭಾಷೆಗೈದರೆ ನಿನಗೆ ದೋಷವಲ್ಲವೆ ನಿನ್ನ ।
ವಾಸೈಮಗೆ ಸಾಕು ನಡೆ ದೂಷಕನೆ ಜನವೆಲ್ಲ
ನೀ ಸಾದುಯೆನಲು ತಲಿಗೇ ॥

೨೫

ಏರಿತೆಲೆ ಮೂಢತ್ತ ಸಾರೆಂದು ಗುರುಪಾದ ।
ವಾರಿ ಮುಗಿದೇಳುತಿರೆ ಕ್ರೂರತರ ಜಾತಿ ಕಾ ।
ಳೋರಗಿಮ್ಮಡದಿ ಪಲ್ಲೂರ ನಾಲ್ಕದಕೆ ಬಲುಚೀರಿ
ಪಿಂದೆಸಿ ನೋಡಲು ॥
ತೋರಿಸಲು ಪೊಡೆಯೀಗಲಾರಿಗ್ಗೆಳುವೆನು ಹಾ ।
ಮಾರಾರಿಯೆಂದು ವಿಷವೇರುತಿರೆ ಮೂರ್ಛೆಯಿಂ ।
ಧಾರುಣಿಗೆ ಬಿದ್ದೆದ್ದು ಚಾರುಶರಣನೆ ಕಾಯ್ವಡಾ
ರುಂಟು ಹೇಳೆನ್ನಲು ॥

೨೬

ಚರಮೂರ್ತಿ ಶೇಷಕ್ಕೆ ಶರಣಾರ್ಥಿಯನಲಿರೇ ।
ಗರಳ ಬಾಧಿಸದೆನಲು ಭರದಿಂದ ಕೈಕೊಂಡು ।
ಹರುಷದಿಂ ಸೇವಿಸಲು ವರಗಿಸುತೆ ಮೇಲೊಂದು
ವೊರಿಸಿದನು ದಿವ್ಯಾಂಬರಂ ॥
ಮರೆದು ಮೈ ನಿದ್ರೆ ಗೊಂಡೆರಡು ತಾಸಿಂದಲೆ ।
ಚ್ಚರಮಾಗಿ ಹಿಮ್ಮಡದಿ ಸುರಿವ ರಕ್ತಂ ಕಡಿದ ।
ಕುರುಪಿಲ್ಲದಿರೆ ನೋಡಿ ಶರಣನಂ ಕೊಂಡಾಡೆ
ಪುರದ ಜನರಿದ ಕೇಳುತೆ ॥

೨೭

ಈ ಮಹಿಮೆ ಪೊಸತ್ತಿಂದೆ ವೇಮನಾರಾಧ್ಯ ಸ ।
ನ್ನಾಮರಸುತನಯನಂದಾಮರುತ ಭಕ್ತನಿಂ ।
ದೇ ಮರಣ ಮಾಗಿರಲು ಪ್ರೇಮದಿಂ ಕಾಯ್ದು
ನುದ್ದಾಮಮತಿ ರೇಮಯ್ಯನು ॥
ಸೋಮನಾತ್ಮಜ ಪರಂಧಾಮ ಸೇರಿರಲೇಳು ।
ಯಾಮಿನಿಯುತವೆ ನೀಗಿದಾಮೇಲೆ ಯಸುಪಡೆದು ।
ದಾವು ಕೇಳಿದೆವಿಂದಿಗೀ ಮಹತ್ತು ಸಲೆ ಕಂಡೆವೈ
ಮಹಾದೇವೆಂದರು ॥

೨೮

ಮುನಿಯಸ್ತಕನ ಆಣೆಯೆನೆ ಬಿಲಾಶಯದ ಸಂ ।
ದಣಿ ಸರವಿಯಹವೆಂಬ ಜನಜನಿತ ವಾರ್ತೆಯಂ ।
ದಿನಚೋಳಿ ಚನ್ನ ಕನ್ನನ ಶೇಷ ಸವಿದು ಶಿವ
ಘನ ಪದಂದವಗಿರ್ಪುದಂ ॥
ಮನವರಿಕೆಯಾದುದಿಂದಿನ ವಾಣಿಯಿಡದೆ ಪದ ।
ಘನನೆನಿಸದಲೆ ಜಂಗಮನಿಗ್ಗ ಗರಣವಿತ್ತ ನೀ ।
ತನ ಮಹಿಮೆಯಮ್ಮ ಲೋಚನದಿ ನೋಡಿದೆ
ವೆಂದು ಜನರೈದೆ ಕೊಂಡಾಡಲು ॥

೨೯

ಭಕ್ತಿ ಕ್ರಿಯಾಜ್ಞಾನ ಮುಖ್ಯಮಾಗಿರ್ಪಖಿಳ ।
ಶಕ್ತಿಜನ ಸಂಸ್ಕೃತಿಯ ಸಕ್ತನಾಗರಿಯದ ವಿ ।
ರಕ್ತ ನೋಲಾಡುತ ದುರುಕ್ತಿಗಳ ನೆನಗೆ ಹೊರಗಿಕ್ಕೈ
ದನು ನೋಡಿರಕಟಾ ॥
ಭಕ್ತರಿರೆ ಗುಣಮದಿರು ತಕ್ಕುದಂ ಶರಣಗೇ ।
ನುಕ್ತಮೇಯೆಂದು ಯಶಪೊಕ್ಕು ಪಾತಾಳದಹಿ ।
ವಕ್ತ್ರಾಡಲರಿಯವೆಂದ್ಹೋಕ್ಕುಸಕ್ಕವನು ದೂರಿಕ್ಕಿ
ದಳು ಮುಕ್ಕಣ್ಣನೆ ॥

೩೦

ಮೂಲೋಕದೊಳಗೆಸವ ಶೀಲಶರಣನ ಕೀರ್ತಿ ।
ಕೇಳುತಲಿ ಬಂದು ಕಡಕೋಳ ಮಡಿವಾಳಪ್ಪ ।
ಹೇಳಿಕೊಂಡನು ದೀಕ್ಷಪಾಲಿಸಿಸುಯೆನಗೆ ಸದಯಾಳು
ಮೂರುತಿಯೆನ್ನುತೆ ॥
ಆಲಿಸುತಲಾಗಲೆಂದ್ಹೇಳುತೆ ಕ್ರಿಯಾಮೂರ್ತಿ ।
ಕಾಲಮೇಲಾತನಂಬೀಳಿಸುತ ದೀಕ್ಷೆಯಂ ।
ಲೋಲಗೈಯ್ಯನಲಿವನ ಮೂಲರಿಯದೆಸಗುವುದು ಕೀಳ
ಮೆಂದವರಾಡಲು ॥

೩೧

ಪಾತ ನೀ ನೀಚರನ ಜಾತಿ ಕುಲ ನೋಡಲತಿ ।
ಪಾತಕಂ ತನಗಹುದು ಮಾತುಕೊಟ್ಟೆನು ಮೊದಲಿ ।
ಗೇತೆರಾದಡು ದೀಕ್ಷೆ ನೀ ತಡಿಯದಿತ್ತು ಸಲೆಪೂತನಿಂ
ಮಾಡೆನ್ನಲು ॥
ಭೀ ತೆಗಿ ಸುಮೂಢ ನಿಂವ್ಯಾತರ ವಿಚಾರಬಿಡು ।
ಭೂತದಯ ನಿನ್ನಯ ನೀಕೆತನವೆ ಬೇಡೆಮಗೆ ।
ಜಾತಿಯವರಿದು ಕಂಡು ಸೈತಿರುವರೆಯನ್ನುತಾತ
ಪೋಗಲು ಶರಣನು ॥

೩೨

ಅವರ ಮಠಕ್ಹೋಗುತಲಿ ವಿವಿಧ ತೆರಪೇಳಿ ಕೊಳ ।
ಲವಿವೇಕಿ ನಾವ್ನಿನ್ನಭವನ ಪೊಗೆವಿನ್ನೆನಲು ।
ಶಿವನಾಣತಿಯೊಳಾಗಬಹುದೆನ್ನುತಿನ್ನೊಬ್ಬ ಸುವಿಚಾರಿ
ಜಂಗಮನನು ॥
ಜವದಿಂದ ಕರಿಸಿ ದೀಕ್ಷವನಿಡಿಸಲಯ್ಯನನು ।
ಭವದ ಲೈತನದ ಹಮ್ಮಿವನ್ಯಾಕೆಯೆಂದು ಗಾ ।
ನವು ಪಾಡಲದು ಕೇಳಿ ತವೆ ಕೋಪದಿಂ ಮೊದಲಿ
ನವರೆಮಗೆ ಹಾಡಿದನಿದು ॥

೩೩

ಎಂದುತಳಮುಳಿಸುತೀ ನಿಂದೆವೆಮಗಾಗಿಪ್ಪ ।
ಕುಂದು ಶರಣನ ಧೈರ್ಯ್ಯಗಂದೇನು ಫಲವಿವನ ;
ಕೊಂದು ಹಾಯ್ಕುವದೆ ಹಿತವೆಂದು ತಾಕರಿಸುತ
ಪುಳಿಂದಿರಂಯೇಕಾಂತದಿ ॥
ಅಂದನವರಿಂಗೆಯಾ ಮಂದಮತಿ ಶರಣನನು ।
ತಿಂದಿರಾದರೆಯೊಬ್ಬಗೊಂದೊಂದು ನೂರುಹಣ ।
ವಂ ವಣಿಯದಿಡುವೆ ನಿಸ್ಸಂದೇಹವೆನಲೊಪ್ಪೆ ಬಂದಿರಲು
ಮುಂದೊಂದಿನಂ ॥

೩೪

ಮೂಡಲದಿ ಕವಿ ತಾರೆ ಮೂಡುವದರೊಳಗಾಗಿ ।
ಕಾಡುಪತ್ತರಿಗೆ ಮನಮಾಡಿ ಶರಣೈದೆ ನಲಿ ।
ದಾಡೆತ್ತುವಾಪೊಳುತು ಬೇಡರೊಂದೆಂಟು ಜನರೋಡಿ
ಬಂದಿವರ ಸುತ್ತಂ ॥
ಕೂಡೆಲ್ಲರೊಮ್ಮೆ ಕರವಾಡೆತ್ತಿ ಪೊಯ್ಯುತಿರ ।
ಲಾಡಲೇಂ ಕೈಕೆಳಗೆ ಮಾಡಲಿಕೆ ಬಾರಿದಿರೆ ।
ಮೂಡಿ ನಾಚಿಕೆಯು ತವೆಬಾಗಿ ಮುಖನಿಂದವರ
ನೋಡಿ ಕರುಣದಿ ಶರಣನು ॥

೩೫

ನುಡಿದನೆಲೆ ಮಕ್ಕಳಿರ ಬಿಡಿ ಚಿಂತೆಯಿಮು ನಿಮ್ಮ ।
ಒಡಲಮತಿಯಲ್ಲವಾವಡಿಯ ಜಂಗಮವಾಕ್ಕು ।
ತಡಿಯುತೆನ್ನಯ ತಲೆಯ ಕಡಿಯದಿರೆ ನಿಮಗೆಮ್ಮ
ಗಿಡುವನೈ ಯಮ ನರಕದೀ ॥
ಮೃಡನಸಲಾ ಜಂಗಮವು ಕೊಡುವ ಮೋಕ್ಷವು ತನಗೆ ।
ಕಡಿಮೆಯಾದುದೆ ನಾನೆ ಕಡು ಧನ್ಯ ಧನ್ಯ ಮಿದು ।
ಪೃಥನಿಮಗೆ ಬೆಸಸಿದವರಡಿಯಾಣೆ ಯೋಚಿಸದೆ
ಪೊಡೆಯೆಂದು ಕೈಮುಗಿಯಲು ।

೩೬

ತಾತ ಕೇಳ್ನಾವತಿ ಧನಾತುರದಿ ಗೈದ ಶತ ।
ಪಾತಕನ ಮನ್ನಿಸುತೆ ಕೈತವಕ ಕೆಳಗಿಳುಹಿ ।
ಪೂತರಾಗಿರಿಯೆಂಬ ಮಾತೊಂದು ನುಡಿಯನ್ನು
ತಾತಗಳು ಹೇಳಿಕೊಳಲು ।
ಭೀತಿ ಬಿಡಿ ನಿಮ್ಮ ಮನ ಪ್ರೀತಿಯಿದ್ದೋಲಾಗ ।
ತೀತರಪರಾಧಮೆನಲಾತತಕ್ಷಣವಂತೆ ।
ನೀತಾಗೆ ಕರಗಳದ್ಭೂತಮನರಾಗಿ ಗಣನಾಥನಡಿ
ಮೇಲ್ಬೀಳುತೆ

೩೭

ರಾಜಶೇಖರನೆಂಬ ರಾಜಪುತ್ರನ ದಿವ್ಯ ।
ವಾಜಿಯಿಂ ಮಡಿದ ಸುತವ್ಯಾಜಕಾತನ ತಲೆಯ ।
ರಾಜ ಗಡಗಡಿಸೆ ಮನುರಾಜವುಚ್ಚರಿಸೆ ಮೃತರಾಜಿ
ಬದುಕಿಮ ಕೇಳ್ದೆವು
ಮಾಜ ತಲೆಗಡಿಬಂದರೀ ಜಡರಿಗೇನಾಡ ।
ದೋಜನಿಲಿಸಿದ ಮಹಿಮೆಯೀಜಗದಿ ಪೊಸತಿಂಥ ।
ಸೋಜಿಗವ ಕಂಡೆವೀ ತೇಜ ಸಾಮಾನ್ಯವೇ ರಾಜಿತ
ಗುಣಾಭರಣನೇ

೩೮

ಎಂದುಕೊಂಡಾಡಿ ಬಲವಂದೆರಗಿ ಮತ್ತೆ ತವ ।
ನಂದನರಿಗಾಜ್ಞೆಯೇನಂದಪ್ಪಣೆಯು ಕೊಂಡು ।
ಅಂದವರು ಪೋಗಲಿಕೆ ಬಂದು ಮನೆಯೊಳು ಶರಣ
ನಿಂದುಶೇಖರ ಪೂಜೆಯಂ
ನಂದಿಗಮುಭಕ್ತ ಚರವೃಂದವಮೇ ನಿಜದೇವ ।
ರೆಂದವರ ಭಜಿಸಿ ಮುದದಿಂದಿರುವ ಪೋಕ್ತು ತಾ ।
ಯ್ತಂದೆ ಶಿವಸಾಯುಜ್ಯ ಪೊಂದಿದಕೆ ಮನದಿ ಯಾನಂ
ದಿಂದಿರುತಿರ್ದನು

೩೯

ತೋಷದಿಂ ಬಂದ ಚರದಾಸೋಹ ಮಾಡುತಿ |
ಪ್ಪೀ ಸುದ್ದಿಕೇಳಿ ಬಹುದೇಶದೇಶದ ಜನರು |
ರಾಸಿಯಂ ಬಂದು ಹಣವೇಸು ಬೇಡಿದವರ್ಗೆ
ಬೇಸರಿಲ್ಲದೆ ಕೊಡುತಿರೆ ||
ಆ ಸಮಯದೊಳಗೋರ್ವನೀಶ ಚರಬಂದಿದೇ |
ವೈಶಾಖದೊಳು ಮಗನ ಲೇಸು ಮದುವೆನಗೊಂದು |
ಸಾಸಿರಿಡದಿದ್ದೊಡುಪವಾಸ ಬೀಳುವೆನೆನಲು ಕಾಸು
ಕೈಯ್ಯೊಳಗಿಲ್ದಿರೆ ||

೪೦

ಕೊಡಲಾಗದೆಂದು ನಾನುಡಿವೆನೆಂತಯ್ಯಯ್ಯೊ |
ಕೊಡುವರಾರೆನಗೆ ಕೈಗಡ ಬಡ್ಡಿಯಿಂದ್ಧಣವು |
ಯಿಡುವಡೊತ್ತಿಂಗೊಂದುವಡವಿ ಬಳಿಯೊಳಗಿಲ್ಲ
ಬಡತನಂ ಬಂದಾವನಂ ||
ಅಡಿಸುವದೊಸವಿ ಮಾತು ನುಡಿವರಾರಿಲ್ಲವಗೆ |
ಮಿಡುಕುತೀ ಸಂಸೃತಿಯು ಸುಡಲೆಂದು ಸುಯ್ದೆದ್ದು |
ಪುಡುಕುತಲಿ ಧನಿಕರಿದ್ದೆಡೆಗಳಂ ಕಂಡವರಿಗುಡಿ
ಯೊಡ್ಡಿ ಕೇಳಿಕೊಳುತಾ ||

೪೧

ತತ್ತರಂಗೊಂಡೋರ್ವನಿತ್ತುಳ್ಳವನ ಮನಿಗೆ |
ಚಿತ್ತೈಸಿ ಬಡ್ಡಿಯಿಂದಿತ್ತಪೆಯು ಸಹಸ್ರಹಣ |
ಮತ್ತೆ ಋಣವೆನಲು ನೀ ಸತ್ಯ ಸಂಧಾನಿ ಮೇಣುತ್ತ
ಮನು ಕೊಡುವವಧಿಯಂ ||
ಬಿತ್ತರಿಸಿದರೆ ಕೊಡುವೆ ತಥ್ಯಮೆನಲದು ಕೇಳಿ |
ಚಿತ್ತಜಾಂತಕ ಕೊಟ್ಟ ಹೊತ್ತು ಕೊಡುವುವೆನೆಂದು |
ಪತ್ತರದಿಲಿಖಿಸಿ ಹಣಪೊತ್ತ ತಂದೈಯ್ಯಂಗೆ ಚಿತ್ತ
ತೋಷದಿ ಕೊಟ್ಟು ಮೇಣ್ ||

೪೨

ವಿನುತ ಜಂಗಮಗೆ ಮಜ್ಜನಗೈಸುತಲಿ ಶಿವಾ |
ರ್ಚನೆ ಮುಗಿಸಿ ತೋಷದಿಂದುಣ ಬಡಿಸಿ ಕಳುಹಿಬಲು |
ದಿನ ಸವಿಯುತಾ ತಂದ ಋಣ ಮುಟ್ಟದಿರುತಿರಲು ಧನಿಕ
ನತಿ ಕೋಪದಿಂದಾ ||
ಮನಸ್ಯನಂ ತಂದವನ ಮನೆಯ ಮುಂದೆ ಕೂಡಿಸಲು |
ಹಣವುಕೊಳ್ಳದಲೇಳೆವೆನುತ ಕಾಡುತ್ತಿರಲು |
ಶ್ರಿಣಿಯ ಚರವೇಷದಿಂ ಕನಸಿನೊಳು ಬಂದು ನೀ
ನಿನಿತು ಗೈವರೆದುರುಳನೆ ||

೪೩

ಶಿವನು ಕೊಟ್ಟಂದು ನಾ ನಿಮಗೆ ಕೊಡವುವೆನೆಂದ |
ನವನತಪ್ಪೇನು ನೀ ಭವಣೆಗೈಯ್ಯುವದು ಚಿತೆ |
ಅವಿವೇಕಿ ತಿನ್ನೊಲುವವರಾಕಾಣೆ ನೀ ಭುವನದೊಳು
ನಿನ್ನೊಡಲೊಳು ||
ಸುವಿಚಾರವೆಲ್ಲಿ ಲೆಖ್ಖವು ತಗಿಯುತೆಗೆಯೆಂದು |
ತವೆಕೋಪದಿಂ ಬಡ್ಡಿಸಹ ಕೊಟ್ಟು ವೋಹಿಯೊಳು |
ಜನೆಹಿಡುಸುತಲಿ ಕಾಗದವ ಕೊಂಡು ಪರಿದಿಕ್ಕಿ
ತವಕದಿಂ ಬಯಲಾಗಲು ||

೪೪

ಎಚ್ಚತ್ತುಧನಿ ಕೋಹಿಬಿರ್ಚಿರ್ದುದ್ಧಣ ಜಮಿಗೆ |
ಹಚ್ಚಿರ್ದುದಂ ಪತ್ರ ನುಚ್ಚು ನೂರಾದುದಂ |
ಪೆಚ್ಚುಕುಂದಿಲ್ಲದಲೆ ಮುಚ್ಚಿಟ್ಟ ಹಣ ನೋಡಿ
ಕಚ್ಚಿಕೊಂಡಂಗುಟವಿದು ||
ಅಚ್ಚರಿಯ ಸರಿಮೂರು ಅಚ್ಚಿಯವ ಸಪ್ನದೊಳ |
ಗುಚ್ಚರಿಸಿದುದನೆಲ್ಲ ನಿಶ್ಚಯವೆಯಾಯ್ತಿವನು |
ಸಚ್ಚರಿತನೆಂದಾಡಿ ಮೆಚ್ಚಿ ತಾಮುನಗೈದ ಹುಚ್ಚು
ತನ ನಿಂದಿಸುತಲಿ ||

೪೫

ಬಂದು ಶರಣನ ಪಾದಕೊಂದಿಸುತ ಕೊಂಡಾಡಿ |
ಮಂದಮತಿನಾಗೈದ ನಿಂದೆ ಕೃತಿಯಂ ಮನ್ನಿ |
ಸೆಂದಾಡುತಿರಲು ನಾ ತಂದ ಋಣಕೊಡದಿಪ್ಪ
ದೊಂದು ತಪ್ಪಾಗಿ ಬೇರೆ ||
ಇಂದೆನಗೆ ನಮಿಸುವದು ಛಂದವೆ ಪೇಳೆನಲು |
ತಂದೆ ನೀ ಪೇಳಿದಂತಿಂದು ಧರ ಕೊಟ್ಟ ನಿ |
ಸ್ಸಂದೇಹ ನಂಬಿಮುದದಿಂದೆನಗೆ ಪೊರೆ ದಯಾ
ಸಿಂಧುವೆನುತಾನುತಿಸುತೆ ||

೪೬

ಗುರುವೆ ನತಜನಕಲ್ಪತರುವೆ ಸದ್ಭಕ್ತ ಜನ |
ರಿರುವೆಸಿವ ಕರಸುರತರುವೆ ಸನ್ಮುಕ್ತಿಯಾ |
ಗರವೆ ಶರಣಪ್ಪ ಶಂಕರನೆ ನೀನೆಂಬುದಾನರಿಯ
ದತಿ ಮರವಿನೆಂದಾ ||
ನರನೆಂದು ಭಾವಿಸುತೆ ದುರುಳತನಗೈದೆ ಸಾ |
ನುರನೆನ್ನ ಪೊರೆದಯಾಪರನೆಂದು ಕೊಂಡಾಡಿ |
ಸುರವಿಮುಂಬಿನೊಳು ಧನ ಚರಣಕಾನತನಾಗಿ
ಪರಿಪರಿಯುಬೇಡಿಕೊಳಲು ||

೪೭

ಅನಘನದು ಕೇಳಿ ಮನದಣಿದು ಸಲೆ ಪಾಡುತಲಿ ।
ಗಣಪಪಿತನಾಮಮಂ ಧನಿಕ ನಾಡಿದ ನಿನ್ನ ।
ಖಣ ಮುಟ್ಟದರೆ ಸರೀಹಣವು ನಮಗೇಕೆಂದು
ಸನುಮತಂ ಬಡಿಸಿಕೊಡಲು ॥
ಜನರೆಲ್ಲ ಶರಣಬಸವನ ಮಹಿಮೆಯಿದುವೆ ನೂ ।
ತನಮಿನವದಿ ಸಾಕ್ಷಾತ್ ತ್ರಿಣಯನೆಂದಾಡುತಿರು ।
ವನಿತರೊಳು ನುಡಿದ ಸಜ್ಜನರೆ ನೀವರಿಯಿರೆ
ಅಣಿಯಪ್ಪ ಲಿಂಗೈಕ್ಯನಾ ॥

೪೮

ನಾವರಿಯೆವಾಮಾನು ಭಾವನ ಚರಿತ್ರವಂ ।
ದೇವ ನೀನೆಮಗೀಗೆ ಸಾವಧಾನದಿ ಪೇಳಿ ।
ಕಾವುದೆನೆ ಕರುಣದಿಂ ನೀವು ಕೇಳುವದೊಂದೆ ಭಾವ
ದಿಂದೆಂದಾಡುತೆ ॥
ಭೂಮಿನುತ ಹರಸೂರ ಗ್ರಾಮದೊಳಗಿರುವ ತವೆ ।
ಕಾವನಾಳಾದ ವಿಟಕೋವಿದಂ ಮನಬಂದ ।
ಭಾವೆಯರ ಭೋಗಿಸುವ ನೇಮತನಗಲ್ಲ ದಿನ್ನಾವುದಂ
ಗೈಯ್ಯನಿರುತಾ ॥

೪೯

ಕಂಡಪುಂಶ್ಚಲಿಯರಿಗೆ ಗಂಡನಾಗಿರುವನಂ ।
ಪುಂಡರೀಕಾಕ್ಷಿಯರು ಕಂಡಕೂಡಲೆ ಮಾರ ॥
ನಂಡಲಿಗೆ ಸೋಲ್ತು ಭ್ರಮೆಗೊಂಡು ಬೆನ್ನಟ್ಟ ರತಿ
ಗೊಂಡಲ್ಲದವನ ಬಿಡರು ॥
ಉಂಡುಟ್ಟು ತೊಟ್ಟು ಮದ ಶೌಂಡಾಲದೋಲಿರುವ ।
ಭಂಡನುದ್ಯೋಗೆತ್ತು ಭಂಡಿಯಿಂ ಘಳಿಸಿರ್ದ ।
ಭಾಂಡ ವ್ಯಯ ಮಾಡುವದು ಕೊಂಡಾಳುಪಿತ ನೋಡಿ
ಕೆಂಡ ಕಣ್ಣಿಲಿ ಸುರಿಸುತೆ ॥

೫೦

ನರಪಶುವೆ ಮನೆಮನೆಯು ತಿರುಗುಣ್ಣುತಿರ್ದು ಹಣ ।
ಕರಗಿಸಿದ ಮೇಲ್ನಿನಗೆ ತಿರಿದುಂಬುವುದೆ ಫಣೆಯ ।
ಬರಹಮೆನಗೋಪುಲ್ಲು ಕರುವಿಗ್ಹಾಕುವದೆ ಜಗ ।
ದೆರೆಯ ಶಿವತಾನೆಲ್ಲರಂ ॥
ಪರಿಪೋಷಣಂಗೈಯ್ವ ಸಿರುತಿರಲು ಚಿಂತೆಯಾ ।
ತರದೆಂದು ಮದಬಂದ ಪರಿಯಿರುವ ಪೊಳ್ತುಮನೆ ।
ಗುರುಬಂದು ಕೆಲವುದಿನ ಮಿರಲಾದರೊಂದಿನಂ
ದರುಶನವು ಕೊಳದಿರ್ದನು ॥

೫೧

ದೇಶಿಕನು ಹಿರಿಮನೆಯೊಳೀಶಾರ್ಚನಂ ಗೈಯ್ವ ।
ಡಾ ಸಮಯ ಪಾಕದ ವಿವಾಸದೊಳು ಬಂದು ಸಲೆ ।
ನಾಶಿಕದ ಗಾಳಿ ಪೊರಸೂಸದಂತುಂಡೆದ್ದು ವೇಶಿಯರ
ಗೃಹಕೆ ಪೋಗಿ ॥
ಪೂಸುತಲಿ ಗಂಧವಂ ಪೂಸರಗಳಿಂದಂಗ ।
ಭೂಷಿಸುತ ಮೃದುಳತರಪಾಸಿಕಿಯ ಮೇಲ್ಕುಳಿತು ।
ತೋಷದಿಂ ಮಾರನವಿಳಾಸದೊಳಗಿರುತಿರ್ಪ ಬೇಸರ
ದೆನಿಸಿ ಪಗಲೊಳು ॥

೫೨

ಕರದರಿಲ್ಲೆನಿಸಿ ಮೈಗರೆವನಂ ಯುಕ್ತಿಯಲಿ ।
ಗುರುನಾಥ ಬಿಡುವು ತವಸರವೆನಗೆ ಬೇರೂರ್ಗೆ ।
ತೆರಳುವೆನು ಮಗ ನೆನಗೆ ಪರಿಚರ್ಯವಂ ಗೈಯ್ವನುರಿಗೆ
ಮುಂಗಳುಹಿಪ್ಪೆನು ॥
ಭರದಿಸ್ನಾನವು ಮಾಡುತಿರಿಸಿ ಗದ್ದುಗೆ ಮೇಲೆ ।
ಪರಪುತಿಡು ಲಿಂಗೋಪಕರಣಂಗಳೆನಲದಕೆ ।
ನೆರೆ ಕಷ್ಟದಿಂದೊಪ್ಪಿ ನಿರುಪಿಸಿದೊಲೆಸಗಿ ಗುರು
ವರಗೆ ಸ್ನಾನವು ಮಾಡಿಸಿ ॥

೫೩

ಪದದೊಳಿದು ಲಿಂಗಾರ್ಚನದ ಕೆಲಸ ತೀರ್ಚಿಚರ ।
ಣುದಕೆ ಸಲಿಸುಂಡು ಮನಮುದನಾಟಕೆಳಿಸೆ ಬಲು
ಬೆದೆಯಿಂದಲೇಳುವನ ಹದನರಿದು ಪೇಳತೊಡಗಿದ
ದೇಶಿಕೊಂದಂದನು ॥
ಅದು ತೆಗೆವುತೊಳಗೆ ಕೊಡುಯಿದು ಕಂಟಲಿಯೊಳಗಿಡು
ಪೊದಕೆ ತಾ ಹಲ್ಲಣವು ಕುದುರೆ ಮೇಲ್ಹಚ್ಚೆಂದು ।
ವಿಧವಿಧದಿ ತಡೆದು ಪೈಣದ ಪೊಳ್ತು ಪರಕೆಯಂ
ಸದನದೆಲ್ಲರಗೀಯುತೆ ॥

೫೪

ನಾಡಮಾತುಗಳ ನೆವಮಾಡಿ ಸದ್ಬೋಧೆಸುಧೆ ।
ಯೂಡುತಣಿಯಪ್ಪನಂ ಕೂಡಿಕೊಂಡೈತರುತೆ ।
ಗಾಢವನ ಚಿತ್ತದನು ನೋಡುತಾರಿಲ್ಲದಿಹ ಕಾಡಿನೊಳು
ಗುರುಭಿಕ್ಷೆಯಂ ॥
ಬೇಡುವೆನು ನಿನ್ನ ಪುಸಿ ನೀಡೆನಗೆಯಿದುವರೆಗೆ ।
ಮಾಡಿದುದು ಮರೆದೆ ನೆಂದಾಡುತೆ ನಮಸ್ಕಾರ ।
ಮಾಡೆನಲು ಸಾಷ್ಟಾಂಗನೀಡಿ ಗುರುವಾಜ್ಞೆಯಂ
ಸೂಡಿಕೊಳ್ಳುತೆ ಶಿರದೊಳು ॥

೫೫

ಘಳಿಲನಪ್ಪಣೆಕೊಂಡು ಕಳುಹಿ ಗುರುವಿನ ತನ್ನ ।
ನಿಳಯಕ್ಕೆ ಪೋಪ್ಪಾದಿಯೊಳು ನದಿಗೆ ಬಟ್ಟೆಗಳ ।
ತೊಳಿಯಲಿಕೆ ಬಂದ ಪುಂಶ್ಚಲಿಯರಾತನ ಕಂಡು
ಕಲಕಲನೆ ನಕ್ಕು ಮತ್ತೆ ॥
ಮಳಲು ಮೇಲೊಗೆವುತಂಜುಳಿಗಳಿಂ ನೀರು ಚೆ ।
ಮ್ಮ್ಮಳಿಸಿ ಕೆಲರವನ ಕೈಗಳುವಲ್ಲಿಯಂಗಿ ಹಿಡಿ ।
ದೆಳಿಯುತಿರಲವ್ವಕ್ಕಗಳಿರೆ ನಿಮಗೀ ಚೇಷ್ಟೆ
ಯೊಳಿತೆ ಸೈತಿರಿಪನ್ನಲು ॥

೫೬

ಆ ತರುಣಿಯರು ಇವಗೆ ಪೇತುಬಡಿದುದೆ ನಿಜಂ ।
ಪ್ರೀತಿಯಿಂ ಭೋಗಿಸಿದ ಶೀತಕರ ಮುಖಿಯರಿಗೆ ।
ಮಾತೆಯೆಂದನ್ನುತನುಜಾತೆ ಯೆಂದಾಡಿದನೆ
ಭೂತಕಾಲದೊಳೊಂದಿನಂ ॥
ಸೋತ ಸವತಿಯಳಾವಳೌತಣದಿ ಮದ್ದಿಕ್ಕ ।
ಲೀತೆರಾದುದೊ ತಲೆಯೊಳಾ ತಾವಳೂಡಿದಳೊ ।
ಮಾತು ತಪ್ಪಿತು ದಿಟಕನಾಥರಾವೆಂದು ತವೆ
ಕಾತರಿಸಿ ಗೋಳಿಟ್ಟರು ॥

೫೭

ಆವರ ನುಡಿಗಳು ತನ್ನ ಕಿವಿಗೆ ಪೊಗದಿರಲು ।
ಮಾಧವರೂಪ ಗುರು ನಿರೂಪವೆ ಬೊಮ್ಮವಾಗಿರಲು ।
ಭವನಕ್ಕೈತಂದು ತನ್ನವಯವಮ್ಮರೆದೊಂದಕ್ಷ
ವಣೆಸದಲಿರುತಿರ್ದನು ॥
ಶಿವಯೋಗಿ ಸಂಸಾರ ನಿವಹದೊಳಗಿರ್ದೊಡೇ ।
ನವಿವೇಕಿಯಂತೆ ಕಾರ್ಯವು ಸ್ವೈಯ್ಯನೆಂಬುವದ ।
ಕಿವನ ಸಾಕ್ಷಿಯೆಸಾಕು ಭುವನ ಜನಗಳಿಗೆಂದು
ಶಿವಶರಣ ಪೇಳಿ ಮತ್ತೆ ॥

೫೮

ಅಳಿಕಾಕ್ಷ ಪೂಜಾತ್ಮ ಲಲನೆಯೊಡರತಿ ಚರರ ।
ಬಳಗಕುಪಚಾರದಿಂ ಕಳೆವುತಿರಲಾಗಿ ದಿನ ।
ಬಳಿಕೊಂದುದಿನ ಮನಕೆ ತಿಳಿದು ನೋಡಿದನ್ಹೀಗೆ
ಕುಳಿತುಂಡರ್ಹೋಗೆನ್ನುತೆ ॥
ಇಳುಹುತೆ ಸಬರ ಸಿಂಬೆಗಳ ನಟ್ಟದಿಂದಾಗ ।
ಕೆಳಗೆ ಝಾಡಿಸುತೆತ್ತುಗಳ ಮೈಯ್ಯು ತಿಕ್ಕಿ ಕೈ ।
ತೊಳುತ ಹಣ ಪಿತನಿಂದ ಬಲು ಜವದಿ ಚಿಟಗುಂಪಿ
ತಳಕ್ಹೋಗುತಲಿ ಶರಣನು ॥

೫೯

ಎಡಿಯೊಂದಕಿಳಿಯುತಂಗಡಿಗ್ಹೋಗೆ ಕ್ರಯಕೆ ಕೋ ।
ನುಡಿಗನಲಿ ತಾಕೊಂಡು ಗುಡುವು ತೂಗೆ ನಲಿವನು ।
ಎಡಗನಿರಬಹುದೆಂದು ಪಡಿಸೆಣಸಲೆರಡು ಮಣ
ಕಡಮೆ ತೂಗುತಲೆಂದನು ॥
ಷಡುದಶ ಮಣಾಯ್ತು ನೀನಡಿಯೆನ್ನಲೆತ್ತೀರಿ ।
ಗಡನೆ ರಂಗಂಪೇಟಿ ಕಡಿಗ್ಹೋಪ ದಾರಿಯಂ ।
ಹಿಡಿದ್ಹೋಗಿ ಕ್ರಯಸತ್ಯ ನುಡಿದೊಜ್ಜಿಗೊಂದು ಹಣ
ಕೊಡುವಿರಾದರೆ ಲಾಭವು ॥

೬೦

ಮುದದಿ ಕೊಟ್ಟಪನೆಂಬುವದಕವರೊಡಂಬಟ್ಟು ।
ಸದಯ ತೂಗೆನೆ ತೂಗೆ ಹದಿನಾರು ಮಣವಾಯ್ತು ।
ಅದರ ಬೆಲೆಗೊಂಡು ಮತ್ತದೆಯಂಗಡಿಗೆ ಪೋಗಿ
ಮೊದಲಿನವನೊಳಗೆಂದನು ॥
ಸದುಗೃಹಸ್ಥ ನಿನ್ನ ಬೆಲ್ಲದ ಧಾರಣೆಯ ನಿಜ ವ ।
ಣೆಗದ ಮೇಲೊಯ್ದು ತೂಗಿದರೆ ಪೇಟೆಯೊಳು ಬಂ ।
ಮದು ಸಮಾಕಾರಣದಲಿದು ಪ್ರಮಾಣತಿಕೆ ಸೈಯ್ಯ
ವರಿಂದ ಮತ್ತೆ ಬಂದೆ ॥

೬೧

ನಾಚುತವ ಪದಕೆ ಹಣೆಯ ಚಾಚುತಾಡಿದನೆನ್ನ ।
ನೀಚತನಕೆಣೆಯೇಂ ಸದಾಚಾರ ನಿನ್ನ ಘನ ।
ಲೋಚನದಿ ಕಂಡೆನಾಂ ಕಾಚೆಂದು ತಿಳಿದೆ ನೀನೂಚ
ಮಣಿ ನಿಜವಾದೆಲಾ ॥
ಛೀ ಛೀ ಸುಡಲೆನ್ನದೀ ಪೇಚಕನ ಗುಣವೆಂದು ।
ವಾಚಿಸುತ ತೂಗುತದರಾಚೆ ವಾರದ ಬೆಲ್ಲ ।
ಸೂಚಿಸುತಲೆರಡು ಮಣವಾ ಚೀಲದೊಳಗಿಟ್ಟು
ಮಾಚಿದುದು ಮನ್ನಿಸೆಂದು ॥

೬೨

ಮುದದಿ ಕಳುಪಲ್ಲಂದು ಮೊದಲು ನಿಮಗಿತ್ತ ಗುಡ ।
ಪದಿನಾಲ್ಕೆ ಮಣವಂತೆ ಯಿದರೊಳಗೆ ತೂಗಿ ಹಾ ।
ಕಿದನೆರಡು ಪೆಟ್ಟಿಗದರಿಂದ ನೀವೆಕೊಳುವದು ಯೆನಲು
ತೂಗಿಕೊಳಲು ॥
ಪದಿನಾರ ಮಣವಾಗಲದುಭುತದುಭುತಮಿವನು ।
ವದಿಸಿದು ವಿಚಾರಿಸಲು ತೊವಳಲ್ಲವೀ ಮಾತು ।
ಮದನಾರಿ ಬಲ್ಲನೆಂಬುತಲಿ ಕೊಂಡಾಡಿ ಜನ ಸದನ
ಸದನಕೆ ಪೋದರು ॥

೬೩

ಸತ್ಯಕ್ರಯ ವಿಕ್ರಯ ನಿಮಿತ್ಯ ಕೆಲದಿನ ಕಾಲ ।
ವೆತ್ಲೇರಿ ಕೊಳುತ ಮಾರುತ್ತೆರಡು ಪೇಟೆಯೊಳ ।
ಗಿತ್ತಲಾಭಾದುದಂನಿತ್ತು ತಾತನಕೈಗೆ ಚಿತ್ತ
ಶುದ್ಧಿಯೊಳಿರುತಿರೆ ॥
ಮತ್ತೊಂದುದಿನ ಜಂಗಮೋತ್ತಮೋರ್ವಂ ಗ್ರಾಮ ।
ದತ್ತ ಬರೆ ಬಿನ್ನಹಂ ತೆತ್ತವರ ಪಂಗ್ತಿಗರ ।
ವತ್ತು ಜನಮಾಚಾರ ಯುಕ್ತರಿಗಮಂತ್ರಣೇ
ಳುತ್ತಡಗಿಯಂ ಮಾಡಿಸಿ ॥

೬೪

ಎಲ್ಲರಂ ಕರಸಿ ಮನೆಯಲ್ಲಿ ಜಂಗಮಪಾದ ।
ಪಲ್ಲವೋದಕ ಸಲಸಿ ನಲ್ಲಮೆನಲೆಡೆ ಮಾಡಿ ।
ಕೊಳ್ಳಿರೆಂದರಗಿ ಶಿವೆಯೊಲ್ಲಭ ಪರಾಕೆಂದು ಮೆಲ್ಲ ।
ನಾರುಚೆ ಜಿಂಪ್ವೆಗೆ ॥
ಸಲ್ಲಿಸುವ ಪೊಳ್ತುಕಹಿಪಲ್ಲ್ಯವೆಂದರಿದಾರು ।
ಮೆಲ್ಲದಿರಲೆದ್ದೆರಗಿ ಸಲ್ಲಲೆನಗೆನ್ನುತಘ ।
ದಲ್ಲಣಣೆಯಪ್ಪ ಕೈಕೊಳ್ಳುತಲಿ ತೋಷದಿಂದೆಲ್ಲಾ
ಯತಂ ಮಾಡಿದಂ ॥

೬೫

ಅರಿಯದೆಸಗಿದ ಪಲ್ಲ್ಯಕಿರುವ ಕಹಿಯಣಿಸದಲೆ ।
ವರಪ್ರಸಾದವಿದೆನ್ನುತರಿದುಂಡ ಮೇಲಿವಗೆ ।
ಸರಿ ಪೋಲ್ವರೊಳರೆ ಸಚ್ಚರಣ ಭಾಪೆನ್ನುತಲಿ
ಚರ ಮುಖ್ಯರೈದೆ ಪೊಗಳೆ ॥
ಶರದಿ ಮಥನದೊಳೊಗೆದ ಗರಳ ಶಂಕರ ತನ್ನ ।
ಕೊರಳೊಳಗೆ ತಾಳ್ದುದಚ್ಚರಿಯೆ ಶಿವ ಶಿವಮಿವನು ।
ದರದಿ ಕಹಿಕೊಳುತ ಲೋಕರಿಸದುದೆ ಪಿರಿದೆಂದು
ನೆರವಿಜನ ಕೊಂಡಾಡಲು ॥

೬೬

ಈ ಸುದ್ದಿ ಕೇಳ್ದ ಮುಕಾಸಮುಳ್ಳವರು ಜ್ವರ ।
ಕಾಸಿದವರಂಗಕ್ಕೆ ಕೂಸಿನಾಪೇಕ್ಷಿತರು ।
ಏಸು ರೋಗಗಳಿಂದ ಕ್ಲೇಶಿತಾಗಿರುವ ಬಹುದೇಶ
ದೇಶದ ಜನಗಳು ॥
ಬೇಸರದೆ ಬಂದಿವರ ಕೈಸೋಂಕಿಸಿಂದೆಲ್ಲ ।
ಲೇಸು ಪಡಕೊಂಡು ಘನ ತೋಷದಲಿ ಧವಸ ಧನ ।
ರಾಸಿ ಕೊಡಲದರಿಂದ ದಾಸೋಗ ಮಾಡುತ ವಿಲಾ ।
ಸದೊಳಗೊಪ್ಪಿರುವನು ॥

೬೭

ಹೀಗಿರಲು ಚರನೋರ್ವ ನಾಗೂರದವನು ದಾ ।
ಸೋಹಕ್ಕೈತಂದು ಮದುವೀಗೆ ಮನೆಯಲಿ ಮಗನ ।
ಮೂಗುತಿಯನಿಡದೆ ಲಗ್ನಾಗೊಹಾಗಿಲ್ಲ ನೀಬೇಗ
ಕೊಡು ಕೊಡದಿರ್ದೊಡಾ ॥
ರೋಗಣಿಯು ಗೈಯ್ಯನೆನಲ್ಕಾಗಾಗಲೆಂದಾಡು ।
ತಾ ಘಳಿಗೆ ಚಿನ್ನವರದಾಗಾರಕ್ಕೈತಂದು ।
ಕೂಗಿ ಕೇಳಲು ಪೇಳಿಗೆ ಬೀಗತೆರದತಿ ಭರದಿ
ಕೈಗಿತ್ತಳಣಿಯಪ್ಪಗೆ ॥

೬೮

ತಾನೈದು ಮನೆಗೆ ಸನ್ಮಾನಿಸಿತ್ತಾ ಚರಗೆ ।
ಸ್ನಾನಭೋಜನಗೈಯ್ಸಿ ತಾಣಕಪ್ಪಣೆ ಕೊಟ್ಟಾ ।
ಸಾನಂದದಿರುತದಿನ ಮಾನೊಂದು ಮಾಸಾಗಲೇ
ನೊಂದು ಗೈಯ್ಯದಿರಲು ।
ಧೇನಿಸುತನತ್ತಿತ್ತ ಮಾನಿನಿಯು ಮನಸಿನೊಳ ।
ಗೇನಾಯಿತೀ ಬುದ್ಧಿ ನಾನ್ಯಾತಕಿತ್ತೆನವ ।
ಗೇನ ಹೇಳುವೆ ಪತಿಗೆ ಪ್ರಾಣಕೊಳ್ಳುವನೆನುತ ಕ್ಷೀಣ
ದಿನದಿನಕಾದಳು

೬೯

ಈಸು ದಿನ ನಡೆದುಕೊಂಡಾಸೆಯಣೆಸನಲೆ ವಿ ।
ಶ್ವಾಸಘಾತಕದಿಂದಲಾ ಶರಣ ನಮನಿಗಿತು ।
ಘಾಸಿ ಮಾಳ್ಪರೆ ತನ್ನ ಕೂಸಿನಂತಿರುವರಿಗೆ ಹಾ ಶಿವನೆ
ಯಂದು ಸುಯ್ದು
ಏಸೊಂದು ಬಳಿಕೆ ಪ್ರಾಣೇಶನೊಳಗಿರ್ದರಿಂ ।
ಮೋಸಾದೆನೆಂದು ತನು ಶೋಷಿಪಳೆ ಕಂಡು ಪತಿ ।
ಯಾ ಸುದ್ದಿಯಂ ತಿಳಿಯದೌಷಧಂ ಕೊಡಿಸುತಿರೆ
ಲೇಸಾಗದೆಳ್ಳಿನಿಸಿತು

೭೦

ಅನಿತರೊಳಗೈದಬ್ದ ದಿನವಾಗೆನತ್ತೊಯ್ದವನ ।
ಸೊಸಿಯು ಸಂಸಾರಕನುಕೂಲವಾಗಿ ಮನೆ ।
ತನದಿರಲು ಕೈಯೊಳಗೆ ಹಣವಿಲ್ಲದಾದರಿಂ ಘನ
ಕಷ್ಟವೊದಗುತಿರಲಾ
ಜಿನಸು ಕೊಂಡೊಯ್ದೈಯ್ಯ ಚಿನಿವಾರನಿಗೆ ಕೊಡಲಿ
ಕನುಮಾನಪುಟ್ಟೆ ಬೆಲೆತನಗಂದು ಮತ್ತೊಬ್ಬ ।
ಮನುಜಗಿದು ತೋರಿ ತರುವೆನು ಭರದಿಯೆಂದಾಡಿ
ಮನಿಗ್ಹೋಗಿ ತನ್ನ ಸತಿಯ

೭೧

ಕೂಗಿ ನಿನ್ನಯ ಪಿಟಕ ಬೀಗದಕ್ಕೈ ಕೊಡುಯೆಂದ ।
ಡಾಗವಳು ತನ್ನಾಯು ನೀಗಿತೆಂದರಿದು ತಲೆ ।
ಬಾಗಿ ಕೊಡಲದು ಕೊಂಡು ಬೀಗ ತೆರೆದೀಕ್ಷಿಸಲು
ಮೂಗುತಿಯು ಒಳಗಿರ್ದುದು ॥
ಆಗುತಾಶ್ಚರ್ಯಮಿದು ಹ್ಯಾಗೆ ಮಾಡಿರಬಹುದು ।
ಕೈಗೆಲಸಪೊಸತೆಂದು ತೂಗಿ ಮುತ್ತೈಣಿಸೊರಿಗೆ ।
ಯಾಗಿರಲು ಸಮನಿದಂ ನಾಗಭೂಷಣ ಬಲ್ಲನಾಗಿ
ಮರ್ತ್ಯರಿಗರಿಯಲು ॥

೭೨

ಸಾಧ್ಯವಲ್ಲೆನುತಾ ಸಾಧ್ವಿಯಂ ಕರಿಯಲವ ।
ಳೆದ್ದು ಒಂದೆರಡು ನತ್ತಿದ್ದುದಂ ನೋಡುತಾ ।
ಸುದ್ದಿಯೇನೆನೆಲಿಕೀ ಚೋದ್ಯ ನೋಡೆಳ್ಳಿನಿತು
ಯಿದ್ದು ವಿಲ್ಲಿವಕಂತರಂ ॥
ತಿದ್ದುತಿವಗೈದವನ ಬುದ್ಧಿ ಗೆಣೆಯಿಲ್ಲೆನಲು ।
ಬುದ್ಧಿ ಯಾತರದೆನ್ನನುದ್ಧಾರಿ ಬೇರೆಂದು ।
ಇದ್ದ ಸಂಗತಿ ಪೇಳುತದ್ದಿ ಹರುಷದಿ ಮನಸಭೇದ್ಯ
ಮಹಿಮಿವನೆಂದಳು ॥

೭೩

ಹರದೆ ನೀ ಮೊದಲಿಗೆನಗರುಹದೀ ಸಂಗತಿಯ ।
ನೆರೆಚಿಂತೆಯಿಂದ ತನುಕೊರಗಿಸಲು ನಿನಗೆ ನಾಂ ।
ಪೊರಗಿಗನೆಯೆಂದು ನಿಬ್ಬರದಿಯಂಗಡಿಗ್ಹೋಗಿ ಚರಗೆ
ನತ್ತಿನ ಬೆಲೆಯನು ॥
ಹರುಷದಿಂ ಕೊಟ್ಟು ಕೈಗೆರಚು ಮೂಗುತಿಕೊಂಡು ।
ಶರಣ ಅಣಿಯಪ್ಪನಿಹ ವರಗೃಹಕೆ ಪೋಗಿ ಪದ ।
ಸರಸಿರುಹಕೆರಗಿ ನತ್ತೆರಡು ಮುಂದಿಟ್ಟು ನೀವಿರಿಸಿ
ಕೊಳಿಯೆಂದಾಡಲು ॥

೭೪

ಮೂಗುತಿಯ ಕೊಂಡು ನಾವೇಗೈಯ್ಯುವದೆಮ್ಮ ದಾ ।
ಸೋಗಕೇನಾದರುಂ ಕೈಗಡಂ ಋಣವು ಬೇ ।
ಕಾಗಿರ್ದ ಕಾಲಕ್ಕೆ ಸಾಗಿಸುವದಿಲ್ಲೆಂಬವಾಗು ನುಡಿಯದೆ
ಧನಿಕನೆ ।
ಪೋಗುನೀ ಮನಿಗೆ ಸುಖಿಯಾಗು ನಿನ್ನೊಲ್ಲಭಿಗೆ ।
ಆಗಿ ಸಂತತಿಯು ಸೌಭಾಗ್ಯ ಹೆಚ್ಚಲಿ ಮನವ ।
ದೀಗಿನಂತಿರಲೆಮ್ಮ ಮೇಗೆಯೀರ್ವರ ಮಮತೆ
ನಾಗಭೂಷಣ ಪೊರೆವನು ॥

೭೫

ಇನಿತಾಡುತೆರಡು ನತ್ತಿನ ಸಹಿತ ಕಳುಪೆವಗೆ ।
ಮನೆಗೆ ಸುಖಮಿರ್ಪ ಸಜ್ಜನರೆ ಕೇಳಿರಿ ನಾನು ।
ತ್ರಿಣೆಯನ್ಹೆಸರಿಲಿ ತಂದೆ ಧನವು ತಾತಂದಿವನ
ಕನಸಿನೊಳು ಕೊಟ್ಟು ಪೋದಾ ॥
ಘನತೆಯಾತರದು ಶಿವಋಣಿಯಪ್ಪ ಭಕ್ತರಿಗೆ ।
ನೆನಸಿನೊಳು ಕನಸಿನೊಳು ಜನರರಿಯದಂತವರ ।
ಮನೆಯೊಳಗೆ ತಂದಿತ್ತ ಮನುಮಥಾಂತಕನೆನಲು
ಅಣಿಯಪ್ಪ ಗೋಲ್ವರಾರು ॥

೭೬

ಗಾಂಪಜನರಾತನ ಪರಂಪರಿಯ ಮಹಿಮೆಗಳ ।
ಗುಂಪಿರಿದಸೂಯದಿಂ ಕುಂಪಟೆಯು ಗೈಯ್ಯುತಿರೆ ।
ತಾಂ ಪುರಂಬಿಟ್ಟು ಕಾಂಸಂಪಳ್ಳಿಗೈತಂದು ಯಿಂಪಾಗಿ
ಸೀಮೆ ಮೇಲೆ ॥
ಕೊಂಪಿವಂದೆಸಗಿದವ ಸಂಪಲ್ಲ್ಯ ಲವಣಾದಿ ।
ಸಂಪಾದನಂ ಗೈಯ್ಯುತರೆ ಪವಣು ದಾಸೋಹ ।
ದಿಂ ಪರಿಮರಿಸುತಲಿಪೊಂಪಾಥವಾರ್ಚಕರ ಹೊಂಪು
ಳಿಂದಿರುತಿರ್ದನು ॥

೭೭

ಆಯವಸರದಲಿ ದೇಶಾಯಿ ಕಾಂಸಂಪಲ್ಲಿ ।
ರಾಯನರಸಿಯನಾಮ ಐಯ್ಯಮ್ಮನೆಂಬುವಳು ।
ಲಾಯಕ್ಕೆ ತಾಡಮರದೇವಿ ಬನದೊಳಗಿಂದ ತಾಯೆಂದು
ನೇಮಕೊಡಲು ॥
ತಾಯೆ ನಿಮಗದರಿಂದಪಾಯ ಸಂಭವಿಸುವದು ।
ಸಾಯಲಟ್ಟದಿರೆಮ್ಮ ಕಾಯೆಂದು ಬೇಡುವರ ।
ಕೈಯೊಳಗೆ ಕೊಡಲಿ ಸಮುದಾಯಿತ್ತು ನಡೆನೋಳ್ಪೆ
ನಾಯಿ ಸಾಹಸಮೆನ್ನಲು ॥

೭೮

ಬೇಡ ಬೇಡಲೆ ತಾಯೆ ಬೇಡಿಕೊಂಬೆವು ನಿಮಗೆ ।
ತಾಡಮರ ಮಲ್ಲಿಯವು ನೋಡಿದರೆ ಸಾಕವರ ।
ಕಾಡುವದು ವರ್ಣನೆಯ ಮಾಡಬಾರದು ನಮಗೆ
ಆಡುಗಳು ಕುರಿಕೋಣವು ॥
ನೀಡುವರು ಕೊಂದನ್ನ ತೋಡುತೆಹ್ಣೊಳಿಗಿಯ ।
ಮಾಡುವರು ಮೇಣ್ತ್ರಾಮ್ರ ಚೂಡ ಟೆಂಗುಗಳನೀ ।
ಡ್ಯಾಡುವರ ಸಂಖ್ಯೆಲ್ಲ ನಾಡಜನ ತಪ್ಪಿಡರೆ ಕೇಡು
ಗೈಯ್ಯದೆ ಬಿಡದದು ॥

೭೯

ಬಸುರು ಬಾಣಂತಿಯಳಿ ಶಿಶುವು ಮುಪುಮಕ್ಕಳಂ ।
ಹಸುಮಕ್ಕಳಂ ಕರೆವ ಹಸುಗಳಂ ಮೈನೆರೆದ ।
ಶಶಿಮುಖಿಯರಂ ರತಿಯನೆಸಗಿದವರಾದಿ ಜನ ವಿಸರ
ದೊಳಗಾದಾದರು ॥
ಸಿಶಿಪಗಲು ಮುಚ್ಚಂಜೆ ನಸಕಿನೊಳಗಾದರಾ ।
ದೆಸಿಗೆ ಪೋಗರು ಪೋದರಸುಗೊಳದೆ ಬಿಡದವ್ವ ।
ಮಸಣಿ ಸಿಂಧುರದೇವಿ ಪೆಸರೆತ್ತಲಳಕುವರು
ಅಸಮ ಧೃತಿಯುತರೆಲ್ಲಿದು ॥

೮೦

ಸುಳಿದವರು ಸುಂಕೊಮ್ಮೆ ಕೊಳದೆ ಬಿಡದಾದೇವಿ ।
ತಿಳಿದು ಹಾವಿನ ತಲೆಯು ತುಳಿವದಲ್ಲೆ ನಲಿಕತಿ ।
ಮುಳಿದು ನಾಬರುವೆ ನೀ ಘಳಿಗೆ ನಿಮ್ಮೊಡನದಕೆ
ಕೊಲಲು ಕೈಕಾಲ್ಗಳುಂಟೆ ॥
ಹೊಲಿಯರಿರ ನಡಿರೆಂದು ಘಳಿಲನರುವತ್ತ ಜನ ।
ಗಳ ಕೂಡಿ ಬಂದುವಾ ತಳುವದಿರಿಯೆನಲು ಕೈ ।
ಗಳನೆತ್ತಿ ಪೊಯ್ಯುತಿರೆ ಚಲಿಸದಿರೆ ಕರ ಕೊಡಲಿಗಳ
ಸಹಿತಸ್ತಬ್ಧಾದರು ॥

೮೧

ಆಗಲದಕ್ಕೈಯ್ಯಮ್ಮ ಮೂಗಿನಲಿ ಬೆರಳಿಟ್ಟು ।
ಹೇಗೆ ಮಾಡುವೆನೆನ್ನಗಾಗದವರಗಣಿತರು ।
ಪೋಗಿ ಸರಕಾರದೊಳು ಕೂಗಿದರೆ ಇವರಾಪ್ತರೇ
ಗೈಯ್ಪೆನಯ್ಯೊ ಶಿವನೆ ॥
ನೀಗಲಿ ಪರಸುತನ್ನ ಜಾಗದೊಳು ವೈರಿಗಳು ।
ನೇಗಿಲಂ ಪೊಡಿಸಿ ಬೆಳೆಯಾಗಿ ಸದೆಬಡೆರೈಯ್ಯೋ ।
ಈಗಾರ ಮೊರೆಪೊಕ್ಕಡಾಗುವದಿದೊಳಿತೆಂದು ಬೇಗೆ
ಯೋಚನೆಗೈಯ್ಯುತಿ ॥

೮೨

ಭರದಿ ಬಂದಣೆಯಪ್ಪ ಶರಣನಂ ಕಾಣುತಲಿ ।
ಚರಣಕಾನತಳಾಗಿ ಪರಿಪರಿಯು ಪೊಗಳುತಿರೆ ।
ಹರದೆ ನೀನಾರಿಲ್ಲಿ ಪರಿತಂದ ಕಾರ್ಯವೆನಗರುಹು
ಭಯಬಿಡು ಯೆನ್ನಲು ॥
ಕರಮುಗಿಯುತೀ ಪಳ್ಳಿ ಥೊರೆಸಾನೆ ನಾದೇವ ।
ತುರಗ ನಿಲಯಕೆ ತಾಡಮರ ಕಡಿಸ ಬಂದೆನ್ನ ।
ಆರವತ್ತು ಜನರಂತ್ಯಜರುವಂದೆ ಪೊಳ್ತು ಮೈಮರೆದು
ದರುಹಲು ಬಂದೆನು ॥

೮೩

ಆಡಲಮು ಕೇಳುತಾ ತಾಡಮರಗಳನ್ನೆಲ್ಲ ।
ನೀಡುತೆಮಗೊಂದು ಮಠಮಾಡಿ ಕೊಡಲೊಪ್ಪಿದರೆ ।
ನೋಡುವೆನು ಬಂದೆನಲು ಬೇಡೆಂಬರಾರ್ಬಯಕೆ
ಯೀಡೇರಿಸುವೆ ನಿಮ್ಮಯ ।
ಗಾಥ ನಡಿಯನೆ ಚರರಧೂಡ ಪಾದೋದಕಂ ।
ಮಾಡಿ ಕೈಯೊಳಗೆ ಕೊಂಡೋಡಿ ಬಂದೆತ್ತಲ ।
ಲ್ಲಾಡದವರಂ ಕಂಡು ಮೂಡಿದಯ ಮಸಣಿಗೆಲೆ
ಖೋಡಿಕ್ಕೆ ಬಿಡಿಯಂದನು ।

೮೪

ಬಡಜನರ ಗೋಳ್ಕೊಂಡು ಪಿಡಿದು ಕೈಕಾಡುವರೆ ।
ಬಿಡುಬಿಡೆಲೆ ರಂಡೆನೀ ಬಿಡದಿರ್ದೊಡೀಗೆ ನಾಂ ।
ಪೊಡೆದು ಥೂಳೋದಕದಿ ಸುಡುವೆ ನಿನ್ನಂಗಮೆನೆ
ಗಡಗಡನೆ ನಡುಗಿ ಮಸಣಿ
ಸಡಲಿಸಲು ಕೈಗಳಂ ಕೊಡಲಿಯಿಂದಲ್ಲೊಂದು ।
ಗಿಡಮುಳಿಯದಂತೆಲ್ಲ ಕಡಿ ಕಡಿದು ಭಂಡಿ ಮೇ ।
ಲಿಡಿಸಿ ಕಾಂಪಂಪಳ್ಳಿಗೊಡತಿಯಿಂ ದಾಸೋಹದೆಡೆಗೆ
ತಾತರಿಸಿಕೊಂಡಂ

೮೫

ತಿಳಿದೆವ್ವಿರಿಯರ ಮುಖದಿಗೊಳಿಯ ಖೇಟದ ಸೀಮೆ ।
ಯೊಳಗಿರುವ ಲಕುಮಿಯಂ ನಿಲಯದುತ್ತರಗಾವಿ ।
ಸುಲಭ ವೀರಣ್ಣ ಬಾಸುಳಮೇಳ ತೆರಪೂಡಿಯೆ
ತಳಮಳಿಸುತೋಡಿ ಪೋಗಿ
ಇಳೆಯೊಳಗೆಯುರಳಿ ಬೋರಲ ಬಿದ್ದವಳ ಕಂಡು ।
ಸಲೆ ಬಡಿಯುತಿರಲಂತೆಯುಳಿಯೆ ಬಯದಿಂ ।
ದಲಿ ಮುಕುಳಿಗೆ ಪೂಜೆಯ ಮಾಳ್ಪ ಹೊಲ ಬರಿದೆವಿಂ
ಕಂಗಳದಿಂದ ಕಂಡೆವಿದನು

೮೬

ಹಿಂದೆ ಕೇಳ್ದೆವುದಾಸ್ಮಿ ತಂದೆಗಳು ಮಾರಿ ಕೈ ।
ಯಿಂದ ಕಸಗೂಡಿಸಿದರೆಂದು ಈ ಮಹಿಮೆ ಕ ।
ಣ್ಣಿಂದೆ ನೋಡಿದೆವು ನಾವಿಂದು ಭಾಪೆನು ತೆಲ್ಲ
ಮಂದಿ ಕೊಂಡಾಡುತಿರಲು
ಅಂದತೆರನ್ನೈಯ್ಯಮ್ಮ ಮಂದಿರಂಗೈಸಿಕೊಡೆ ।
ಬಂದಜನ ಕುಣಿಸಿ ಮನ ಬಂದುದಂ ಕೊಟ್ಟು ಸಾ ।
ನಂದದಿಂ ದಾಸೋಹಕೊಂದೂನ ಮಿಲ್ಲೆನಿಸುತೆಂದಿ
ನೋಲಿರಲೊಂದಿನಂ

೮೭

ಚಾರು ದಾಸೋಹಕ್ಕಪಾರು ಕಾಳುಗಳು ಕೈ ।
ಸೇರಿಸಲಿಕೆನೆ ಚಿತಾಪೂರಕೈತಂದಲ್ಲಿ ।
ಯೋರಣದೊಳಿರಲೊಂದು ವಾರ ಪುಟ್ಟಯಜಾತ್ರೆ
ಕಾರಣದಿ ಜನರೆಲ್ಲರು ॥
ಸೇರಿನಾಗಾಯೆಂಬ ಊರಿಗ್ಹೋಗಿರಲಕೀ ।
ಮಾರಾರಿ ಶರಣನಾಚಾರ ಮುಗಿಸಲು ಪೊಳ್ತು ।
ಮೂರುಘಳಿಗುಳಿಯಲಿಕೆ ಮೋರೆಕೆಡಿಸುತೆ
ಜನರು ಸೂರ್ಯನಸ್ತಕೆ ನಡಿಯಲು ॥

೮೮

ಈ ತಳದಿ ಘನಕಾಟ ಭೂತಗಳದೈದೆ ನಸು ।
ರಾತುರಿಯು ಆದರತಿ ಭೀತಿ ನಮಗೆನೆ ಕೇಳು ।
ತೀತರಂಜಿಕಿಯುಣ್ಣಿ ರಾತುರಂಬಡದ್ದೆ ದಿನನಾಥ
ಮುಳುಗಿದನಾದೊಡೆ ॥
ಮಾತೇನು ಶರಣರ ನಿಕೇತನಕೆ ನೀವ್ ಪೋಪಿ ।
ರೀತರಣಿ ಬೆಳಕಿನೊಳು ಶಾತದಿಂದೆಂದಾಡಿ ।
ಶಾತಪತ್ರಾಪ್ತಗೆ ಪುರಾತನರ ಆಣೆಯನಲಾತ
ತಡೆದನು ಗಮನನಮಂ ॥

೮೯

ಕಂಡು ಜನರದಕೆ ಮುದಗೊಂಡು ಸಲೆಸಾವಧಾ ।
ನುಂಡೂರು ಸೇರ್ವನಕ ಚಂಡಕರನೆಂಟು ಘಟ ।
ಭಂಡಿನಿಲಿಸಿರ್ದುದಕೆ ಕೊಂಡಾಡಿ ಶರಣನಿಂತೊಂದಾಣೆ
ಯೆನಿಸಲಾಗ ॥
ಪುಂಡರಿಕಾಪ್ತ ಮೊರೆಗೊಂಡನಸ್ತಾಚಲಂ ।
ಬಂಡುಣಿಗಳ್ಹಕ್ಕಿ ಬಿಪ್ಪಂಡಡಗಿನಕ್ಷತ್ರ ।
ಹಿಂಡುಗಗನದೊಳೆಸಿಯೆ ಕಂಡವರ ಕಣ್ಗೆರಡು
ಘಂಟೆ ನಿಶಿಯದೆ ನಿಮಿಷದಿ ॥

೯೦

ಹರಿಹರ ಕವೀಶ್ವರಂ ಬರೆದೋಹಿಯೊಳಗೆ ಸ ।
ದ್ಗುರು ವಿರೂಪಾಕ್ಷ ಸುಂದರನಾಮ ಮತ್ತೆ ಬಾ ।
ಚರಿಸೋನ್ನಮಃ ಶಿವಾಯರಿದರಿದು ಲಿಖಿಸುತಲಿ
ಧರಣೀಶರಿಗೆ ಲೆಖ್ಖದಾ ॥
ಪರಿಗಣಿತಕೊಡುವಾಗ ಸರಸಿಜಾಪ್ತನುಮುಳುಗು ।
ತಿರೆ ನೋಡುತಿಟ್ಟು ಪುರಹರನಾಣೆ ತಡೆದುದಂ ।
ಹಿರಿಯರಿಂದರಿದೆವಚ್ಚರಿ ಕಂಡೆಂವಿಂದೆಂದು ನೆರವಿಜನ
ಕೊಂಡಾಡಲು ॥

೯೧

ಪರಿಪರಿ ಪವಾಡಗಳ ವಿರಚಿಸುತಲಪ್ಪಣೆಯಪ್ಪ ।
ಚರಚರಣದೊಳಗೆ ಸುಸ್ಥಿರಮುಕ್ತಿ ಪಡೆದ ।
ಪುರಹರಗೆ ಭಕ್ತರನಾಡೆ ಪ್ಹೊರೆವಕಾರ್ಯಲ್ಲದೇ
ನಿರುವದೈ ತಿಳಿದುನೋಡೆ ॥
ಪುರಜನರು ಕೇಳಿ ಬಲು ಹರುಷದಿಂ ಮನೆಗಳಿಗೆ ।
ತಿರುಗಿ ಧನಿಕನ ಸಹಿತಲಿರದೆ ಪೋಗಲು ಶರಣ ।
ಚರಲಿಂಗ ಪೂಜಿಸುತ ನಿರುತ ದಾಸೋಹದೊಳ
ಗಿರುತಿರುವನೆಂಬಲ್ಲಿಗೆ ॥

೯೨

ವರಪುರದ ಶಿವಲಿಂಗ ಶರಣಬಸವನ ಚರಿತೆ ।
ಗುರುಬಸವಾರ್ಯ ಪದಸರಸಿರುಹ ಲೀನಮಧು ।
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ॥
ವಿರಚಿಸಿದನೋದಿಸುವ ಬರೆದಗೋದುವಗೆ ಪರ ।
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ ।
ದೊರಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ದಿಗ್ಸಂಧಿ ರುಗ್ಬಂಧಿಯು ॥

ಸಂಧಿ ೧೦ ಕ್ಕೆ ಪದ ೮೫೮ ಕ್ಕಂ ಮಂಗಳಂ.



ಶ್ರೀ ಶರಣಬಸವೇಶ್ವರ ಪ್ರಸನ್ನ

# ಹನ್ನೊಂದನೆಯ ಸಂಧಿ

ಸೂಚನೆ॥ ಶಪಥಿಟ್ಟು ಗರ್ಭನುಂ ತಡೆದು ಅವರಾದಿಯ ।
ರುಪಚಾರ ಕೈಕೊಂಡು ಬೆಳಗುಂಪಿಗಿರಿಪುರದೊ ।
ಳಪರಿಮಿತ ಮಹಿಮೆಯುಂ ವಿರಚಿಸುತ ನಡೆತಂದನುಪಲನಗರಕೆ ಶರಣನು ॥

೧

ಶಿತಿಗಳಂ ಶಿವಸದಾಗತಿ ಮಿತ್ರರವಿ ಭಗಣ ।
ಪತಿನಯನತ್ರೈಪುರ ವಿಜಿತ ಕಾಮಕಾಲ ಸಂ ।
ಹೃತಗಜಾಜಿನ ಚೇಲಧೃತ ಶೂಲಸುರಪಜಾಚ್ಯುತ
ಪೂಜಿತಾಂಘ್ರಿಕಮಲಾ ॥
ಕ್ಷಿತಿಧಾರುಣೇಂದ್ರಾತ್ಮಸುತಿ ಮನಸರೋಜದಿನ ।
ಪತಿ ಶಂಭುಧರಭಸಿತ ನತಕಲ್ಪ ಜೂ ಸಂಜ ।
ನಿತಪಾಹಿ ಶಿವಲಿಂಗ ಧೃತಕರ ಕುರಂಗ ಶೃತಿತತಿ
ವಿತತ ವರ ತುರಂಗಾ ॥

೨

ಇಂದುಧರ ರೂಪು ಚರಬಂದ ಭರವಮ್ಮಿತ್ತಿ ।
ನಿಂದನಿಲವರಿದು ಸಲಿವಂದಿಸುತಲವರು ತನ ।
ಗಂದುದ ಹಸಾದಮೆಂದರಿದು ತೃಪ್ತಿಯ ಬಡಿಸು
ತೊಂದೂನಮಿಲ್ಲದಿರಲು ॥
ಇಂದುಮುಖಿ ಮಾದಮ್ಮನೊಂದು ದಿನ ಸ್ತ್ರೀಧರ್ಮ।
ದಂದರುಕುಮತಿಯಾಗಿ ಮಿಂದು ನಾಲ್ಕನೆದಿವಸ ।
ಪೊಂದಿಪತಿ ರತಿಸೌಖ್ಯದಿಂದ ಗರ್ಭಂ ಧರಿಸಿ ಸಂದ
ತೋಷದೊಳಿರುತಿರೆ ॥

೩

ಬಳಿಕಾಗಲೇಳು ತಿಂಗಳ ಗರ್ಭಕೊಂದು ಪಗ ।
ಲೊಳಗೆ ಮನೆಗೆಲಸದಿಂ ಬಳಲಿ ಪಾಸಿಕಿಮಾಡಿ ।
ಮಲಗಿರಲು ಮಾದಮ್ಮ ಸಲಸಲಿಕೆ ಚರಬಂದರೊ
ಲಿತಾಯಿತೆಂದು ಶರಣಾ ॥
ತಳುವದುಣಿಸೆಂದ್ಹೇಳಲಲಸುತೆದ್ದುಣ ನೀಡಿ ।
ಕಳುಹಲದು ಕಂಡು ಎಲೆಯಲೆಗೆ ನಿನಗಿನಿತೇತ ।
ರೊಲವು ಜಂಗಮದೊಡನೆ ಛಲವೆ ನುಡಿಗಡನೆಂದು
ಮುಳಿದು ನುಡಿಯಲು ನಡಗುತೆ ॥

೪

ಕಾಂತನಾಲಿಸು ಗರ್ಭವಾಂತಡಾಯಸಗೊಳ್ಳ ।
ದಂತಿರುವರಾರು ವಿಶ್ರಾಂತಿಗೊಳ್ಳುವ ಪೊಳ್ತು ।
ಶಾಂತ ಜಂಗಮು ಬಂದಪಾಂ ತಡದೆನಸುವೆನ್ನದೇಂತಪ್ಪು
ಸದಯಾನಿಧೆ ॥
ಪಿಂತೆಂತು ಬಸುರಿರ್ದಡಿಂತಾದ ಬಳಿಕ ನೀ ।
ಸಂತತಿಯು ಪಡದವೇಲೆಂತಹುದೊ ಆದರಿಂದ ।
ಮುಂತೆಮ್ಮ ದಾಸೋಹ ಕಂತಪ್ಪುದ್ಧಡಿಯದಿರು
ಕಂತುಹರನಾಣೆನ್ನಲು ॥

೫

ಕೂಸುಪೊಟ್ಟೆಯೊಳಿರಲು ಮಾಸವಿಪ್ಪೊತ್ತೊಂದು ।
ಕ್ಲೇಶದಿಂ ಸತಿಯುಳಾಯಾಸ ಪಡುತಿರಲೊಂದು ।
ವಾಸರದಿ ಶರಣನ ನಿವಾಸವಂ ಕೇಳುತಲಿ ದೇಶಿ
ಕೋರ್ವಂ ಬಂದನು
ಆ ಸಮಯ ನಮಿಸಿ ಶರಣೇಶನೊಳಪೋಗೆ ಸಂ ।
ತೋಷದಿಂ ಮಾದಮ್ಮ ಪೋಷಿಸೆಂದೆರಗಲಿಕಿ ।
ದೇಸುದಿವಸದ ಗರ್ಭವೈಸೆ ತಿಳಿಸಮ್ಮಯನಲಾ ಸುದ್ದಿ
ಯಂ ಪೇಳ್ದಳು ।

೬

ಕೇಳಿ ಜಂಗಮವು ನಸುತಾಳೆನ್ನುತಾಡುತಾ ।
ಮೇಲೆ ಕರುಣಂ ಪಡೆವಕಾಲದೊಳು ಸಾಷ್ಟಾಂಗ ।
ಬೀಳಲಿಕೆ ಶರಣಪ್ಪಗೇಳೆನ್ನದಿರಲು ದಯಾಶಾಲಿ
ತಪ್ಪೇನೆನ್ನಲು
ಹೇಳಲೇಂ ಭಕ್ತಜನ ಮೌಳಿ ಶಿವಶರಣರಿಗೆ ।
ಮೇಲಾದುದೇಂ ಗರ್ಭಪಾಳು ಮಾಡುವದೆನ ಕೃ ।
ಪಾಳು ಜಂಗಮಕುಣಿಸಲಾಲಸ್ಯ ಮಾಳ್ಪದಿದು
ಶೀಲವೇಂ ಸತಿಗೆಂದನು

೭

ಹಿಡಿದವಸ ಕದ್ದವಗೆ ಬಡಿದೊಮ್ಮೆ ಗಲ್ಲಕ್ಕೆ |
ಬಿಡುವದಲ್ಲದೆ ತಲೆಯಕಡಿಸುವರೆ ಶರಣಪ್ಪ |
ಮೃಡಕೊಟ್ಟ ಸಂಪದಂ ಕೆಡಿಸುವರೆ ಮತಿಯುತರ
ಗಡಣೆ ಸರಿಯಲ್ಲೆನುತೆ ||
ಹಡೆಯುಲು ಸಿರೂಪವಂ ಕೊಡುಯಂದು ತೊಂಡಾಣೆ |
ನುಡಿಸಿ ಅಪ್ಪಣೆ ಕೊಡಲು ಗಡನೆದ್ದು ಕರುಣವಂ ಪಡ |
ಕೊಂಡು ಸಲಿಸುತಾಮೃಡ ಜಂಗಮದ ಶೇಷ ಕಡು
ಸಡಗರದೊಳಿರುತಿರೆ ||

೮

ಆ ರಾತ್ರಿಯೊಳಗೆ ಸುಕುಮಾರನಂ ಪಡೆದಳಾ |
ನಾರಿಮಣಿ ತತ್‌ಕ್ಷಣಾಚಾರ್ಯರಂ ಕರಿಸುತಲಿ |
ಚಾರು ಶರಣಂ ಲಿಂಗಧಾರಣಂಗೈಸಿ ಪದವಾರಿಯಂ
ನೀಂಟಿಸುತಲಿ |
ಆರೋಗಣೆಯ ಗೈಸಿ ಭೂರಿದಕ್ಷಣೆಯು ಚರ |
ವಾರಕಿಡುತಲಿ ಕಳುಹುತಾರೆರಡನೆಯದಾದ |
ವಾರದೊಳು ಪೆಸರಿಡುವ ಕಾರಣದೊಳಮೃತಾನ್ನ
ಊರೆಲ್ಲ ಜನಕುಣಿಸುತೆ ||

೯

ಗುರುಲಿಂಗ ಜಂಗಮೆಂಬುರು ನಾಮವಿಟ್ಟು ಘನ |
ಹರುಷದಿಂದಾಸೋಹನೆರೆ ಮಾಡುತಿರಲೊಂದು |
ಇರುಳು ಕನಸಿಲೆ ಬಂದು ಪುರಹರಂ ಪೇಳಿದನು
ಶರಣಪ್ಪ ಕೇಳು ನಿನ್ನ ||
ತರುಣಿಯುಂ ತರುಣನಂ ಕರೆದೊಯ್ವೆನಾಸಿಲ್ಲಿ |
ಇರಬೇಡ ನೀನುಪಲಪುರಕ್ಹೋಗು ನಿನ್ನಿಂದ |
ಪರಿಪರಿ ಪವಾಡಲ್ಲಿ ಜರುಗಬೇಕೆಂಬುದಾಗಿರುವ
ದೆನಲೆಚ್ಚತ್ತು ತಾ ||

೧೦

ಸಸಿನೆಯಾಯ್ತೆಂದು ದರಹಸಿತಮುಖನಾಗಿ ಸಂ |
ತಸದಿಂದ ದಾಸೋಹನೆಸಗುತಿರಲೊಂದು ದಿನ |
ಶಿಸು ಸಹಿತ ಸತಿಲಿಂಗ ವಶಳಾದುದರಿದು ಜನ
ನಿಸರವಾಗೈತೆರುತಲಿ ||
ನಸುಯೋಚನಂ ಗೈಯ್ಯದಸಮ ಶರಣನ ನೋಡಿ |
ಪೊಸತಿವನ ಧೃತಿಯೆನ್ನುತುಸುರಿ ಕಳವಳಿಸಿ ಶೋ |
ಕಿಸುತ ತಮತಮಗೆ ಹಾ ಶಶಿಧರನೆಯೆಂದು
ನಿಡಿದುಸುರಿಟ್ಟು ಗೋಳಿಟ್ಟರು ||

೧೧

ಅಳುವವಂ ಕಾಣುತಿಲ್ಲುಳಿವರಾರ್ನಿಮಗಿನಿತು |
ತಿಳಿಯದೇಂ ಜಗದಿ ಕಂಗಳದಿಂದ ಕಾಂಬನಿತ |
ಕಳವುಂಟು ಸತಿಸುತರು ನಿಲಯಹಯ ಹಸುಕ್ಷೇತ್ರ
ಫಳಿಸಿರ್ದ ಧನವೆಲ್ಲವು ||
ಸುಳಿಗಾಳಿ ದೀಪ ಸಲ್ಲಲಿತೇಂದ್ರಚಾಪ ಮೇ |
ಘೆಳೆಮಿಂಚು ಶರಧಿ ಬೊಬ್ಬುಳಿ ಹೊಂಚು ಪುಲ್ಲಾಗ್ರೆ |
ದೊಳಗೆಸೆವಪನಿಯು ಮೃಗಜನಜಲವಲಿಪಿಯಂತೆ
ಸಲೆ ವಿಚಾರಿಸಲೆಂದನು ||

೧೨

ನಿಗಮದೊಳು ನೆರೆದ ಜನರಗಲಿ ಪೋದೊಲ ತಮ್ಮ |
ನಗರದತ್ತಲುನೊಂದೆನಗದಿ ಸಂಜೆಗೆ ನೆರೆದ |
ಖಗನಿಕರಮೆದ್ದು ಬೆಳಗಿಗೆ ಕಂಡ ಕಂಡ ಕಡೆ ಚಿಗಿವ
ತೆರದೊಲು ಕುರುಬನು ||
ಬಗೆ ಬಂದ ಜಗಳಂಗಡಿಗೆವೈದು ಮಾರುವೊಲು |
ಮಿಗೆ ತಿಳಿಯಲನಿತು ಜೀವಿಗಳಿಗಾನೋವುಂಟೆ |
ಮೃಗಕರಂ ಕೊಟ್ಟುದಂತೆಗೆದು ಕೊಂಡದಕಳಲು
ನಗುವರ್ಕೈ ಕೋವಿದಜನ ||

೧೩

ತನುವಿಂದ್ರಜಾಲ ಜೀವನ ವಿಶಿಖ ಮಾಳ್ಕೆ ಯ |
ವ್ವನ ಭಿತ್ತಿ ಸುಣ್ಣ ಮನೆ ಮನೆ ವಾರ್ತೆಗಳನೆಲ್ಲ |
ಘನದಿರುವು ಸತಿಸುತರು ಧನಕನಕಮಿನಿತೆಲ್ಲ
ಕನಸಿನೊಳಗಿನ ರಾಜ್ಯವು ||
ನೆನಸದೆ ಜಯಾಪಜಯ ತನಗೆ ತಾಬಪ್ಪವೈ |
ತ್ರಿಣೆಯನಾಣತಿ ಮೀರಲೆನಿತರವರ್ಕೈ ನಾವು |
ಋಣವು ತೀರಲ್ಕೆಂದು ಕ್ಷಣ ನಿಲ್ಲದೇನೇನು ಹೆಣ
ಕತ್ತರೇನಪ್ಪುದು ||

೧೪

ಬೇಡಮೀ ಶೋಕವೆಂದಾಡುತವರಿಂದ ಕುಣಿ |
ತೋಡಿಸುತಲಿಂ ಬಿಟ್ಟು ನಾಡೆಲೇಸಾಯ್ತೆಂದು |
ಕೂಡಿದ ಜನಂಗಳಿಗೆ ನೀಡುತಪ್ಪಣೆ ಶರಣಮಾಡಿ
ತವೆ ಲಿಂಗಾರ್ಚನಂ ||
ಪಾಡುತೀಶನ ಚರರು ಬೇಡಿದಿಲ್ಲೆನಲಿತ್ತ |
ಗಾಢದಿಂದರ್ಥೆಂದುಚೂಡ ಕನಸಿನೊಳು ತನ |
ಗಾಡಿದುಮು ತವೆ ನೆನಪು ಮಾಡಿಕೊಂಡಾ ಪುರಂನಾಡ
ಬಿಡಲ್ಯೋಚಿಸುತಲಿ ||

೧೫

ಹಸ್ತದೊಳು ಚಂಬುಗಳ ಕಿತ್ತು ರುದ್ರಾಕ್ಷಿ ಸರ |
ಮಸ್ತಕೊಡೆ ಪಾವಡವ ಸುತ್ತಿ ಫಣಿಯೊಳು ಭೂತಿ |
ನೆಸ್ತ ಬಿಳಿಕಂಬಲಂ ಪೊತ್ತು ಶಿವಮಂತ್ರ ಪಠಿಸುತ್ತಲಿ
ಶಿವಾಭವದ ||
ಪುಸ್ತಕಗಳಂ ಬೆನ್ನು ಪತ್ತೈದು ಶಿಖೆಗಳ ಗ |
ಭಸ್ತಿಪ್ರೊಳೆ ಮನೆಯ ಮೇಲಿತ್ತು ಧನು ಧಳ ಚರ ಸ |
ಮಸ್ತರಿಗೆ ಕೊಟ್ಟೆಂದುಪ್ರಸ್ತರದ ಪುರಕೆಮ್ಮ ಪ್ರಸ್ಥಾನ
ವೆಂದಾಡುತೆ ||

೧೬

ಬಲಿದಾವಿರಕ್ತಿಯಿಂ ಸ್ಥಲಬಿಟ್ಟು ಬರೆ ಮಾರ್ಗ |
ದೊಳಗಾದ ಪರಿಶ್ರಮಂ ಕಳೆಯಲೆನೆ ನೆನೆಯೆ ಮಂ |
ಗಳ ನೀವ ತನ್ನೊಳಗೆ ಮುಳುಗಿದರ ದುರಿತಕ್ಕೆ ಮುಳಿದು
ಕುಡಿವರುಜೆಗಳಂ ||
ಕಳೆವ ಸಲೆ ಭೀಮಾಸುಕುಲ ನದಿಯಳುದಿರ್ದ |
ಹೊಲಬೆನಲು ಬೀಸಿರ್ದುದೆಳೆಗಾಳಿಯಲ್ಲಿರುವ |
ಖಿಳ ಪಕ್ಷಿಧ್ವನಿಯು ಕಳಕಳನಾಡೆ ವಾದ್ಯ ಸಂಕುಳ
ದಿಂದಲಿದಿರ್ಗೊಳ್ಳುವಾ ||

೧೭

ಪರಿಶೋಭೆವೆತ್ತ ಸುಂದರ ಪೊಳಿಗೆ ಶರಣ ನಿ |
ಬ್ಬರದಲೈದೀಕ್ಷಿಸುತ್ತಿರಲೊಪ್ಪಿದುದು ಮಾರ |
ಹರನಂತೆಯಮೃತಕರ ಧರಿಸಿಯುನಿಮಿಷರಕುಲ
ಪರಿಪೋಷಣಂಗೈದು ಮೇಣ್ ||
ಹರಿಸೇವ್ಯಪದ ಜಲಂಧರ ಪಾಪನಾಶ ಭೀ |
ಕರ ಸರ್ಪಭೂಷ ಶಂಕರ ವಿನುತ ಮೆನ್ನಲಂ |
ತರವೇನು ಭೀಮನಾಮುರೆ ಮೆರೆದುದೆನ್ನುತಲಿ
ಶರಣ ಸಲೆ ಕೊಂಡಾಡುತೆ ||

೧೮

ಎಣಿಕೆಗೊಂಡ್ಡರಿಯುಗೋಲಿನ ಮಂದಿ ಭವಿ ಭಕ್ತ |
ಜನರ ನೆರೆನಿಲ್ಲ ಮೇಣ್ ತನಗಿದೀಸಲು ಸಲ್ಲ |
ದೆನುತ ಯೋಚಿಸಿ ಮಾರ್ಗ ಜನನಿಕೊಡುಯನಲು
ಶರಣನ ಪಾದಗಳು ಸೋಂಕಿಪಾ ||
ವನಮುಪ್ಪಲೆಂದು ಜಲವೊಣಕಾಲ ಪರಿಯಂತ |
ಗಣನೆಯಿರೆ ಕೊಲ್ಲಟರ ಗಣೆ ಪತ್ತರುದ್ದಕ್ಕೆ |
ವನ ನಿಲ್ಲಲೆರಡು ಕಡೆಯನಘನದು ದಾಟಲಾ
ಜನರೆಲ್ಲ ಬೆರಗಾಗುತೆ ||

೧೯

ಮೊದಲು ಕೇಳಿದೆವು ಸೂಹೃದಯ ಬಸವಣ್ಣನಾ |
ನದಿದಾಂಟಿ ಸಂಗಮನ ಪದಕಂಡುದಂತೆ ಕೋ |
ವಿದ ಚೌಡನಾಚಾರ್ಯ ಮುದದಿ ಪೊಳಿಯುತ್ತರಿಸಿ
ದಿದು ಕಣ್ಣಿನಿಂ ಕಂಡೆವು
ಮದನಾರಿ ಭಕ್ತಗಾವುದು ಗೈವುದೇಂ ಚೋದ್ಯ |
ಸುಧೆಯಪ್ಪುದೈದೆಗರಳದಯಸಖ ಕಲ್ಮುಳ್ಳು |
ಮೃದುಳ ತಳ್ಪಹುದೆಂದು ವಿಧ ವಿಧದೊಳು ಕೊಂಡಾ
ಡಿದರು ಶರಣನ ಮಹಿಮೆಯಂ

೨೦

ಮುಂದೆ ನಡೆದವರಾದಿಯೆಂದೆಂಬ ಸೀಮೆಗೈ |
ತಂದಿರಲಿಕೋರ್ವಂ ಪುಳಿಂದ ಬೇಂಟೆಯ ನಾಡ |
ಲೆಂದೈದವನು ಭಯಂ ಪೊಂದಿ ಬರುತಿರಲು ಶರಣಗೊಂ
ಸಲು ನೀನಾರೆನೆ
ತಂದೆ ನಾ ಶಬರೆನ್ನ ತಿಂದು ಬಿಡಲೆಂದು ಬೆ |
ನ್ನಿಂದೆ ಬರುತಿಹ ರಕ್ಕಸೇಂದ್ರ ಪೊರೆ ನೆರೆದಯಾ |
ಸಿಂಧುವೆನೆ ಕೇಳುತಾನಂದದಿಂ ಹಿಂಭಾಗನಿಂದಿರನ
ಲೆಂತೆಸಗಿವಂ

೨೧

ಅಸವಸದಿ ಬೊಮ್ಮರಕ್ಕಸ ಬಂದನನಿತರೊಳು |
ಕಿಸಿವಾಯಿ ಹೊರದೆಗೆದರಸನೆ ಕೊರೆಹಲ್ಲು ಹುರಿ |
ಹೊಸದ ಮೀಸೆಗಳು ಕೆಂಪೆಸೆವ ಕಿಡುಗಣ್ಣು
ಝುಳಪಿಸುತಕರಕರವಾಳನಂ
ಉಸುರಿಂದಲೆಳೆದು ಖಗ ಪಶು ಮೃಗಂ ತಿನ್ನುತಲಿ |
ಬಸುರದುಂಬದೆ ಬಂದು ಅಸಮ ಶರಣನ ಕಂಡು |
ಹಸನಾಯಿತೆರಡು ಮಾನಿಸರು ದೊರೆತರು ತನ್ನ ಹಸು
ವಿಗೆಂದತಿ ಹರುಷದಿ

೨೨

ಮದ ಮುಖನು ಶರಣನಂ ಬೆವರಿಸುತ ತಿನಲೆಂದು |
ವದನದಿಂ ಮುಟ್ಟಲ್ಕೆ ಪದವಳಿದು ರಕ್ಕಸತ |
ನದ ರೂವುನರನಾಗೆ ಮೊದಲಿನೋಲ್ ಶರಣ ಕೇಳಿ
ನಾರು ನೀನಿಂದಿ ನಿ
ವಿಧವಾದ ಪರಿಯೇನು ವದಿಸೆನಲು ಪೊಗಳುತಲಿ |
ವಿಧವಿಧದಿ ಪೂರ್ವಜನ್ಮದಿ ದೇವನಾಂ ತವೆ ಬಿ |
ಯದ ನಟವಿಗೈದೆ ಮೃಗವಧೆ ಗೈಯ್ಯುತಿರಲಿಕೀ
ವಿಧಿಯೊದಗಿತೆನಗೆಂದನ

೨೩

ಬೇಡ ಪಡಿಕೂಡ್ಯೊಂದು ಕಾಡಿನೊಳು ಬೇಂಟೆಯಂ |
ನಾಡುತಿರೆ ಕೈ ತಪ್ಪುತೋಡುತಿರಲೊಂದು ಮೃಗ |
ಗಾಢ ಬೆನ್ನಟ್ಟನಾಂ ಕಾಡುತಿಹ ಪೊಳ್ತು ಶಶಿಚೂಡ ಯೋಗಿಯು ಕುಳಿತುದಂ ||
ನೋಡದಲೆ ತುಳಿಯದಕೆ ನಾಡೆಖತಿ ತಾಳುತೆನ |
ಗಾಡಿದನು ಕೇಳೆಲವೊ ಮೂಢಾಗುದೈತ್ಯ ಭವ |
ಕೀಡೆಂದು ಸೆರಗೊಡ್ಡಿ ಬೇಡೆ ನಿಶ್ಯಾಪದಯ ಮಾಡೆನಲು ಕೇಳುತೊಡನೆ ||

೨೪

ಕರುಣದಿಂದ ಬರುವ ನೀ ಸರಣಿಯೊಳು ಮುಂದೆ ಶಿವ |
ಶರಣಪ್ಪನಂದ ವರ ಚರಣ ಸೋಂಕಲ್ಕೊಡನೆ ಪರಿಭವಿದು|
ಪರಿದು ನೀ ನರನಪ್ಪೆನಂಬೆನಲ ಸುರನಾದೆನಾ ಕ್ಷಣದೊಳು ||
ಹಿರಿಯರಳಿ ವೃಕ್ಷದೊಳಗಿರುತೆ ಮೃಗಪಕ್ಷಿ ದನ |
ಕರುಗಳಂ ಮಾರ್ಗದೊಳು ಬರು ಪೋಗುತಿಪ್ಪಖಿಳ |
ನರರ ನುಂಗುತಲಿ ಶತವರುಷಿದ್ದೆ ನಿಂದಿನುದ್ಧರನಾದೆರಗಿದಂ ||

೨೫

ಚರಣಾನತಾದ ಶಾಬರನ ಮನ್ನಿಸುತ ಮೈ |
ಗರೆ ಬೇಡನ ಕೂಡಿ ತೆರಳ್ವುದೆನೆ ನಮಿಸಿ ಹಿಂ |
ದರಿದೆ ಉದ್ಭಟದೇವ ಗುರು ದನುಜರನ್ನು ಶಿವಪುರಕೊಯ್ದನೆಂದು ಮತ್ತೆ ||
ಹರಿಹರೀಶ್ವರ ಕವೀಶ್ವರನಂತೆ ಗೈದುದಿಂ |
ನರರೆನಾವ್ಕಂಡೆವಚ್ಚರಿಯೆಂದು ಪೊಗಳುತಲಿ |
ಪರಿಪರಿಯು ಪಾಡಿ ಘನಹರುಷದಿಂ ಕೊಂಡಾಡಿ ಧರೆಗೆರಗುತಂತೇಳುತೆ ||

೨೬

ವ್ಯಾಧರೀರ್ವರು ತಮ್ಮ ಹಾದಿಹಿಡಿದ್ಹೋಗಲವ |
ರಾದಿ ಗೈ ತಂದುದಂದಾ ದಂಡರಾಯ ತಿಳಿ |
ದೂದಿಸುತೆ ಬಾರಿಸುತೆ ಕೈದೀವಿಗೆಗಳಿಂದಲೈದೆ ಪುರಜನ ಕೂಡುತೆ ||
ಮೋದದಿಂ ಬಂದವರ ಪಾದಕಾನತನಾಗಿ |
ಬೀದಿಯೊಳು ಮೆರವಣಿಗೆಗೈದು ಕರತಂದು ಮನೆ |
ಗಾದರದಿ ಶರಣನಂ ಸೌಧಾಗ್ರದಿರಿಸುತಾರಾಧನಂ ಗೈಯ್ಯುತಿಪ್ಪಂ ||

೨೭

ಮೂರು ಹೊತ್ತಿನೊಳು ಲಿಂಗಾರಾಧನಂ ಗೈಸಿ |
ಚಾರು ಶರಣಪ್ಪನಾಚಾರದಂತಿರ್ದ ತವೆ |
ಭೂರಿದಾಸೋಹ ಮನವಾರೆ ಮಾಡಿಸುವನಾ ಊರ ಗಾವಿಲ ತೋಷದಿ ||
ಸಾರಿರ್ದೆ ಚರರಿಚ್ಛೆ ಪೂರೈಸುತಿರುವನಾ |
ವಾರಿ ದಂಡ್ರಾಯಂಬ ವಾರುತಿಯು ಕೇಳಿ ಜನ |
ದೂರ ದೂರಿಂ ಬಂದು ಕೋರಿಕೆಯ ಪಡಕೊಂಬರಾಂಗಿಲ್ಲೆಂದೆನ್ನನು ||

೨೮

ಇರುತಿರಲು ತೋಷದಿಂ ಧರಣಿ ಗ್ರೀಷ್ಮದ ಭಯಂ |
ಕರಕೆ ತಾಳದಲೆ ಮೊಗದೆರದಿರಲನೇಕಮಂ |
ಬರದೆಸಿಗೆ ಕಂಡು ಶಂಕರ ಕರುಣದಿಂದಾತ್ಮ ಶಿರ ಗಂಗೆಯಂ ಕಳುಹಿದ ||
ಪರಿಶೋಭಿಸಿರಲು ಶಿಬಿಗರಿಯೆತ್ತ ತಾಡಿದವು |
ನೆರೆ ಚಾದಗೆಗಳಿಗಂಕುರಿಸವ್ಯೋದ ತೃಣ |
ಗರುಕೆ ಯುದ್ಭವದಿ ಭೂಸಿರಿ ಮೆರಿಯೆ ಹರುಷಾಯ್ತು ವರಜಾತಿ ಸುಮನಕುಲಕೆ ||

೨೯

ಭೂಮಿಸಿರಿಗೊಂಡು ಮೇಣ್ಹೇಮಾದ್ರಿ ಚೆಲ್ವಾಳ್ದು |
ದಾ ಮಹಾಪಾಲ್ ಶರಧಿಧಾಮ ಕೈಕೊಂಡಗ್ನಿ |
ಭಾಮ ಸೆಳೆಯುತ ಸತ್ಯಭಾಮಪತಿ ಮೈಗಾಂತಿ ಪ್ರೇಮದಿಂದಾಳ್ದಿರುತಿಹ ||
ರಾಮಣೀಯಕದ ಸುತ್ರಾಮ ಧನುಕಂಡು ಜನ |
ಕಾಮಹಯಛತ್ರ ಭಟ ತಾಮರಸ ವಿಚಕಿಲದಿ |
ತಾ ಮೆರೆದರಿಂದಿದಕೆ ಕಾಮಧನುವೆಂದೆಂಬ ನಾಮ ಸಾರ್ಥಕಗೈವರು ||

೩೦

ರಾಜಹಂಸಗಳ ಸುತೇಜಪಂ ಕೆಡಿಸಿ ದ್ವಿಜ |
ರಾಜಿ ಮಸುಳಿಸಿ ಕುಭವಜಾಜಿ ಜಾಲಿಗಳ ಕುಲ |
ದೋಜೆ ಪೆಚ್ಚಿಸುತ ಮೃಗರಾಜಗತಿ ನಲವಿತ್ತು ಗೋಜವದಿ ಪರಿಸಿ ಬಿಡದೆ ||
ಭೂಜನಕೆ ಪಂಕಮಯ ಮಾಜದೆಸಗುತೆ ಗ್ರೀಷ್ಮ |
ರಾಜನಂ ಸದೆದು ಘನಗೋಜಿತ್ತು ಸದಕೆ ಸುಖ |
ಬೀಜವೆಂದೆನಿಸುತಿ ರಾಜಿಪನು ದುರ್ದಿನವ ಸೋಜಿಗವನಿದು ಘನವಲಾ ||

೩೧

ಯಮದಿಕ್ಕಿನಿಂ ಗಾಳಿಗಮಿಸುತಿರೆ ಕಾಕ ಪಿಕ |
ಭ್ರಮರಗಳನತಿ ಗಳೆದ ತಮವೆನಲು ಸುರವರ್ತ್ಮ |
ಕಮಿತ ಮೇಘಾವಳಿಗಳಮರಲ್ಲದಿಶಗಳಾಕ್ರಮಿಸಿ
ಚಂಚಲ ಮೊಳಗಿನಿಂ ||
ಭ್ರಮೆಗೊಳಲು ಜಲವಾಪಿ ಸುಮನಗೊಳ ಕೆರೆಕೂಪ |
ಕುಮರ ಪೊರೆತೊರೆಧರೆಯು ಕುಮುದಮಯ ಮಾಗೆ ಮನೆ
ಕ್ರಮದಪ್ಪಿ ಬೀಳೆ ಸಂಭ್ರಮ ತೊರೆದು ಜನರೆಲ್ಲ
ತಮತಮಗೆ ಯೋಚಿಸುವರು ||

೩೨

ಮಿತಿಮೀರಿ ಮಳೆಯು ಸುರಿಯುತಿರೆಯಾಗ್ರಾಮಾಧಿ |
ಪತಿ ದಂಡರಾಯನಾ ಪಿತಗಳನ ಶರಣ ಸಂ |
ಗತಿಯಿಂದ ದಾಸೋಹವತಿ ಹರುಷದಿಂ ಗೈದು
ಸತತೇಷ್ಟ ಲಿಂಗಾರ್ಚನಂ ||
ಪತಿಕರಿಸಿ ಕೇಳುತಿರೆ ಶೃತಿ ಪುರಾಣಂ ಪುಣ್ಯ |
ಕಥೆ ಪುರಾತನರ ಚಾರಿತೆ ತ್ಯಜಿಸಿ ತನ್ನ ಸಂ |
ಸೃತಿಯ ಕಾರ್ಯಕೆಲ್ಲುಮಾಪತಿ ಶರಣನೊಡಗೂಡು
ತತುಳಮಿರೆ ಮುಂದೊಂದಿನಂ ||

೩೩

ಬಂದು ಚರರಾಡಿದರು ತಂದೇ ಕೇಳ್ ದಾಸೋಹ |
ನಿಂದಿರುವದೊಲಿಗೆ ಕುಳ್ಳಿಂಧನಂ ದೊರಕವೆನೆ |
ನೊಂದು ಶರಣಪ್ಪ ಮನ ಮುಂದೆ ಪೋಗುವೆನೆನೆಲದಂ
ದಂಡರಾಯು ಕೇಳಿ ||
ಸಂದೇಹ ಬಿಡಿಯನ್ನ ಮಂದಿರಿರ್ದೇಂಗೈವು |
ದೆಂದು ತೊಲೆ ಜಂತೆ ಸಹಿತೊಂದುಳಯದೋಲ್ ಬಿಚ್ಚು |
ತಂದುರುಹಿಯೆನ್ನವಂ ಬೆಂದಿಸುತ ದಾಸೋಹ ಕುಂದಿಲ್ಲ
ದೋಲ್ ಗೈದನು ||

೩೪

ಆ ದಂಡರಾಯ ಸಲೆಗೈದ ಭಕ್ತಿಗೆ ಮೆಚ್ಚಿ |
ಮೋದದಿಂದಿರೆ ಶರಣ ಹೈದರಾಬಾದಿಯಿಂ |
ಬೇದಾಡೆನೆಂಬವನ ಪಾಪ್ದುಳಿದ್ದೆಲ್ಲ ಪುಟಭೇದನಗಳಂ
ಸುಲಿಯುತೆ ||
ಬೈದ್ದೊಡೆದು ಮನೆಗಳಂ ಕಾದಿರುವರುಗಳ ತಲೆ |
ಭೇದಿಸುತೆ ಧನಕನಕೆ ಕೈದಲಂಕಾರ ವಸ |
ನಾದಿಗಳ ಕೊಂಡು ಮರಿಯಾದಿ ಕಳೆದಖಿಳರವ
ರಾದಿಗವರ್ಪೈತಂದಿರೆ ||

೩೫

ಆಯಾಸಮೊದಗಿತಿದುಪಾಯವೇನನ್ನುತತಿ |
ಹಾಯೆಂದುಸುರ್ಗರೆದು ಬಾಯ ಬಿಡುತಲಿ ಜನನಿ |
ಕಾಯಮೋಡುತೆ ದಂಡರಾಯ ಗ್ರಾಮಾಧಿಪನ
ಗೈಯಕೈತಂದೆಂದರು |
ಕಾಯದತಿ ಕಷ್ಟದಿಂದಾಯಗೈದೊಸ್ತು ಸಮು |
ದಾಯ ಸೆಳಕೊಂಡು ಸುತೆಜಾಯಿಯರ ಕೆಡಿಸುತಲ |
ಪಾಯನೆಸಗುವರಯ್ಯೋ ಕಾಯ್ವುಡೆಮಗರಸಿಲ್ಲ
ಲಾಯೆಂದು ಗೋಳಿಟ್ಟರು

೩೬

ಕೊಡುವರತಿಕಷ್ಟ ಮನೆ ಸುಡುವರೈ ಮಲತವರ |
ತಡವಿದರೆ ತಲೆಗಳಂ ಕಡಿವರೈ ಸುಲಿವರತಿ |
ನಡುಪಗಲೆ ನಿರ್ಭಯದೊಳೊಡವಿ ಧನಕನಕುಟ್ಟ
ಉಡುಗೊರೆಗಳಂ ಸೆಳೆವರು
ಕಡುದುರುಳರಿಂಗಂಜಿ ಗಡಗಡನೆ ನಡುಗುವರ |
ಹುಡುಗಾಟಿಕಿಲೆ ಮೀಸೆ ಪಿಡಿದೆಳೆದು ಭೂಮಿಯೊಳು |
ಕೆಡಹಿ ಮನಬಂದ ಪರಿ ಬಡಿದು ಕಾಡ್ವರು ಕಾಯ
ಲೊಡೆಯರಿಲ್ಲೆಂದತ್ತರು

೩೭

ಆ ದಂಡರಾಯ ದಯೆಗೈದು ಪೇಳಿದನು ನಿಃ |
ಖೇದಮಿರಿ ನಿಮ್ಮ ಪುಟಭೇದನದೊಳಿರಲಿಕೀ |
ಪಾದ ಭಯಮೇನೆಂಬೊದಾ ದಯಾನಿಧಿ ಕೇಳುತೀ
ದೊಂದ ಗೋಗಿನ್ನವಂ
ಗೋದಿ ಕಜ್ಜಾಯಂಗಳೈದು ತಕ್ಕೊಂಡ್ಹೋಗು |
ತಾ ದಂಡಿನವರ್ಗೆಲ್ಲ ಮೋದದಿಂದುಣಿಸಲಾ |
ಸ್ವಾದಕುರೆ ಮೆಚ್ಚಿ ಮಹಿಮೋದಯು ನಿಜವನೆಂದು
ಪಾದದಲಿ ಸಲೆ ಮಣಿಯುತೆ

೩೮

ಕಾಲದಳಪತಿಯೆದ್ದು ಕಾಳಿಗೆರಗುತಲೆಂದ |
ನೌಲಿಯಾಸಾಚಾತು ಮೌಲಾಲಿ ನಿಜವೈದೆ |
ಹೋಳಗೆಗಳೊಂದು ಗೋಪಾಲಗಿನ್ನಿನಿತು ಜನಜಾಲ
ಕುಣಿಸುವರೆ ನಿನ್ನಾ
ಪೋಲುವರು ಧಾರುಣಿಯು ಮೇಲೆ ನಾಕಾಣೆ ದಯ |
ಶೀಲ ಸುಗುಣಮಣಿ ಗಣಮಾಲನೆಂದುರೆ ಪೊಗಳಿ |
ಶಾಲುಗಳ ಪೊರಿಸಿ ಧನ ಬಾಳೆ ಕಾಣಿಕೆಯಿತ್ತು
ಭಾಳ ಚಾಚಿದ ಪಾದಕೆ

೩೯

ಮರಿಯಾದಿ ಧನಗೊಂಡು ಸುರಿವಿರ್ದ ಧನವೆತ್ತಿ |
ಚರರ ಸಂಕುಳಕಿಡಲು ನೆರವಿಜನರೆಲ್ಲ ಹಿಂ |
ದರಿದಾವಾ ತೋಂಟದಾರ್ಯರು ಐದು ಮನೆಗಳಂ
ತಿರಿದು ತಂದನ್ನವಂ ಸಾ |
ಸಿರ ಜನರಿಗುಣಿಸಿದುದು ಶರಣಬಸವಂಗೈದ |
ಪರಿಕಂಡೆ ವಿಂದಿಗಚ್ಚರಿ ಘನವಲಾ ನಮ್ಮ |
ಪುರವೆಲ್ಲ ಮಹತ್ಮನುದ್ಧರಗೈದನೆಂದು ಬಲುಹರುಷದಿಂ
ಕೊಂಡಾಡುತೆ ||

೪೦

ಮನೆಮನೆಗೆ ಪೋಗಲಾ ಜನರೆಲ್ಲ ನಾಡೆ ಸ |
ಜ್ಜನ ದಂಡರಾಯನಾ ವಿನುತ ಶರಣನ ಕೂಡು |
ತನವರತ ಜಂಗಮಾರ್ಚನ ಲಿಂಗಪೂಜೆ ಶ್ರವಣ
ಪುರಾಣಂ ಮಾಡುತೆ ||
ಮನವಾರೆ ದಾಸೋಹವನುಗೈದು ಷಟ್‌ಶಾಸ್ತ್ರ |
ಪ್ರಣವಾರ್ಥದನುಭವದಿ ಘನಸದಾಚಾರದಿಂ |
ದಿನಗಳೆಯುತಿರೆ ಮಾತುಮುನ ಕೀರ್ತಿಬೇಸತ್ತು
ಮನೆಬಿಟ್ಟು ಹೊರಗಾಗುತೆ ||

೪೧

ಕಂಡವರ ಕೂಡಿ ಸಾದರಿಯಂತೆಯಖಿಳ ಭೂ |
ಮಂಡಲದಿಚರಿಸಿ ಮಾರುತನಂತೆ ತೇಜಮೊಳ |
ಕೊಂಡು ರವಿಯಂತೆ ಗುಣಮಂಡಿತಂ ಸಲೆ
ಚಾರು ಪುಂಡರೀಕದ ತೆರದೊಳು ||
ಚಂಡೇಶನಂತೆ ಶುಭ್ರತರ ಘನಶಿವನ ಕೋ |
ದಂಡದಂತುರೆ ಶಾಶ್ವಿತಂ ಚಾರುತರ ರನ್ನ |
ಕುಂಡಲೆಂಬಂತೆ ಶೃತಿಭೂಷಿತೆಂದೆನಿಸಿತಾ ಚಂಡ
ಶರಣನ ಕೀರ್ತಿಕಾ ||

೪೨

ಇಂತೊಪ್ಪುತಿಹ ಕೀರ್ತಿಯಂತರರಿದಖಿಳಜನ |
ತಿಂಥಿಣಿಯು ಬಂದು ಮನಚಿಂತೆ ರೋಗಾದಿಗಳ |
ಹಂತಿ ಭೂತಾದಿಗಳ ಭ್ರಾಂತಿಯಂ ಕಳೆದು |
ನಿಶ್ಚಿಂತದಿಂದಿರೆ ಕೆಲವರು ||
ಸಂತತಿಯು ಧನ ಕನಕ ಸಂತತಿಗಳಂ ಪಡೆದು |
ಎಂತಪ್ಪಕ್ಲೇಶಿಗಳು ಶಾಂತಿಯಂ ತಾಳ್ದು ಸಲೆ |
ಸಂತೋಷದೊಳಗಿರಿಸುವಂತೆಸಗಿ ಶರಣೆಂದಿನಂತಿ
ರಲು ಮುಂದೊಂದಿನಂ ||

೪೩

ಪಿರಿದು ಭೂತಂ ಪಿಡಿದು ಪುರಕೋಬಳಲದಲೋರ್ವ |
ಚರನೊಂದು ಪೊಳ್ತಿನೊಳಗಿರದೊಕ್ಕಳನ್ನ ತಿನು |
ತಿರುತಿಪ್ಪವನು ಬಂದು ಶರಣನಂ ಕಂಡೆನ್ನ ಪೊರೆ
ತಂದೆಯನೆ ಕೇಳುತಾ ||
ಪರಿತಿಳಿದು ಭಸ್ಮವಂ ಧರಿಸಮೃತಂ ಸವಿದ |
ಸುರನಂತೆ ಹಸು ತೃಷೆಗಳೆರಡಡಗೆ ಪಾವನಾ |
ಕರ ನಿನ್ನ ಘನಮಹಿಮೆಯರಿವರಾರೆಂದು ಸಲೆ ಹರುಷದಿಂ
ಹಾಡಿ ಹಾಡಿ ||

೪೪

ಕೊಂಡಾಡಿ ಪೋಗಲಾ ದಂಡರಾಯನ ಗೃಹ ದೊ |
ಳುಂಡೆರಡು ಬರಿಸ ಮುದಗೊಂಡಿರುತ ಶರಣ ಕೈ |
ಕೊಂಡಪೆ ನಿರೂಪ ನೀನಂಡಲೆಯದೆನಗೆ ಕೊಡು
ಪಂಡಿತನೆಯೆಂದಾಡಲು ||
ಖಂಡಿತಂ ಬಿಡೆನಿನ್ನ ಹಾಂಡೆಧನ ದವಸ ಮನೆ |
ಭಾಂಡೆ ದನಕರು ಬಟ್ಟೆ ಬಿಂಡಿಗಳು ಮೇಣೆನ್ನ |
ಪೆಂಡತ್ತಿದಾಳೆ ಮೊದಲ್ಗೊಂಡು ವೆಚ್ಚಿಸುತೆ ಚರ
ತಂಡದಿಚ್ಛಿತನೀವೆನು ||

೪೫

ಆದರಿಂದಲೀಗ ಪೋಪುದು ಬಿಟ್ಟು ನೀ ವಿದೇ |
ಸದನದೊಳಗಿದ್ದು ಸಮ್ಮುದದಿ ದಾಸೋಹ ಗೈ |
ವದು ಯೋಚಿಸದೆ ನಿಮ್ಮ ಪದಕೊಪ್ಪಿಸಿದೆನೆಲ್ಲ
ಸದಯಾಳನೆಂತಾಡಲು ||
ಕದಡಿ ದೃಢ ಕೇಳೆಲೆ ಸುಹೃದಯ ನಿನ್ನನ್ನಗಲು |
ವದಕೆ ಮನನೊಂದುದಾನಿದಕೇನು ಗೈವೆ ನಾ |
ಮದನಹರ ತನಗೆ ಪೇಳಿದನಲಾ ಪೋಗೆಂದು ಪದೆದಶ್ಮ
ಪುರತಾಣಕೆ ||

೪೬

ಮಾದೇನನಾಜ್ಞಯಂಗೈದುದಂ ಮೀರಲೆನ |
ಗಾದಪುದೆ ಪೇಳಿನಿತು ಮೇದಿನಿಯ ಜನರೊಳಗೆ |
ಶೋಧಿಸಲು ನಿನ್ನೋಲ್ಪ ಸಾಧುದೊರದಪನೆ ನಿರ್ಭೇದ
ಭಾವದಿ ನೋಡಲು ||
ಹಾದಿಗ್ಹೋಗುವರ ಕರೆದಾದರಿಸಿ ಚರರ ಸುರ |
ಪಾದಪನೆ ದಾಸೋಹ ಮೋದದಿಂ ಮಾಡಿದ ಪು |
ಭೋದಯನೆ ನಿನ್ನಗಲಲಾದಪುದು ಮನಸಿಗತಿ ಖೇದಾ
ದಡೇಂಗೈವನು ||

೪೭

ತ್ರಿಣಯ ಕನಸಿನೊಳಗಪ್ಪಣೆಗೈದುದವಿನ್ನೀರ ।
ಲೆನಗುಂಟೇ ಶಕ್ತಿ ಸದ್ಗುಣಮಣಿಯೆ ಪೇಳು ನೀ ।
ನೆನಲೆಂದ ನೀ ಸ್ವತಂತ್ರನು ನಾಡೆ ನಿರ್ಮಾಯಕನ
ತಡೆದು ನಿಲ್ಲಿಸುವಡೆ ॥
ತನಗೆ ಸಾಮರ್ಥ್ಯವೇಂ ಮನಬಂದ ಪರಿಗೈವ ।
ದೆನುತ ಕಳಕಳಿಸಿ ಕಂಬನಿಗರೆದು ನಮಿಸಲಾ ।
ತನ ಭಕ್ತಿಯೌದಾರ್ಯ ಘನತೆ ವಿನಯಾದಿ ಗುಣ
ನೆನಿಸಿ ತವೆ ಚಿಂತಿಸುತಲಿ ॥

೪೮

ಶಿವಮಸ್ತು ಭೂಯಾತ್ ತವ ಮನೋರಥವೆನ್ನು ।
ತವಗೆ ಪರಿಸುತ ಮಸ್ತಕವು ಪಿಡಿಯುತಿತ್ತಿ ನಿ ।
ನ್ನವರಾವು ನಿಜವೆಲ್ಲಿಗಮಿಸಿದರು ಬಿಡು ಚಿಂತೆ
ಸುವಿವೇಕಿಯೆಂದಾಡುತೆ ॥
ತವೆನೊಂದು ನಿನ್ನನಗಲುವವಾಯ್ತು ಹಾಯೆಂದು ।
ಕವಲಾದ ಮನದಿ ಪಯಣವು ಹೊರಟು ಶರಣ ಬಿ ।
ಟ್ಟವರಾದಿ ಬೆಳಗುಂಪಿಯವರ ಕೋರಿಕೆ ಪೂರ್ಣೆ
ಸುವ ಕಾರಣದಿ ಬರುತಿರೆ ॥

೪೯

ಬೆಳಗುಂಪಿಪುರಕೆ ಕಬ್ಬಿಲರ ನಾಯಕನೋರ್ವ ।
ಪೊಳೆಯೊಳಗೆ ಬೀಳುತಸುಗಳಿವದಂ ನಿಶ್ಚೈಸ್ಯು ।
ಪಲಗಳುಡಿಗಟ್ಟಿ ತಟದೊಳಗೆ ನಿಂದನ ಶರಣತಲೆ
ಮಣಿಯು ನೋಡಲ್ಲಿಗೆ ॥
ಘಳಿಲನೈತಂದು ನದಿ ಮುಳಗಲೇಂ ಕಾರಣದು ।
ತಿಳುಹುತನಗೆನಲು ಪದನಳಿನಗಳಿಗೆರಗಿ ಸಾ ।
ಕುಳಿಯಲಾರೆನು ಬೇನೆ ಕಳಿವರಾರಿಲ್ಲವೀ ನೆಲದೊಳಗೆ
ಶಿವಶರಣನೆ ॥

೫೦

ಕಿವಿಶೂಲೆಯಿಂದನಾ ಬಹು ಕಷ್ಟಪಟ್ಟು ಧನ ।
ವವಿವೇಕದೀ ಕೆಡಸಿ ವಿವಿಧೌಷದಂಗೊಂಡೆ ।
ಲವನಿತು ಲೇಸು ಮೆಂಬುವದು ಕಾಣವಲೆ ಸಾಯುವದೆ
ನಿಶ್ಚೈಸಿಂದಿನಂ ॥
ಭವಣಿ ನೀಗಲಿಕೆ ಮುಳುಗುವೆನೆಂದು ಬಂದೆನ್ನ ।
ತವೆ ಪೊರೆಯಲೋಸುಗಂ ಶಿವನೆ ನೀನಿಂದಿಲ್ಲಿ ।
ಗವತರಿಸಿದ್ಯೆದೆರೋಗವನು ಕಳಿವುಳುಹೆನ್ನುತವ
ನತಾದನು ಪಾದಕೆ ॥

೫೧

ನತನಾದವನನೆತ್ತುತತುಳ ತೋಷದೊಳಾಗ ।
ಪತಿತ ಪಾವನನವನ ಶೃತಿಯೊಳೂದಲ್ಕೆ ರುಜೆ ।
ಯತಿಗಳಿಯೆ ಗ್ರಾಮ ಚರಪತಿ ಶರಣಬಸವನುನ್ನತ
ಮಹಿಮೆ ಸದ್ಗುಣಗಳ
ಜತೆಗೊಳಿಸಿ ಪೊಗಳ್ವ ಸಂಗತಿ ಕೇಳಿ ಪೌರಜನ ।
ತತಿ ಬಂದು ನಮಿಸ್ಯುಮಾಪತಿ ಶರಣಭಾಪು ಸಂ ।
ತತ ಮಹಿಮ ದಿವ್ಯಚಾರಿತ ಭಾಪುರೆ ಭಾಪೆನ್ನುತಿ
ಕೈಗಳೆತ್ತಿ ಪೊಗಳ

೫೨

ಹರುಷದಿಂ ನಾನ್ನಿಮ್ಮ ಚರಣ ಶರಜಗಳ ಸಂ ।
ದರುಶನವು ಮಾಡಿಕೊಂಡಿರುವ ಕಾರಣದಿಂದ ।
ನೆರೆಕೃತಾರ್ಥರು ಯೆನ್ನುತುರೆ ಪೊಗಳಿ ಮೆರೆಸುತ
ಲಿ ಕರೆದು ತಂದಾ ಶರಣನ
ಹಿರೆಮಠದೊಳಿಳಿಸುತಂ ಪರಿಚರ್ಯೆಗೈಯ್ಯು ।
ತರುತಿರೆ ಭಕ್ತಜನ ಕಬ್ಬಿಗರ ನಾಯಕಂ ಮನೆಗೆ ।
ತ್ವರೆಪೋಗಿ ನಿಧಿದ್ರವ್ಯ ಶರಣಗೊಪ್ಪಿಸಲೆಂದು ತರಲಿ
ಕನುವಾಗಲದನ

೫೩

ಭಾಗಾದಿಗಳು ನೋಡುತೀಗೆಲ್ಲಿಗೊಯ್ವಿ ಹಣ ।
ಪೋಗದಿರು ನಿಲ್ಲೆಂಬವಾಗು ಕೇಳುತಲಿ ಕೈ ।
ಸಾಗದಲೆ ನಡೆತಂದು ಬೇಗ ಶರಣನಿಗೆ ನತನಾಗಲೇಂ
ಬಂವಂದೆ
ಈಗ ನಾನಿಮ್ಮ ದಾಸೋಹಕ್ಕೆ ಧನಕೊಡುವ ।
ಡಾಗರೆಂಬುವರೆನ್ನ ಭಾಗಾದಿ ಜನರು ಮಿದ ।
ಕೇ ಗೈವೆನೆನೆ ಕೇಳುತಾಗಲ್ಯವರಿಚ್ಛೆಯನಲಾ ಘಳಿಗೆ
ಧರ್ಮಕೃತಿ

೫೪

ತಡೆದವರಿಗೆಲ್ಲ ಕಿವಿಗಡಚಾಗೆ ಶೂಲೆದ್ದು ।
ಪೊಡವಿಯೊಳು ಬಿದ್ದು ಗಡಗಡನುರುಳಿ ತಾಳದಲೆ ।
ಮಿಡಕುದರ ಕಾರಣಂ ಪುಡುಕಿ ನೆರೆ ತಿಳಿದ್ಧಣದ
ಕೊಡಪೊತ್ತು ತಲೆಯ ಮೇ
ನಡೆತಂದು ಶರಣಪ್ಪನಡಿಮುಂದಿನೊಳಗಿಳುಹಿ ।
ಮೃಡರೂಪ ನೀನೆಮ್ಮ ನೊಡಲ ಸುತರೆಂದು ಕೈ ।
ಪಿಡಿದು ಪಲುಹೆಂಮ ಪವ ಜಡಜಗಳಿಗೆರಗುತೀ
ಬಡವರತಿ ದುರ್ಗುಣಗಳ

೫೫

ನೋಡದಲೆ ನೀಂ ದಯಂ ಮಾಡೆಂದು ನಮಿಸುತಲಿ ।
ಬೇಡುವರ ಕರುಣದಿಂ ನೋಡೆ ಕಿವಿಯೊಳಗೆಣ್ಣೆ ।
ತೀಡಿದಂತಾಗಲ್ಕೆ ನಾಡೆ ತೋಷದೊಳು ಕೊಂಡಾಡಿವರು
ಶರಣಪ್ಪನಾ ॥
ನಾಡಿನೋಳ್ ನಿಮಗಾರು ಜೋಡಿಯಾದಪರಿ ಶಶಿ ।
ಚೂಡ ಸನ್ನಿಭ ಭಾಪು ಪಾಡುವರ ಭವಣೆ ।
ಈಡಾಡುವನೆ ಭಾಪು ನಾವ್ಮಾಡಿದೆಮಗುಣಿಸಿ
ತವೆ ಮೂಢತನ ನೂಕಿದೆ ॥

೫೬

ಎಂದು ಕೊಂಡಾಡುತಲಿ ವಂದಿಸಲ್ಕಲ್ಲಿಪ್ಪ ।
ಮಂದಿ ನಾವರಿದೆವ್ವೈ ಹಿಂದೆ ನಾವದಿಗೆಯೊಳ ।
ಗೊಂದು ದಿನ ಗುಡ್ಡಮ್ಮನೆಂದೆಂಬ ಶರಣೆಯನ್ನಿಂದಿಸಿದ
ಭೂಮಿ ಸುರರಾ ॥
ವೃಂದಕ್ಕೆ ಸೌರಾಷ್ಟ್ರದಿಂದ ಸೋಮೇಶನಂ ।
ತಂದು ತನ್ನಂಗ ರುಜೆ ಪೊಂದಿಸಿರಲವರೆಲ್ಲ ।
ಬಂದು ನಮಿಸಲ್ಕೆ ತನು ಮುಂದಿನಂತೆಸಗುತಾ
ನಂದವಂ ನೆಸಗಿರ್ದುದಂ ॥

೫೭

ಮಿಗೆ ಕಂಡೆವಿಂದೆಮ್ಮ ದೃಗುವಿಂದಲಾಯೆಂದು ।
ಪೊಗಳಿ ತಮ್ತಮ್ಮಯ ಮನೆಗಳಿಗ್ಹೋಗಲಾ ಜನರು ।
ಸುಗುಣ ಲಿಂಗಾರ್ಚನನ್ನೆಗಳಿಚರ ಪಾದಾಂಬು ಮುಗಿದು
ಶೇಷಂ ಭುಂಜಿಸಿ ॥
ಪಗಲೆರಡು ಗಳಿಯಲಾ ನಗರದೊಳಗೋರ್ವ ಬಡ ।
ವಗೆ ಪ್ರೀತಿಯಾದೊಂದುದಾವು ಸಾಯಲಾತನ ।
ಮಗ ಸೊಸೆಯು ಸತಿತಾನು ಮಗಳು ಮೊದಲಾದ
ಜನರುಗಳಳುವದಂ ಕೇಳುತೆ ॥

೫೮

ಕರುವು ಅಂಬಾಯೆಂದು ಕರೆವುದಂ ಬಹಿರ್ದೆಶಿಗೆ ।
ಶರಣಪ್ಪ ಪೋಗಿ ತಾ ಬರುತಿರುವ ಪೋಳ್ತರಿದು ।
ಕರುಣದಿಂ ಕಳವಳಿಸಿ ಭರದಿವಳ ಪೊಗುತಲಳು
ತಿರುವರಂ ಮನ್ನಿಸುತಲಿ ॥
ಕರದಿಂದಲಾಕಳಿಗೆ ಸ್ಪರುಶನವು ಗೈಯಲ್ಕೆ ।
ಹರಣ ಮರಳೆದ್ದಾತ್ಮ ಕರುವಿಗತಿ ನಲುವಿಂದ ।
ಕರೆವದಾಂ ಕೇಳಿ ಘನ ಹರುಷದಿಂ ತಿರುಗುತಿರೆ
ಚರಣಕಾನತರಾಗುತೆ ॥

೫೯

ವೃದ್ಧ ಜನರಾಡುತಿಹಸುದ್ದಿ ಸೊನ್ನಲಪುರದ ।
ಸಿದ್ಧರಾಮನು ಸತ್ತುಬಿದ್ದ ಮಾರ್ಜಾಲದಸು ।
ತಿದ್ದಿದುದ ನಾವು ಕೇಳಿದ್ದೆವಿಂದಿನ ಕಂಡೆವದ್ಭುತ
ವನಿದು ಪೊಸತಲಾ ॥
ಸಿದ್ಧಿಯನಿತಿವನರಿವ ಬುದ್ಧಿಗತಿ ಚೋದ್ಯ ಸ ।
ತ್ರಿದ್ಧಾಕಳಿಗೆ ಮುಟ್ಟಲೆದ್ದುದೀತನ ನೋಡು ।
ತುದ್ಧಾರವಾದೆವೆಂದದ್ದಿ ಹರುಷದೊಳು ಮನ ಬಿದ್ದು
ಪಾದದಿ ಪಾಡಲು ॥

೬೦

ಶಿವಶರಣ ಬೆಳಗುಂಪಿಯವರ ಬೀಳ್ಕೊಂಡು ಬರೆ ।
ಜವದಿನ್ಯಾವ್ನೊರಡವಿ ಸವಳ್ಹಳ್ಳದೊಳಗೆತ್ತಿ ।
ನವರ ಕೊಡೆಸಗುತಲಿ ಶಿವರಾತ್ರಿ ವ್ರತವು ಮರು
ದಿವಸ ಬೆಳಗಾದ ಮೇಲೆ ॥
ತವೆ ತೋಷದಿಂದಲಿ ಬಸವ ಪಟ್ಟಣಕ್ಕೆ ಪೋ ।
ಗುವಡೆ ಮಾರ್ಗ್ಹಿಡಿದು ಬರುವವಗೆ ಮಾತಾಡಿಸಲಿ ।
ಕವನು ಮೂಕಾದ್ದರಿಂ ಸುವಚಗಳ ನುಡಿಯದಿರೆ
ಸುವಿವೇಕದಿಂದರಿವುತೆ ॥

೬೧

ಮೂಕನೆಂದರಿದವನ ಶೋಕವಂ ಪರಿಹರಿಸ ।
ಬೇಕೆಂದು ಮಮತೆಯಿಂ ತಾಕರದು ಸನ್ನೆಯಿಂ ।
ದೇಕರಂ ಕಿವಿಗೊಂದು ವಾಕುನುಡಿಯಲಿಕ್ಕವನ
ಮೂಕತನವಂ ಪೋಗಲು ॥
ನೂಕಿ ಜನ್ಮಾವಧಿಯ ವ್ಯಾಕುಲಂ ಮುದದಿಂದ ।
ಲೋಕಪಾವನನ ಪದಕೋಕನದಗಳಿಗೆರಗಿ ।
ಸಾಕಾರ ಬೊಮ್ಮನಿನ್ನೀ ಕರುಣದಿಂದ ಪರಿಪಾಕಾಯ್ತು
ಬಯಕೆನ್ನುತೆ ॥

೬೨

ಮೇಲೆ ಮೇಲೆರಗುತಲಿ ಕಾಲುಗಳಿಗಪ್ಪಣೆಯ ।
ಕೇಳುತವ ಪೋಗಲಿಕೆ ಶೈಲಾದಪುರಕೈದು ।
ಭಾಳತೋಷದಿ ಭಕ್ತಜಾಲಕೆ ಶಿವಾನುಭವಕೀಲವಂ
ನರುಹುತವರಾ ॥
ಶೀಲಸಂಪನ್ನರೆಂದ್ಹೇಳಿಸುತ ಲಲ್ಲಿಂದ ।
ಕಾಲಿಗಿಗೆ ಬಂದಂತೆ ಕಾಲವಂ ಕಳೆದು ಮನ ।
ಲೋಲ್ಯಾಡುವ್ಪೊಲು ಬೋಧಪಾಲ ನೀಂಟಿಸುತಿರಲು
ಫಾಲಾಕ್ಷ ಶರಣರೆಲ್ಲ ॥

೬೩

ಮೋದದಿಂ ಜನ ಧನ್ಯವಾದವಂ ಗೈಯ್ಯುತಿರ |
ಲಾದಯ್ಯನಾತ್ಮ ಭವಸಾಧು ಸಿರುತಖಿಳ ಜನ |
ರಾದರಂ ಕೊಳ್ಳುತೈದೆ ಬರೆ ಪರ್ವತಾಬಾದಿ ಜನರೆದು
ಗೊಳ್ಳುತೆ ||

ಪಾದಕಾನತರಾಗುತೂದಿಸುತೆ ಬಾಜಿಸುತೆ |
ಬೀದಿ ಮೆರವಣಿಗೆಗೈಸೊಯ್ದು ಮಠದೊಳಗಿಳಿಸ |
ಲಾದಿನ ಕ್ರಿಯಾಮೂರ್ತಿ ಯಾದವಂ ಬೇರೂರ್ಗೆ
ಪೋದ ಕಾರಣ ಶರಣನು ||

೬೪

ಇನ್ನೊಬ್ಬ ಚರನ ಕರತನ್ನಿರೆನೆ ಜನರದಂ |
ಮನ್ನಿಸುತ ಕ್ರಿಯದ ಸಂಪನ್ನ ಜಂಗಮನೋರ್ವ |
ನನ್ನು ಕರೆ ಹಿಮತಾಪದಿಂ ನವೆಯುತಿಪ್ಪೆ
ನಾನೆನ್ನಿಂದಲಾಗದೆನಲು ||
ಇನ್ನೇನುಗತಿ ಶರಣನನ್ನ ಸೇವಿಸನು ಚರ |
ರನ್ನು ಬಿಟ್ಟೆಂದೆಂದು ಬಿನ್ನವಿಸಲದು ಬಂದು |
ಸನ್ನುತಂ ಕೇಳಿ ಮುಕ್ಕಣ್ಣಗೈದಂತಾಗಲೆನ್ನುತಾ
ಜನವೆರಸುತಾ ||

೬೫

ಗಡನೈದೆ ಜಂಗಮದ್ದೆಡೆಗ್ಹೋಗುತವರ ಛಳಿ !
ಥಡಿಯೊಳಗೆ ಸೇರಿಸಲು ಗಡಗಡನೆ ಪಾಸಿಕೆಯು |
ನಡುಗುತಿರಲೀರ್ವರುಂ ನುಡಿಯಾಗಿ ಪಾದಾಂಬು
ಪಡಕೊಂಡು ಸಲಿಸುತಿವರಾ ||
ಒಡನೊಕ್ಕುದುಂಡು ಬಲು ಸಡಗರದಿ ಕಳುಹಿಕೊಡ |
ಲೊಡಿಯ ಜಂಗಮು ಚರಣವಿಡಲು ಪಾಸಿಕೆಮೇಲೆ |
ತಡಿಯಪಲೆ ಛಳಿಜ್ವರಗಳೊಡಲೊಳಗೆ ಸೇರಿರಲು
ಕಡುಸೋಜಿಗಂಗೊಳ್ಳುತೆ ||

೬೬

ಇಮುವೆಯದ್ಭುತನಾದಿ ಗದಗದನೆ ನಡುಗುತಿ |
ಪ್ಪುದು ನಾನೆ ಕಂಡೆನ್ನ ಪದಪಾಸಿಕಿಗೆ ಸೋಂಕ |
ಲದರಿಂದಲೊಡಲಿಗೇರಿದುವಲಾ ಛಳಿಯೆಂದು ಬೆದರೆದ್ದು
ಶರಣನಿಸ್ಪಾ ||
ಸದನಕ್ಕೈತಂದಾತ್ಮಕದಡು ಪೇಳಲು ಕೇಳಿ |
ಸದಯಾಳ ಪೋಗು ಪೋದುದು ನಿನ್ನ ರುಜೆಯೆನಲು |
ವಂದಿಸಿದಂತಾಗಲ್ಕೆ ಮುದವಾಂತು ಚರವರಂ ವಿಧ
ವಿಧದಿ ಕೊಂಡಾಡಿದಂ ||

೬೭

ಸಾತಿಶಯ ಮಹಿಮೆಯಿದು ಚೇತನಕೆ ಚಲಿಸುವ |
ದೇತರಘನಿವನು ನಿಶ್ಚೇತನಕೆ ಕುಣಿಸಿರ್ದ |
ಮಾತು ಪೊಸತೆಂದು ಸಲೆ ಕೌತುಕದಿ ನೆರದ ಜನವ್ರಾತ
ತವೆ ಕೊಂಡಾಡಲು |
ಪೂತದಾಸೋಹ ನೆರೆಪ್ರೀತಿಯಿಂ ಗೈದಖಿಳ |
ಭೂತತೃಪ್ತಿಯ ಪಡಿಸುತೋತು ಚರಲಿಂಗ ಪೂ |
ಜಾತುರಪ ಮನದಿ ಗೈದಾತನಿರೆ ಪರ್ವತಾಬಾದಿ
ಯೊಳು ಶಿವಶರಣನಾ

೬೮

ವೃಷನೋಡಲೆಂದು ಮಳೆ ತಡೆಸಿರಲು ಬರವು ಬಂ |
ದಡಸಿ ಜನರೆಲ್ಲ ಗೋಳಿಡುತ ಧನಿಕರ ಗೃಹಕೆ |
ಬಡವರೈತಂದು ಋಣಕೊಡಿರೆಂದು ಕೇಳಿದರೆ
ಕೊಡದಿರಲು ಜನ ಜಗಲಿಯಾ
ಎಡೆದೇವರುಗಳೊಂದೆ ಪಡಿಭಕ್ತಕೊತ್ತಿಟ್ಟು |
ಕಡೆಗೆ ಸಾಲದೆ ಹೊಟ್ಟೆಗ್ಹುಡುಗರಂ ಮಾರಿಕೊಂ |
ಡೊಡೆಯುದರ ತುಂಬದಿರಲೊಡಲೊಳಗೆ
ಕಾಲ್ಗೊಂಡು ಮಡಿವುತಿಪ್ಪರು ಮಿಡುಕುತೆ

೬೯

ಹಾಂಡೆ ತಳಗಿಯು ಚಂಬುಗಿಂಡಿ ರಜತಂ ಕನಕ |
ಭಾಂಡಗಳು ಮಡಿರೇಶ್ಮಿ ಬಿಂಡಿಗಳು ದನಕರು ವಿ |
ತಂಡಗಳು ನೆರೆಮಾರಿಕೊಂಡು ದವಸಂ ಕೆಲದಿನುಂಡು
ಕಡೆಗಾಣದಿರಲು
ಹೆಂಡರಂ ಬಿಟ್ಟು ಮನಕಂಡ ಕಡೆಗ್ಹೋದರಾ |
ಗಂಡರವರಂ ಬಿಟ್ಟು ಪೆಂಡರತಿ ಗೋಳಿಟ್ಟು |
ಚಾಂಡಾಲರಲ್ಲಿ ಕೆಲರುಂಡು ಕುಲಗೆಟ್ಟರಾ ಭಂಡ
ನಾನೇಂ ಪೇಳ್ವೆನು

೭೦

ಇನಿತಾದ ದುಷ್ಕಾಲ ಘನಕಷ್ಟದೊಳಗೆ ಬಡ |
ಜನಮುಳುಗಿ ಶರಣಬಸವನುಗೈವ ದಾಸೋಹ |
ದನುವರಿತು ಬಂದು ಬಂದುಣುತಿರಲು ವರಕೆಯಿಂ
ಧನ ಬಂದುಪಂ ಸರಿಯಲು
ಧನಿಕೋರ್ವನಿಂ ಚೋಳ ರುಣಮೊಂದು ಪೇರ್ಗೊಳ್ಳು
ತನವರತ ನಡಿಸಲೆಂದಿನೊಲು ಕಲುಬುರಗಿಯೊಳು |
ವನಜಭವಪುರವಾಸ ವಿನುತ ದೊಡ್ಡಪ್ಪಗೌಡನು
ನಿರುತ ಬಡತನದೊಳು

೭೧

ಬೇಸತ್ತು ಕೌಟುಂಬ ಪೋಷಣೆಗೆ ವ್ಯಾಪಾರ ।
ದೋಸುಗಂ ಜೋಳತರಲೈಸೆಂದು ಗಿರಿಬಾದಿ ।
ವಾಸ ಕೈತಂದಿಳಿದು ದಾಸೋಹದೊಳಗೆ ಪರಮೇಶ
ಶರಣಗೆ ನಮಿಸುತೆ ॥
ಏಸೊಂದು ಸಲ ಪೇಳ್ದೆನೈ ಶರಣ ನಮ್ಮಯ ನಿ ।
ವಾಸಕ್ಕೆ ನಡೆರೆಂದು ಧ್ಯಾಸಕ್ಕೆ ಬಾರದೇಂ ।
ದೋಷಮೆನ್ನದು ಪೇಳಲಾಗಿ ದೊರೆದಪೆನೆಂಬ
ಭಾಷೆ ಕೇಳುತ ನುಡಿದನು ॥

೭೨

ಹೇರೊಂದು ಜೋಳ ರುಣಭಾರಮಿಹುದೆನೆ ಕೇಳಿ ।
ಭೂರಿತೋಷದಿ ತನ್ನಪೇರು ಧನಿಕಂಗಿತ್ತು ।
ಚಾರುಶರಣನೆ ನಡೆವದೂರಿಗೆನೆ ಬರುವೆನೈ ಮೂರು
ದಿವಸಕೆ ನಿನ್ನಯಾ ॥
ಗಾರಕೆನೆ ಬರಿಗೋಣಿ ಹೇರುತೆತ್ತಿನ ಮೇಲು ।
ದಾರಿ ನಡೆತಂದು ಮನೆಸೇರುತಾಯತ್ತಿನಂ ।
ಮಾರಿ ಧನತಂದು ಮನೆಸಾರಿಸುತ ಶೃಂಗರಿಸ್ಯಪಾರ
ತೋಷದಿ ಜನರಿಗೆ ॥

೭೩

ಪೇಳಿದನು ಬರುವನೈನಾಳೆ ಶಿವಶರಣಮಣಿ ।
ಮೌಳಿ ಸಜ್ಜನ ವಿನುತ ಶೀಲ ಸಂಪನ್ನನೆನೆ ।
ಕೇಳಿ ಪುರಜನರೆಲ್ಲ ತಾಳಿತೋಷಾಬ್ಧಿಯೊಳ
ಗಾಳುತೇಳುತೆ ಬೀಳುತೆ ॥
ಬಾಳಿಕಂಭಂ ಪತಾಕಾಳಿ ನಿಲಿಸುತ ದಳಿರ ।
ಸಾಲು ಸಾಲ್ಗಟ್ಟೆ ಸಮ್ಮಾಳ ಸನ್ನಾದ ಚಿನಿ ।
ಗಾಳಿ ಹೆಗ್ಗಾಳಿ ಕೌಸಾಳ ತಮ್ಮಟಭೇರಿ ತಾಳಝಾಗಟೆ
ತಂಬುರಿ ॥

೭೪

ಕೇಳಿಜನ ಮೇಣ್ಪಾತ್ರ ಮೇಳದವರ್ಗೂಡೆ ಜನ ।
ಜಾಲ ಕಾದಿರುತಿರಲು ಬಾಲಿಯರು ತಮ್ತಮ್ಮ ।
ಮಾಳಿಗೇರುತ ಬರುವಕಾಲ ಸಂಭವಿಸಿತೆಂದಾ
ಲೋಕಿಸುವರತ್ತಲು ॥
ಶೈಲಬಾದಿಯ ಜನರ ಬೀಳುಗೊಂಡು ಪಲಪುರ ।
ಕಾಲಲಿತ ಶರಣಬರೆ, ಕಾಲುನಡೆಯಿಂ ಸೀಮೆ ।
ಮೇಲೆ ತಿಳಿಯುತಲಿ ಮನಲೋಲ್ಯಾಡಿ ವ್ಯಾಸಮುನಿ
ತೋಳು ಮುಖಬಿರಿದೆತ್ತುತೆ ॥

೭೫

ವಂದಿ ಭಟ್ಟಂಗಿ ಕವಿವೃಂದ ಮಾಗಧ ಗಮಕಿ ।
ಸಂದೋಹ ಛಲವಾದಿ ಮುಂದೆ ನಡೆತರಲು ಮದ ।
ಶಿಂಧೂರ ಹಯನೆರೆದ ಮಂದಿ ಕಲಕಲ ಧ್ವನಿಯ
ಗೊಂದಳವು ಮಾರ್ಗದೊಳಗೆ ॥
ಸಂದಣಿಸಿ ಜನರು ಕಿಷ್ಕಿಂದಮಾಗೆಲ್ಲಕಡೆ ।
ಇಂದುಧರ ಪರಾಕೆಂದು ಪಾಡಲು ದೇವ ।
ದುಂದುಭಿಯು ನುಡಿಸುತಲಿ ದಂಧಣಂ ಧಣಕೆ
ನುತಲಂದು ಪುರಜನರೆಲ್ಲರು ॥

೭೬

ಪಟ್ಟಣದ ವಾಸಿಗಳು ಶೆಟ್ಟಿಮಹನಾಡ ಚರ ।
ಪಟ್ಟದೇಶಿಕ ದೇವರಷ್ಟುಜನ ಮಹಾಜನ ।
ಪಟ್ಟದೇಸಾಯಿಗಳು ರಾಷ್ಟ್ರ ಪಾಂಡ್ಯರು ಪಾಂಡ್ಯ
ರಷ್ಟಭೋಗದ ಧನಿಕರು ॥
ಜಟ್ಟಿಗಳು ಚರಲಿಂಗ ನಿಷ್ಟುರಾಗಾರವಂ ।
ಬಿಟ್ಟೈದೆ ಭಕ್ತಜನರಿಷ್ಟ ಪಾಲಿಪನ ನೆರೆ ।
ದಿಟ್ಟಿಯುಂ ನೋಡಿ ಮನಮುಟ್ಟಿ ಕೊಂಡಾಡೆ ಸಲೆ
ತುಷ್ಟಿ ಪಡೆಯಲು ಬಂದರು ॥

೭೭

ಗೌಡದೊಡ್ಡಪ್ಪನೊಡಗೂಡಿ ಮನದಿಚ್ಛಿತಂ ।
ಬೇಡುವರು ಭಕ್ತಿಯಿಂ ಪಾಡುವರು ಕಣ್ಣಿನಿಂ ।
ನೋಡುವರು ಸುಗುಣ ಕೊಂಡಾಡಲಾಪೇಕ್ಷಿಪರ
ಬೀಡು ನಡೆದುದು ಹರುಷದಿ ॥
ನಾಡೆ ಶರಣನ ಕಂಡು ನೀಡಿ ಸಾಷ್ಟಾಂಗ ಮುದ ।
ಗೂಡಿ ಸಲೆ ಸ್ತೋತ್ರವಂ ಮಾಡಿ ಕೈ ಕೈಗಳಂ ।
ತಾಡಿಸುತಲುಘೆಯೆಂದು ಗಾಢದಿಂದ್ಹೊಗಳಿ ಕುಣಿ
ದಾಡುತಂ ತಮ್ತಮ್ಮೊಳು ॥

೭೮

ಗಡನೈದೆ ದೊಡ್ಡಪ್ಪನಡಿಗೆರಗಿ ಸ್ವಸ್ತಿಯುಂ ।
ನುಡಿದು ಶಿರವೆತ್ತಿ ಕೈಪಿಡಿಯಲ್ಕೆ ಜನರೆಲ್ಲ ।
ನಡಿಯೆ ಮುಂಭಾಗದೊಳು ಹೊಡೆಮದ್ದುಗೋಳವಿ
ಯಾರ್ಭಡಿಪಖಿಳ ವಾದ್ಯತತಿಯಂ ॥
ಗುಡು ಗುಡುಗು ಗುಡೆಂಬ ಕರಡಿನಾದವೆಸಿಯೆ ಮುಂ ।
ಗಡೆಯೊಳೂದುವ ಕಹಳೆ ಕೊಡೆ ಛತ್ರ ಚಾಮರಂ ।
ಪಿಶಿಪ ಜನರ್ಕೈದೆರ್ಯೀರ್ಕಡೆಬರಲು ಮೆರಸುತತಿ
ಸಡಗರದಿ ಕರತರುತಿರೆ ॥

೭೯

ಆದರಿಪ ಜನರಿಂದ ಬೀದಿಯೊಳಗೈತಪ್ಪ ।
ಸಾಧುವಂ ನೋಡಲೆಂದ್ರೈದೇರಿ ತಂಮ್ಮತ್ತಮ್ಮ।
ಸೌಧಾಗ್ರ ಪರ್ವತ ಪಯೋಧರಿಯರೆಲ್ಲ ಸಲೆ
ಮೋದದಿಂ ತಂಮ್ಮತ್ತಮ್ಮೊಳು ॥
ವಾದಿಸಿದರಕ್ಕನಿವ ಮೇದಿನಿಯು ಶಿವ ಚಾರು।
ಆದ್ರೈಯ್ಯನಾತ್ಮ ಭವಪಾದನತ ಜನರ ಸುರ।
ಪಾದಪನ್ನುತಿತತಿ ಶುಭೋದಯಂ ಲಿಂಗಾಂಗ
ಶೋಧಕದ ಘನ ಧೀರನು ॥

೮೦

ಬಂದೆನಿಲ್ಲಕ್ಕ ನೀನೆಂದಿಗಾಲಸಿಯು ನಾ ।
ಮುಂದೆ ಪೋಗುವೆನೆನ್ನ ಕಂದನು ಪೋದನು ನೆರದ।
ಮಂದಿಯೊಳು ನೀ ಮನಂ ಬಂದಾಗೆ ಬಾಯೆನಗೆ
ನಿಂದಿರಲು ಮನಸಾಗದು ॥
ಇಂದಿನದ ಸಂಭ್ರಮೇನೆಂದರಿದೆ ಉಳಿದ್ದಬ್ಬ।
ದಂದ್ಗಲ್ಲ ನೋಡು ಕಣ್ಣಿಂದ ಬರುವಡೆ ತೀವ್ರ।
ದಿಂದ ಬಾಬಾ ನೀರೆಯೆಂದಾಡಿ ಜವದಿ ಜನ
ಸಂದಣಿಗಳೊಳುಪೊಕ್ಕಳು ॥

೮೧

ಸಾರಂಗಮುಖಿ ಶಾಬ ಸಾರಂಗ ನಯನೆ ಜಿತ।
ಸಾರಂಗ ಗಂಧೆ ಕಚ ಸಾರಂಗ ಸಾರಂಗ।
ಸಾರಂಗ ಪೂರ್ಬೆ ಕಟಿಸಾರಂಗ ಧಮ್ಮಿಲ್ಲೆ ಸಾರಂಗ
ವಸನಧಾರಿ ॥
ಸಾರಂಗ ವಿಜಿತಗಳೆ ಸಾರಂಗ ರತ್ನಯುತೆ ।
ಸಾರಂಗ ಸಾರಂಗ ಸಾರಂಗದಿಂ ನಾರಿ।
ಸಾರಂಗ ಜನಕೆಲ್ಲ ಸಾರಂಗ ಪರಪುತಲಿ ಸಾರಂಗ
ದೋಲ್ ಬಂದಳು ॥

೮೨

ಸ್ಮರನೆಂಬತ್ವಷ್ಟ್ಯಾಶ್ಯತ್ಮ ಶರಶರಾಸನ ಛತ್ರ।
ತುರಗ ರಥ ನಾರಾಚ ಬಿರಿದು ಪಾರಿಕ ತೂಣ ;
ಕರಗಿ ಶರಕೆರೆದು ಸಲೆ ವಿರಚಿಸುತ ನಯನ ಸುಂದರ
ದಶನನಗೆ ಚರಣ ಮೇಣ್ ॥
ಕರಗಂಧ ಪೂರ್ಬು ಮುಖ ಸುರಸ ನುಡಿ ಕುಚ ಕಚಂ ।
ವರಗಾನ ಜಘನವಂ ಶರಣಜಯಕೆಂದು ಕಳು।
ಹಿರುವೊಲಿರೆ ನೋಡಲಾತುರಿಸಿ ಬಂದರು ಚಾರು
ತರ ದಿವ್ಯಸೌಂದರಿಯರು ॥

೮೩

ಶರಣನಂ ನೋಡಲಾತುರಿಸಿ ಬರುತಿಪ್ಪೋರ್ವ ।
ಸರಸಿಜಾಯತ ನಯನೆ ಮರಳ್ದಿಣ್ಣಿ ಪೊರವಾರ।
ಗಿರಿಪೋಲ್ವ ಕುಚ ಗೈದ ಸರಸಿಜೋದ್ಭವನೆನಿತು
ಮರುಳ ತಾನವ ನೆನ್ನಗೆ ॥
ಅರಸಂಚ ಗಮನಿಡದೆ ಕರಿಗಮನವಿತ್ತು ಮೇಣ್।
ಹರಿಮಧ್ಯಗೈದನೆಂದುರೆ ಬೈವುತೈತಂದು।
ನೆರೆನೋಳ್ಪ ಕಣ್ಣು ತನಗಿರಿಸಿದುಪಕಾರವಂ ಸ್ಮರಿಸಿದಳು
ಮನುತಾತನಾ ॥

೮೪

ಉಡುಗೆ ನಿರಿಗೈಯ್ಯುತಲಿ ಮುಡಿಕಟ್ಟಿಕೊಳ್ಳುತಲಿ।
ತೊಡುತೆ ಕರಕುಂಚುಕಂ ತೊಡೆದು ಘಣಿಯೊಳು ಮೇಣ
ಎಡಗೈಗೆ ಕುಂಕುಮ ಕರಡಿಗೆ ಬಲಗೈಯ್ಯೊಳಗೆ ಪಿಡಿದ
ದಂಬುಲ ಮೆಲಿಯದೆ ॥
ಸಡಲಿಯುಟ್ಟುಡುಗೆ ಕಾಲೆಡವಿಯೋಡುತಲಿರಲು।
ನಿಡುಸ್ವಾಸ ವೆಗ್ಗಳಿಸಲಡಿಗಡಿಗುಸುರ್ಗರೆದು।
ಪಿಡಿಶಿರದ ಪೋಲ್ಕೆ ಕುಚದ್ದುಡುಗಿಯರು ಬರುತಿಪ್ಪ
ಸಡಗರವುನೇನೆಂಬೆನಾ ॥

೮೫

ಆಲಿಗಲತಿಯು ಪಚ್ಚಿ ಕಾಲಿಗಂಜನವಿಟ್ಟು ।
ತೋಳುಬಂದಿಯು ಪದದ ಮೇಲಿನೊಳು ಪೈಜಣಂ ।
ತೋಳಿನೊಳು ಕೊರಳ ಜೋಮಾಲಿಕಟ್ಟಿಯೊಡ್ಯಾಣ
ಮೇಳವಿಸಿ ಕಂಠದೊಳಗೆ ॥
ವಾಲಿಮೂಗಿನೊಳು ಕಿವಿಯಾಲಿಯೊಳು ನತ್ತಿಟ್ಟು ।
ಶಾಲುಟ್ಟು ಶೀರೆ ತಲೆ ಮೇಲಿಂದೆ ಪೊತ್ತು ಗುಣ।
ಶೀಲ ಶಿವಶರಣನಂ ನಾಲೋಕಿಸುವ ಭರದಿ ಬಾಲೆ
ಯೋರ್ವಳು ಬಂದಳು ॥

೮೬

ಜಾಣೆಯರು ಕಲಕೀರವಾಣಿಯರು ಸಲೆ ಕಮಲ ।
ಪಾಣಿಯರು ಪನ್ನಂಗವೇಣಿಯರು ಚಂಪ ಸುಮ।
ಘಾಣೆಯರು ಕಾಳಾಹಿವೇಣಿಯರು ಕಲಹಂಸ
ಯಾನೆಯರು ನಡೆತರುತಲಿ ॥
ತಾಣತಾಣದಿ ನಿಂದು ಧೇನಿಸುತೆ ಶರಣನಂ ।
ಕಾಣುತಿವನೆರಡನೆಯ ಸ್ಥಾಣುವೆನುತಲಿ ಮೊಲ್ಲಿ।
ಸೂನುಗಳ ಸುರಿದು ಜಯಧ್ವಾನಮೆಸಗುತಲಿ ತವೆ
ಗೋಣಬಾಗಿದರೆಲ್ಲರು ॥

೮೭

ಈತನೇ ಶಿವನಸಂಭೂತ ಕರಿಪಾವು ಕಡಿ |
ದಾತನಂ ಬದುಕಿಸಿ ಕಿರಾತರಂ ರಕ್ಷಿಸಿದ |
ಭೂತ ಪಿಡಿದಯ್ಯನಂ ಪ್ರೀತಿಯಿಂ ಪೊರೆದು ಋಣ
ಶ್ವೇತಾಂಗನಿಂ ಕೊಡಿಸಿದಂ ||
ಈತ ತಸ್ಕರರ ಕರೆದೋತು ಧನಕೊಟ್ಟ ಸಲೆ |
ಪೂತ ಭೀಮಾದಾಟದಾತ ರಕ್ಕಸನ ತವೆ |
ಪೂತನೆಸಗಿದ ರೋಗಭೀತ ಕಬ್ಬಿಗರ ಪೊರೆದಾತ ನಿವ
ನೆನಲೋರ್ವಳು ||

೮೮

ಮಡದಿಗಾಣೆಯನಿಟ್ಟು ತಡೆದು ಗರ್ಭವು ಶಪಥ |
ಬಿಡುತಮಗನಂ ಪಡೆದು ಥಡಿಗೆ ಛಳಿಸೇರಿಸಿದ |
ಗಡನೆ ಬೇದಾಡೆನಾ ಪಡೆಯಿಂದ ನುತಿವೆತ್ತು |
ಮಡಿದಾಕಳದ ಜೀವನಂ ||
ಪಡೆದ ಕಣ್ಣಿಂ ಧಾನ್ಯ ಕೆಡಹುತಗಣಿತವಖಿಳ |
ಪೊಡವಿಜನರೆಲ್ಲರಂ ಬಿಡದೆ ಪೊರೆಯಲ್ ಬಂದ |
ಮೃಡನಿಜಂದೆನುತೋರ್ವ ಮಡದಿಪೊಡನಿಪ್ಪರಿಗೆ
ಕಡುತೋಷದಿಂ ನುಡಿದಳು ||

೮೯

ಈಶ ಶರಣೇಶ ಬರುವಾ ಸಮಯದೊಳ್ಕೈಲು |
ವಾಸಿನೊಳುಗಿರುತಿಪ್ಪ ಮಾಸಪತಿ ಮುಖಿಯರಭಿ |
ಲಾಷೆಯಿಂ ಪಾಡಿ ಜಯ ಘೋಷದೊಳು ಕರ ಸುಮನ
ಸೂಸಿ ಕೈಪೆರಗುಟ್ಟುತೆ ||
ತೋಷ ಶರಧಿಯೊಳು ಮನವೀಸಾಡುತೀ ಪದ ಕು |
ಶೇಷಯಂ ನೋಡೆ ಭವಪಾಶ ಮೋಚನವೆಂಬ |
ವಾಸೆಸುಳ್ಳೆಂಬುವತಿ ದೋಷಜೀವಿಗಳಿಗೆಮ ಶಾಸನೆ
ಸುಗುವನೆಂದರು ||

೯೦

ಜಯಜಯತು ಶರಣ ಯಮಭಯ ನಿವಾರಣ ಶರಣ |
ಜಯ ಕಾಮಮದ ಜಿತಾಭಯದ ಕಾರಣ ಶರಣ |
ಜಯ ಜಯತು ಷಡುವರ್ಗ ಚಯ ವಿಮಾರಣ ಶರಣ
ಜಯತು ಜಯತು ಜಂಗಮ ಪ್ರಾಣಿಯೆ ||
ಜಯತು ಜಯ ಸದ್ಭಕ್ತ ಜಯತು ಸದ್ಗುಣಯುಕ್ತ |
ಜಯತು ಜೀವನ್ಮುಕ್ತ ಜಯನುತ ಜನಾಸಕ್ತ |
ಜಯನವೀನ ಮಹಿಮೋದಯ ಶರಣಭವ ಮರಣ
ಜಯ ಕಿಂಕರ ಶಂಕರಾ ||

೯೧

ವಾರಿಜಾಕ್ಷಿಯರು ಸಲೆ ವಾರಿ ಚರಲೋಚನದ |
ಸೀರೆಯರು ಕುಡಿನೋಟ ವಾರಿಕಂಗಳೆಯರು ಗ |
ಭೀರ ಶಾರ್ದೂಲಶನದೋರಿಗ್ಯಂಬಕದವರು
ಚಾರು ಶರಣನ ನೋಡಿದರ್ ||
ಕೀರವಾಣಿಯರು ಪಿಕಸಾಗರಾನೆಯರು ತವೆ |
ಚಾರು ಭಾಷಣಿಯರುಂ ಸ್ಮೇರಯುತ ವಚಿಯರ್ಸು |
ಧಾರಸಂ ಪೋಲ್ವ ನೃತ ಪೂರಿತ್ವಾಗ್ದೇವಿಯರುದಾರಿ
ಶರಣನ ಪಾಡಿದರ್ ||

೯೨

ಮುಂತೆ ಮಡಿಯಮ್ಮನೇ ನೋಂತು ಪಡೆದಳೊನಾಡೆ |
ಕಂತುಹರಸಮ ದಿವ್ಯಸಂತತಿಗೆ ಮೊಲೆಯುಣಿಸಿ |
ದೆಂತುಟ್ಟೈ ತಿಳಿಯೆ ಸುಕೃತಂತರೆಂದಬಲೆಯರ
ಸಂತತಿಯು ಪೊಗಳುತಿರಲು ||
ದಂತಿವಾಹಕ ತುರಗ ಸಂತತೇರಿರ್ಪಜನ |
ತಿಂಥಿಣಿಗಳೊಡ ಮೆರೆಯುತಂತೆ ದೊಡ್ಡಪ್ಪನನಿ |
ಶಾಂತ ಕೈತಂದು ಸಲೆಶಾಂತ ನಿಭ್ರಾಂತ ನಿಶ್ಚಿಂತ
ಖಿಳರೊಡಗೂಡುತೆ ||

೯೩

ದ್ವಾರ ಕೈತರಲು ಪುರನಾರಿಯರು ಬೆಳಗಿದರು |
ಆರುತಿಗಳಿಳಿಸುತುಪ್ಪಾರತಿಯುಪಾಯಾವ |
ಧಾರಮೆನುತೈದೆ ಶೃಂಗಾರಿಸಿಪ್ಪರಮನೆಗೆ ಸೇರಿಸುತ |
ಮೂರ್ತಗೊಳಿಸಿ ||
ಪೌರಜನರೆಲ್ಲ ಪದವಾರಿಜಕ್ಕೆರಗಿ ಫಲ |
ನಾರಿ ಕೇಳಿತ್ತು ಘನಸಾರ ಜ್ಯೋತಿಯ ಬೆಳಗಿ |
ಭೂರಿ ತೋಷದೊಳವರ ಚಾರುದಾಸೋಹಕ್ಕಪಾರ
ಸಾಹ್ಯಂ ಗೈಯ್ಯುತೆ ||

೯೪

ಕೇಳಲಪ್ಪಣೆ ನಾರಿಕೇಳ ಖರ್ಜೂರದ್ರಾಕ್ಷಿ |
ಬಾಳೆ ಫಲಗಳನಿತ್ತು ಪಾಲಿಸಲಶೀರ್ವಾದ |
ಛಾಳಜಾಚುತಲೆರಗುತೇಳುತಲ ತಾವು ತಮ್ಮಾಲ
ಯದ ಕಡೆಗ್ಹೋಗಲಾ ||
ಮೇಲೆ ದೊಡ್ಡಪ್ಪನನುಕೂಲೆ ಧರ್ಮಾಂಗಿ ಸತಿ |
ನೀಲಮ್ಮ ಬಂದವರ ಕಾಲಿಗೆರಗಿರಲವಳ |
ನಾಲೋಕಿಸುತ ತಂಗಿ ಬಾಳೆಂದು ಪರಕೆಯಂಭಾಳ
ತೋಷದೊಳೀಯ್ಯುತೆ ||

೯೫

ಗಂಗೋದಕಮ್ಮಿಂದು ಲಿಂಗಾರ್ಚ ಚರಪೂಜ ।
ನಂ ಗೈದು ಪದವಾರಿಯಂಗೊಂಡು ಚಾರುತರ ।
ಜಂಗಮ ಪ್ರಸಾದವಂ ಸಾಂಗಮೆನೆ ಸಲಿಸಿ ಭವ
ಹಿಂಗಿಪ ಶಿವಾನುಭವದಾ ॥
ಲಿಂಗಾಂಗ ಸಾಮರಸ್ಯಗಳಾ ಸಕೀಲ ವಚ ।
ನಂಗಳೋದುತೆಲೆಂದಿನ್ನಾಂಗೆ ದಾಸೋಗೆಸಗು ।
ತಂಗಮನ ವಾಚಾತ್ರಯಂಗಳಿಂದಿರುತಿರುವ
ಮಂಗಳಾಂಗೆಂಬಲ್ಲಿಗೆ ॥

೯೬

ವರಪುರದ ಶಿವಲಿಂಗಶರಣಬಸವನಚರಿತೆ ।
ಗುರುಬಸವಣಾರ್ಯ ಪದಸರಸಿರುಹ ಲೀನಮಧು ।
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ॥
ವಿರಚಿಸಿದನೋದಿಸುವ ಬರೆದಗೋದುವಗೆ ಪರ ।
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ ।
ದೊರಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ರುದ್ರಸಂಧಿಯು ಭವ್ರದಿಂ ॥

**ಸಂಧಿ ೧೧ ಕ್ಕೆ ಪದ ೯೫೪ ಕ್ಕಂ ಮಂಗಳಂ.**



ಶ್ರೀ ಶರಣಬಸವೇಶ್ವರ ಪ್ರಸನ್ನ

# ಹನ್ನೆರಡನೆಯ ಸಂಧಿ

ಸೂಚನೆ॥ ಅಂಧರಿಗೆ ಕಣ್ಣಿತ್ತು ದೊಡ್ಡಪ್ಪನಾತ್ಮಜನ ।
ನಂದದಿಂ ಪೆರರ್ಗಿತ್ತು ಬಂದೆನವಾಜನಿಗೆ ।
ಗಂಧಲೇಪಿಸಿ ಕಡುಗನಿಂದ ಗೋಬಿಡಿಸುತಿರಲೊಂದು ಸ್ಥಲಪಡಕೊಂಡನು ॥

೧

ಶೃಂಗಿಗಮುನಾಕಾಶ ಗಂಗಾಧರಂ ಸರ್ಪ ।
ಮಂಗಳಾರಮಣ ಮಾತಾಂಗ ಚರ್ಮಾಂಬರಂ ।
ರಂಗನಾಯನಾಂಕ ಪದ ಭೃಂಗಿ ತಾಂಡವಮೋದ
ಭೃಂಗ ಕುಲನಾರಿ ವಿಜಿತಾ ॥
ತುಂಗನಾಮ್ನಾಯ ಸುತರಂಗ ಜಯಜಯತು ಶಿವ ।
ಲಿಂಗ ಸಚ್ಚರಣ ಜನಸಂಗ ಭವ ಮರಣ ಭಯ ।
ಭಂಗ ಜಗಸಾಹಿ ಧವಳಾಂಗ ಮಹಿಮೋತ್ತುಂಗ
ಗಾಂಗೇಯ ತಾತನಿರುತಾ ॥

೨

ಶರಣಬಸವೇಶನಾ ಪುರಗೌಡ ದೊಡ್ಡಪ್ಪ ।
ಹರುಷದಿಂದಲಿ ಗೈವ ಪರಿಚಯ ಕೃತಿಗೊಲ್ದು ।
ಪರಮಾನುರಾಗದಿಂದಿರುತಿರುತ ದಾಸೋಹನಿರುತೆಸಗಿ
ಶ್ರದ್ಧೆಯಿಂದೆ ॥
ಚರರಿಚ್ಛಿತವನಿತ್ತು ಮೆರೆಯುತಿರೆ ಬಹುರೋಗ ।
ಭರಿತ ಜನರೈತಂದು ನೆರೆಲೇಸು ಪಡೆದು ಹಿಂ ।
ದಿರುಗುತಿಹುದೊಬ್ಬುಟ್ಟು ಗುರುಡ ಕೇಳುತ ಬಂದು
ಚರಣಕಾನತನಾದನು ॥

೩

ಅವನತಂಪಾದಕಾದವನ ಮಸ್ತಕ ಮುಟ್ಟಿ ।
ಶಿವಮಸ್ತು ನಿನಗೆಂದು ತವೆ ಪರಸಿ ನೀನಾರು ।
ಜವದಲೇಕೈತಂದೆ ಭವಣೆಯೇಂ ನಿನಗದಂ ವಿವರಿಸೆನೆ
ಕೇಳುತವನು ॥
ನಿಮಗಗೋಚರವಾವುದ ವಿರತಂ ಕಣ್ಗಾಣ ।
ದವನಾನು ಲೇಸ ಸಂಭವಿಸೈದೆ ಕಲಿಯುಗದ ।
ಶಿವನೆನಲು ತೊಡೆದು ಭಸ್ಮವು ಚರರಘೂಳಪದ ಭುವನ
ವಂ ಸಿಂಪಡಿಸಲು ॥

೪

ಪಳಮೊಂದರೊಳಗೆ ಕಂಗಳು ಬರಲು ಹರುಷವೆ ।
ಗ್ಗಳಿಸಲದಕಿರಲು ತನುಸ್ಥಲನೆರೆಯದೋಗ್ಗುತಾ ।
ನೆಲೆಬಿಟ್ಟತೆಂಬಂದದಿಳಿದುದತಿಯಾನಂದ ಜಲಮವನ
ಕಣ್ಗಳಿಂದ ॥
ಸಲಿಲದೊಡೆದೊಸ್ತು ಸಂಕುಳಮೆಲ್ಲ ನೋಡುತಾ ।
ಬಳಗಮುಲ್ಲಿರುವಜನಗಳು ಕಂಡು ತನ್ನ ಕಂ ।
ಗಳಿಗೆ ಶವೆಪ್ರೇಮದಿಂ ಬೆಳಗಿತ್ತು ಪೊರೆದ ಮಂಗಳ
ಮಹಿಮನಂ ಪಾಡಿದಂ ॥

೫

ಶರಣಬಸವೇಶ ಜಯಕರುಣ ನಿಧಿಕೋಶ ಜಯ ।
ಮರಣ ಭಯನಾಶ ಜಯಚರಣ ನತಪೋಷ ಜಯ ।
ಶರಣಮನವಾಸ ಗುಣಭರಣೆ ಜಯ ಯಶ ಸುಧಾ
ಕಿರಣ ಸಂಕಾಶ ಜಯತು ॥
ಪರಿಪೂತ ಖ್ಯಾತ ಸಚ್ಚರಿತ ಸದ್ಗುಣ ಭರಿತ ।
ಕರಭಜಕನಿಕರ ಶಂಕರ ಸುಕರ ವಿನುತೌಘ ।
ನೆರೆಪೊರೆ ಸದಾ ಪದಾತ್ಕರ ಗಡನೆ ಬಿಡದೆ ಮೃಡ
ನೆರಡನೆಯರೂಪನಂದು ॥

೬

ಕಾಲಿಗೆರಗುತನುಜ್ಞೆ ಕೇಳುತವ ಪೋಗಲಾ ।
ವ್ಯಾಳಿಗಲ್ಲಿರುವ ಜನಜಾಲವರಿದೆವು ಭೂತ ।
ಕಾಲದೊಳು ಕವಿಶ್ರೇಷ್ಠ ಕಾಳಿದಾಸಾಖ್ಯ ಶಶಿಮೌಳಿ
ಮಲ್ಲೀನಾಥಗೆ ॥
ಕಾಳಹಸ್ತೀಶಂಗಭೀಳ ಕನ್ನಪ್ಪನಾ ।
ನೀಲಾಂಗ ಶಂಕರಗೆ ಕೀಳಿಕಣ್ಣರ್ಪಿಸುತ ।
ಲಾಲಿಗಳು ಪಡಮುದೇಂ ಮೇಲಲ್ಲ ನಾವಿಂದಿನಾಲೋಕಿಸಿ
ದು ಘನವಲಾ ॥

೭

ಮಾಡಿದನೆ ಧನ ದಾಸಿ ನೋಡಿದನೆ ದೃಢವವಗೆ ।
ಬೇಡಿದನೆ ಕಣ್ಣು ತವೆ ಕಾಡಿದನೆಯಾಲಸ್ಯ ।
ಮಾಡಿದನೆಯಾಚಂದ್ರಚೂಡನೋಲೆಂದು ಕೊಂಡಾ
ಡುತಿರೆ ಜನರೆಲ್ಲರು ॥
ನಾಡುನಾಡಿನ ಜನರು ಬೇಡಿಕೊಂಡ್ದುರಕೆ ಕೈ ।
ಗೂಡಲಲ್ಲಿಗೆ ಬಂದು ನಾಡೆ ಪರಸಿಯನೆತ್ತಿ ।
ಮಾಡಿದಾನಂದದಿಂ ನೋಡಿ ಶರಣನ ಗುಣವ
ಪಾಡುತಿಪ್ಪರು ಸರ್ವದಾ ॥

೮

ಮರಳೊಮ್ಮೆ ರಾಜಶೇಖರನೆಂಬ ಜನ್ಮಾಂಧ ।
ಶರಣ ದರುಶನಕೆ ಬಂದಿರುವಾಗಲವನಕ್ಕ ।
ಬರುತ ಗಾಂಗಾದೇವಿ ಚರಣಕೆರಗೆದ್ದು ಕುಳ್ಳಿರ
ಲವಳ ಕಂಡು ಜನರು ॥
ಕುರುಡನಾದಂಗೆ ಕೊಡುವರು ದಾರು ಕನ್ಯ ನೀಂ ।
ಕರುಣದಿಂ ಮಗಳಿತ್ತು ಪರಿಣಯಂ ಗೈಯನ್ನ ।
ಉರಿದೆದ್ದು ಮೃಗನಯನೆ ಹರಿಮಧ್ಯ ಚಂದ್ರಮುಖಿ
ಯರುಣದುಟಿ ಸರ್ವಾಂಗದಿಂ ॥

೯

ಸುಂದರಿಯಳಾದೆನ್ನ ನಂದನಿಗೆ ನೀವು ಜ ।
ನ್ಮಾಂಧನಿಗೆ ಕೊಡುಯೆಂಬ ಮಂದಮತಿಗೇನೆಂಬೆ ।
ನೆಂದೆದ್ದು ಘನರೋಷದಿಂದ ಬರುವನಿತಕ್ಕೆ ಮಂದಿರ
ದೊಳವಳ ಮಗಳು ॥
ಅಂಧಳಾಗಿರೆ ಮನನ್ನೊಂದೆಮ್ಮ ತಮ್ಮನಂ ।
ನಿಂದಿಸಿದೆನಾಲೋಕ ವಂದ್ಯನೆದುರೆನ್ನಗದ ।
ರಿಂದೊದಗಿತಯ್ಯಯ್ಯೊದಂದುಗಿನಿತೆನುತೆ ಜವ
ದಿಂದ್ಯೆದು ಶರಣನಡಿಗೆ ॥

೧೦

ಎರಗುತೆಂದಳು ನಾನು ಬಿರಿನುಡಿಗಳಾಡಿದುಂ ।
ಮರೆದುಮೀರ್ವರು ನಿನ್ನ ಚರಣಕೊಪ್ಪಿದಮಕ್ಕ ।
ಳಿರುವರೈ ಮನಬಂದ ಪರಿ ಮಾಳ್ಪುದೆನೆ ಕೇಳಿ ಶರಣಪ್ಪ
ನದಕೊಪ್ಪುತೆ ॥
ಕರುಣದಿಂ ಕಣ್ಣಿತ್ತು ಪರಿಣಯಂಗೈಸಲ್ಕೆ ।
ನೆರೆದ ಜನರೆಲ್ಲ ಘನಹರುಷದಿಂ ಕೊಂಡಾಡು ।
ತಿರುತಿರಲು ರಾಜಶೇಖರನಕ್ಕನವನ ಸತಿ ನೆರೆ ಪೊಗಳಿ
ಮನೆಗೋದರು ॥

೧೧

ವಾಸರಿನ್ನೊಂದರೊಳು ಭೂಸುರನು ಕುರುಡರೊ ।
ಳ್ವೇಷ ಧರಿಸುತೆ ಬಂದು ಪೋಷಿರೆನುತೆರಗಲಿ ।
ಕ್ಕೇ ಸುದ್ದಿಯನೆ ಪೂರ್ವದೋಷದಿಂದಂಥಾದೆ ಲೇಸ
ಗೈಯ್ಯನೆ ಕೇಳುತೆ ॥
ಈಶಗೈದುದು ಬಿಡಿಸಲೇಸರವರೈ ನಾವು ।
ವಾಸಕ್ಕೆ ಪೋಗೆನಲು ಹಾಸದಿಂ ಕಣ್ದೆರೆಯ ।
ಲಾಸಮದೊಳಗವಗೆ ನೇಸರಡಗಿದೊಲಾಗೆ ಹಾ ಶಿವನೆ
ಕೆಟ್ಟೆನೆಂದು ॥

೧೨

ಅಳುತ ಶರಣನ ಪಾದ ನಳಿನಗಳಿಗೆರಗಿ ಕಂ ।
ಗಳನಿತ್ತು ಪೊರೆಯನ್ನಖಲಕೃತ್ಯ ನೋಡದಲೆ ।
ಸುಲಭ ಸಜ್ಜನನೆಂದು ಸಲೆ ಪೊಗಳಲವಗೊಲ್ದು ಬೆಳ
ಗಿಡಲು ನಯನಗಳಿಗೆ ॥
ಇಳೆಯೊಳಿಂತಾರ್ದಿಂದೆ ತಿಳಿಪುಲಿಲ್ಲೆಂದು ಜನ ।
ಗಳು ಪೊಗಳಿ ತಮ್ಮತಮ್ಮ ನಿಳಯಕೋಗಲು ಶರಣ ।
ತಿಲಕ ಸಂತೋಷದಿಂ ಮಲಹರನ ಪೂಜಿಸುತ ಬಲು
ಸೌಖ್ಯದಿಂದಿರುತಿರೆ ॥

೧೩

ವಂದೆಯರು ಭಕ್ತಿಯಿಂ ಬಂದು ಕೊಂಡಾಡುತಲಿ ।
ಕಂದನಂ ದಾರಿದ್ರದಿಂದ ನವಿದವರು ಧನ ।
ವೃಂದವಂ ಬಹುರೋಗ ಸಂದ ಜನರಾರೋಗ್ಯ
ಪೊಂದಿಪೋಪರು ತೋಷದಿಂ ॥
ಮಂದಿಗೊಂದಣದೊಳಗದೊಂದು ದಿನ ವಿಶ್ರಾಂತಿ ।
ಯಂದೊರೆಯದಿರೆ ಯಶೋ ಸುಂದರಿಗೆ ಬಹಳ ತಲೆ
ಸಂದುನೋವೆದ್ದು ಮನೆಯಿಂದ ಹೊರಹೊರಟು ಮನ
ಬಂದತ್ತ ಚರಿಸಳನಿಶಂ ॥

೧೪

ಶ್ರೀರಜತ ಶೇಷಪತಿ ಐರಾವತಮ್ಮತ್ತೆ ।
ಮಾರಾರಿ ಶಾರದೆಯ ನಾರದನ ನೀರದದ ।
ಗೌರತನತನಗೆ ಕೈಸೇರಿ ಶರಣನ ಕೀರ್ತಿನಾರಿ ಮೌಕ್ತಿಕ
ಮೊಲ್ಲಿಯಾ ॥
ಹಾರಘನಸಾರ ಸುಪಟೀರ ವರಕ್ಷೀರ ಸಲೆ ।
ನೀರಜಗಳು ಶರಣನುದಾರ ಗುಣಕಿವು ಸಮಂ ।
ಬಾರವೆಂದಿದನೊಂದೆ ಮಾರಲಿಕೆ ದೇಶಸಂಚಾರವಂ
ಗೈವಳನಿಶಂ ॥

೧೫

ಸುರಗಿರಿಗಚಲತನವಮು ಸುರಕರಿಗೆ ಮದ ಮಾರ ।
ಹರಕಂಠದೊಳಗೆ ಬಿಷಗೆರೆಯಮರಧೇನು ಪಶು ।
ಉರಗಪತಿಗುರಪದ್ಮಕರಗುವದು ಚಂದ್ರಸಿಗೆ ಸುರ
ನದಿಗೆ ತಿರಗುವದನು ॥
ಸರಸತಿಗೆ ನಾಶಿಕದ ಕೊರತೆಯುಂ ಮತ್ತೆ ಪಾಲ್ ।
ಶರಧಿಗತಿ ಜಡತನದ ವೆರಕವಿರಲೆನಗಾವ ।
ಕೊರತೆಯಿಲ್ಲೆಂಬುತಲಿ ಶರಣನ ಯಶೋಮಡದಿ
ತಿರುಗಿದಳು ಧಾರುಣಿಯೊಳು ॥

೧೬

ಶರಣಬಸವನ ಕೀರ್ತಿ ತರುಣಿ ಬಹುದೇಶ ಸಂ ।
ಚರಿಸುತ್ತೈತಂದಳಾ ಪರುವತಾಬಾದಿಗಾ ।
ದರಗೊಳ್ಳುತಖಿಳರಿಂದರುಹಿದಳು ತನ್ನ ಪತಿ ಚರಿತೆ
ಯಿನಿ ತುಳಿಯದಂತೆ ॥
ಚರಣನತರಾದರ್ಗೆ ತರುಳರಂ ಧನವು ಮೇ ।
ಣಾರುಜೆ ಗೈದವಯವದ ಕೊರತೆ ಲೇಸೆಸಗುತ್ತ ।
ಕುರುಡರಿಗೆ ಕಣ್ಣಿತ್ತ ಪರಿಪೇಳಲದು ಮುಚ್ಚಿಗರ
ನಾಯಕಂ ಕೇಳುತೆ ॥

೧೭

ಬಲುಜವದಿ ತನ್ನ ಕಿವಿಗಳ ಮುಂದುಮಾಡಿ ಸ ।
ಪ್ಪಳ ಧೋರಣೆಂದೊಸ್ತುಗಳಜ್ಞಾತಾಳಿ ಮುಂ ।
ದೆಳೆಯುತಿಹ ನರನ ಕೈಯೊಳಗಿರುವ ಬಡಿಗೆ ಕೊನೆ
ತಳೆದೊಂದು ತನ್ನ ಕರದಿ ॥
ಆಳತಿಗತಿ ಗಳೆದು ಪದತಳ ಮೇಲಕೆತ್ತಿತ್ತಿ ।
ಕೊಳುತ ಮೆಲ್ಲನೆಯೂರಿ ನೆಲಕೆ ನಡೆತಂದು ಪದ ।
ನಳಿನಗಳಿಗೆರಗಿ ಕಂಗಳ ಪಡೆದುಕೊಂಡವನು ಸಲೆ
ಶರಣನಂ ಪಾಡುತೆ ॥

೧೮

ಗುರುವೆ ಕೇಳ್ನೀವೆಮ್ಮ ಪರುವತಾಬಾದಿಯೊಳ ।
ಗಿರುವಾಗ ಮಹಿಮೆಗಳನರಿದುಪೇಕ್ಷಿಸಿ ಕೇಳ ।
ದಿರುವ ಕಾರಣದಿ ನಾ ನೆರೆಕಷ್ಟಪಟ್ಟೆನೀ ದುರಿತಕ್ಕೆ
ಪ್ರಾಯಶ್ಚಿತಂ ॥
ಮರಿಯದೆನ್ನೀಜನ್ಮವಿರುವನಕ ಪ್ರತಿ ಶೀತ ।
ಕರವಾರಗೊಂಬೆನ್ನೈ ದರುಶನಿಲ್ಲೇನಾಗ ।
ಉರೆಯುತ್ಸವಂ ಗೈಯ್ಯುತಿ (ರಲಿ ಬೇಕೆಂದುಮಾಡಿ)
ರುವೆನೆಂದೆರಗಿ ಪದಕೆ ॥

೧೯

ಈಶಕೊಂಡಪ್ಪಣೆಯ ತೋಷದಿಂ ಪೋಗಲವ ।
ನೀಶ ಶರಣನು ದಿನಂ ದಾಸೋಹ ಗೈಯ್ಯುತಿರ ।
ಲೇಸುಫನ ಬರಲೊಂದು ವಾಸರಕೆ ನೆರೆಯದಿರಲಾ
ಸಮಯದಲಿ ಚಿಂತಿಸಿ ॥
ಆಶೆಯಿಂ ಬೇಡಲಾಯಾಸ ಜನಕದರಿಂದ ।
ದೋಷಮೆನಗಹುದು ಪರಮೇಶ ಗತಿಯೇನೆಂದು ।
ಪಾಶಿಕೆಯೊಳೊರಗಿನಿತು ರೋಷವೇಕೆನುತ
ನಿಜಧ್ಯಾಸಗೈದಿಂತೆಂದನು ॥

೨೦

ಸಾಂಬನಂ ಶರಣ ಸಕುಟುಂಬನಂ ಮುದಿತ ಹೇ ।
ರಂಬನಂ ರವಿಕೋಟಿ ಬಿಂಬನಂ ರಮಿತ ಜಗ ।
ದಂಬನಂ ವಿಶ್ವದಾರಂಭನಂ ರಾಜಧರನಂಬುಜಾಂಬಕ
ಮಿತ್ರನಂ ॥
ಜಂಭಾರಿಜಾತ ಶರದಾತನಂ ಪಾತನಂ ।
ಕಂಬಲಾಶ್ವತ ಗಾನಪ್ರೀತನಂ ಖ್ಯಾತನಂ ।
ಕಾಂಬೆನೆಂದಾಂ ಮದನ ಡಿಂಬಹರ ದುರಿತ ಗಿರಿ
ದಂಭೋಳಿ ಭೋಳೇಶನಂ ॥

೨೧

ಮಾದಿಗನ ಕೂಡುಂಡು ವ್ಯಾಧನೆಂಜಲತಿಂದು ।
ಕಾದುತಚ್ಚುತನಿಂದ ಪಾದಗಳ ಬಿಗಿಸಿ ಕೊಂ ।
ಡಾದೈತ್ಯವರನ ಗೃಹಕಾಯ್ದು ಚಾಂಗುಣೆ ಪುತ್ರನಾ
(ಬಿಡದೆ ಸಲುಹಿದವನೆ) ॥
ಕೋದು ಬಾಣಸನುಂಡು ವಾದಿಸಿದೆ ನೀ ನಕ್ಷ ।
ಪಾದನೊಳು ಹರಿಯ ಘನವಾದರಿಂ ಸತ್ಯವೈ ।
ಪೊಯ್ದುಳ್ಳುಟ್ಟಲೆ ನಿನ್ನನಾದಿಪರಿಲ್ಲೆಂದು ಮೇದಿನಿಗೆ
ಬರುವ ವಾದಿಯಾ ॥

೨೨

ಇಸಿತು ಬಗೆಬಗೆಯ ಯೋಚನೆಯೊಳಗೆ ಕಣ್ಮುಚ್ಚ
ಲನಿತರೊಳು ಚರರೂಪಿ ಮನುಮಥಾರಿಯು ಬಂದು ।
ಕನಸಿನೊಳು ಶರಣಬಸವನಿಗೆ ಪೇಳಿದನೇತರೆಣಿಕೆ
ಬಿಡುಯಿಂದಿನಿಂದಾ ॥
ಹಣ ಸಹಸ್ರ ಕೊಂಡೊಂದು ತನುಜನಂ ಕೊಡುಮತ್ತೆ ।
ಘನಿಕರಿಂ ಕೊಂಡು ಬಡಜನರಿಗಿಡು ದಾಸೋಹ ।
ನನುದಿನಂ ನಡೆಸೆಂಬುದನು ಕೇಳುತೆಚ್ಚತ್ತು ಘನ
ಹರುಷವಂ ತಾಳುತೆ

೩೩

ಹರನಿರೂಪಂಗೈದ ತೆರನೆಸಗುತೊಂದು ಸಾ।
ಸಿರಹಣಂಗೊಂಡು ಬಹು ಜನರಿಂಗೆ ಸಂತಾನ ।
ಕರುಣಿಸುತ ದಾಸೋಹ ನಿರುತೆಸಗಲದರಿಂದ
ಸಿರಿಪೆಚ್ಚಿತಾ ನಾಡಿನಾ ॥
ಬರಡಾವ್ಗಳೀದು ಪಾಲ್ಕರಿಯೆ ಕೆರೆ ತೊರೆ ಸರಸಿ ।
ಶರದುಂಬಿದುಳುಕೆ ಝೇಂಕರಿಸುವಳಿ ಗಿಳಿ ಪಿಕಂ.।
ಸರವೆತ್ತಿ ಪಾಡೆ ಶೃಂಗಾರದಾಳುತಖಿಳ ಜನನಿರುತ
ಚರಿಸುತಲಿರುವರು ॥

೩೪

ಬಡತನದಿ ಬಳುಕುವದು ಹಿಡಿತಕೊಳಗಾಗುವದು ।
ಸಡಲಿಸುವದಂಬರು ಗುರಿಡುತಕಾನುವದು ಸಲೆ ।
ಮಿಡುಕುವದತಿ ದೈನ್ಯವಂ ಹೊಡೆವುದಂ ನಿಟ್ಟುಸುರು ।
ಬಿಡುವದಂ ಕಡಿತದಿಂದಾ ॥
ಬಡಿವುದಂತವೆ ಘಾಯು ಮಡದಿಯರ ನಟುಮುಡಿಗ ।
ಉಡುಗೆ ಕುಚನುಡಿ ಪಿರ್ರೆ ಕಡುರತಿಯೊಳಧರದೊಳ ।
ಗೆಡೆಗೊಂಡವಲ್ಲದಾವೆಡೆಯೊಳಿಲ್ಲಾ ನಾಡನಡುವ
ಸೂಯದಿ ಹುಡುಕಲು ॥

೩೫

ಕಠಿನತನಗಿರಿಗೆಗತಿ ಕುಟಿಲ ಉರಗಕೆ ಮುನಿಗೆ ।
ಹಟಯೋಗ ಆನೆಗುತ್ಕಟಮದಂ ಗಿಳಿಗೆ ಸಂ ।
ಕಟವು ಶಿವನಾಮರುಣದುಟಿ ನಾರಿಯರ ಮುಖದಿ
ಕಟಿಕಾಲ ಭೇದದೊಳಗೆ ॥
ಕಟುಖಡ್ಗಧಾರಿಯೊಳು ಶಠತೆ ಷಡುವರ್ಗದೊಳು ।
ಚಟುಂಬಲೆಯುಂಬಕದಿ ಕಟಪಿಟಿಯು ಶಾಸ್ತ್ರವಂ ।
ಪಠಿಸುವೆಡೆಯೊಳಗೆ ಸಂಘಟಿಸಿರಲು ಮತ್ತೆಲ್ಲಿ
ದಿಟಕಾಣೆನಾ ದೇಶದಿ ॥

೩೬

ಪಾಡು ಮಾಮರಗಳೊಳು ಬಾಡುಮುದ್ಯಾನದೊಳು ।
ಬೀಡುತರು ಜಾಲದೊಳು ಹೇಡಿ ಚಳಿಗಾಲದೊಳು ।
ಯೋಡಿಸುವದುಪಹಾರ ಮಾಡುವೆಡೆ ಸರಸಿಯೊಳು
ಕಾಡಿಗಳ ಸಂಚಾರಿಯು ॥
ಮೋಡ ಮಳೆಗಾಲದೊಳು ಮಾಡಿಸಿ ತರ್ಪಣದೊಳು ।
ಮೋಡಿ ಗಾರುಡದೊಳಗೆ ಗೋಡುಜಲ ಪರಿವವೆಡೆ ।
ಕಾಡು ತರುಣಿಯರು ಕಲೆಗೂಡಿರುವದಿಂನೆಲ್ಲಿ
ನೋಡಲಿಲ್ಲಾ ನಾಡೊಳು ॥

೩೭

ಹಾದರದ ಸುದ್ದಿಯಂ ಸೋದರದ ಮಾವನೊಡ ।
ಕಾದಿ ಕೊಲ್ಲಿದ ವಾರ್ತೆ ಸಾಧಿಸಿದ ಚೌರ್ಯವಂ ।
ನೋದುವಡೆ ಭಾಗವತಮಾದಿ ಭಾರತದಿ ದಾಯಾದ
ಜನ ಬಡಿದಾಟವು ॥
ವಾದ ನ್ಯಾಯದಿ ಲಿಂಗಭೇದ ವ್ಯಾಕರಣದೊಳು ।
ಮೋದದಿಂ ಸಂಭರಿತ ಮಾದವಂತಲ್ಲದೀ ।
ಸಾಧು ಶರಣನ ದಿವ್ಯ ಪಾದಗಳು ಸೋಂಕಿರ್ದ
ಮೇದಿನಿಯೊಳಾರ್ಕಾಣರು ॥

೩೮

ಆವಾವ ಕಾಲದೊಳು ತೀವಿರಲು ಧನಧಾನ್ಯ ।
ಭೂವಿಜನರಾನಂದ ಭಾವದಿಂದಿರೆ ಶರಣ ।
ದೇವ ಪೇಳಿದತೆರಂ ಸಾವಿರ್ಹಣ ಕೊಟ್ಟವರಿಗೀವುತಿರೆ
ಸಂತತಿಯನು ॥
ಆ ವೇಳೆಯೊಳಗೆ ಯುಪನಾಮವಂ ಮನವೀರ ।
ಶೈವ ಚೆನ್ನಪ್ಪೆಂಬುವಾ ವರ್ತಕನು ಕಟ್ಟಿ ।
ಸಾವಿರ್ಹಣ ತಂದೀಗಲೀವೆ ನೀಗಲೆಯನಗೆ ನೀವು
ಸುತನಂ ಕೊಡಿರೆನೆ ॥

೩೯

ವಾಸಿಯುಳ್ಳವನಪ್ಪೆ ಸಾಸಿಗಹುದಹುದು ಶಾ ।
ಬಾಸೆನ್ನುತಿದ್ದಂತ ವಾಸಕ್ಕೈತಂದು ಶರ ।
ಣೇಶ ದೊಡ್ಡಪ್ಪನಾ ಕೂಸಿನಂತಂದು ಸಂತೋಷ
ದಿಂದವಗೀಯುತೆ ॥
ಸಾಸಿರ್ಹಣಗೊಂಡು ಸಲೆದಾಸೋಹ ಮಾಡುತಿರ ।
ಲಾಸುದ್ದಿ ತಿಳಿದು ನಸುಕ್ಲೇಶ ತಾಳದಲಿರುವ ।
ರಾ ಸಾಧು ದೊಡ್ಡಪ್ಪನಾ ಸುದತಿ ನೀಲಮ್ಮನೇಸು ಘನ
ದಂಪತಿಗಳು ॥

೪೦

ನಾಡಜನರೆಲ್ಲರಾ ಗೌಡ ಮೇಣವನ ಸತಿ ।
ಮಾಡಿರ್ದ ಮನದೃಢವ ನೋಡಿ ಪೋಲಿಸಲಿವರಂ ।
ಜೋಡಿಗಾರುಂಟೆಂದು ನಾಡೆ ತೋಷದೊಳು ಕೊಂಡಾ
ಡಿದರು ತಮ್ಮತಮ್ಮೊಳು ॥
ಗಾಢದಿಂದೆಸಗಿಂದು ಚೂಡಾರ್ಚನಂ ಚರರು ।
ಬೇಡಿದುದು ಕೊಟ್ಟು ಕಾಪಾಡುತಾನತ ಜನರ ।
ಪಾಡುತಿರುತಿರಲು ಜಗ ಮಾಡಿದಾಸೋಹ ಮುದ
ಗೂಡಿರಲು ಮುಂದೊಂದಿನಂ ॥

೩೧

ಬಂದೆನವಾಜ ಪೀರೆಂದೆಂಬುವನ ದರಗ ।
ದಂದವಂ ನೋಡಲೇಳ್ತಂದಿರುವ ಕಾಲಕ್ಕೆ ।
ಬಂಧಿಸಿ ಕದಂ ಮ್ಲೇಚ್ಛ ಮಂದಿಯೊಳಗಿರುತ ತವೆಗಂಧ
ಲೇಪಿಸುತಿರುತಿರೆ ॥
ಹಿಂದಿರುಗವಲೆ ಮಾಯದಿಂದೊಳಗೆ ಪೊಕ್ಕವರಿ ।
ಗೆಂದನೆಲೆಯಿಲ್ಲೊಂದು ಸಂದಿಪ್ಪುದಿದಕಿಷ್ಟು ।
ಗಂಧ ಲೇಪಿಸಿರೆನಲು ಹಿಂದು ತೂ ಕೆಂವಾಯೆ
ಅಂದರಂದವರು ಪಿಡಿದು ॥

೩೨

ಯಾರೆ ಕ್ಯಾ ದೇಕ್ತೆ ಕಾಫೀರ್ಖುನಿ ಕಾಲ್ದೀವೆನೆ ।
ದೂರ ಕಳುಹುತ ಬಂದು ದ್ವಾರ ಸಲೆ ಬಂಧಿಸುತ ।
ಸಾರಿಸುತಲಿರೆ ಗಂಧ ಕಾರಣಾತ್ಮಕನೊಳಗೆ ಯಾರರಿ
ಯದಂತೆ ಪೊಕ್ಕು ॥
ಚೀರಿ ಪೇಳಿದನುಯುವಿಚಾರಿಗಳೆ ನಿಮಗೆ ಮತಿ ।
ಬಾರದೇಂ ನಾಂ ಬಾರಿ ಬಾರಿಗ್ಹೇಳಿದರಲ್ಲಿ ।
ತೋರುತಿದೆ ಛಿದ್ರವು ಪಠೀರ ಧರಿಸೆನಲು ಮದಪಾರಿ
ಶರಣನ ಪಾದಕೆ ॥

೩೩

ಭಾವಭಕ್ತಿಲಿ ನಮಿಸಿ ದೇವ ನಾವ್ಾಣೆವಾ ।
ತಾವು ಗಂಧಂಗೊಂಡು ತಾವೇ ಲೇಪಿಸುವದೆನ ।
ಲಾವಿನುತ ರಂಧ್ರೆಲ್ಲರಾವಲೋಕನಗೈಸಿ ಸಾವ
ಧಾನದಿ ಗಂಧವಂ ॥
ಲೇವಿಸಲು ಗೋರಿಗೆಲ್ಲಾವ್ಯಾದೊಳು ನಾಡೇ ।
ನಾವುಗೈದಪರಾಧ ಕಾವುದೈಗತಿ ತಮ್ಮ ।
ಕಾವುದೆನುತ ಪದ ರಾಜೀವಗಳಿಗೆರಗೊಂದೆ ಭಾವದಿಂ
ಬೇಡಿಕೊಂಡು ॥

೩೪

ಬಂದೇನವಾಜ ನೀ ತಂಡೆಯಲ್ಲದೆ ಬೇರೆ ।
ಯೆಂದು ಭಾವಿಸಲಾಗದೆಂದು ಕೊಂಡಾಡಿ ನಿ ।
ಸ್ಸಂದೇಹದಿಂ ಶರಣಗೊಂದಿಸುತಲವರು ಕೌನ್ಹಿಂದೂ
ಮುಸಲ್ಮೀನ್ ಖೌನ್ ॥
ಎಂದು ಸಲೆಪಾಡಿ ನಾವೆಂದೆಂದಿಗಿವರ ಪದ ।
ಪೊಂದಿರುವದೆ ಲೇಸು ನಿಂದೆಗೈಯ್ಯುವ ನರಗೆ ।
ಇಂದೇನು ಮುಂದೇನು ಹಂದಿನಾಯ್ಹನ್ಮ ನಿಜವೆಂದ
ವರು ಭಕ್ತಿಯಿಂದ ॥

೩೫

ಭೂರಿ ತೋಷದೊಳವಗೆ ಪಾರಿತೋಷಕವಿತ್ತ ।
ಪಾರ ಉತ್ಸಹಗೊಳಿಸಿ ನೂರಾರು ಜನ ಕಳುಹು ।
ತೋರಂತೆ ಬರುತಿಪ್ಪ ದಾರಿಯೊಳು ಕಂಡಿತಾ ಚಾರು
ಶರಣನ ಕಣ್ಣಿಗೆ ॥
ಸೋರುತಿಹ ರಕ್ತ ಬಲು ನಾರುತಿಹ ಮಾಂಸ ನೆರೆ ।
ಪಾರುತಿಹ ನೊಣಗಳತಿ ಚೀರುತಿಹ ಕಿರಬಸ್ತಿ ।
ತೋರಲಿಕ್ಕೆಲದಿ ಕೈಚೂರಿ ಕಟ ಪಟವೆಂಬ ಕ್ರೂರ
ತರಮಾದ ನಿನದಂ ॥

೩೬

ಪಶು ಕುರಿಗಳಂ ಕಡಿದ ಪಸಿತಲೆಗಳೆಲ್ಲ ಕ ।
ಣ್ಣೆಸಿ ಕಿಸಿದು ಬಾಯ್ದೆರೆದುದಶನದಿಂ ಕಚ್ಚಿರ್ದ ।
ರಸನೆ ಹೊರದೆಗದಿರಲು ಹೊಸೆದು ಕಾಲ್ನೆಲಕೆ ಕಂಪಿಸುವ
ಕಡೆವಡೆದ ತನುಗಳ್ ॥
ದೆಸೆದೆಸೆಗೆ ಮಾರುತಿಹ ಪಿಸಿತವಂ ಕಂಡು ಕ ।
ರ್ಕಶದ ನಾಟಕವೆನ್ನುತುಸುರ್ಗರೆದು ತನ್ನ ಮನ ।
ಕಸವಿಸಿಯುಗೊಳ್ಳುತ ಸಂತಸ ವರ್ಜಿತಾಗುತಂ
ದಸವಸದಿ ಬರುವನಿತಕೆ ॥

೩೭

ಮುಂದೋರ್ವ ಕಟುಕ ಭರದಿಂದಾಕಳದ ಕಾಲು ।
ಬಂಧಿಸುತ ನಾಲ್ಕದರ ಕೊಂದು ತಾಂ ಪಡಿಯಲಾ ।
ನಂದವಂ ಕೆಡಹಿರೆ ವಸುಂದರೆಯೊಳದು ಕಷ್ಟದಿಂದೊ
ದರುವದು ಕೇಳುತೆ ॥
ನೊಂದು ಶರಣನ ಮನಂ ಬಂದು ತಾನಲ್ಲಿಗವ ।
ಗೆಂದ ನೀನಿದಕೆ ದಯದಿಂದ ಬಿಟ್ಟರೆ ಮನಂ ।
ಬಂದನಿತು ಬೆಲೆ ನಿನಗೆ ತಂದು ಕೊಡುವೆನು ನಿಜ
ಮಿದೆಂದಾಡಲದಕಾತನು ॥

೩೮

ಬೇಡಲಿಮ್ಮಡಿ ಬೆಲೆಯು ನಾಡೆ ಕೊಟ್ಟಪೆ ದೂರ ।
ಕೋಡಿಸೆನಲವನಂತೆ ಮಾಡಿಬರಲದೆಗೋವು ।
ನೋಡಿ ಶರಣನ ಮುಂದೆ ಬಾಡಿಮನವುತ್ತಂತೆ
ಮಾಡಲದು ಮೊದಲಿನಂತೆ ॥
ನೋಡಿ ಶರಣನ ಬಳಿಯೊಳೋಡಿಸಲು ಹತ್ತು ಸಲ ।
ಕಾಡುತಿರಲವನಿಚ್ಛೆಗೂಡದಿರೆ ತವೆ ತಿಳಿದು ।
ಗಾಢವಾ ಶರಣನಿಗೆ ನೀಡಿ ಸಾಷ್ಟಾಂಗ ಕೊಂಡಾಡು
ತಂದಾ ಕಟುಕನು ॥

೩೯

ದೇವದೇವನೆ ನಿನ್ನ ಮಾಯಮಿದುವಲ್ಲದೀ ।
ಗೋವಿಗೇಂ ಶಕ್ತಿಯನಗೀ ನಿಧದಿ ಕಾಡುವದು ।
ಜೀವನ ಮಮತಿಯ ತೊರೆದು ಸಾಯಲೆಂದೈತಪ್ಪ
ಜೀವಿಗಳನಾರ್ಕಾಣರು ॥
ಭೂಮಿಯೊಳಿದು ಪದ ರಾಜೀವ ಕೊಪ್ಪಿಸಿವೆನಾ ।
ನೀವು ಕೈಕೊಂಡೆನ್ನ ಕಾವುದೈ ತಾತನೆನು ।
ತಾವನತನಾವವನ ಭಾವಕತಿ ಮೆಚ್ಚುತ ಸುಧಾ
ವಾಣಿಯಿಂ ನುಡಿದನು ॥

೪೦

ಸಾರುತಿವೆಯಸು ದಯಾಪರನಾಗೆಂದು ಶೃತಿ ।
ಕ್ರೂರರಿದು ತಿಳಿಯದಲೆ ಮೂರಾರು ಕಾಸುಗಳ ।
ಕೋರಿಕಿಗೆ ದೇವ ಗುರುಧಾರುಣಿಗೆ ತಾಯಿಗಾಕಾರ
ಮಾಗೆಸೆವುತಿಪ್ಪ ॥
ಚಾರು ಗೋಮಾತೆಯರ ಮಾರಿ ತಂದ್ಹಣದಿ ಸಂ ।
ಸಾರ ಸಾಗುವದೇಸುವಾರವೀ ಧನದಿಂ ಶ ।
ರೀರ ರಕ್ಷಿಸಲದನು ಪಾರಗಾಂಬುದೆ ಕೋಟಿ ಕಾರವಂ
ಸಿನಗದು ದಿಟಂ ॥

೪೧

ಪಾಕಕ್ಕೆ ಪಾಲ್ಸೃತಭಿಷೇಕಕ್ಕೆ ಪಂಚಾಮೃ !
ತಾಕಲ್ಪದಿಂ ಕೊಡುತನೇಕ ಶುಭ ಕಾರ್ಯದೊಳು ।
ಬೇಕು ಸಮ್ಮಾರ್ಜನಕ್ಕಾಕುಲದ ಮಲಭವದ ಶೋಕ
ಪರಿಸುವ ಭಸಿತವಂ ॥
ತಾ ಕೊಡುವವದರಿಂದ ಲೋಕಪಾವನೆಯೆಂಬೊ ।
ದೇಕರಿಯರ್ಕೈಯ್ಯೊ ಹಾಕಾಕು ಜೀವರು ಮಾರಿ ।
ಸಾಕಾರ ದೈವೆಂಬುವಾಕಳಗಳಂ ಕುಂಭಿಪಾಕ ನರಕ
ಕ್ಕೈಳಿವರು ॥

೪೨

ಸುಟ್ಟು ಸುರತರು ಸಂತೆಗಿಟ್ಟು ಇದ್ದಲಿ ಕ್ರಯಕೆ ।
ಗೊಟ್ಟೆರಡು ಕಾಸಿನಿಂ ತುಷ್ಟಿಪಡಿವಂತೆ ಮೇ ।
ಣ್ಕುಟ್ಟಿ ಪರುಷಂ ಕುಡಿದು ಹೊಟ್ಟೆ ತುಂಬಿಸುವಂತೆ
ದುಷ್ಟಜನರಾಕಳಗಳಿಂ ॥
ಪಟ್ಟುಸುಖ ಮುಪ್ಪಿನೊಳು ಕೊಟ್ಟು ಕಡುಗರಿಗೆ ಕೈ ।
ಮುಟ್ಟ ಕೊಲ್ಲಿಸಿ ತಮ್ಮ ದಿಟ್ಟಯಿಂ ನೋಡುವಘ ।
ಜಟ್ಟಿಗಳಿಗಜ ಜಗದಿ ಪುಟ್ಟಸದೆ ಮುಂದಿನ್ನು
ಬಿಟ್ಟಿರುಪಕೃತಿ ಘನವಲಾ ॥

೪೩

ಜನನಿ ಮೊಲೆಯೊಳಗೊಂದುಹನಿ ಹಾಲಯಿಲ್ಲದಂ ।
ತೊಣಗಿರುವ ಕಾಲದೊಳಗುಣುತದರ ಮೊಲೆ ಪಾಲು ।
ತನುಪೋಷಣಂಗೈದು ಋಣತೀರ್ಚಲೆಂದು ದುರ್ಜ
ನರೇನು ಯೋಚಿಸದಲೆ ॥
ಮನದೊಳಗೆ ಸ್ವಲ್ಪಲ್ಪ ಧನದಾಸೆಯಿಂ ಮಾರಿ ।
ಹನನವಂಗೈಸಿ ಲೋಚನದಿಂದೆ ಕಾಣುತೀ ।
ನನುಮಾನಿಸದ ದುಷ್ಟ ಮನುಜರಮ್ಮರೆದ ನೇಕಿನ
ನಾತ್ಮಜಂ ಶಿವ ಶಿವಾ ॥

೪೪

ಹುಲಿಗಳಂತೇಂ ನರರ ಮೆಲುವವೇಂ ಗಜದಂತೆ ।
ಮಲಿಪವೇಂ ಸಿಂಗದೊಲ್ಕೊಲುವವೇಮ್ಮನುಜರಂ ।
ಇಲಿಗಳಂತೇಂ ಧಾನ್ಯಗಳ ನಾಶಗೈವವೇಂ ಮೊಲ
ನರಿಗಳೋಲ್ ಪಸಿಗಳಾ ॥
ಮೊಳಕೆ ತಿಂದೇಂ ನಾಶಗೊಳಿಸುವವೆ ಸರ್ಪದೋ ।
ಲಳಿವವೇಂ ಮಾನವರ ಜಲಕುಡಿದು ನದಿಯಡವಿ ।
ಪುಲು ಮೇದು ಪಾಲ್ಗರೆದಖಿಳರ ಪಾಲಿಸುವ ಗೊಕು
ಲ ಕೊಲಿಸುವರು ಪೊಲಿಯರು ॥

೪೫

ನದಡು ಬಂಡಿಗೆ ಕುಂಟೆ ಹೊಡಿದು ಹೊಲ ಮೊಟ್ಟೆಗಳಿ ।
ಗೆಡೆಯಾಡಿ ನೀಗೊರ್ಟ್ಟು ಪಿಡಿದು ಬೆನ್ನಿಲಿ ಪೇರು ।
ನಡೆದು ತನ್ನನು ಸಲಹಿದೊಡೆಯನ್ನಿಚ್ಛಿತದಂತೆ
ಯಡವಿ ಪುಲ್ಲಂ ಮೇಯುತೆ ॥
ಕುಡಿದು ತೊರೆನೀರು ಜಗಕೆಡೆ ಬಿಡದೆ ಸೌಖ್ಯವಂ ।
ಕೊಡುವೆತ್ತುಗಳಿಗೆಲ್ಲ ಪಡೆದ ಗೋಮಾತೆಯಂ ।
ಕಡುಗರಿಗೆ ಕೊಟ್ಟು ಗೋಣ್ಮುಡಿಪ ದುರುಳರಿಗೆ ಮನು
ಬಿಡದಿಡುವ ನರಕಕನಿಶಂ ॥

೪೬

ಯಾರೇನು ಗೈಯ್ಯಲದು ಸೈರಿಸುತವರ್ಗೆ ಪಾಲ್ಗಾ ।
ರೆರದು ಸಂತತುಪಕಾರವಂ ಗೈಯ್ಯುತಿಹ ।
ಚಾರು ಗೋಮಾತೆಯರುದಾರಗುಣ ನೆನಿಸದಲೆ
ಮಾರುತೊಡಲಂ ಪೋಷಿಸಾ ॥
ಕ್ರೂರರಿಗೆ ಮಾತೃಗಳ ಮಾರಾಟವಪ್ಪ ಬಾ ।
ಜಾರ ಪೇರ್ಪಟ್ಟರವರೋರಂತೆ ಸಂತೆಯೊಳು ।
ಮಾರಲೇನ್ಹೇಸುವರೆ ಮೂರಾರು ಹಣಕವರಸಾರ
ಮಮತೆಯನೆನಿಸದೆ ॥

೪೭

ಸಾದರದ ಹಿಂಸ ಪರಮೋಧರ್ಮ ಮೆಂದು ಶೃತಿ ।
ಯೋದುತಿಹುದಂ ಮರೆದು ಸಾಧುಗಳತೆರ ಜನಕೆ ।
ವೇದಪೌರಾಣಾರ್ಥ ಬೋಧವಂ ಗೈವ ಮೇಲಾದ
ವರ್ಣದ ಜನಗಳೆ ॥
ಮಾದಿಗರೊಲ್ವಿಕ್ರಯಂಗೈದು ಕೈ ಸೇರಿರ್ದ ।
ಗೋಧನದಿ ತಮ್ಮಮ್ಮ ಕಾದೊಡಲ ಪ್ರೋಷಿಸುವ ।
ಭೇದ ಭಾವಿಗಳಗೆಮುಬಾಧೆಯಲ್ಲದೆ ಶಿವನ ಪಾದ
ವೆಂದಿಗೆ ದೊರಕವು ॥

೪೮

ಮಗನೆ ಕೇಳ್ ನೀನೊಂದುಘೆ ವಧಿಸಿದವಗಪ್ಪು ।
ದಘಕೋಟಿಯದರಿಂದ ಮಿಗಿಲಾದ ದುರಿತಿಲ್ಲ ।
ಗಜಪಾವನಂ ಗೈಯ್ಯಲೊಗೆದುದಾ ಕಳಮೆಂಬ ಬಗೆ ದೃಢಂ
ಗೈಯ್ಯನ್ನುತೆ ॥
ಬಗೆ ಬಗೆಯ ಪೇಳಲವನಗಣಿತಚ್ಚರದಿ ಕೈ ।
ಮುಗಿದು ಸಾಷ್ಟಾಂಗ ಪದಯುಗಕೆರಗಿ ಕೊಂಡಾಡಿ ।
ದೃಗುಮುಚ್ಚಿ ಧೇನಿಸೆವೆ ತೆಗೆದು ಕಾಂಬನಿತರೊಳುದುಘೆ
ಸಹಿತ ಬಯಲಾಗಿರೆ ॥

೪೯

ಆಯೆಂದವಳಿಳದೆಸಿಗೆ ಬಾಯಿದೆರೆದೆರೆದು ಹಾ ।
ಯಾಯಿಲಾಹೀತೋಬ ದೇವನಿವನಲ್ಲದಿರೆ ।
ಮಾಯವಾಗುವನೆಂತು ಹಾಯೆಂದು ಹಂಬಲಿಸ್ಯುಪಾ
ಯುವೇಂದನೆಳುತಲಿ ॥
ಸಾಯಲೇಂ ನಾನಾವ ಕಾಯಕದಿ ಜೀವನೋ ।
ಪಾಯವಂ ನಿರುತ್ಹಾ ್ಯಗೈವೆನೆನುತಿರೆ ಜನನಿ ।
ಕಾಯ ಬೆರಗಾಗುತಿದು ನಾವು ಕೇಳರಿಯೆವ್ನಿಂದಾವ
ಕಾಲದೊಳೆನ್ನುತ ॥

೫೦

ಯವನ ಜನರು ಶರಣಬಸವನ ಘನ ಮಹಿಮೆಯಂ ।
ತವ ತವಗೆ ಕೊಂಡಾಡಿ ಭವನ ಭವನಕೆ ಪೋಗ ।
ಲವನಂಗಡಿಯು ಮುಚ್ಚಿ ಜವನೆದ್ದು ಸರಸಿಜೋದ್ಭವ
ಪುರಕೆ ನಡೆತರುತಲಿ ॥
ಅವನತಾಗುತ ಶರಣ ಸ್ತವನ ಮುದದಿಂ ಗೈದು ।
ತವೆ ಪೇಳು ನೀ ಕಾಯಕವನೆನಲು ಮನ್ನಿಸುತ ।
ದವಸದಂಗಡಿಯಿಡುತಲವಿರತಂ ಪಡೆದು ವೈಭವ
ಭೋಗಿಸೆಂದೆಂಬುವ ॥

೫೧

ಸರಕೆಗೊಂಡಾಕಡುಗ ತಿರುಗಿ ಮನೆ ಕಡೆ ಬಂದು ।
ಶರಣ ಪೇಳಿದ ತೆರದೊಳಿರುತ ಸಂಪದ ಪಡೆದು ।
ಸುರಭಗಳ ರಕ್ಷಿಸುತ ಪರಮಾನುರಾಗದಿಂ ಶರಣನಂ
ಕೊಂಡಾಡುತೆ ॥
ಇರುತಿರಲಿಕವನಿತ್ತ ಸರಜಿಪುರಜೋದ್ಭವ ಪುರದಿ ।
ಹಿರಿದೇಶ ಮುಖ್ಯ ಸುಂದರ ದೇವರಾಯ್ನರಸಿ ।
ಗುರಿದಮ್ಮು ಕೆಮ್ಮುತುದರ ಶೂಲಿಯಿಂದ ಜರ್ಝರಿತಾಗಿ
ಪಾಸಿಕೆಯೊಳು ॥

೫೨

ಒರಗಿರಲು ದೇಸಾಯಿ ಕರಸಿ ವೈದ್ಯರ ಮಂತ್ರಿ ।
ಕರರಿಂ ಚಿಕಿತ್ಸೆಯಂ ತರತರಂ ಗೈಸಲ್ಕೆ ।
ಹರುವಾಗದಿರೆ ಬೇನೆ ಹರಿಬಲ್ಲನೆಂದು ತರಹರಿಸುತಿರುತಿರೆ
ಶರಣನ ।
ಪರಿತಿಳಿವ ಜನರಾಡಿದರು ದೇವಕೇಳ್ ನಿಮ್ಮ ।
ಪುರದೊಳಿರುತಿಹನು ಶಿವಶರಣೋರ್ವ ಸತ್ತ್ವ ।
ವರಿಗ್ಧರಣವಂ ನೆರೆ ವಂಧೆಯರಿಗೆ ಸತ್ತ್ರರುಳರಂ
ಕರುಣಿಸುತಲಾವ ವಿಧದ ॥

೫೩

ರೋಗಿಗಳು ಬಂದು ನತಲಾಗಲವರಂ ಪೊರೆವ ।
ನೀಗೆ ನೀನವರ ಬಳಿಗ್ಹೋಗಿ ಕೇಳುವದೆನ್ನ ।
ಲಾಗಲೆಂದೈತಂದು ಬಾಗಿ ಶಿರ ಪದಕೆರಗಲಾಗಿ
ಕಾಣುತ ಶರಣನು ॥
ಭೋಗಮಷ್ಟೈಶ್ವರ್ಯ ಮಾಗಲೆನುತಂ ಪರಿಸು ।
ತೀಗಿಲ್ಲಗೇಂ ಕಾರಣಾಗಮನಮೆನಲೆದ್ದು ।
ಕೈಗಳಂ ಮುಗಿದು ಶಿವಯೋಗಿ ಲಾಲಿಪುದೆನ್ನವಾಗು
ಮೆನುತಿಂತೆಂದನು ॥

೫೪

ಎನ್ನಸತಿ ಬಹುರೋಗದಿನ್ನವೆದು ದಿನ ದಿನಂ ।
ಬನ್ನ ಬಡು ತಿರುತಿಹಳು ಮುನ್ನ ಮಾಡಿದಕರ್ಮ ।
ವಿನ್ನೆಂತೊಮದುಯೆನಗೆ ಬಣ್ಣಿಸಲು ಬಾರದೈ ಚನ್ನೆಸಗ
ಲೆಂದವಳಿಗೆ ॥
ಪೊನ್ನು ಬಹಳೆಚ್ಚಿಸುತ ದಣ್ಣನೇ ದಣಿದು ನಾ ।
ನಿನ್ನ ಬಳಿಗೈತಂದೆನಿನ್ನು ನೀ ಮನಬಂದು ।
ದನ್ನೆಸಗುತೆನ್ನಯ ವಿಪನ್ನ ಪರಿಹರಿಸೆನಲು
ಮನ್ನಿಸುತಲವಗೆಂದನು ॥

೫೫

ಚಿಂತೆತೆಜಿಸುತ ನಿನ್ನ ಕಾಂತೆಯಂ ಕರತಂದ ।
ಡೆಂತಹುದೊ ನೋಳ್ಪೆನಾ ಕಂತುಹರನಿಹನೆನಲು ।
ಸಂತೋಷದಿಂದಲಿ ನಿಶಾಂತಕೈತಂದಾಸುದತಿಯುಂ
ನೋಡ್ವನಿತಕೆ ॥
ನಿಂತಿರಲು ಶಕುತೆತ್ತಲೆಂತಹುದೊಯೆಂದು ವಿ ।
ಭ್ರಾಂತಿಯಂತಾಳಿ ಮೇಣಂತರಂಗದಿ ಶರಣ ।
ಶಾಂತಿಯಿಂ ನುಡಿದ ವಚನಂ ತಪ್ಪದೆಂದು ತಾನಿಂತು
ಮನದೃಢಕರಿಸುತ ॥

೫೬

ಧೇನಿಸುತ ನಾ ಗೈವದೇನುಂಟು ದೈವವಾ ।
ಧೀನ ಕಾರ್ಯಕ್ಕೆಂದು ಮೇಣೆಯಂತರಿಸುತಾ ।
ಪ್ರಾಣ ಸಂದೆಯಮಾದ ಮಾನಿನಿಯನೊಳಗಿರಿಸಿ
ತಾನವಳ ಕೂಡಿ ಬಂದು ॥
ನೀನೆ ಬಲ್ಲೈ ಭುವನ ಸ್ಥಾಣುಮಿವಳಂಗದೊಳ ।
ಗೇನೇನು ಜೀವಿಲ್ಲ ದೀನರಂ ಪೊರೆ ಪೊರೆ ದ ।
ಯಾ ನಿಧಿಯೆ ಯೆಂದು ತಾ ಗೋಣಬಾಗುತಲವಳ
ಮೇಣೆಯಿಂದ್ಹೊರದೆಗಿಸುತೆ ॥

೫೭

ಮುಂದಿಳುಹಲಾಗಿ ಮನಸಂದ ತೋಷದಿ ಭೂತಿ ।
ಯಿಂದೆಳೆವುತೇಳಮ್ಮ ಇಂದುಮುಖಿ ನಿನ್ನರುಜೆ ।
ಯಿಂದೆ ದೇಸಾಯಿ ಮನನೊಂದುದೆಂಬುದು ಕೇಳಿ
ಕಂದೆರದು ಝುಗ್ಗನೆದ್ದು ॥
ವಂದಿಸುತ ಶರಣಪ್ಪಗೆಂದಳೆಲೆ ಭಕ್ತಜನ ।
ಬಂಧು ನೀ ಪಾಲಿಸುತೆ ಕಂದನಂ ಕಳೆಯನ್ನ ।
ವಂಥೆ ತನವೆನೆ ನೆರೆದ ಮಂದಿ ಬೆರಗಾಗುತಾನಂದದಿಂ
ಕೊಂಡಾಡುತೆ ॥

೫೮

ಗುಜು ಗುಜುಂಗೊಟ್ಟು ಪೌರಜನ ಸೋಜಿಗದಿಂದ ।
ರುಜೆಯತ್ತ ಪೋಯಿತಾತ್ಮಜನ ಬೇಡಿದಳಲಾ ।
ನಿಜಮಿವನೆ ಈ ಜಗದ ಭುಜಗ ಭೂಷಣಿವಗೆ
ಮನುಜನೆನ್ನಲತಿ ಪಾಪವು ॥
ಮಜಭಾಪು ಭಾಪುಮಿವಗಜವಿಷ್ಟುಸುರಪಮುಖ ।
ಯಜ ಭಾಗಿಗಳ ತೂಗಲಜಗಜಾಂತರವೆಂದು ।
ಭಜಿಸುತಿರುತಿರಲು ವಾರಿಜ ಲೋಚನಿಗೆ ಶರಣ
ವಚಿಸಿದನದೀ ತೆರದೊಳು ॥

೫೯

ಹಡದಮ್ಮ ಮೆನಗಿರಲು ಕೊಡುವಿಯಾದರೆ ಸ್ಥಲವು ।
ಪಡಿವೆ ಸುಂದರ ಮಗನ ಗಡನೆನಲು ಕೇಳಿ ಬಲು ।
ಸಡಗರದಿ ನೀವಿಷ್ಟ ಪಡುವನಿತು ಕೊಡುವೆ ನಾ ನಡಿ
ಸು ಲಿಂಗದ ಮುದ್ರೆಯಂ ॥
ತಡಿಯದೆನೆ ದೇಸಾಯಿ ಮಡದಿ ನುಡಿದುದೆ ದಿಟಂ ।
ಕೊಡುವೆನೆರಡಿಲ್ಲೆಂದು ಕುಡುತಿಯೋಳ್ ನೀರ್ಗೊಂಡು ।
ಬಿಡಲರ್ಘ್ಯ ಶರಣಕೆರೆತಡಿವರಿಗೆ ಲಿಂಗ ಮುದ್ರಿಡಿಸಿ
ದನು ಕಡು ತೋಷದಿ ॥

೬೦

ದೇವರಾಯನು ಶರಣ ದೇವ ದೇವನಪಾದ ।
ಕಾವನತನಾಗಿ ಸಂಭಾವಿಸುತ ನುಡಿದನೀ ।
ಭುವಿಯೊಳು ನಿನ್ನೋಲ್ವಜೀವಿಯಾರೊಳರೆ ನೆರೆ ಜೀವ
ಸಂದೇಹಮಾದ ॥
ಭಾವೆಯಂ ಸೋಂಕೆ ರಾಜೀವ ಕರದಿಂ ನಿನ್ನ ।
ಪಾವನಾದಳು ನಿಮ್ಮ ಸೇವೆಯನುಗಿತ್ತು ಪೊರೆ ।
ಯಾವಾವ ಕಾಲದ್ಹೊಳ್ಳು ಭಾವಶುದ್ಧಿ ಭಕ್ತಿಗೈವೆವಾ
ವೆಡೆ ಬಿಡದಲೆ ॥

೬೧

ಚರಣಕೆರಡಿಲ್ಲವಂ ತರಿಸೆಪೆಂದಂದು ಮನ ।
ಶರಣಬಸವಪ್ಪನೆನುತೆರಗಲತಿ ತೋಷದಿಂ ।
ಕರೆದು ದೇಸಾಯಿಯಳಿ ಪರಕೆಯಿತ್ತೊಂದು ಖರ್ಜೂರ
ಕೊಟ್ಟು ಪಡಿವೆ ನೀನು ॥
ತರುಳನಂ ಪೋಗೆನಲು ಪರಮಾನುರಾಗದಿಂ ।
ದರಮನೆಗೆ ಬಂದೊಂದು ವರುಷದೊಳಗಾಗಿ ಸುಂ ।
ದರ ಪುತ್ರನಂ ಪಡೆದು ನಿರುತ ಶರಣನ ಗುಣವು ಪರಿ
ಪರಿಯು ಕೊಂಡಾಡುತೆ ॥

೬೨

ಅರಿಯರಾರ್ಥಿಂವಂಥ ಚರಿತೆ ಸಲೆ ಭಾವಿಪೊಡೆ ।
ಧರುಣಿಯೊಳಗವಗುಂಟೆ ಸರಿಬರುವ ಮನು ।
ಜರಚ್ಚರಿ ಪಿರಿದಲಾಯೆಂದು ನಿರುತ ಭಜಿಪುತಲಿ
ಸಂದರುಶನವಗೊಳುತಿರುತಿರೆ ॥
ಶರಣದಾಸೋಹ ಸುಸ್ಥಿರ ಮನದಿ ಗೈದು ಶಂ ।
ಕರ ನಾಮ ಪಠಿಸಿ ಚರ ಪರಿಚರ್ಯ ಗೈಯುತಲಿ ।
ಕುರುಡ ಕುಂಟರ ರೋಗಭರಿತರಂ ಸಸಿನೆಸಗುತಿರು
ತಿಪ್ಪನೆಂಬಲ್ಲಿಗೆ ॥

೬೩

ವರಪುರದ ಶಿವಲಿಂಗಶರಣಬಸವನಚರಿತೆ ।
ಗುರುಬಸವಣಾರ್ಯ ಪದಸರಸಿರುಹ ಲೀನಮಧು ।
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ॥
ವಿರಚಿಸಿದನೋದಿಸುವ ಬರೆದಗೋದುವಗೆ ಪರ ।
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ ।
ದೊರಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ಇನ ಸಂಧಿಯನುಬಂಧಿಯು ॥

ಸಂಧಿ ೧೨ ಕ್ಕೆ ಪದ ೧೧೧೭ ಕ್ಕಂ ಮಂಗಳಂ.



ಶ್ರೀ ಶರಣಬಸವೇಶ್ವರ ಪ್ರಸನ್ನ

## ಹದಿಮೂರನೆಯ ಸಂಧಿ

ಸೂಚನೆ॥ ಬಿಡಿಸಿ ಭೂತವು ಮತ್ತೆ ಮಡಿದವರಿಗಸುವ ನಿಡು ।
ತಡಗಿಸುತೆ ಗರ್ಭವಂ ಪಿಡಿದು ಕಲ್ಲೆತ್ತುತಲಿ ।
ಕೊಡಲು ಕಿರಿಸರಿಗಿ ಹೆಣ್ಣಡಿವಳೆಂದ್ಹೇಳಿ ಮೇಣ್ಮಡಿ ಕಂಬಳಿಗಳೆಸಗಿದಂ ॥

೧

ಶ್ರೀವನತ ಪಾದ ಜಾತರೂಪ ಗಿರಿ ಚಾಪ ರಥ ।
ಭೂ ಪಯೋನಿಧಿ ತೂಣ ಮಾಪಕೃತರೋಪ ಭಗ ।
ಣೋಪ ದಿನಪ ರಥಾಂಗ ಗೋಪಸೂತಾಪದದತ್ಯೆ
ಪುರಂಜಯ ಭವಭಯಾ ॥
ಲೋಪಗಿರಿಜಾಪಂ ಸುರಾಪಗಾಧರಕಾಲ ।
ತಾಪಶಿವ ವಿನುತೌಘ ಪಾಪ ಹರಗಣಪ ಸ ।
ಲ್ಲಾಪಲಾಲಿತ ಶಂಭುಕಾಪಾಲಿ ಶಿವಲಿಂಗ ನೀ
ಪಾಲಿಸಖಿಳ ಜಗವಾ ॥

೨

ಧಾತ್ರಿಜನದಿಂದ ನುತಿವೆತ್ತು ಶರಣಿರುತಿರಲು ।
ಕ್ಷೇತ್ರ ಹಿರೆಬಾಜಾರದತ್ತಿರುತಿರುವನೋರ್ವ ।
ಚಿತ್ರಕಾರನ ಧರ್ಮಪತ್ನಿ ಗರ ಪಿಡಿದು ವೈಚಿತ್ರದಿಂ
ಕುಣಿದಾಡುತೆ ॥
ನೇತ್ರದೆರದೆರದಂಜಿಸುತ್ತ ಜನರಿಗೆ ತನ್ನ ।
ಶತ್ರುಗಳನರಿಯದಲೆ ಪುತ್ರರಂ ತಿಳಿಯದಲೆ ।
ಹತ್ರ ಬಂದವರಂಗಿ ಧೋತ್ರ ಸೀರಿಗಳು ಪರಿಯುತ್ತ
ಬೆದರಿಸುತ ಮತ್ತೆ ॥

೩

ಅಳುತೊಮ್ಮೆಗಂತೆ ಕಲ ಕಲ ನಗುತ ಪಲ್ಗಚ್ಚಿ ।
ಕೊಳುತ ಕೈ ಬಡಿಬಡಿದು ನೆಲಕೆ ಧೊಪ್ಪನೆ ಬಿದ್ದು ।
ಕೆಲದೊಳಾರಾದರುಂ ಸುಳಿದವರಂ ಬಡಿದು ಮುಳಿದಂತೆ
ಮೂಲಿಯೊಳಗೆ ॥
ಕುಳಿತೆದ್ದು ಕುಣಿ ಕುಣಿದು ತಲೆಗೂದಲಂ ಬಿಚ್ಚಿ ।
ಮೊಲಿಗೆ ಕುಪ್ಪಸದೊಟ್ಟುಕೊಳದೆ ಮನ ಬಂದಂತೆ ।
ಚಲಿಸಿ ಚೇಷ್ಟಿಗಳೊಂದು ಘಳಿಗೆಯೊಳುನೂರೆಸಗು
ತಳುಕಿಸುತ ಜನನಿಕರಕೆ ॥

೪

ಅಡಗಿ ಕೂಡುವಳೊಮ್ಮೆ ಮಡುವಿನ್ಹಾರುವಳೊಮ್ಮೆ ।
ಗಿಡದ ಮೇಲೇರೊಮ್ಮೆ ಸುಡುತ ಬಟ್ಟೆಗಳೊಮ್ಮೆ ।
ಒಡೆದು ಕೈಬಳೆ ಜನರಿಗ್ಹೊಡಿದು ಕಲ್ಲಿಂದೊಮ್ಮೆ ಸಿಡಿಸಿ
ಗೇರೆಣ್ಣಿ ಮೈಗೆ ॥
ಗಡಮೌನ ತಾಳ್ದೊಮ್ಮೆ ಮಿಡುಕಿ ನೆರಳುವಳೊಮ್ಮೆ ।
ನಡುಗುತ್ಹೊರಳುವಳೊಮ್ಮೆ ಪುಡುಕುತೇನೇನೊ ಕೈ ।
ಬಡಿದುಕೊಳ್ಳುವಳೊಮ್ಮೆ ಉಡಿಗೆ ಕಳೆದೊಗೆದು
ಮತ್ತೆ ॥

೫

ನಿಂತಲ್ಲಿ ನಿಲ್ಲದಲೆ ಸಂತೆಯೊಳಗೋಡ್ಯಾಡು ।
ತಂ ತಡವಿದರ ಪಿಡಿದು ದಂತದಿಂ ಕಡಿದು ಜನ ।
ರಿಂತಾಯಿತೇಕೆನ್ನಲಿಂ ತಾಯಿತೇಕೆನ್ನುತಂತಾಡು
ತಣಕಿಸುತಲಿ ॥
ಮುಂತೆ ಮಾಡಿದ ಕರ್ಮವೆಂತುಂಟೆಂದವಳ ಪತಿ ।
ಚಿಂತಿಸುತನೇಕ ಜನ ಮಾಂತರಿಕರಂ ಕರಸಿ ।
ಮಂತರಿಸಲ್ಹಿಂದಿರುಗಿ ಮಂತರಿಸಿ ಕಟ್ಟಿರ್ದ ಯಂತ್ರ
ಜಂತ್ರಗಳೆಲ್ಲವು ॥

೬

ಬಿಟ್ಟು ಮುರಿಘರಿದವಗಳಟ್ಟು ಬೆಂಕಿಯ ಮೇಲೆ ।
ಸುಟ್ಟು ಗಹಗಹಿಸಿ ನಗುತಟ್ಟಹಾಸದಿ ಕುಣಿವ ।
ಹೆಟ್ಟುಗಿಯನವಳ ಪತಿ ದಿಟ್ಟಿಯಿಂ ನೋಡಿ ಗೋಳಿಟ್ಟು
ಸುಮ್ಮನೆ ಹಣವನು ॥
ಕೊಟ್ಟು ಮಾಂತ್ರಿಕರಿಗಾಂ ಕೆಟ್ಟೆನಕಟೆಂದು ಬಾ ।
ಯ್ಬಿಟ್ಟಳಲು ಕೇರಿಜನ ಕೊಟ್ಟು ಗೂಡ್ಯಾಡಿದರು ।
ಬಿಟ್ಟು ಕಳೆಯಳಲೊಬ್ಬ ಶ್ರೇಷ್ಠ ಶಿವಶರಣ ನೀ
ಪಟ್ಟಣದೊಳಿರುವದರಿಯೆ ॥

೭

ಸಾವಿರದ ಸಂಖ್ಯ ಜನ ಸಾವಿರ್ದ್ದಣ ತಂದವರಿ |
ಗೀವುತಲಿ ಸಂತಾನ ತಾವ್ಯೆದೆ ಪಡಿವರ್‍ಯೆ |
ತಾವರಿಯಮುಗನೂರ ದೇವರಾಯನ ಪತ್ನಿಯಾ
ವಿಧದ ರೋಗಮೊಂದೆ ||
ಝೂವದೊಳು ಕಳೆದು ಮೇಣಾವಾವ ರುಜೆಯ ಮನು
ಜಾವಳಿಯ ಪೊರೆದು ಭೂತಾವಳಿಯನೆಬ್ಬಟ್ಟಿ |
ತೋವಿ ಕುರುಡರಿಗೆ ನಯನ ನೀವು ತಂತಿರದೆ
ಮೃತಗೋವಿಗಸುವಂ ಪತ್ತನು ||

೮

ಮುನ್ನೆ ರಕ್ಕಸನ ಜನ್ಮಂನಳಿಮ ಶಿವನಿಂದ |
ತನ್ನ ರುಣ ಕೊಡಿಸೊಕ್ಕುಳುಣ್ಣುವದು ಬಿಡಿಸಿ ಮು |
ಕ್ಕಣ್ಣನಾಣಿತಿ ತಡೆದು ತನ್ನ ಸತಿ ಗರ್ಭವಂ ಕರ್ಣ
ಶೂಲಿಯ ಕಳೆದನು ||
ಗಿಣ್ಣಮೊಂದಾಕಳದೆಯುಣ್ಣಿ ಸುತಖಿಳ ದಳಕೆ |
ಮುನ್ನಿಸುತ ಚೋರರಂ ತನ್ನ ಕಡಿಯುವ ಖಡ್ಗ |
ದಂ ನಿಲಿಸುತುಳಿಸಿ ಧೃಗುಕರ್ಣ ಧ್ವಂಸಕನ ನದಿ
ಯನ್ನು ದಾಂಟದನೊಬ್ಬನೆ ||

೯

ಸುಂಕು ಸಹಿತಿಲ್ಲದಂತಂಕಣಿಗಳಿಂ ಜೋಳ |
ಸಂಖ್ಯ ಸುರಿಸಿದ ಥಡಿಗೆ ಸೋಂಕಿದ ಛಳಿ ಮ್ಲೇಂಛ |
ಮಂಕುಜನ ಗರ್ವಳಿದು ಪಂಕಹರ ಕಲಿಯುಗದ
ಶಂಕರನೆ ಸಾಕ್ಷಾತಿವಂ ||
ಶಂಕಿಯೇನವರ ಪದ ಪಂಕಜದ ಬಳಿಯಿವಳ |
ನೀಂ ಕೆಡಹಲೇಸೆಂಬುದಂ ಕೇಳಿ ಸಹಸ್ರಹಣ |
ನಾಂ ಕೊಡುವೆನೆಲ್ಲಿಂದ ಭೋಂಕನುಸುರೆಂದೆಂಬುದಂ
ಕೆಲರು ಕೇಳೆಂದರು ||

೧೦

ಹಣ ನಿನ್ನ ಬಳಿಯಿರ್ದುದನು ಮಿಲ್ಲದಿರುತಿಪ್ಪು |
ದನು ಸರ್ವವ್ಯಾಪ್ತನಾದನಘ ತಾ ತಿಳಿಯನೆ |
ನೆಣಿಕೆ ಬೇಡೇಳು ಬಡಜನರಿಂದಲೇನು ಕೊಳ್ಳನು
ನಿರುತಪ್ಪುನಿಹದೊಳು ||
ತನಗೆನತ ನಿರ್ವಂಚನದಲಾದವರ ಪೊರೆವ |
ನನುಮಾನವೇಂ ನಿನ್ನವನುತೆ ಈ ಬಾಧೆಯಿಂ |
ಹನನವಾದರೆಯು ಬೇಡುಣುವಿಯಾ ಭಿಕ್ಷಾಪ್ತ
ಜನರುಂಟೆಮಿವಳ ಬಿಟ್ಟು ||

೧೧

ಎಂಬುದಂ ಕೇಳಿ ಮನ ನಂಬುಗೆಯು ಬಲಿದವರ |
ಕಾಂಬಕುತುಹಲದ ಸಲೆ ಸಂಭ್ರಮದಿಯವಳ ಜನ |
ರಿಂಬಿಗಿಸಿ ಪೊತ್ತು ತಂದಂಬುಜಾಕ್ಷಿಯನವರ ಮುಂಬಿ
ನೊಳಗಿಳಿಸುತವನು ||
ಕಂಬುಜಾಂಘ್ರಿಗೆ ಭಕುತಿಯಿಂ ಬಾಗೆ ಮಸ್ತಕವ |
ದೇಂ ಬಂದಿಯೆನಲು ಭೂತಂ ಬಡಿಮುದೆನ್ನಯ ಕು |
ಟುಂಬಿನಿಗೆ ಕೊಂಡು ಜವದಿಂ ಬಂದೆ ತೊರೆದು
ಹಲದ್ದಂಬಲಂ ದೇವ ದೇವಾ ||

೧೨

ಶರಣ ಕೇಳ್ನಿನ್ನ ಸುಂದರಕೀರ್ತಿ ದೇವ ವೈ |
ತರಣಿಯೊಳು ಸುಳಿವ ಜಲಚರಗಳಂತೆ ದುರೇರು |
ತಿರದೆ ಬಲ್ಪಿಂಪೊತ್ತು ತರುಣಿ ಸಹಿತಿಲ್ಲಿಗೈತರುವ
ದಾದಡೆಯಿಂದಿನಂ ||
ಪರಮಾಯುಸಂ ಪಟ್ಟು ಚರಣ ಕಂಡೆಮ್ಮನು |
ದ್ಧರಿಪುದೈತಾತ ಸಲೆ ಕರುಣದಿಂದೆನೆ ಕೇಳಿ |
ಧರಿಸಿಕ್ಷಾರಂ ಕೃಪಾಕರ ನಯನದಿಂ ನೋಡಲಿರ
ನಿಮಿಷದೋಳ್ಬಿಟ್ಟುದಾ ||

೧೩

ಭೂತಮುವಳಂಗದೊಳು ಚೇತನಿರೆ ಮೊದಲಿನೋಲ್ |
ಪ್ರೀತಿಯಿಂ ಪದಸರಸಿಜಾತಕಾನತಳಾಗು |
ತಾ ತರುಣಿ ಹರುಷದಿಂದೋತು ಸಜ್ಜನನ ಮಹಿ
ಮಾತಿಶಯ ಕೊಂಡಾಡುತೆ ||
ತಾತ ನೀನೇ ನಿಜಕನಾಥನಾಥೆಂಬುದಂ |
ಭೂತಳರಿದುದುನತರ ಪೂತನೆಸಗಿದನೆಂಬ |
ಖ್ಯಾತಿ ನೆರೆಮೆರೆದುದು ಪತೀತ ಪಾವನ ಸದ್ಯೋಜಾತ
ಸನ್ನಿಭರೂಪನೆ ||

೧೪

ಸಾಧು ಸನ್ನುತರ ಸುರಪಾದಪನ್ನವಿನ ಮಹಿ |
ಮೋದಯಂ ಯಮುಮಾರ ಮಾದಹರ ನರಿವರ್ಗ |
ಭೇದಕಂ ಸುಜ್ಞಾನ ಬೋಧಕಂ ಸುಕೃತ ಸಂಪಾದಕಂ
ತಾಗಿ ಮತ್ತೆ ||
ಮೇದಿನಿಯೊಳರಡನೆಯ ಮಾದೇವ ಮೇಣಖಿಳ |
ವ್ಯಾಧಿಗೌಷಧವು ಕರುಣೋದಧಿ ನಿಜಂ ನಿನ್ನ |
ಪಾದಭಜಕರಿಗಾವ ಖೇದಮಿಲ್ಲೆಂದಂದು ಮೋದದಿಂ
ಕೊಂಡಾಡುತೆ ||

೧೫

ನುತಿಸೆ ಸತಿಗೆರಡುಮಡಿ ಪತಿ ಭಜಿಸುತಲಿ ಸದಾ ।
ಗತಿ ಮಿಕ್ಕುತಾನ್ಯೈತರುತ ಮನೆಗೆ ಗೃಹದಿರುವ ।
ನಿತು ಹಣವು ಕೊಂಡು ಬಂದತುಳ ತೋಷದಿ ಕೊಟ್ಟು
ನತನಾಗಿ ಮುಂದೆಡೆಯೊಳು ॥
ಪತಿತನಾದವನಿಗೆತ್ತುತಲಿ ಭಾಪು ನಿರ್ವಂ ।
ಚಿತದ ಭಕ್ತಹುದ್ಯೋಗು ವಿತತ ಸುಖಿಯಾಗೆನಲು ।
ಚಿತರುಗರ ಸರಸಿಜಾಯತನಯನೆಯೊಡಗೂಡು
ತತಿ ಸೌಖ್ಯದಿಂದಿರ್ದನು ॥

೧೬

ನೆರವಿ ಜನರೆಲ್ಲಮಿದು ಪರಮಸೋಜಿಗ ಪರಂ ।
ಪರೆಯಿಂದ ಮಹತ್ವಗಳ ಜರಗುತಿರುತಿರೆ ಭೂ ।
ಸರಿಪೋಲ್ವರುಂಟೆ ಈ ಶರಣಬಸವಪ್ಪಗೆಂದುರೆ
ತೋಷದಿಂ ಪೊಗಳಲು ॥
ವರಲಿಂಗ ಪೂಜೆಯಂ ಚರಪವಾರ್ಚನೆಗೈದು ।
ಚರಣಾಂಬುಶೇಷವಂ ಶರಣ ಕೈಕೊಳ್ಳುತಲಿ ।
ಸಿರುತ ವಾಸೋಗೆಸಗೆ ಪರಮಾನುರಾಗದಿಂದಿರು
ತಿರಲು ಮುಂದೊಂದಿನಂ ॥

೧೭

ವಿಷಜಭವಪುರದ ಮುದವಸಿತದೊಳಗಿರುವ್ಪೋರ್ವ ।
ಕುಸುರ ಘನರೋಗದಿಂದಸುಗಳಿಯೆ ಕೇಳಿ ಜನ ।
ವಿಸವನ್ಯೈತಂದು ರೋದಿಸುವಾಪ್ತರಿಗೆ ಶಾಂತಿಯುಸರಿ
ದರದೀ ತೆರದೊಳು ॥
ಘಸಣಿಗೊಳಲೇಕೆಯುದ್ಭೃಶನಶ್ಯ ಮೇಣ್ಕಾಲ ।
ವಶ ಜನಮಿ ದೆಂದು ತರಿಸ್ಥೊಸಗಡಿಗಿ ಪಣತೆ ಘೃತ ।
ನಸವಸದಿ ಸದಗಿ ಕಟ್ಟಿಸಿ ಕಳುಹುತಲಿ ಸಪ್ತ ರಸನಾಹುತಿ
ಯು ದ್ರವ್ಯವಂ ॥

೧೮

ಮುಸವಟಿಗಿ ಕಡಿಗೆ ಸಂತಸ ವರ್ಜಿತರು ತೊಳೆಮ ।
ಬಿಸಿನೀರಿಸಿನ್ನಾಕದೆಸೆಗೆ ಶಬದಾನನವ ।
ನೆಸಗಿ ಸದಗಿಯೊಳಗೊರಗಿಸಿ ತನುವ ಕಾಣದೊಲು
ಪೊಸ ಬಟ್ಟೆಯಿಂ ಮುಚ್ಚುತೆ ॥
ಹೊಸದ ಹುರಿಬಿಗಿದು ಮುಂಡಸ ತೆಗಿದು ಪೊತ್ತು ಮುಂ ।
ದೆಸೆಯಗ್ನಿಯಿಂದೆ ಕಸವಿಸಿಯುಗೊಳ್ಳುತಲಿ ಶೋ ।
ಕಿಸುವಾಪ್ತ ಬಂಧುಜನ ವಿಸರದೊಡಗೂಡುತಾಯಸ
ದಿಂದ ಬರುತಿರುತಿರೆ ॥

೧೯

ಕಡಿದವೇಂ ಕೊರಳಸರವಡಿದವೇಂ ಕೈಬಳಿಗ ।
ಳುಡಿಪುದೆ ಮನೋರಥಂ ತೊಡೆದುದೇನ್ಣಣೆತಿಲಕ ।
ಸಿಡಿದುದೇಂ ಕಿವಿವಾಲೆ ಸಡೆದುದೇಂ ಮೂಗುತಿಯು
ಮುಡಿಗಲರ ಮುಡಿದ ಸೊಬಗಂ ॥
ಕಡೆಯಾಯ್ತೆ ಕಾಲುಂಗರಡಿರುಳಿಯು ಪೈಜಣಂ ।
ತೊಡುವ ಕುಪ್ಪಸ ಮೈಯೊಳಿಡುವಲಂಕಾರಗಳಿ ।
ಗೆಡೆಯಾಯ್ತೆಯಿರಲಿಂದಿಗಡವಿ ವೈಧವ್ಯ ಕೈಪಿಡಿ
ಯಿತೇಂ ಹಾ ಶಿವಶಿವಾ ॥

೨೦

ಸಡಲಿತಿಂದಿಗೆ ಸೌಖ್ಯ ಬಿಡದದೆಂದಿಗೆ ಶೋಕ ।
ಮುಡಿದುವೆ ನಿಜರಮಣ ಪೊಡವಿಯೊಳಗಿನ್ನಾರು ।
ಒಡೆಯರುಂಟೆನೆನ್ನಗೊಡಲಿಂದ ಮಕ್ಕಳಂ ಪಡೆದು
ದುಂಟೇ ಹರಹರಾ ॥
ಸುಡುತೆನ್ನ ಪತಿಗೆನ್ನ ನಿಡುವರೀ ಜಗದೊಳೇಂ ।
ಕಡುಗರೀ ಜನರೆಂದು ಮಿಡುಕುತಿದೆ ಹಣೆಗಳಂ ।
ಬಡೆದುಕೊಳ್ಳುತಲಿ ಸಂಗಡ ಕಷ್ಟದಿಂದವನ
ಮಡದಿ ತನೆ ಗೋಳಾಡುತಿ ॥

೨೧

ಪೋಗುತಿರಲಾ ಪೋಳ್ತು ಬಾಗಿಲ್ಗೊರಿಯಕೆ ಶರಣ ।
ನಾಗಮಿಸಿದುದು ಕಾಣುತಾಗ ಶೋಕಮ್ಮರೆದು ।
ಯೋಗಿಗಳ ಕಂಡು ನತರಾಗವಳೆ ಮುಂದಕ್ಕೆ
ಪೋಗುವುದು ಮಸ್ತ್ಯತೆಂದು ॥
ಬೇಗನೈತಂದು ತಲೆಬಾಗಲಿಕೆ ಶರಣಪ್ಪ ।
ನಾಗಷ್ಟಪುತ್ರ ಸೌಭಾಗ್ಯವತಿಯೆಂದು ತಲೆ ।
ಕೈಗಳಂ ಮುಟ್ಟಿ ಬೆರಗಾಗಿ ಜನರೆಲ್ಲರಿವರ್ಧೀಗೇಕೆ
ನುಡಿದರೆಂದು ॥

೨೨

ಮೃತನಾದ ಸೀತಂಗಿವತಿಯಿವಳು ಸೌಭಾಗ್ಯ ।
ವತಿಯುಪ್ಪುದೆಂತಷ್ಟ ಸುತರ ಪಡೆಯುವದೇಗೆ ।
ನೃತವಾದರಿವರ ಸಂತತ ಮಹಿಮೆ ಪೊಗಳುನರ
ಗತಿಯಾವುದೆಂದೆನ್ನುತ ॥
ಅತಿಚಿಂತೆಯಿಂ ಭಕ್ತತತಿ ಯೋಚಿಸುತ್ತಿರುವ ।
ಸಿತರೊಳಾ ಸರಸಿಜಾಯುತನಯನೆಗಾಗಲ್ಕೆ ।
ಸ್ಮೃತಿಜಗ್ಗನೆದ್ದೈತರುತ ಮುಸವಟ್ಟಿಗೆಯು ಕಡೆ
ಪಥದೊಳಗೆ ಧೇನಿಸುತಲಿ ॥

೨೩

ಶರಣಕಲ್ಪಿತ ಕಲ್ಪತರುವು ಕಾಮಿತಕಾಮ ।
ಸುರಭಿ ಮೇಣ್ ಚಿಂತನಿಯ ಸುರರ ಚಿಂತಾರತ್ನ ।
ನೆರೆಮನೋಗತ ಬಯಕೆ ಮರುಜವಣೆ ಸಲೆ
ಹರುಷ ಪರುಷೋಪಲೆಂದೆನ್ನುತಾ ।
ಸಿರುತ ಜನ ಪೊಗಳುತಿರುವದೇಂ ಸಟೆಯೆ ಸುಂ ।
ದರ ಪುರುಷ ನೀ ಭೂಮಿ ಸುರರೊಳಗೆ ಬೆರಿಯನೇ ।
ಸ್ಮರಣದಿಂದೆದ್ದೆನ್ನ ಕರಪಿಡಿದನೆನ್ನುತುರೆ ತೋಷದಿಂ
ಬರುತಿರೆ ॥

೨೪

ಕೆಲಬಲದಿ ಕೂಗ್ವ ಮಂಗಳಪರ್ದು ನರಿ ಗೂಗಿ
ಗಳ ಧ್ವನಿಯು ಸುಡುವ ಚಿತೆಯೊಳಗಿಂದಲೇಳ್ವ ಪೊಗೆ ।
ಪೊಲಸು ನಾತವು ಛಿಟ ಛಿಟಲಮೆಂಬ ರವ ಮತ್ತೆ
ಅಳಿದವರ ಬಂಧು ಜನರು ।
ಅಳುವದಂ ಕೇಳಿ ಮನ ಕದಕದಲೆ ಶರಣನ ।
ಗ್ಗಳ ವಚನ ನೆನ ನೆನಸಿಕೊಳುತ ಕೊಂಡಾಡುತಲಿ ।
ಘಳಿಲನೈತರುವಪ್ಪರೊಳಗೆ ಪೊತ್ತವರು ಶವಕೆಳಗಿಳುಹಿ
ಪೆಗಲಿನಿಂದ ॥

೨೫

ಕಟ್ಟಿರ್ದ ಗಂಟೆಲ್ಲ ಬಿಟ್ಟು ಶವವಂ ಚಿತಿಯೊ ।
ಳಿಟ್ಟು ಭೂಸುರರದಂ ಸುಟ್ಟು ಪೋದಪೆವೆಂಬು ।
ವಪ್ಪರೊಳಗಾಪಾರ್ವ ದಿಟ್ಟಿಗಳು ತೆರೆಯುತಲಿ ಥಟ್ಟನೇ
ಳಲು ಕಾಣುತಿ ॥
ಚಿಟ್ಟನೆ ಚೀರುತೆದೆಗೆಟ್ಟು ಬಹಳಾಶ್ಚರ್ಯ ।
ಪಟ್ಟು ಹಾಯೆಂದು ಗೋಳಿಟ್ಟವನ ಬಾಂಧವರ ।
ಕಷ್ಟವೆಣಿಸದಲೆ ಕೈಬಿಟ್ಟೋಡುತಿರ್ದರಂದಷ್ಟು
ಜನವಿಪ್ರರಾಗ ॥

೨೬

ಮೂಡಿದಾನಂದದಿಂ ನೋಡುತದು ಸತಿಯು ನಲಿ ।
ದಾಡುತಲಿ ಮಹಿಮೆ ಕೊಂಡಾಡಿ ಸಂತೋಷದಿಂ ।
ನೋಡುತಿರುವರಿಗೆ ಕೈಮಾಡಿ ಕರೆಯುತ ಭಯಂ
ಬೇಡ ನಿಮಗಾ ಶರಣನು ॥
ಆಡುತಲಿ ಶುಭವಾಕ್ಯ ಮಾಡಿದನಶೀರ್ವಾದ ।
ಗೂಡಿತಮ ಕೈಗೆನಗೆ ಜೋಡಿಸುತ ಸೌಭಾಗ್ಯ ।
ನಾಡಿಕಾರನ ಮಹಿಮೆ ರೂಢಿಯೊಳು ಪೊಸತೆಂದು
ಪಾಡುತಿರಲಾ ವಿಪ್ರರು ॥

೨೭

ಬಂದವರ ಗೂಡುತೈತಂದು ಶರಣನ ಬಳಿಗೆ ।
ವಂದಿಸುತ ಪಾದಾರವಿಂದದೊಳು ತಲೆಯಿಟ್ಟು ।
ತಂದೆ ನೀನೇ ಜಗಕೆ ವಂದ್ಯನೆನುತಾಡುತಾನಂದದಿಂ
ಪೊಗಳುತಿರಲು ॥
ಇಂದುಮುಖಿ ಪತಿ ಸಹಿತ ಬಂದೆರಗಿ ಸಾಷ್ಟಾಂಗ ।
ಪೊಂದಿ ನೆರೆ ನಮಿಸುತಾನಂದ ಭಾಷ್ಪಂ ಕಂಗ ।
ಳಿಂದೊಸರೆ ಗಳಗದ್ಗದವಳಿಯೆ ಸಲೆ ಪ್ರೇಮದಿಂದ
ಕೊಂಡಾಡಿ ಮತ್ತೆ ॥

೨೮

ಶರಣ ಜಯ ದುರಿತ ಸಂಹರಣ ಜಯ ವಿಜಿತ ಭವ ।
ಮರಣ ಜಯ ನೆರೆದ ಮನ ಕರಣ ಜಯ ಸದ್ಗುಣಾ ।
ಭರಣ ಜಯಸನ್ಮುಕ್ತಿ ಸರಣಿ ಜಯಭಕ್ತ ಜನ ಹರಣ
ಜಯ ಜಯ ಶಾಶ್ವತ ॥
ಚರಣೆ ಜಯ ಸುಮಹಿಮಾಕರಣೆ ಜಯ ಶೋಕಾಂಬು ।
ತರಣ ಜಯ ವಿನುತ ಜನಶರಣ ಜಯ ಯಶ ಸುಧಾ ।
ಕಿರಣ ಜಯಚರ ಭಕ್ತಿಧುರಿಣ ಜಯ ಪಾಹಿಮಾಂ
ಕರುಣಾಬ್ಧಿಯೆಂದು ಮತ್ತೆ ॥

೨೯

ಸುರಧೇನು ತವಗೋಷ್ಟಿತುರು ನಿನ್ನ ಮನೆಮುಂದಿ ।
ಗಿರುವ ಮರಗಳೆ ಕಲ್ಪತರುವು ನೀ ಮೆಟ್ಟಿರ್ದ ।
ಆರೆ ತಿಳಿವಡದೆ ನಿಜದ ಪರುಷ ನೀ ಧರಿಸಿರ್ದ ಕೊರಳ
ಮಣಿಗಳೆ ಅರಿಯಲು ॥
ಸುರರ ಚಿಂತಾರತ್ನ ನಿರುತ ಕಸಗೂಡಿಸು ।
ತ್ತಿರುವ ಕಸಪೊರಿಕೆಯದೆ ಮರುಜವಣೆ ನೀನೆ ಶಂ ।
ಕರ ನಿದಂ ನಂಬದಲೆ ನರನೆಂಬ ಪಾಮರಗೆ ನರಕ
ವಪ್ಪದು ತಪ್ಪದು ॥

೩೦

ಪೂತಕದೊಳಿಪ್ಪ ನೆರೆಪಾತಕಿಯು ನಾ ನಮಿಸ ।
ಲೀತೆರಾದುದು ನಿತ್ಯಸ್ನಾತ ನೇಮಿಗಳು ಸಲೆ ।
ಪ್ರೀತಿಯಿಂ ನಮಿಸಿ ಭಜಿಸ್ಯೋತು ಪಡೆಯುವದೇನು
ಮಾತುಮನೆ ಬಲ್ಲನದನು ॥
ಭೂತಿಯಿದು ಭಗವದ್ವಿಭೂತಿಯಲ್ಲದೆ ನರಕ ।
ಜಾತಿಗೇಂ ತಕ್ಕುದೀ ಮಾತು ಶರಣಪ್ಪ ಸಾ ।
ಕ್ಷಾತ್ತೆರಡನೆಯ ಭೂತನಾಥನೆನ್ನುತಲಿ ಪತಿನಿಕೇ
ತನಕೆ ಭರದಿ ಪೋಗಿ ॥

೩೧

ಭೂರಿ ಮುದದಿಂದ ಲಾಗಾರದಿಂ ಶಕ್ತ್ಯಾಸು ।
ಸಾರ ಧನ ತಂದಿಟ್ಟು ಚಾರು ಶರಣನ ಚರಣ ।
ವಾರಿಜಕ್ಕೆರಗಿ ಘನ ಸಾರ ಘೃತ ಶೈಲಂಗಳಾರು
ತಿಂಗಳಂ ಬೆಳಗುತೆ ॥
ನಾರಿಯುಂ ಪತಿ ಪಡೆದು ನಾರಿ ಕೇಳ್ಪೈ ತಂಪ ।
ಪಾರ ಮಹಿಮನ ದಿವ್ಯ ಚಾರಿತನ್ನೆನೆ ನೆನೆಯು ।
ತೋರಂತೆ ಗೃಹದಿ ಸಂಸಾರ ಸುಖದೊಳಗಿರಲು ಪೌರ
ಜನ ಕೊಂಡಾಡುವ್ರೋಲ್ ॥

೩೨

ಹಿಂದೆ ಕೇಳರಿದೆವಾನಂದೀಶ ಬರುತಿರಲಿ ।
ಕೊಂದು ದಿನ ಬೀದಿಯೊಳಗಿಂದುಮುಖಿ ನಮಿಸೆ ಶುಭ।
ವೆಂದೊಡನೆಯವಳ ಮೃತ ಪೊಂದಿರುವ ಪತಿಯೆದ್ದನೆಂದು
ಹಿರಿಯರು ಪೇಳ್ವುದಂ ॥
ಇಂದು ಕಂಡೆವು ನೋಜಿಗೆಂದು ಸಲೆ ಸಂತೋಷ ।
ದಿಂದ ಪೊಗಳುತ ನೆರದ ಮಂದಿ ಮನೆ ಮನೆಗ್ಹೋಗ ।
ಲಿಂದುಧರ ಪೂಜೆ ಚರವೃಂದವತಿ ದಾಸೋಹನೆಂದಿ
ನೋಲ್ ಗೈಯ್ಯುತಿರುವಂ ॥

೩೩

ಅನಿತರೊಳು ಬಂದು ದುರ್ಜನವಾದ್ಯ ಬೊಗಳಾಟ ।
ಜನ ತೋಷದಿಂ ಗೈವದಿನವುತ್ಸಹಂಗೊಳಿಸ ।
ಲೆನುತ ಮಂಟಪನೆಸತಿ ಘನಶೋಭೆಯಿಂದ
ಕಾಮನಕೂಡಿಸಲ್ಲೆಲ್ಲಿಗೆ ॥
ತನ ತನಗೆದುಮ್ಮಿ ಸಾಲೆನುತಲಿ ಬಿಭಿತ್ಸ ನಾ ।
ಯನ ಮಾಡುತಂತೆ ನರ್ತನ ಗೈಯ್ಯುತಿಹವಾರ ।
ವನುತೆಯರ ಸಂಭ್ರಮದಿ ಬಿನವದಿಂ ವೃದ್ಧಯೌವನ
ರ್ಹುಡುಗರೆಲ್ಲ ಕೂಡಿ ॥

೩೪

ಮೋದದಿಂ ಶುಭ ಶಂಖನಾದವಂ ಮಾಡಿ ನಾ ।
ಲ್ಕೈದು ಜನರ್ಹೋಗಿ ಬರುಹಾದಿ ಜನಕೆಲ್ಲ ಮೇ ।
ಲ್ಪೊಯ್ದು ನೀರ್ಗೂಡಿಸಿರುವ್ವೈದು ಬಣ್ಣಗಳು ಸಲೆ
ಬೈದಾಡುತೊಬ್ಬೊಬ್ಬರಾ ॥
ಹಾದರ ಪದಗಳಿಂದಾದರಿಸುತವರ ವರಿ ।
ಗೋದುತಲಿ ಕೋಕ ಸಂಪಾದಿತ ಪುರಾಣ ಜನ ।
ಕೀ ದಿನ ಜಿಗುಪ್ಸಿತವರಾದುದಿದರೊಳಗಾವ ಭೇದ
ಮೋದವನೆಣಿಸರು ॥

೩೫

ನಡುಗ್ರಾಮದೊಳಗೆ ಕೂಡಿಡುತ ಕುಳ್ಳುಗಳದಂ ।
ಸುಡಲಗ್ನಿ ತರಲೆಂದು ನಡೆದು ಹೊಲಗೇರಿಯೊಳ ।
ಗ್ಹೊಡಿಸಿಕೊಂಡೆಲುವಿನಿಂ ನುಡಿವುತ ಬಿಭತ್ಸು
ಬಾಯ್ಬಡುಕೊಳುತ ಹಸ್ತದಿಂದ ॥
ಗಡನೈದುಪುಟವಿಟ್ಟುಗುಡದ ವೃಶ್ಚಿಕ ಮತ್ತೆ ।
ಕಡಲಿಗೊಬ್ಬರಿಗಳೊಳಗಿಡುತಲಂ ತವೆ ಕೆಲವು ।
ಸುಡುತ ತಿಂಬುತ ವೃದ್ಧರ್ಹುಡುಗರುಲ್ಲಾಸದಿದೆಡೆ
ಬಿಡದೆ ಬೊಬ್ಬಿಟ್ಟರು ॥

೩೬

ಇನಿತೆಸಗಿ ಪೂರ್ಣಿಮಾಸಿನ ದಿವಸ ಮತ್ತೆ ಮರು ।
ದಿನ ಲೇಸು ಪೊಲ್ಲೆಗಳ ನೆಣಿಸದಂತೆಲ್ಲ ಸೋ ।
ಗಿನ ಕಾರಣದಲಿ ಕುಣಿ ಕುಣಿಯುತದರೊಳು ಮಧ್ಯ
ಜನರೊಂದು ಯೋಚಿಸಿದರು ॥
ಅನಘನ ಪರೀಕ್ಷಿಸುವದಿಸಿತುಂಟದೆನ್ನುತೊ ।
ಬ್ಬನ ವೀರಶೈವ ಜನ ಪೆಣದಂತೆ ಗೈದವನ ।
ಫಣೆಗೆ ತೊಯ್ಸಿದ ಭೂತಿಯನು ಧರಿಸಿ ಕೊರಳೊಳ
ಗೆ ವಿನುತಾಕ್ಷ ಮಾಲೆ ಧರಿಸಿ ॥

೩೭

ಬಿನವದಿಂ ಶರಣನನ್ನಣಕವಂ ಗೈಯ್ಯಲೆಂ ।
ದಿನಿತೆಸಗುತಾಗ ದುರ್ಜನ ಯೋಮಯಾನ ನೊಂ ।
ದನುಕರಿಸಿ ಕಪಟ ಶವಮನುಜನನ್ನೊಳಗಿರಿಸಿ ತನ
ತನಗೆ ಶೋಕಿಸುತಲಿ ॥
ಜನಕ ಬಯಲಾದನೆಂದೆನುತೋರ್ವ ಮತ್ತೆ ಮ ।
ತ್ತನುಜನೆಂದೋರ್ವ ಮತ್ತನುಜನೆಂದೋರ್ವಳಿಯೆ
ನೆನುತಳುತ ನಾಟಕದ ಜನರಂತೆ ಪೊತ್ತು ಪೆಗಲಿನೊಳ
ಗವನಂತರುತಲಿ ॥

೩೮

ಇಳುಹಿ ಶರಣನ ಮುಂಬಿನೊಳು ದೇವನಿವನಿಂದಿ ।
ನಳಿಯಲೇಂ ಕಾರಣದು ತಿಳುಹಿ ಜೀವಂ ಪಡೆದು ।
ಬಳಗ ಶೋಕಾಬ್ದಿಯೊಳು ಮುಳುಗಿಪ್ಪದಿವರ ಕಡೆಗೆಳೆದು
ನಿನ್ನಯ ಮಹಿಮೆಯಂ ॥
ಉಳಿಸಿಕೊಂಬುವದೆನ್ನುತಳುತಿಪ್ಪರಂ ಕಂಡು ।
ತಿಳಿದವರ ಕಾಪಟ್ಯ ಕೊಲಲೀಶನೆ ಕಾಯ್ವ ।
ರೊಳಕೆ ನಾನರಿಯೆ ನೀ ಹೊಲಬೆನಲು ಕೇಳಿ ತವ್ಮೊಳ
ಗೆಂದರಾ ವಿಪ್ರರು ॥

೩೯

ಮರುಳ ಜನರಿವಗೆ ಶಂಕರನೆಂದು ಪೊಗಳುವದು ।
ಬರಿಯ ಭ್ರಮೆ ನೋಡಲೇಂ ಪುರುಳುಲ್ಲಮಿವನೊಳಗೆ ।
ಸರಸಿಜೋದ್ಭವ ಫಣೆಗೆ ಬರೆದುದಂ ಕೆಡಿಸುವಡೆ
ಹರಿಹರರಿಗಾಗದೆನಲು ॥
ನರರ ಹವಣೇಂ ನಾವೆ ವಿರಚಿಸಿದ ಕಪಟ ದಂ ।
ತರ ತಿಳಿಯುಡವನ ತರ ಪೊರಿವ ಬಗೆಯೆನಿತೆಂದು ।
ಪರಿ ಪರಿಯು ಯೋಚಿಸುತ ಪೊರಗದಂ ಕಾಣಿಸದ ತೆರ
ದಿಂದಲವರ್ಗೆಂದರು ॥

೪೦

ಶರಣಪ್ಪ ಸೀಸಿವಪ ಹರಣವನ್ನುಳಿಸದಿರೆ ।
ನೆರೆ ಕುಂದು ಬರುವದೀ ಪುರಕಾದ್ದರಿನ್ನಾವೆ ।
ಕರುಣಿಸುವೆ ವಸುವೆಂದು ನರಹರಿಯೆ ಏಳೆಂದು ಕರೆ
ಕರೆದು ದಣಿದು ಮತ್ತೆ ॥
ಕರವಿಡಿಯುತೆಳೆಯೆ ಕಣ್ದೆರೆಯದಿರೆ ತಣ್ಣೀರು ।
ಸುರವಿದಂ ತಿರುತಿರುವ ಶರಿರವಂ ನೋಡಿ ಗಾ ।
ಬರಿಗೊಂಡು ಕೈಯೆದೆಯೊಳಿರಿಸುತೇಂ ಗತಿಯೆಂದು
ಮರ ಮರನೆ ಮರುಗಿ ಮತ್ತೆ ॥

೪೧

ಜಾಣರಾದವರು ಕೈತಾಣ ನಾಡಿಯು ನೋಡಿ ।
ಘ್ರಾಣದುಸುರಾರೈದು ಮೇಣವನಪುದೆ ತಟ್ಟ ।
ಗೋಣಗೆಳಗಾದುದಂ ಕಾಣುತಲಿ ಹಾ ಹರಿಯೆ ಪ್ರಾಣ
ಪೋದುದು ಸಿಶ್ಚಯಂ ॥
ಏನು ಗೈಯ್ಯುವೆವಿಂಥ ಹಾಸಿಯಾವೆಸಗೆಮ್ಮ ।
ಮಾನ ಕಳಕೊಂಡೆವಿಂದೇನು ಪೇಳ್ವೆವು ಜನಕೆ ।
ಜ್ಞಾನವಿಲ್ಲದ ಕೆಲಸ ಮಾನವರು ಗೈವನೆಂದಾನವರಿ
ನಾನ್ನಿಜವಲಾ ॥

೪೨

ಅಸಿತರೊಳಗಾ ಸುದ್ದಿ ಜನಜನಿತಮಾಗವನ ।
ಮನೆಯವರು ಕೇಳುತೆದೆ ಹಣೆಗಳಂ ಬಡಕೊಂಡು ।
ಜನನಿ ಜನಕಾಪ್ತ ಜನ ಪೆಣತಿ ಸಹಿತೈತಂದು ಘನ
ಶೋಕದಿಂ ಪೊರಳುತೆ ॥
ತನಯನೆ ನಿನ್ನ ಸದ್ಗುಣಮರಿವದ್ಹ್ಯಾಗೆಂದು ।
ಇನಿಯನೇ ಇಂದಿಗೇ ಪಣೆವಡೆದುದೇಯಿಂದು ।
ತನತನಗೆ ರೋದಿಸಲು ಜನರಿದು ಫಲಿವನ ದುರ್ಗಣ
ದೆಂದು ಗುಣಗಿಟ್ಟವರು ॥

೪೩

ಮೊದಲೆ ಫಾಲ್ಗುಣ ಮಾಸಮದರೊಳೀಯುಲ್ಲಾಸ ।
ಮದಕೆ ಕೇಳುವದೇನುರುದಿತ ಬೊಬ್ಬೆಯ ಜಾತ್ರೆ ।
ಯೊದವಿತೆನೆ ಸತ್ತವನ ಸದನದವರಂದಳುತಿಹುದು
ನೋಡಿ ಜನರೆಲ್ಲರು ॥
ಎದೆ ನೋಡಿರಿವರ ದುರ್ಮದವೆನಿತು ಶರಣನ ।
ಭ್ಯುದಯವಂ ನೋಡಿ ಸಹಿಸದ ನೀಚ ಜನ ತಮ್ಮ ।
ಪದಕೆ ತಾವ್ಪಲ್ಲಿಟ್ಟ ಹದನಾಯಿತೆಂದು ಬೈದುದು
ನೆರೆದ ಜನ ಜಾಲವು ॥

೪೪

ಗೆಳೆಯರಿವರಹುದೆಂದು ನಿಲಯದೊಳಗೊಂದು ದಿನ ।
ನಿಲಗೊಡದೆ ಮನ ಬಂದ ಬಳಿಗೊಯ್ದು ಮಮತೆಯಂ ।
ಬೆಳಸಿಕೂಡಾಡಿರ್ದಫಲವಿನಿತೆ ಕೊನೆಗಿವನ ಕೊಲಿಸಿ
ಸುಖವಂಬಟ್ಟರೆ ॥
ಖಲರೆ ನೀವಿನ್ನು ಜನರೊಳಗೆ ಮುಖತೋರಿಸಲು ।
ತಲೆಯೆತ್ತುವದ್ಹ್ಯಾಗೆ ಕಳೆವೆವಸು ನಿಮ್ಮ ಕಾ ।
ಲೊಳಗಾವು ಬಿಡೆವೆಂದು ಛಲವೆಂದು ಪೊರಳಾಡು
ತಳುತಿರುವರಂ ಕಾಣುತೆ ॥

೪೫

ಶೇಷಭಟ್ಟರೆ ತನ್ನಿ ಕಾಶಿನಾಥರೆ ಬನ್ನಿ ।
ವಾಸುದೇವಾಚಾರ್ಯರೌಷಧಂ ಕೊಡುತಲಿಗ ।
ತಾಸು ಮತುಳಿಸಲೊಂದು ಸಾಸಿರ್ಪಣ ಕೊಟ್ಟ ಮೇಣ್
ದಾಸರಾಗುವೆವವರಿಗೆ ॥
ಮೋಸವಾಯ್ತಯ್ಯೋ ಹರಿದಾಸರೇನಾವೆನಿತು ।
ದೋಷಿಗಳು ಪೇಳಿರೈ ಕೇಶವಾಚಾರ್ಯರೀ ।
ಕ್ಲೇಶಕಳೆಯುವಡೆಮ್ಮ ಗಾಸಿಯುಂಟೇನೆಂದೊ
ಘೋಷಿಸಿದರಾಕುಸುರರು ॥

೪೬

ಕರವಾಳಧಾರಿಯಂ ಪರಕಿಪೊಡದರ ಕೆಳಗೆ ।
ಕೊರಳೊಡ್ಡಿ ನಿಂತು ಕತ್ತರಿಸಿಕೊಂಡಂತಗ್ನಿ ।
ಯುರಿಯರಿಯೆ ಮನೆಯ ಮೇಲ್ ಸುರವಿ ಬಿಟ್ಟಂತೆ
ಮೇಣ್ಗುರಳಸತ್ವಂ ನೋಡಲು ॥
ಸುರಿವ ಪನ್ನೀಗುವಂತ್ಪರಣಗುಂಬೆಷ್ಟೆಂದು ।
ಶರಧಿಯೊಳ್ ಕಲ್ಲುಡಿಯೊಳಿರಿಸಿ ಮುಳುಗುವನಂತೆ
ಯರರೆ ನಾವೇತಕಿ ಪರಿಯಕಾರ್ಯಗೈದೆವೆಂದುರೆ
ರೋದಿಸಿದರೆಲ್ಲರು ॥

೪೭

ಈ ಪರಿ ಚಿಂತೆ ಮನವ್ಯಾಪಕಂ ಗೊಂಡಿರುತಲಾ ।
ಪಾರ್ವರೆಲ್ಲ ಪ್ರಲಾಪಿಸುವದಂ ನಿಲಿಸಿ ।
ಸೋಪಚಾರದಲೋರ್ವ ತಾ ಪೇಳಿದನು ನಿಮ್ಮ ಕಾಪ
ಟ್ಯವೇ ನಿಮ್ಮಗೆ ॥
ಈ ಫಲಂಗೊಟ್ಟುದೆಲೆ ಪಾಪಿಗಳೆ ನಿಮ್ಮ ಮತಿ ।
ಚಾಪಲ್ಯ ಕಳೆದಿವರ ಶ್ರೀಪದಗಳಂ ಕಂಡ ।
ರೇ ಪರಿಯೊಳಾದಡುಂ ಕೋಪವಂ ಗೊಳ್ಳದಲೆ
ತಾಪವಂ ಪರಿಹರಿಪನು ॥

೪೮

ಆ ವಿಬುಧನೆಂದದಕೆ ಭಾವತೋಷದಿ ಶರಣ ।
ದೇವದ್ವಯ ಚರಣ ರಾಜೀವಕಾನತರಾಗು ।
ತಾವು ದೀನರು ನಿರುತ ನೀವು ದಿನೋದ್ಧಾರರಾವು
ಪತಿತರು ಪತಿಕರಾ ॥
ಪಾವನರು ನೀವು ದುರ್ಭಾವಿಗಳು ನಾವು ಸ ।
ದ್ಭಾವಿ ನೀನ್ನೈಸೆ ಕರುಣಾವಲೋಕನದೆಮ್ಮ ।
ಕಾವುದಾದರೆ ಸಂತತಾವ ಭಯವೆಮಗೆಲೇಸಾ
ವುದೇ ನಿಜವೆಂದರು ॥

೪೯

ಭೂಸುರರ ಕೇಳಿ ವೃಷ ಭಾಷಣಂಗೈದೊಂದು ।
ದೋಷನಿಮುಗದರಿಂದ ಸಾಸಿರ್ಧಣ ತಂದೆಮ್ಮ ।
ದಾಸೋಹಕಿಡಲಿವಗೆ ಲೇಸಪ್ಪುದೆನೆ ಕೇಳು
ತೇಸುಘನಮಿದುಯೆನ್ನುತೆ ॥
ಆ ಸಮಯ ತಮ್ತಮ್ಮ ವಾಸಕೈತಂದು ಧನ ।
ರಾಸಿ ಗೈದೆಲ್ಲರಿಂದೀಸಿ ಕೊಂಡವರು ಸಂ ।
ತೋಷದಿಂ ತಂದು ಶರಣೇಶನಡಿಮುಂದಿಟ್ಟು
ಸಾಷ್ಟಾಂಗದಿಂ ನಮಿಸಲು ॥

೫೦

ಶರಣನಾ ಪೊಳ್ತು ಸಾಸಿರ ಕೊಳ್ಳುತಾಶಬಕೆ ।
ಚರರ ಧೂಳೋದಕಂ ನೆರೆ ತಳಿಯಲವನು ಮೈ
ಮುರಿದಾಕಳಿಸುತ ಕಣ್ದೆರೆದೆದ್ದು ಬಂದವರ ಚರಣ
ಕಾನತನಾಗಲು ॥
ಪರಿತೋಷದಿಂ ಭೂಮಿ ಸುರರೆಲ್ಲ ಕೊಂಡಾಡು ।
ತರಿದರಿದು ಮಹಿಮೆ ಜಗದೆರೆಯನೆ ಬಲ್ಲ ನೀ ।
ಧರೆಯೊಳಿವನಂ ಪೋಲ್ಪವರ ಕಾಣೆವೆಂದು ಮತ್ತೆ
ರಗೆರಗುತೆದ್ದೆರಗುತೆ ॥

೫೧

ಮಡಿದೆದ್ದವನು ಶರಣನಡಿಗಳೊಳು ಪೊರಳಾಡಿ ।
ಜಡಜಭವನಕ್ಕರಂ ತೊಡೆಯಲುಂ ಕಾಯಲುಂ ।
ಪಡಿಪಾರು ನಿನ್ನಗೀ ಪೊಡವಿಯೊಳು ನೀನೆ ನಿಜ ಮೃಡ
ನೆನ್ನಲೇಂ ಸಂಶಯಂ ॥
ಪಡದವರು ಸುಳ್ಳು ನೀನ್ನಡದುದೆ ದಿಟ ದೇವ ।
ರೊಡೆಯಾಪ್ತ ಬಳಗೆಲ್ಲ ಕಡೆಗೆ ನೀನಿದು ಮೊದಲು ।
ಪುಡುಕಲಾರೆನು ಬೇರೆ ಕಡೆ ದೈವತೆಂದವಂ ನುಡಿಯು
ತಿರಲಲ್ಲಿರುವರು ॥

೫೨

ಭೂತಕಾಲದೊಳಾದುದೀತರಲ್ಲಿಲ್ಲವಲಾ ।
ವಾತಾಪಿಯೆಂದೆಂಬ ದೈತ್ಯರೆಸಗಿದ ಕಪಟ ।
ತಾ ತಿಳಿದಗಸ್ತ್ಯ ಮುನಿನಾಥನವರನ್ನುಂಗಿ ವಾತ
ದಶಕಂ ಸೆಳೆದನು ॥
ಕೈತವಂ ಗೈದುದಕೆ ಕಾತಳಂಗೊಳ್ಳದಲೆ ।
ಪ್ರೀತಿಯಿಂದಸುವಿತ್ತ ನೀತನಘಘೂತಿವನ ।
ಮಾತು ಬೇರೆಂದು ಸಾದ್ಭೂತ ಮಾನಸದಿ ಜನವ್ರಾತ
ಕೊಂಡಾಡಿ ಮತ್ತೆ ॥

೫೩

ಇಂದುವಂ ಧರಿಸ್ಯಖಿಳ ತಂದೆಯಾಗಿರುತಿಪ್ಪ ।
ನಂದಿಗಮುರೋಷದಿಂದಂಧಕಾಸುರಕರಿ ಜ ।
ಲಂಧರನ ವ್ಯಾಘ್ರನಂ ಕೊಂದು ತಾಂ ಕಾರುಣ್ಯದಿಂ
ದಸುವ ನೀಯ್ಯದಾದಂ ॥
ತಂದು ಕಪಟದಿ ಸತ್ತನೆಂದವರಿಗನಿತಾಗ ।
ಲೆಂದು ಜೀವಂಕಳೆಯುತೊಂದಿಸಲು ಮರಳಿಸಿದ ।
ನಿಂದಿವನೆ ಮಿಗಿಲು ಶಿವನಿಂದೆ ಸಲೆ ಭಾಪು ಭಾಪೆಂದು
ಜನಪೊಗಳುತಾಗ ॥

೫೪

ಮನೆಮನೆಗೆ ಪೋಗಲೆಂದಿನದಂತೆ ಶರಣಬಸ ।
ವನುಲಿಂಗಜಂಗಮಾರ್ಚನೆ ನಿರುತ ದಾಸೋಹ ।
ನನುಕರಿಸಿ ಲಿಂಗಾಂಗದನುಭವ ದೊಳಿರಲಕೊಂದಿನ
ವದೇ ಪುರದೊಳಿರುವಾ ।
ವನಜಾಕ್ಷ ಮತಪ ಪಾರ್ವನ ಪತ್ನಿಯೈತಂದು ।
ವಿನುತಳಾಗಿರಲು ಪದವನಜದೊಳು ನೀನಾರು ।
ನೆನಸಿದುದದೇಂ ನಿನ್ನ ಮನದೀಪ್ಸಿತಂ ಪೇಳ್ವುದೆನೆ
ಕೇಳುತವಳೆಂದಳು ॥

೫೫

ಸಂತತಿಯ ಕೊಡುತಿಪ್ಪುದಂ ತಿಳಿದುಬಂದೆ ದಯ ।
ವಂತ ನೀನೆನಗೊಂದು ಸಂತತಿಯ ಕರುಣಿಸುವ ।
ದೆಂತೆಂಬುದನು ಕೇಳುತಂ ತಡಿಯದವಳ್ಗೆಂದನು
ಸಂತತಂನಿವ್ ಜನಕೆ ॥
ಸಂತಾನ ಬಯಸುವಡೆ ಕಾಂತನಂ ಬಿಟ್ಟೋರ್ವ ।
ಳೆಂತೈದೆ ನಿನಗೇಂ ಸ್ವತಂತ್ರತಿಯೆ ಪೇಳ್ವದು ನಿ ।
ಶಾಂತದೊಳು ಸರ್ವಸ್ವವಂ ತಂಗಿಯನೆ ಕೇಳ್ಗುತಿಂತಾ
ಡಿದಳು ಶರಣಗೆ ॥

೫೬

ಇದ್ದುದವನೊಳಗೀಗ ಮಧ್ವಮತದಭಿಮಾನ ।
ಸುದ್ದಿಯಿದನೆತ್ತಿದರೆ ಕೃದ್ಧನಾದಪನವನ ।
ಬುದ್ಧಿ ಭ್ರಂಶತಿಗಾರು ತಿದ್ದುವರಕಾಣೆ ಪ್ರಾರಬ್ಧ
ಹೀನಳು ನಾನಲಾ ॥
ಸದ್ದು ಸದ್ದಿಗೆ ವೆಂಕಟುದ್ದಂಡ ಮನಬಯಕೆ ।
ಸಿದ್ಧಿಸುವನೆಂದಾಡುತಿದ್ದುದಕೆ ಬೇಸತ್ತು ।
ಹೊದ್ದಿರುವೆ ನಿಮ್ಮಪದಕುದ್ಧರಿಸಿ ಹರುಷಾಬ್ಧಿಗದ್ದು
ತೆನ್ನಂ ಕಾಯನೆ ॥

೫೭

ಭಾವ ಶುದ್ಧಹುದು ರಾಜೀವಲೋಚನೆ ನಿನ್ನ ।
ಗಾವು ಸುತನಂ ಕೊಡಲು ಸಾವಿರ್ಹಣ ಬೇಕುಮಿದ ।
ಕಾವ ಸದುಪಾಯವಂ ಗೈವಿನೀಂ ಪೇಳೆಂದಡಾವನಿತೆ
ನುಡಿದಳಾಗ ॥
ದೇವನಾನಬಲೆ ಪತಿಯಾ ವಿಧದ ಭಂಡಿ ಹಣ ।
ಸಾವಿರೆಲ್ಲಿಂ ತರಲಿ ನೀವು ಕರುಣಿಸಲಿಕೆ ।
ನ್ನೀವಿ ಭೂಷಣವೆಲ್ಲ ನೀವೆ ನಿಶ್ಚಯವೆನ್ನುತಾವನತ
ಳಾಗಲಾಗ ॥

೫೮

ಒಡವಿಗಳನಂಗದೊಳಗಿಡದಿರಿಂದಿನದಿಂದ ।
ಮುಡುಪು ಕಟ್ಟಿಟ್ಟು ನೀ ಹಡೆವ ಳಗಿಯು ಕಳುಹಿ ।
ಕೊಡುವದಂ ದಿಟವಾಗಿ ನುಡಿಯುತಾಶೀರ್ವಾದ
ಪಡಿದುಕೋ ಖರ್ಜೂರವಂ ॥
ಪಿಡಿಯೆಂದು ಕೊಟ್ಟಾವಯಡರಡಸಿದಡೆ ಮನ ।
ದೃಢ ಮೊಂದೆಯಿರಲೇಳು ನಡೆಯನ್ನಲಾ ಶರಣ ।
ನಡಿಗೆರಗುತೀಸಿ ಕೊಂಡುಡಿಯೊಳಗೆ ಖರ್ಜೂರ
ಪಡಿಮಾತನಾಡೆನೆಂದು ॥

೫೯

ಭಾಷೆಯಂಗೊಟ್ಟು ಸಂತೋಷದಿಂ ಬಂದಾತ್ಮ ।
ವಾಸಕತಿ ಭರದಿ ಶರಣೇಶ ಪೇಳಿದತೆರ ವಿ ।
ಭೂಷಣಗಳಂ ತೆಗೆವುತಾ ಸುದತಿ ಮುಡಪಿಡಲು
ಮಾಸದರ್ಮವು ತಡೆದು ಮೇಣ್ ॥
ಹೇಸುತನ್ನಲಸಿಕಾಯಾಸ ಘನ ಮನೆ ಕೃತಿಗೆ ।
ಬೇಸರಿಸುತಿರಲು ನವಮಾಸ ಗರ್ಭಕ್ಕಾಗ ।
ಲಾ ಸಮಯದೊಳಗೊಂದು ವಾಸರದೊಳವಳ
ಪ್ರಾಣೇಶ ಮುಂದಕೆ ಕರೆಯುತೆ ॥

೬೦

ಮುಂಗಡಿಯೊಳಿರಿಸಿ ಕೊಂಡಂಗನಿಯೆ ನಿನ್ನಗ ।
ರ್ಭಂಗಂಡು ಹಬ್ಬಾಯ್ತು ಕಂಗಳಿಗೆ ಸುಗ್ಗಿ ಮನ ।
ಸಿಂಗಾಯ್ತು ಕರುಣಿಸಿದರಂಗೈಯ್ಯ ನಮಗೆ ನೀನಂಗ
ಜನ ಪಡೆಯೆ ಮನದ ॥
ಹಿಂಗುವದು ಬಯಕೆಯದು ಹಾಂಗಿರಲಿ ರಮಣಿ ನೀ ।
ನಂಗದೊಳಲಂಕಾರ ತಿಂಗಳೊಂಬಂತ್ತರಿಂ ।
ದಾಂಗಾಣೆ ತೆಗೆದಿಡುವಡಿಂಗಿತೇಂ ಪೇಳ್ವುದು ಕುರಂಗ
ಲೋಚನೆಯನ್ನಲು ॥

೬೧

ಆ ತರುಣಿ ಮನಸಿಗತಿ ಭೀತಿಯಂಕುರಿಸುತಿದು ।
ನಾಥನೊಳಗಾಡದಿರಲೇತರಾದಪುದಾಡೆ ।
ಕಾತಳಂಗೋಳ್ವನೇನೌತರೊಳಿತಲ್ಲದೀ ಮಾತು
ಮುಂದೆಂಡಾದರು ॥
ತಾ ತಿಳಿದಕ್ಷಣ ಜೀವವೆ ತೆಗಿವನೊ ಮತ್ತೆ ।
ಮಾತು ಮನನಿಂದಿಪನೊ ಘಾತಕನುನಾರಾಯ ।
ಣೇತರಂ ದೈವತನ್ನಾಸ್ತಿಯಂಬುತ ನಿರುತನೀತನನ್ಯರ
ಮತವನು ॥

೬೨

ನಿಂದಿಪನೊ ನಾನಿವನಿಗಂದರೇನಪ್ಪುದೋ ।
ಕುಂದು ಶರಣಪ್ಪಗಾಯೆಂದು ಯೋಚಿಸುತೆನ್ನ ।
ಕೊಂದರುಂ ಕೊಲ್ಲಲವನೆಂದು ದೃಢಗೈದು ಮರವಿಂದ
ಲೋಚನೆ ಕಾಂತಗೆ ॥
ಒಂದುಳಿಯದೊಲ್ಪೇಳಲಂದು ಭೂಸುರನು ಪ ।
ಲ್ದಿಂದು ಪೇಳ್ಪೇಳದೇನಂದುನಿನ್ನೊಮ್ಮೆ ಗೋ ।
ವಿಂದನನ್ನಂಬಿರದೆ ವಂಧ್ಯತನವಂ ಕಳೆದು ಕಂದನಂ
ಪಾಲಿಸನೆ ಕೇಳ್ ॥

೬೩

ನಾರಿಯನಲೆಂದಳಾ ನಾರಾಯಣಂ ಕೊಡುವ ।
ಪಾರುವಲ್ಲೆಂವರ್ಧದಿನಾರುವತ್ಸರಮವನ ।
ದಾರಿನೋಡುತ ಕೊನೆಗೆ ಚಾರು ಶರಣನ ಪಾದವಾರಿಜಕೆ
ಬೇಡಿಕೊಂಡಾ ॥
ಆರು ದಿವಸದೊಳೆನಗೆ ತೋರಿತೀಗರ್ಭವಾ ।
ಪಾರ ಮಹಿಮನ ಮಹಿಮೆ ಧಾರುಣಿಯು ಬಲ್ಲದೆನೆ ।
ಭೂರಿ ಕೋಪದೊಳವಳ ಮೇರೆ ಮೇಲ್ ಬಡಿದು ನೀ
ಸಾರತ್ತಲೆಂದು ಮತ್ತೆ ॥

೬೪

ಚಾಚದಿರು ನಾಲಗೆಯ ನೀಚೆ ನೀನೆಮ್ಮ ।
ಮೋಚನಂ ಗೈವನುಡಿ ವಾಚಿಸಲು ನಿನಗಿನಿತು ।
ನಾಚಿಕೆಯು ಬಾರದೇ ಛೀ ಛಿ ನಡೆ ಬಿಡುನಿನ್ನ ಪೇಚಕನ
ಗುಣವಾರಿಜಾ ॥
ಲೋಚನನೆ ದೈವೆಲ್ಲ ಭೂ ಚಕ್ರಕೆನುತಾನೆ ।
ಸೂಚಿಸುತ ಸಕಲಜನ ಕಾಚಾವಂತಿದ್ದು ।
ವಾಚಾರ್ಯ ನಾವೆನ್ನು ನಾಚಿಸದೆ ಜನ ನಿನ್ನ ಕೌಚನಡತೆ
ಯ ಕಾಣುತೆ ॥

೬೫

ಬಿಡು ನಿನ್ನ ಬಿಂಕಿನಿತು ನುಡಿದೇನು ಫಲ ನಿಮ್ಮ ।
ಜಡಜಾಕ್ಷ ಮಕ್ಕಳಂ ಕೊಡುವನಾದರೆ ಮೊದಲೆ ।
ಕೊಡದಿರುವನೇನೆನ್ನ ಒಡವೆಗಳು ಶರಣನಿಗೆ ಮುಡುಪು
ಕಟ್ಟಿಟ್ಟು ಗರ್ಭಂ ॥
ಪಡೆದೆನೆ ನಾನೆನೆ ಕಣ್ಣು ಕಿಡಿಸೂಸುತೆಂದನೆಲೆ ।
ಜಡಮತಿಯೆ ನಿನಗೆ ರತಿಗೊಡುವನಾಂ ಹರಿಸುತರ ।
ನಿಡುವೆನೆಂಬುದು ಮರೆದು ಬಡಮಾನವನ ಪೊಗಳ್ವ
ಬಡಿವಾರನಾಕೆನ್ನಲು ॥

೬೬

ಹರಹರಮಿದೇಂ ಪಾಪ ಪರಮ ಪಾತಕಿಯಾದೆ ।
ಶರಣನಿಂದೆಯು ಕೇಳುತರರೆ ನಾನೆಂದು ಕಿವಿ ।
ಕರದಿಂದ ಮುಚ್ಚಿಕೊಳುತಿರುವಳಂ ನೋಡುತಾ
ದುರುಳನತಿ ಕೋಪದಿಂದಾ ॥
ಹರಿಹರಿಯೆಯನ್ನಪಾ ಉರಗ ಭೂಷಣಭಯಂ ।
ಕರ ನಾಮವೀ ಗೃಹಾಂತರದೊಳಗೆ ಜಾನಿಸಿದ ।
ದುರಿತೆ ನಡೆನಡೆಯೆಂದು ತುರುದ್ಧಿಡಿದು ಮನೆ ಪೊರಗೆ
ದರದರನೆಯಳೆದ್ಹಾಕುತೆ ॥

೬೭

ಪರರಾನುಕೂಲೆನ್ನಿಗರ ಗೃಹದಿ ಸೇರುವಳ ।
ವರವಾದ ಶೀಲ ಗಂಡರ ಮುಂಚೆ ತುಂಬುವಳು ।
ಪರಿಹಾಸಭಾಷಿತಸ್ಕರಿ ಸ್ವಂತ ಮನದ ನೀ ದುರುಳ
ಗುಣದಿಂ ಮೆರೆಯುವಾ ॥
ಕರಗೃಹಣಗೈವಬಲೆಯರು ಪಡೆದರ್ಧ ತ್ತು ಪು ।
ತ್ರರನವರ ಬಿಡುವದೆಂದಿರುವ ಶಾಸ್ತ್ರಾರ್ಥ ದಂ ।
ನರಿದೆನದರಿಂ ಮನೆಯೊಳಿರಬೇಡ ಪೋಗೆಂದು ಹೊರ
ದಬ್ಬಿ ಕೊಡಲಿಕವಳು ॥

೬೮

ಆರಿಗ್ದೇಳುವೆನಿವನೆ ಕ್ರೂರತಿನ ಹಡೆವದಿನ ।
ಪೂರೈಸಿದವು ಶಿವನ ಸೇರಲಿನ್ನಾರಮನೆ ।
ಸೂರ್ಯನಸ್ತಕೆನಡೆದ ದಾರಿತನಗಿನ್ನಾವು ದಾರಾರಿ
ಗಿನ್ನು ಮೇಲೆ ॥
ನಾರಿಜನ್ಮವೆ ಬೇಡ ವೈರಿಗಾದರು ಕಷ್ಟ ।
ತೋರದಿರಲಿನಿತೆಂದು ಭೂರಿಶೋಕದಿ ಪೊರಳಿ ।
ಧಾರುಣಿಯ ಮೇಲೆ ಕೈಯೂರೆದ್ದು ಮನಸಿಂಗೆ
ಸ್ಥೈರಣೆಯ ಮಾಡಿಕೊಂಡು ॥

೬೯

ಪತಿ ತೊರೆದಬಳಿಕಾರು ಗತಿ ಜಗದಿಯಬಲ ಸಂ ।
ತತಿಗೆನ್ನುತಾಯಾಸಗತಿಯಿಂದಲೈ ತಂದು ।
ಪತಿತ ಪಾವನ ಪದಕೆ ನತಳಾಗಿ ನಾಡೆ ಸಂಸ್ತುತಿ ಗೈವ
ಳಂಕಾಣುತೆ ॥
ಜತಿಗೋರ್ವರಿಲ್ಲ ನೀನತಿ ಕಷ್ಟದಿಂದ ದಿನ ।
ಪತಿ ಮುಳುಗಿಪೋದ ಮನೆ ಕೃತಿಗೈಯುವುದಂ ಬಿಟ್ಟು
ಸುತೆಯಿಲ್ಲಿ ಬಂದುದಂ ಶೃತಗೈವುದೆನಲಾದ ಕೃತಿಯಲ್ಲ
ಪೇಳ್ವೈಳುತಿರೆ ॥

೭೦

ತನುಜೆ ನೀಂ ನಳದಿರಿಂದಿನದಿ ನಿನ್ನೊಲ್ಲಭನ ।
ಮನಸಿನಂತಾನ್ವ ದೆಂದೆನುತ ಸಂತೈಸೆಮ್ಮ ।
ಮನೆಯೊಳಿರು ನೀ ನೊಂದ ನೆಣಿಸದಲೆ ಮೂಡಣದಿ
ದಿನಕರನು ಬಂದಮೇಲೆ ॥
ಮನಗಾಂಬೆಯೆಂದವಳ ಸನುಮತದಲಿರಿಸಿ ಕೊಳ ।
ಲಸಿತರೊಳಗೆ ಭೂಸುರನ ಕೋಪ ತಗ್ಗುತಲಿ ।
ಘನಕೋಪವೇ ಸರ್ವಜನ ವೈರಿಯೆಂಬುದಂ ಮನಂ
ಗಂಡನೆಂದಾಡುತೆ ॥

೭೧

ಉಸುರಿಟ್ಟು ದೀಪ ಮುಟ್ಟಿಸುವರಾರೀಗ ಮನೆ ।
ಕಸಗೂಡಿಸುವರಾರು ಬಿಸಿ ಭಕ್ಕರೆನ್ನಗ್ಯೆ ।
ದಶನವಿಕ್ಕುವರಾರು ಬಸುರಿಗಿಂದಾಂ ಬಹಳೆ ಹಸಿದೆ
ನೆಂದೆದ್ದು ಕಂಡಾ ॥
ದೆಸೆದೆಸೆಗಳೊಳು ಪುಡುಕಿ ಬಿಸಜಸಂಭವ ಪುರದ ।
ಕುಸುರರ ಗೃಹನಿತು ಶೋಧಿಸುತ ಕಾಣದಲೆ ಸಂ ।
ತಸವರ್ಜತಾಗುತಾಂಯಸದಿಂದ ನೂಕುತಾ ನಿಶಿಯಲ್ಲ
ತನ್ನ ಬಗೆಗೆ ॥

೭೨

ತಿಳಿದು ತ್ವರನ್ಯೆತಂದು ಬೆಳಗಾದ ಮೇಲೆ ಮಂ ।
ಗಳ ಮಹಿಮ ಶರಣನಾ ನಿಳಯದೊಳು ತನ್ನ ಸತಿ ।
ಯಳ ಗರ್ಭಯಿಳಿದಿಪ್ಪ ತೆಳುವಸುರ ಕಂಡು ತಾನ
ಳುಕಿ ಗಾಬರಿಗೊಳ್ಳುತಿ ॥
ಮುಳುಗುತಾಶ್ಚರ್ಯಾಬ್ಧಿಯೊಳಗೆ ಒಂಬತ್ತು ತಿಂ ।
ಗಳ ಗರ್ಭಮೊಂದೆ ನಿಶಿಯೊಳು ಕರಗಿಪೋದ ಬಗೆ ।
ತಿಳಿವಡಾರಿಂದಹುದು ಭಳರೆಂದು ಶರಣಪದ
ನಳಿನ ಗಳಿಗೆರಗುತಾಗ ॥

೭೩

ಈಶ ಶರಣನೆ ನಿನ್ನ ದಾಸನರಿಯದಲೆ ದು ।
ರ್ಭಾಷೆಗಳುಹಿದ ತನ್ನ ದೋಷವೆಣಿಸದಲೆ ತವ ।
ಕೂಸಿನಂದದೊಳೀಗ ಪೋಷಿಸೆನುತಲಿ ಪದ ಕುಶೇಶ
ಯಕೆ ನತನಾಗುತೆ ॥
ಈ ಸತಿಯಗರ್ಭವಂ ಲೇಸೆಸಗು ಮುನ್ನಿನೊ ।
ಲಾಸೆದೊರೆದಿವಳ ಮೈ ಭೂಷಣಗಳಾನೆ ಸಂ ।
ತೋಷದಿಂ ತಂಡಿಡುವೆನ್ಯೆಸೆ ಪುಸಿಯಲ್ಲ ದಿಟ
ದಾಶರಥಿಯಾಣೆಂದನು ॥

೭೪

ಎನಲಾಗಲೊಂದು ಭೂಷಣ ಕೊಂಡು ಬರಲಿಕ ।
ಪ್ಪಣೆ ಕೊಡಲು ತಿಳಿಯುತಾವನುತೆ ಯಿಂದಿಟ್ಟ ಸ್ಥಲ ।
ಮನೆಗೆ ನಡೆತಂದು ಪಾರ್ವನು ಪೆಟಿಗೆ ತೆರೆದು
ಲೋಚನದಿಂದ ನೋಡಲೊಂದು ॥
ಜಿನಸಿಲ್ಲದಿರೆ ಮರುಗಿ ಮನನೊಂದು ಮಿದು ಸೋಜಿ ।
ಗೆನುತ ಬಹುತರದಿ ಶೋಧನೆಗ್ಯೆದುದಣ್ಣನೆ ।
ದಣಿಯುತಿದು ಮಾಯಗಾರನ ಲೀಲೆಯೆಂದ್ಯೆದು
ವಿನುತನಾಗುತಲೆಂದನು ॥

೭೫

ದೇವನಿನ್ನಯ ಯಾವರಿಯಲುಂಟೆ ಸಾ ।
ಕಾವಿಭೂಷಣ ಸಹಿತಲೀವಸುರು ನಿಜವಾದ ।
ರೀವೆಸ್ಪ್ರಾಯಶ್ಚಿತಂ ಸಾವಿರ್ದ್ಧಣನಿಮಗೆ ಮೇಣಾವಡವೆ
ಗಳ ಕೊಡುವೆನು ॥
ನೀವು ಕರುಣದಿ ತಮ್ಮ ಕಾವುದೆಂದೆಂಬ ಭೂ ।
ದೇವಗಾಡಿದನು ನಿನ್ನಾವಾಸದೊಳಗಿಟ್ಟ ।
ತಾವಿನೊಳಗಿವೆ ಪೋಗು ಸಾವಧಾನ ದೊಳೆನಲಿಕಾ
ವಿಪ್ರ ಪೋಗಿ ತನ್ನ ॥

೭೬

ವಾಸದೊಳು ಪಿಳಿಗೆ ತೆಗದಾಶರಣ ಪೇಳಿದೊಲು !
ಭೂಷಣೆರೆ ಕಂಡು ಸಂತೋಷದಿಂ ಕೊಂಡೊಂದು ।
ಸಾಸಿರ್ದ್ಧಣ ಸಹಿತ ಬಂದ್ಯೆಸು ಮುಂದಿಟ್ಟು ಶರಣೇಶಗೆ
ನಮಸ್ಕಾರವಂ ॥
ತಾಸಲಿಸಿ ಕಾಂಬನಿತಕಾ ಸುದತಿ ಗರ್ಭ ಪೂ ।
ರ್ನ್ಯೆಸಿರುವದಂ ನೋಡಿ ಭೂಸುರಂ ಮುದದಿ ಶಾ ।
ಬಾಸು ಸರಿಪೋಲ್ವರಾರೀ ಸಾಧು ಪುರುಷನಿಗೆ
ನರಕಪ್ಪುದು ॥

೭೭

ಹಡೆವದೊಬ್ಬೊರಂ ತಡಿಸುವದದಂ ಮೇಣು ।
ಹಡಿಯುದವರಿಗೆ ವರವ ಕೊಡುವ ಸತ್ಪುತ್ರರಂ ।
ಪಡಿಸಿಪ್ಪುದೊಮ್ಮೊಮ್ಮೆ ನುಡಿಯೆಜನ ಕೇಳಿವೀ
ಪೊಡವಿಯೊಳಗಿದಕೆ ಮೊದಲು ॥
ಹಡೆವ ದಿನದೊಳು ಗರ್ಭವಡರಿಸುವವಂ ನುತ್ತೆ ।
ಮುಡುಪು ಕ್ಯೆಕೊಂಡಂತೆ ಯಿಡುವರಾರ್ಬಲ್ಲರೀ ।
ಕಡು ಸೋಜಿಗಿವರಿಂಗೆ ಪಡಿಗಟ್ಟುವಡೆ ದೇವರೊಡೆಯ
ರುಂಟೇ ಲೋಕದಿ ॥

೭೮

ಎಂದು ಕೊಂಡಾಡಿ ಪೂರ್ಣೇಂದು ಮುಖಿಯೊಡಗೂಡಿ
ವಂದಿಸುತ ಶರಣಗ್ಯೆತಂದಿರುತ ಗೃಹದೊಳಾ ।
ನಂದದಿಂದಂದಿನಂ ನಂದನನ ಪಡೆದುದ ಪೊಂದಿರುವದಾ
ಗ್ರಾಮದಾ ॥
ಮಂದಿಸಲೆ ಕಾಣುತವ ಸುಂದರಿಯ ಸಾಂಬನಿವ ।
ನಿಂದು ಜಗಉದ್ಧರಿಸಲೆಂದು ಧರೆಗ್ಯೆದಿದವ ।
ನೆಂದು ಕೊಂಡಾಡುತಿರಲೆಂದಿನೋಲಿರೆ ಭಕ್ತ
ಬಾಂಧವನು ಮುಂದಿನಂ ॥

೬೯

ಕೋರವಾರೆಂದೆಂಬೊ ಊರಡವಿಯೊಳಗೆಯಣಿ ।
ವೀರನಾಮದಿ ಶಿವಕುಮಾರ ಘನಧೀರ ರಣ ।
ಶೂರ ಗಂಭೀರ ಗುಣಸಾರದುದಾರ ಮತಿಚಾರು ಸದ್ಭಕ್ತ
ಜನಮಂ ॥
ದಾರಮಹಿಮಾಪಾರ ಸೂರಿಜನ ಸೇವ್ಯಸಾ ।
ಕಾರ ಸದ್ ಬ್ರಹ್ಮ ನಿಜಮಾರಣಾಂತಕ ದಕ್ಷ ।
ದಾರಣಂ ನೆಲಸಿಪ್ಪ ಕಾರಣದಿ ಸಂತತಂ ಭೂರಿಜನ
ನಡಕೊಂಬುವರ್ ॥

೭೦

ಶಿವಕುಮಾರನ ಭಕ್ತ ನವಣೆ ರುದ್ರಪ್ಪ ನೆಂ ।
ಬುವನೋರ್ವ ಕಲಬುರಗಿ ಭವನದೊಳಗಿರುತೊಂದು ।
ದಿವಸನಣಿವೀರನಾ ಭವನ ಮಂಟಪ ಕಟ್ಟಿಸುವಡೆ
ಮನಮಾಡಿ ಬಂದು ॥
ಜವದಿ ಕಲುಕುಟಿಗೊಡ್ಡರವರ ಕರಿಸುತ ರಚಿಸು ।
ವವಧಿಯೊಳಗೊಂದುಪಲ ಬಹುಜನರಿಗೇಳದಿರೆ ।
ತವಕ ನಾಲ್ವಾರೂರಿನವರ ಬರಿಸುತಲೆತ್ತುವರ್ಗೆಲ್ಲ
ಸಾಧ್ಯಮಾಗೆ ॥

೭೧

ಬಲುನೊಂದು ರುದ್ರಪ್ಪ ಮಲಮಲನೆ ಮರುಗಿ ತ ।
ನ್ನೊಳು ಧೇನಿಸಿದನೆಮ್ಮ ಪೊಳಲೊಳಗೆ ಶರಣ ।
ಗ್ಗಳನೆಂದು ಜನರೆಲ್ಲ ಸಲೆ ಪೊಗಳುತಿಪ್ಪರವು ತಿಳಿವಡೀ
ಸಮಯಮೆಂದು ॥
ಒಲಿದು ಮನಕರಿಸುತ್ತೈಗಳ ಸಹಸ್ರ ಸಂಖ್ಯೆ ಸಂ ।
ಕುಳಕೆ ವೃಷ್ಟಾನ್ನುಣಿಸುತೇ ಅಡಕೆ ದಕ್ಷಿಣಂ ।
ಗಳ ಕೊಟ್ಟು ಶರಣನುಘೆಗೊಳಿಸುತ್ತ ತ್ತಿಂಟು
ಜನಗಳು ಕೂಡುತಾ ಕಲ್ಲಿನಾ ॥

೭೨

ಬಳಿಸಾರ್ದುತೆತ್ತಲಾ ಪಲವರಳಿಯಂತೆ ಕೈ ।
ಯೊಳಗೆ ಹಗುರಾಗುವ ಪೊಳಿತಿನೊಳಗಿತ್ತ ಕಡೆ ।
ಸಲಿಲಭವಭವ ಪುರದಿ ಕುಳಿತಲ್ಲೆ ಶರಣ ಕೈಗಳನೆತ್ತಲುಂ
ಕಾಣುತೆ ॥
ಬಳಿಯೊಳಿರುತಿಪ್ಪ ಜನ ಕೆಲಬಲಂ ನೋಡಿಲ್ಲಿ ।
ಸುಳಿದಿಲ್ಲಪಾರ ಭಯಗೊಳಿಸಿರ್ದುದಾರಿಗೆನೆ ।
ತಿಳುಹಿದನು ಕೋರ್ವಾರ ಸ್ಥಳದು ಸಂಗತಿಯೊಳೇ
ಸುಳಿಯದಂತಾ ಜನರಿಗೆ ॥

೭೩

ಕೇಳಿ ಮನುಷ್ಯನ ವೀರನಾಲಯಕೆ ಕಳುಹಲದೆ ।
ಕಾಲದೊಳು ಶರಣನನುಕೂಲಾಗುತ್ತೈತಂದು ।
ಮೇಲಕುಪಲೆತ್ತುತಲೆ ಬೈಲಾವನೆಂದವರು ಪೇಳಿ
ಲಾಲಿಸುತ ಚರನು ॥
ಜಾಲ ಮಾಡದೆ ಬಂದು ಪೇಳಲಲ್ಲಿರುವ ಜನ ।
ಜಾಲ ಹರುಷಾಂಬುಧಿಯೊಳಾಳುತೆಂದರುಮಿವನೆ ।
ಭೂಲೋಕದೆರಡನೆಯ ಭಾಳಾಕ್ಷನಲ್ಲದೀ ಕಾಲದೊಳು
ಗಿನಿತಾಗ್ವದೆ ॥

೭೪

ಕೆಸರಿನೋಳ್ ಕಾಲ್ಜಾರಿ ಬಸವಣ್ಣನೆಂದವಳ ।
ಮೊಸರು ಹಾಲ್ಗಡಿಗಿಗಳನಸವಸದಿ ಪಿಡಿದದೆಂ ।
ಮುಸುರುತಿಪ್ಪುದಂ ರಸೆಯೊಳಗೆ ಕೇಳ್ದಿವಿಂದಸಮ
ಮಹಿಮೆಯ ಕಂಡೆವು ॥
ಬಸವನೆ ಶಿವ ಶಿವನೆ ಬಸವನೆಂದೊಲು ಶರಣ ।
ಬಸವನೇ ಶಿವಶರಣ ಬಸವನೇ ಬಸವಣ್ಣ ।
ಪಸುಪತಿವನಲ್ಲ ಮಾನಿಸನೆಂಬ ಪಾಮರನ ರಸನೆ
ಬೀಳದೆ ಧರೆಯೊಳು ॥

೭೫

ಹೀಗೆ ಜನ ಬಲು ಪೊಗಳಿ ಪೊಗಲಿಕೆ ತಮ್ಮ ತ ।
ಮ್ಮಾಗಾರದತ್ತ ಮಹಿಮಾಗಾರ ಲಿಂಗೋಪ ।
ಭೋಗದೊರಲಿಕಾಮೇಗೊಂದು ದಿನವೋರ್ವಸೋಗೆ
ಮುಡಿ ಬಂದು ಶಿರವಂ ॥
ಬಾಗಿ ಚರಣದೊಳುನತಳಾಗಲಿವಳಂ ಕಂಡು ।
ನಾಗನಡೆ ಪೇಳು ನಿನ್ನಾಗಮನ ಕಾಳಣೇ ।
ನೀಗಲಾರವಳುಮೆನಲಾಗಲಾಡಿದಳು ಶಿವಯೋಗಿಗತಿ
ಭಕ್ತಿಯಿಂದ ॥

೭೬

ಚಾರು ಶರಣೇಶನೆಂಬೊಕಾರ ಬಾಪುರಾಯ ।
ಪಾರುವನ ಸೊಸಿಯು ಸುಕುಮಾರನಂ ಪಡೆವಂದು ।
ಕೋರಿಕಿಲೆ ಬಂದು ಪದವಾರಿಜಗಳಾಂ ಕಂಡೆ
ಪೂರೈಸು ಬಯಕೆನ್ನಲು ॥
ನಾರಿಮನೆಯೊಳು ಹಿರಿಯರಾರಿಲ್ಲವೇ ನೀನೆ ।
ಸಾರಿದೇಕಂತು ಸಾವಿರದ ಹಣ ಬೇಕೆನಲು ।
ವೀರಶೈವರಿಗೆಂದು ಸೇರದವರ್ಸ್ವಯಿಷ್ಟ ವರು
ನಾರಾಯಣಧಿಕೆಂಬವರು ॥

೮೭

ನಿನ್ನ ಮಗಳೆಂದೆನ್ನುತೆನ್ನ ಕೈಪಿಡಿದೋರ್ವ |
ಚಿಣ್ಣನಂ ದಯಗೈದರೆನ್ನ ವಶಕಿರುವಂದು |
ಚಿನ್ನ ಸರಿಗೆಯ ಕೊಡುವೆ ಮನ್ನಿಸೆನಲೊಪ್ಪಿಕೊಡ
ಲ್ಹಣ್ಣುಕಾರಿಕ ಉಡಿಯೊಳು ||
ಪನ್ನಂಗವೇಣಿ ಶರಣೆನ್ನುತಂ ಶರಣನಿಗೆ |
ತನ್ನ ಮನೆಗೈದು ಫಲವನ್ನು ಸೇವಿಸೆ ಗರ್ಭ |
ಚಿನ್ನವಂ ತೋರಿ ಸಂಪೂರ್ಣದಿನ ಮಾಗಲದರಿನ್ನಾರಿ
ಗೊಂದಿನದೊಳು ||

೮೮

ಕಡಿತ ಹೊಟ್ಟೆಯೊಳು ಶೂಲ್ಹೊಡಿತ ಬದಿ ಬೆನ್ನಿನೊಳು |
ನಡುವಿನೊಳು ನೂರ್ಚೇಳು ಕಡಿದಂದಮಾಗೆ |
ಸಿಡಿಮಿಡಿಗೊಂಡು ಕಂಗಳಂ ಕಿಡಿಸೂಸಿ ಮೈಯ್ಯೊಳಿಲ್ಲಿ
ಡಲಿರಿತ ಘನಕಷ್ಟದಿಂ ||
ಮಿಡುಕುತಲಿ ಭೂಮಿಯೊಳು ಗಡಗಡನೆ ಹೊರಳಾಡಿ |
ಪೊಡವಿ ಬಾಯ್ದೆರೆಯೆಂದು ಬಿಡಿಬಾಯಿ ನೆರೆಹೊರೆಯ |
ಮಡದಿಯರು ಬಂದವಳ ಕಡು ಶೋಕ ಕಂಡಳುತ
ಮಿಡಿದು ಕಂಬನಿ ಬೆರಳಿನಿಂ ||

೮೯

ನೆರೆದ ಸುಂದರಿಯರಾಭರಣ ಮೂಗುತಿ ತೆಗಸಿ |
ಕರಕಂಚುಕಂ ಕಳಸಿ ತುರುಬ ಬಿಟ್ಟೆರಿಸುತ ಚಿ |
ಕುರಗಳಂ ಬಾಯೊಳಗೆ ತುರುಕಿ ಬಿಸಿನೀರಿನಿಂದೆ
ರದು ಬೆಲ್ಲದೊಳು ನೊಣವಂ ||
ಬೆರಿಸಿ ತಿನಿಸುತ ಕಟ್ಟಸರವಿ ಜಂತಿಗೆ ಪಿಡಿಸಿ |
ಕರಿ ಲಕ್ಷ್ಮಿನಿಯ ಬೋರಲಿರಿಸುತಲಿಶಾವಿಗೆಯ |
ಸರ ಕುಡಿಸುತತ್ತಿತ್ತ ತಿರುಗಿಸುತ ಕೂಡಿಸುತ
ಲೇಳಿಸುತಲಿ ||

೯೦

ನೀರಿನೊಳು ಶಾಯಿ ದುಡ್ಡಿರೊಂದು ತೊಳೆದೇಕ |
ನಾರಿವೃತ ದರ ಕಚ್ಚಿಸಾರದೊಳು ತೊಯ್ಸುತಕ |
ಬಾರಿ ಮುದ್ರಿಗಳಂತೆ ವಾರಿಯೊಳು ತೊಳೆಯುತಾಚಾರಿ
ಮಂತ್ರಿಸಿದುದಕವಂ ||
ನೀರೆನಿತುಂ ಕುಡಿಸಿ ಮೋರೆದುರೆಗೋಡಿಯೊಳು |
ತೋರುವಲು ಯಂತ್ರಿಟ್ಟಪಾರ ಯತ್ನೆಂಗೈಯ್ಯ |
ಮೀರುತಿರೆ ಬೇನೆಯಾಗಾರದಾಪ್ತೇಷ್ಟ ಜನ ಭೂರಿ
ಚಿಂತೆಯೊಳಾಳುತೆ ||

೯೧

ಹರಣ ಸಂಕಷ್ಟದೊಳಗಿರುವಳಿಗೆ ಮಾವತ್ತೆ |
ಯರು ದಾವದೇವರಿಗೆ ಹರಕೆಯೇಂ ನೀನು ಗೈ |
ದಿರುವಿಯಾ ಪೇಳೆನಲು ಮಲೆಮಾಜಿದರೆ ತನ್ನ
ಶರೀರ ಬಿಳುವದೆನ್ನುತಂ ||
ಅರಿದು ನಿಜವಾರ್ತೆಯಂನರುಹಲ್ಕವಳ ಮಾವ |
ಪರಕೆ ಸರಿಗಿಯ ಮನೆಯೊಳಿರಿಸುತಲಿ ಮತ್ತೊಂದು |
ಕಿರಿಸರಗಿ ಕೊಂಡ್ಹೋಗಿ ಶರಣನಿಗೆ ಕೊಟ್ಟೆಮಗೆ
ಕರುಣಿಸೆನಲವನ ಕಪಟಂ ||

೯೨

ಚನ್ನಾಗಿ ತಿಳಿದೆಂದ ನಿನ್ನ ಸೊಸಿ ಮುಡಪಿಟ್ಟ |
ಚಿನ್ನ ಸರಗಿಯಿದಲ್ಲ ಚಿಣ್ಣನಂ ಬಯಸುವಡ |
ದನ್ನಿಡುವದಲ್ಲದೊಡೆ ಸಣ್ಣ ಸರಗಿಯ ಕೊಡಲು
ಹೆಣ್ಣುಮಗುವುದ್ಭವಿಪುದು ||
ಎನ್ನಲದು ಕೇಳಿ ಸೊಸಿ ಮುನ್ನೆಪರಕೆಯಗೈದು |
ದನ್ನು ತಂದಿತ್ತೆಂದನೆನ್ನಾಪರಾಧವಂ |
ಮನ್ನಿಸೈ ಭಕ್ತಿಸಂಪನ್ನ ಸಚ್ಛರಣ ಜನರನ್ನು
ಸದ್ಗುಣ ಭೂಷಣಾ ||

೯೩

ಪರಿಪರಿಯು ನುತಿಸುವನಸರಿಗಿ ಕೈಕೊಂಡವಗೆ |
ಚರಪದರಜೋದಕಂ ಕರುಣಿಸಲು ಕೊಳ್ಳುತಾ |
ಶರಪಾನಗೈಸಿ ದೊಂದರನಿಮುಷದೊಳಗೆಯವತರಿಸಿರ್ದ
ಮಗುವ ನೋಡಿ ||
ನೆರೆದ ಜನರೆಲ್ಲರಚ್ಚರಿಗೊಂಡು ಕೊಂಡಾಡಿ |
ಶರಣನಂ ಸಾಮಾನ್ಯ ನರನೆಂಬುವರ ರಸನೆ |
ಧರೆಗುರುಳಿ ಬೀಳ್ವದೆಂದುರೆ ಪೊಗಳಿ ಮನೆಮನೆಗೆ
ಹರುಷದಿಂ ಪೋಗಲಾಗ ||

೯೪

ಯೋಗಿ ಶರಣಪ್ಪಂದಿನ್ಹಾಗಿರಲಿಕೊಂದು ದಿನ |
ಬಾಗಿಲ್ಹೊರಗಿನ ಕಟ್ಟೆ ಮೇಗೆ ತಾಂಕುಳ್ಳಿತಿರು |
ವಾಗ ನಾರಾಣ್ಪೇಟೆ ಭೋಗೋಜಿಯಾಳುಗಳು
ಹೋಗುತಿರೆ ಸೊನ್ನಲಿಗೆಗೆ ||
ರಾಗದಿಂದೆತ್ತುಗಳ ಮೇಗಿರುವವೇಂ ಪೇಳೆ |
ರೀಗೆನಲು ಕಂಬಳಿಯ ಪೂಗೆನಲು ಕೇಳುತಂ |
ತಾಗಲಾಗಲಿ ನಿಮ್ಮವಾಗುದಿಟವಣ್ಣಗಳೆ ಸಾಗಿರೆಂದನು
ಶರಣನು ||

೯೫

ಅವರು ಸೊಲ್ಲಾಪುರಕೆ ಜವದಿ ಪೋಗುತುರೇಶ್ರಿ ।
ಜವಳಿ ಬಂಡಿಗಳು ಮಾರುವ ಕಾರಣಕೆ ಬಿಚ್ಚು ।
ವವಧಿಯೊಳು ಕಂಬಳಿಯ ನಿವಹಮಾಗಿರೆ ಕಂಡು
ತವತವಗೆ ಚಿಂತಿಸುತಲಿ ॥
ಅವಿವೇಕದಿಂದಾವು ಶಿವಶರಣಗಂದ ಮಷಿ ।
ತವೆ ಘಸಿಲಿತೀಗಲೇಗುವೆವಯ್ಯೊ ನಮಗಾದ ।
ಭವಣೆ ತಪ್ಪಿಸುವ ಮಾರ್ಗವ ತೋರಿಸುವರುಂಟೆ ಭುವಿ
ಯೊಳಂದತಿ ಶೋಕದಿ ॥

೯೬

ತಳಮಳಿಸುತೊಬ್ಬನಂ ಕಳುಹಲ್ಕೆ ಭರದಿಂದ ।
ಪೊಳಲಕೈತಂದೆಲ್ಲ ತಿಳುಹಲ್ಕೆ ಭೋಗೋಜಿ ।
ಸಲೆನೊಂದು ಸಜ್ಜನರಪಳಿಯಲಿಂತಾದುದೆಲೆ ಖಲರೆಂ
ದು ಬೈಯ್ದು ಸುಯ್ದು ॥
ಘಳಿಲನೈತಂದವಂ ಕಲಬುರಗಿಯೊಳು ಭಕ್ತ ।
ಸುಲಭನಂ ಕಂಡು ಪದನಳಿನಗಳಿಗೆರಗಿ ನರ ।
ಪುಳುಗಳನಿತೆಂದ ಮಂಗಳ ನುಡಿಗೆ ಕೋಪಿಸಿದಲುಳು
ಹಲೆನ್ನಂತಮ್ಮಗೆ ॥

೯೭

ಒಂದು ಬಂಡ್ಯಾಂಬರಂ ತಂದಿಡುವೆ ದೇವ ನಿಜ ।
ವೆಂದು ನುಡಿಯಲು ಚರಪದಂದೊಳಿದು ಕೊಡಲಿಕವ ।
ಮಿಂದಿಸುತೆ ಸೊನ್ನಲಿಗೆಗಂದು ಭರದಿಂದಲೈತಂದು
ಪದ ಧೂಳೊದಕಾ ॥
ನಂದದಿಂ ಬಂಡಿಗಳೊಳೊಂದುಳಿಯ ದಂತೆಲ್ಲ ।
ಕುಂದಳಿದು ಶರಣ ಜಯತೆಂದು ಬಿಚ್ಚಲು ಮೊದಲಿ ।
ನಂದದಿಂ ಮಡಿಗಳಿರೆ ಪೊಂದಿ ಮುದಮಾರಲಕೆ
ಬಂದುದಿಮ್ಮಡಿ ಲಾಭವು ॥

೯೮

ತೋಷದಿಂ ಭೋಗೋಜಿ ಕೇಶಜವ ನಡೆತಂದು ।
ಪಾಷಾಣಪುರದಿ ಶರಣೇಶನ ಪದಂ ಕಂಡು ।
ಕ್ಲೇಶವಂಗಳಿವುತಿರೆ ಪೋಷಣಂಗೈದ ಮಹಿಮಾ
ಸಾಗರನ ಪೊಗಳುತೆ ॥
ಭಾಷೆಗೊಟ್ಟಂದದೊಳು ರೇಶಿಮ್ಯಾಂಬರಗೊಡಲಿ ।
ಕಾ ಸಮಯ ಕಲ್ಲಿರುವ ಈಶಚರರಿಂಗಂತೆ ।
ಭೂಸುರಾಳಿಗೆ ಕೊಡುತಲಾಶಿರ್ವಚಂಗೈದರಾ ಸಾವು
ಕಾರಗಂದು ॥

೯೯

ಆ ಪೊಳ್ತು ಭೋಗೋಜಿ ಶ್ರೀಪಾದಗಳಿಗೆರಗಿ ।
ಭಾಪು ಶರಣನೆನಿನ್ನ ಸೈಪುಪೊಗಳುವಡಹುದೆ ।
ಪಾಪಾತ್ಮರಾದೆಮ್ಮಗೀ ಪರಿಯೊಳುಳ್ಳವನೆ ಶಾಪಾನು
ಗ್ರಹಶಕ್ತಿಯಂ ॥
ಕಾಪಾಲಧರ ನಿಜಂ ಕಾಪಟ್ಯಗೈವರಗೆ ।
ಕೋಪವಂಗೊಳ್ಳುತಲಿ ತಾಪಿಡಿವರಲ್ಲದೇಂ ।
ಕಾಪಾಡ್ವರುಂಟೆ ಚಿದ್ರೂಪ ನಿನ್ನೋಲೆಂದು ತಾಪೋದ
ತನ್ನ ಪುರಕೆ ॥

೧೦೦

ನೆರೆದ ಜನರೆಲ್ಲರದನರಿಯುತತಿ ಕೌತುಕದಿ ।
ಬೆರೆದುನುತಿಗೈದರೀಶ ಶರಣನೇ ದಿಟಕೆ ಶಂ ।
ಕರನಹುದು ಸಾವಳಿಗೆ ಪುರದ ಶಿವಲಿಂಗೇಶ ಭರದಿ
ಜಾಫಳವಣಲೆಯಾ ॥
ಯಿರ ಸಫಲಗೈದುದಂ ಹಿರಿಯರಿಂ ತಿಳಿದೆ ವ ।
ಚ್ಚರಿಕಂಡೆ ವಿಂದೆನ್ನುತುರೆ ಪೊಗಳಿ ಮನೆಗಳಿಗೆ ।
ತೆರಳೆ ಜನ ಲಿಂಗಾಂಗ ಪರಿಪೂರ್ಣಭಾವದಿಂದಿರು
ತಿರುವನೆಂಬಲ್ಲಿಗೆ ॥

೧೦೧

ವರಪುರದ ಶಿವಲಿಂಗಶರಣಬಸವನಚರಿತೆ ।
ಗುರುಬಸವಣಾರ್ಯ ಪದಸರಸಿರುಹ ಲೀನಮಧು ।
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ॥
ವಿರಚಿಸಿದನೋದಿಸುವ ಬರೆದಗೋದುವಗೆ ಪರ ।
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ ।
ದೊರಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ಇದು ಸಂಧಿ ಹದಿಮೂರನೆ ॥

**ಸಂಧಿ ೧೩ ಕ್ಕೆ ಪದ ೧೧೧೮ ಕ್ಕಂ ಮಂಗಳಂ.**

ಶ್ರೀ ಶರಣಬಸವೇಶ್ವರ ಪ್ರಸನ್ನ

## ಹದಿನಾಲ್ಕನೆಯ ಸಂಧಿ

ಸೂಚನೆ|| ತುರುಕರಸುಗಳ ಗರ್ವ ಮುರಿದು ಸ್ತ್ರೀವೇಷಿಗರ |
ಪೊರೆದು ಘೃತಶರಗೈದು ಪುರುಷತ್ವ ಕಳಿಸ್ಯುಳಿಸು |
ತುರಗಕನಕೆಸಿಗಿ ಹಣಬೆರಣಿ ಸಾಸಿರಕೆ ಪುತ್ರರಕೊಟ್ಟು ರುಜೆಗಳೆದನು ||

೧

ಶುಚಿನಯನ ಸೋಮ ಹಿಮರುಚಿ ಕಲಾಧರಯೋಮ |
ಕಚಕಾಲಹರ ಭೀಮ ಶಚಿವರಾನತ ಪಾದ |
ಅಚಲಪತಿ ವರಸುತಾಕುಚವಿಲೇಪಿತ ಗಂಧ ಮುಚ
ಸೂದ ಸುತ ಶರವರಾ ||
ವಿಚಕಿಲಾಂಬಕನಾಶ ರಚಿತಖಿಳ ಜಗದೀಶ |
ತ್ವಚವಸನ ವಿಷಗಳಂ ಸುಚರಿತ ಸದಾಮಳಂ |
ಉಚಿತಗುಣಪಾತು ಜಗನಿಚಯೋತ್ತಮಾಂಗಧರ
ಖಚರಧುನಿ ಶಿವಲಿಂಗ ಭೊ ||

೨

ಎಂದಿನೋಲ್ ಶರಣನಾನಂದದಿಂದಿರೆ ಮುಂದ |
ಕೊಂಡುದಿನದಿ ಮುಲ್ಲನೆಂದೆಂಬ ಸಜ್ಜಾದಿ |
ಬಂಧು ಪರಿವಾರ ಜನ ಪೊಂದಿ ಮುನವರ ರೋಜ
ಮಂದಿರದೊಳಿರಲಿಕವನು ||
ಕಂದನೆದುಲಾ ಲಗ್ನಕೆಂದು ಋಣಧನಿಕರಿಂ !
ತಂದಿರಲಿಕವಧಿ ಮುಗಿದಂದು ಸಾಲಿಗರು ಬಹು |
ತೊಂದರೆಯು ಪಡಿಸಿದಕೆ ನೊಂದು ಶಾದೀಖಾನನಿಂದ
ಋಣವಂ ಕೊಳ್ಳುತೆ ||

೩

ದಂಡೋತಿ ಬಡ್ಡಿಯೊಳಗುಂಡು ನಿಮ್ಮಿಂದ ನಾಂ |
ಕೊಂಡ ಧನಕೊಟ್ಟು ಕೈಕೊಂಡಪೇಂ ತಿರುಗಿ ಪುರ |
ಖಂಡಿತೆನುತಂ ಶಾಸನಂಡ ಬೀರಿಯ ಹಸ್ತದಿಂದ
ಬರಿಸುತಲಿ ಕೊಟ್ಟಾ ||
ಮುಂಡಲೊಂದರೊಳು ಜ್ವರಕೆಂಡ ಸುರುವಿದೊಲಾಗೆ |
ಕಂಡ ಕಂಡೌಷಧಂ ಗೊಂಡರದು ಗುಣಿಸದಲೆ |
ಚಂಡ ಕರಸುತ ಪ್ರಾಣಗೊಂಡ ಕಾರಣಮವನ
ಪೆಂಡತಿಯು ಮಗ ಪರಿಜನಂ ||

೪

ಅಷ್ಟುಜನ ಗೋಳಾಡುತಿಟ್ಟು ಗೋರಿಯಳವನ |
ರಿಷ್ಟದಿನಗೈದು ನಸುತುಷ್ಟಿಯಿಂ ಕೆಲದಿನಿರು |
ವಷ್ಟರೊಳು ಶಾದಿಖಾನ್ ಕಷ್ಟ ಪರಿಪರಿ ಕೊಡಲು
ದುಷ್ಟನುಪಟಳ ತಾಳದೆ ||
ಹುಟ್ಟ ಭಯಸಜ್ಜಾದಿ ಹೆಟ್ಟುಗೆಯು ಮಗನ ಸಹ |
ಬಟ್ಟುಪಲನಗರ ಶುಭಪಟ್ಟಣ ನವಾಬನಾ |
ಶ್ರೇಷ್ಠಾದರಿಂದ ಪೊರಮೊಟ್ಟವನ ಸೇರಲ್ಕೆಕೊಟ್ಟ
ನವನವಗಾಶ್ರಯಂ ||

೫

ಕಲ್ಯಾಣದೊಳಗಿವರು ನಲ್ಲಮಿರೆ ದಂಡೋತಿ |
ಯಲ್ಲಿ ಶಾದಿಖಾನನುಲ್ಲಾ ಸದಿಂ ಹಬಿ |
ಬುಲ್ಲನೆಂಬುವ ಸುತಗೆ ಸಲ್ಲಿಸುತೆ ಪಟ್ಟರಾಜ್ಯಲ್ಲವಂ
ಕೈವಶದೊಳು ||
ಗೊಳ್ಳುತಲಿ ಸುಖಮಿರುವ ಸೂಲ್ಲು ಕಾಗದ ಬರಿದು |
ಕಲ್ಲುಬುರಿಗಿಂ ಬರಲು ತಲ್ಲಣಿಸಿ ಸಾಹೇಬ ಯ |
ದುಲ್ಲಾ ನವಾಬಂಗದೆಲ್ಲವಂ ತಿಳುಹಿ ನಾನಿಲ್ಲದಲೆ
ಪೋಪೆನೆಂದೆಂ ||

೬

ಅಮಕೇಳಿ ಕೆಲವುಜನ ಪದಗಳಂ ಗಜ |
ರಥಂ ಕುದುರಿಯವರಂ ಕೊಟ್ಟು ಕದನಕೆ ನವಾಬನಾ |
ಯದುಲಾನ ಕೂಡ ಕಳುಹಿದರೆ ಕಲುಬುರಿಗೈದು
ಸದನದೊಳಗಿರುವ ಮಂತ್ರಿ ||
ವದನ ನೋಡುತ ಯುಕ್ತಿಯಿದಕಾವುದೆನಲು ಪೇ |
ಳಿದನು ಶರಣಪ್ಪನಾಪದ ಕಂಡರಪ್ಪುದ |
ಭ್ಯುದಯಮೆನೆ ಕೇಳಿ ಕುಲಮದದಿಂದೆ ನೀನೆ ಪೋಪುದು
ಯೆಂದು ನುಡಿಯಲಾಗ ||

೭

ಅರಸನಪ್ಪಣೆ ತನ್ನ ಶಿರದೊಳಗೆ ಧರಿಸ್ಯೈದು ।
ಸರಸಿಜೋದ್ಭವ ಪುರದ ಶರಣನಂ ಕಂಡೆಮ್ಮ ।
ದೊರೆಗಾದ ಸಂಕಟಂ ಪರಿಹರಿಪುದೆನಲದಕೆ ಶರಣ
ಸಿನ್ನೊಡೆಯನ ಮನಂ ॥
ಇರುವದೆಂತಂತಹುದು ಭರದಿ ಪೋಗೇನೆ ಬಂದು ।
ನೆರಹಿದಳ ದಂಡೋತಿಪುರ ಮುತ್ತಲದು ಕೇಳು ।
ತುರಿದೆದ್ದು ಖಾನನ ಪರಿವಾರ ತಾನೊಂದೆಯರೆನಿ
ಮಿಷದೋಳ್ ಜೈಸಿದಂ ॥

೮

ಅಳಿವವರ ಬಿಟ್ಟು ಕೆಲರುಳಿದವರ ಸಹಿತೋಡಿ ।
ಕಲಬುರಿಗಿಗೈತಂದು ಕೊಲಲು ಶಿವನೆ ಕಾಪ್ಪ ।
ರೊಳರೆ ನೀನೇಕೆ ಪುಸಿಗಳುಹಿದೆನೆ ಸಚಿಪನದ
ಕಳುಕದಲೆ ನುಡಿದನಾಗ ॥
ಎಲೆದೊರೆಯೆ ಕೇಳು ಮದವುಳಿದು ನೀಂ ಶರಣನಂ ।
ತಿಳಿದು ಸಾಮಾನ್ಯರೋಲ್ ಕಳುಪುತೆನ್ನನ್ನಿಲ್ಲಿ ।
ಕುಳಿತರಿಂದಪಜಯಂ ಬಲಿಸಿತಿದು ನಿನಗೆ ಕಂಗಳ
ತೆರೆವುದಿನ್ನಾದರು ॥

೯

ಗುರುವಿನೆ ಸಜ್ಜನರ ನೆರವಿಯೊಳು ತಾಯ್ತಂದೆ ।
ಹಿರಿಯರೊಳು ನಾಡೆ ಶಿವಶರಣರೊಳು ದೇವರೊಳು ।
ವರಭಕ್ತ ಸಾಧು ಸತ್ಪುರುಷರೊಳು ತನ್ನ ಹಿರಿತನ
ತೋರಲಿಕೆ ಬಾರದು ॥
ಗರುವವಾರಾರೊಳಗೆ ಥರವಲ್ಲ ಮಿದರಿಂದ ।
ಕುರುಪತಿಯು ದಶಮುಖರು ನರಕ ಭಾಜನರಾದ ।
ರರಸ ತನ್ನನು ಕೊಲ್ವವರಿಪಟ್ಕರ್ಮವು ಬಿಟ್ಟು ಪರರು
ಕೊಲ್ವರು ಸಟೆಯಲಾ ॥

೧೦

ಕುಲ ರಾಜ ಯೌವ್ವನ ಬಲ ರೂಪು ವಿದ್ಯ ಧನ ।
ಸತಿಯೇಳೆಯಂಬ ಗಜಗಳನೆಂಬುಮಿರುವವಿವ ।
ರೊಳಗೊಂದೆ ಮನುಜನಂ ಕೊಲಲು ಸಾಕಯ್ಯೊಂದೆ
ಸ್ಥಲದೊಳಿವು ಕೂಡಿದ್ದರೆ ॥
ತುಳಿದು ತಮ್ಮಾಶ್ರಿತನ ಕೊಲುತ ನಾಯಕ ನರಕ ।
ಕೆಳಿದು ಬಿಡುವವು ದಿಟಂ ತಿಳಿದು ನೋಡಯ್ಯ ಮನಕೆ
ಖಲ ವೈರ ಪಿಶುನ ಸಂಕುಳ ಮುಖ್ಯ ಪಿಡಿದವರಿಗೊಳಿ
ತಾಗಲರಿಯವೆಂದು ॥

೧೧

ಖತಿಗೊಳ್ಳಲಾಗದಾಂ ಮತಿಯ ಪೇಳುವೆನೆಂದು ।
ಶತಬರಿಸವೃದ್ಧಾಗಿ ಮಿತಿಯಿಂದ ಧರ್ಮ ಪ ।
ದ್ಧತಿ ತಿಳಿಯದವನೆ ತಾನತಿಕಿರಿಯನಿಂ ಕಿರಿಯ
ಮತಿಯುಳ್ಳ ಬಾಲಾದೊಡಂ ॥
ಕ್ಷಿತಿಗೆಲ್ಲ ಪಿರಿಯಂ ಮೇಣ್ನುತಿಗೆಯೋಗ್ಯ ಧೀ ।
ಮತನುವನು ವೆರ್ಥನುಡಿ ಪ್ರತಿಪಾದಿಸನು ದುರಿತ ।
ಕೃತಿಗೈಯ್ಯನುಪಮನ್ಯುಯತಿ ಬಾಲಸಾಕ್ಷಿ
ಸಾಕಿದಕಾದ್ದರಿಂ ಭೂಪತಿ ॥

೧೨

ಊರ್ವಿಪತಿ ಬಿಡು ನಿನ್ನ ಗರ್ವ ಶರಣಪ್ಪ ತಾಂ ।
ಸರ್ವ ಸಾಮಾನ್ಯರೋರೋರ್ವನೆಂದರಿಯದಿರು ।
ಪೂರ್ವಮಹಿಮಂ ಭಕ್ತಿಸಾರ್ವಭೌಮಾಗಿ ಮೇಣ್ ಸರ್ವ
ಸಮನಲ್ಲದಿರಲು ॥
ಊರ್ವಿಯೋಳ್ ಭಕ್ತಿಯಿಂದಾರ್ವರ್ಣಿ ಸುವರ್ರೈಸು ।
ಪರ್ವಜನನಮಿತನಿವನುರ್ವಣಿಸಿ ಗಮಿಸುತ ನಿ ।
ಗರ್ವದಿಮ್ಮಣಿವದು ನಖರ್ವಗುಣವೆನಲು ಮಿತ್ರರ್ವೆರಸಿ
ಬೊಮ್ಮಪುರಿಗೆ ॥

೧೩

ಬಂದು ಶರಣನ ಪಾದಕೊಂದಿಸುತ ಸಜ್ಜಾದಿ ।
ಯಂದನೀ ಘನ ಮಹಿಮೆನೆಂದರಿಯದಾನು ಗ ।
ರ್ವಂದಳೆಯುತಿಲ್ಲಿಗೈತಂದು ಮೊದಲೀ ಚರಣ
ಪೊಂದದಲೆ ಪೋದನೆಂಬಾ ॥
ಪಿಂದಿನಪರಾಧಗಳನೊಂದೆಣಿಸಿದಲೆ ದಯಾ ।
ಸಿಂಧು ಪೊರೆಯನೆ ತ್ಯಜಿಸುಸಂದೇಹ ನಿನ್ನ ಮನ ।
ದಿಂದ ಶಿವಗೈವ ಪೋಗೆಂದೆನಲು ನಮಿಸುತ ಪುಳಿಂದ
ರೈವರ ಕೂಡುತೆ ॥

೧೪

ವ್ಯಾಧರ್ರೈವರ ಸಹಿತಲಾದಂಡವತಿ ಪುರ ।
ಕೈದು ರಣರಂಗದೊಳು ಶಾದಿಖಾನನ ಜೈಸಿ ।
ಗಾದಿಯಿಂತಳ್ಳಿ ಸಂಪಾದಿಸು ದೊರೆತನಂ ಮೋದ
ದಿಂದಿರುತ ಶರಣಾ ॥
ಪಾದಕೊಂಡಾಡುತಿರೆ ಮೇದನಿಯ ಜನಧನ್ಯ ।
ವಾದದಿಂ ನೂತ್ನ ಮಹಿಮೋದಯನೆ ಸಾಕ್ಷಾತ ।
ಮಾದೇವನೆನ್ನುತಲಭೇದ ಭಾವದಿ ಪೊಗಳಿ ಸಾಧು
ದಿಟದಿಟವೆಂದರು ॥

೧೫

ಆ ಕಾಲದೊಳಗಿರುವ ಶೇಖರೋಜದೊಳಗೆ ಮ |
ಶಾಖ ಸಜ್ಜಾದಿ ಮಹಿಮಾಕರನ ಮಹತ್ವಗಳ |
ನೇಕಕ್ಕೆ ಸಹಿಸದವಸೀಕರಣಿ ಕೇಳಿ ಘನ ವ್ಯಾಕುಳದಿ
ಶರಣಸತ್ವಂ ||
ಆಕರ್ಷಣಂ ಗೈಯ್ಯಬೇಕೆಂದು ಯೋಚಿಸುತ |
ನೇಕರ ಫಕೀರರಂತಾಕರಸಿ ಗರ್ವದಿಂ |
ದೀ ಕಮಲಭವಪುರದ ಕೋಕ ಶರಣಪ್ಪಗೆ ನಿಶಾಕಾಲ
ದೊಳಗನ್ನವಂ ||

೧೬

ಕೇಳಿರೆನೆ ಬಾನವಾ ಸಯ್ಯದರ ಫೈಯಂಬ |
ಮೌಲೀಗಳುಂ ಮೇಣ್ಮದಾರಿಗಳು ಜಲ್ಲೋಜ |
ಲಾಲ ಭಂಡಾರಿನಖೀ ಬಚೋಬ್ದಾರರೆಂಬೇಳು ಕುಲ
ಫಕೀರರೆಲ್ಲಾ ||
ಏಳು ಶತಜನರಾಗ ಲೇಳು ತೈತರಲೆದ್ದ |
ಧೂಳಿ ಮುಸುಕಲಿಕವಂ ನಾಲೋಕಿಸುತಲೊಂದೆ |
ಗಾಲರಥವನ ಶರದಿ ಮೇಲೆ ತಾ ಸ್ನಾನಕಿಳಿದೋಲೊಪ್ಪೆ
ರವಿ ಬಿಂಬವು ||

೧೭

ಕಾಲಿಲ್ಲ ಸೂತೆಂದೆ ಘಾಲಿರಥ ನಡೆವಡೆ ನಿ |
ರಾಲಂಬ ಪಥಚಾರಿಬೀಳುವಿನಂ ಕಡು |
ಗಾಳಿದಯ ಗೈದು ಕರಜಾಲ ಪಿಡಿದುದೊ ಮತ್ತೆ
ಕಾಳೆಂಬರಕ್ಕಸಿಯು ತಾ ||
ಆಲಿಗಳು ತೆರದು ಪಾತಾಳದೊಳು ಪೋದದಿನ |
ಪಾಲನಂ ಪುಡುಕುವಳೊ ಪೇಳೆನಲು ನಕ್ಷತ್ರ |
ಜಾಲಮಾಕಾಶದ ವಿಶಾಲಮೊಳಗೊಪ್ಪಲಾ ಕಾಲದೊಳ
ಗೆಲ್ಲೆಡೆಯೊಳು ||

೧೮

ಪಸರಿಸಿತು ಸಾಹೇಬನ ವಶದಿರುವ ಪಿರಿಯ ತಾ |
ಮಸವುಮೇಣಾ ಶರಣಬಸವಪ್ಪನಲ್ಲಿಂಗೆ |
ಅಶನ ಕೇಳಲು ಬಪ್ಪಮುಸಲಜನ ಬರವಿಂಗೆ ನಿಶಿಯೆಂಬ
ಪಿಶಿತಶನೆ ಸಂ ||
ತಸದಿ ತನ್ನ ಪರತೋಷಿಸಲೆಂದು ಪ್ರೇಮದಿಂ |
ಮನೆಯದ್ದಿದಂಬರಂ ದಶ ದಿಶಕೆ ಗುಡಿಪೊಯ್ಸಿ |
ದೆಸಕ ಮೆನಲಾರಾರ್ಗೆಪೆಸರಿಡಲು ಬಾರರೆನಲೆಸದಿತ್ತು
ನಿಶಿಯಂದಿನಂ ||

೧೯

ಆಗ ಸತಿ ಜನ ತಮ್ಮ ಭೋಗಿಸುವ ವಿಟರು ತಲ |
ಬಾಗಿಲೊಳು ಸುಳಿಯುತಿರೆ ಭೋಗಕ್ಕೆ ಸಂಕೇತು |
ಜಾಗವಂ ಸೂಚಿಸುತ ಬೇಗ ಬರಲೆಂದವರ ಕೂಗಿ ಕರೆ
ಯುವ ನೆವದೊಳು ||
ಕೋಗಿಲೆಯ ಕಾಲಿಂದಿ ಶ್ರೀಗಿರಿಜೆಯಂ ಜನಗ |
ನಾಗ ಶಯನನಖಗಳು ಹಾಗೆ ತೊಟ್ಟಿಲ ಪಿಡಿದು |
ತೂಗುತಲಿ ಮಕ್ಕಳಂ ರಾಗದಲಿ ದಿವ್ಯತರ ಜೋಗುಳಂ
ಪಾಡುತಂತೆ ||

೨೦

ಪೊರಮಟ್ಟು ವಿಟಜನರ ಕರಿಸುತಲಿ ತೆಕ್ಕಿಯೊಳು |
ಬೆರಿಸುತಲಿ ಸುಖಸುರಿಸುತಲಿ ಸಮ ಗೈಯ್ಯು |
ತಿರಿಸುತಲಿ ನಿರಿಗಲ್ಲವರಿಸುತಲಿಸಲ್ಲಾಯ ಮರಿಸುತಲಿ
ಕೊರಳಾರಗಳ್ ||
ಸರಿಸುತಲಿ ಕುಚಮಧ್ಯಕಿರಿಸುತಲಿ ಬಲುಮೆಲ್ಲ |
ಗಿರಿಸುತಲಿ ಪದ ಬಂದು ಬೆರಿಸುತಲಿ ಮನೆಯವರು |
ಮರಿಸುತಲಿ ಗೈದ ಕೃತಿ ಪುರುಷರೊಡಗೂಡಿಧಿಃ
ಕ್ಕರಿಸುತಲಿ ಸಾಧ್ವಿಯರನು ||

೨೧

ಅಸಿತ ಕಚೆಯೋರ್ವಳಾ ನಿಶೆಯೊಳಗೆ ಸಂಕೇತ |
ವಸತಿ ಗೈತಂದುಟ್ಟವಸನ ಸುಗಿದಿಟ್ಟು ಭೋ |
ಗಿಸುತಿರಲು ತುಡುಗಣೆಯ ಪಶುವೀರ್ವರಂಬರನ್ನ
ಶಯನಗೈಯ್ಯಲು ಗಂಡಗೆ ||
ನುಸುರಲಾನೆಂದು ಶೋಕಿಸುತ ಧೃತಿತಾಳಿ ಮುದ |
ವಸತಿ ಗೈತಂದಖಿಳ ದೆಸೆನೋಡುತಲಿ ಭೂತ |
ಗ್ರ ಶಿತರೋಲ್ಮುಣಿಯೆ ಪತಿಯಸವಸದಿ ಪುಡುಕಿ ಮಂತ್ರಿ
ಸುವರಂತರಲೆನ್ನುತೆ ||

೨೨

ನಡೆದು ಬರುತಿರೆ ವಿಟನು ಗಡನೆ ಯೋಚಿಸಿಕೊಂಡು |
ತೊಡದು ಮೈಬೂದಿ ಬರಲಡಿಗೆರಗಿ ನೀನೆನ್ನ |
ಮಡದಿಗೊಳಿತಂಗೈಯ್ಯಲುಡಗಿತ್ತು ಪೆಂದೊಡಂಬಡಿ
ಸವನ ಕರೆದು ತರಲು ||
ಗಡನೆದ್ದು ತುಟಿಗಲ್ಲಕಡಿದು ಪತಿಯೆದುರೆ ರತಿ |
ಗೊಡುವಳಿಗೆ ಪುಸಿಯಂತ್ರ ತೊಡಕಿಸುತ ವಸನವಂ |
ನುಡಿಸಿ ತಾನುಂ ವಸನ ಪಡೆದೆನೆನೆ ಕುಲಚಿಯರ ಪಡೆ
ಗಿಡುವಡೇನಿರುವುದು ||

೨೩

ಸೂಳೆ ಮತ್ತೋರ್ವಳೊಂದ್ಹಾಳು ಮನಪೊಕ್ಕು ರತಿ ।
ಕೇಳಿಂಗೆ ವಿಟಬಪ್ಪ ಕಾಲಂ ನಿರೀಕ್ಷಿಸುವ ।
ವೇಳೆ ನಿರಿಯಿಂ ಸೇರಿ ಚೇಳು ಕಿಪ್ಪೊಡೆ ಕಡಿಯ
ತಾಳದಲೆ ಬೇನೆಬಂದು ॥
ಹೇಳಿಗಂಡಗೆ ಮಂತ್ರ ಮೇಲೆಂದು ವಿಟನ್ಹೆಸರು ।
ಜಾಲಮಾಡದೆ ಕರಿಸಿ ಕಾಳು ನಿಶೆಯೊಳಗವನು ।
ಮೇಳದೊಳಗಿರುತ ರತಿ ಕೇಳಿ ಗೈದಿಳಿಸಿ ವಿಟನಾಲಯಕೆ
ಬೀಳ್ಕೊಂಡನು ॥

೨೪

ತರುಣಿಯೋರ್ವಳದೀಗ ಬರುವೆನಾ ತಾಣದೊಳ ।
ಗಿರುಯಂದುದುಂ ಕೇಳಿ ಬರುವನಿತಕಲ್ಯೋರ್ವ ।
ನೊರಗಿರಲು ನೋಡುತವತಿರುಗಲವಳೈತಂದು ತೆರಿಯೆ
ಮುಸುಕೆದ್ದು ಕುಳಿತು ॥
ಸುರಿದವಳು ತಂದ್ಹುಗ್ಗಿ ಶರಪಾನ ಗೈದುಸಮ ।
ಸುರತೆಸಗಲೆಂದಿಡುವಿ ಸರಗಿಯೆನಲೆಲ್ಲಿಂದ ।
ತರಲಿ ಘನದಾರಿದ್ರ ತಿರುಕನಾನೆನಲಕ್ಕಿ ಮುರಿದು ಮನೆ
ಕಡೆಪೋದಳು ॥

೨೫

ಜಾರಿಯರ ನೋಡುತ ಫಕೀರಜನ ರೈತಪ್ಪ ।
ದಾರಿಯೊಳು ಹೊಲಸೆದ್ದು ನಾರುದಂಗಡಿಯೊಳಗೆ ।
ವಾರುಣಿಯ ಮಾರುತಿಹ ವಾರಿಜಾಕ್ಷಿಯರ ಕೈಜಾರಿ
ಮಧುಸೋರುತಿರಲು ॥
ದಾರಿದಾರಿಂಗೆ ಬಾಯಾರಿ ಮನಬಂದಂತೆ ।
ಚೀರಿ ಸಾಮ್ರಾಜ್ಯ ಕೈಸೇರಿದಂತ್ಹಿಗ್ಗಿ ಮುಂ ।
ದಾರಿಯೊಳು ನಡೆವರಿಗೆ ತೋರಿ ತೋಷದಿರೊಕ್ಕ
ಸೂರ್‍ಯಾಡುವರು ಗುಡಿಕರು ॥

೨೬

ಆಯೆಂದು ಬಯಲಿಂಗೆ ಬಾಯದೆರದಣಕಿಸುತ ।
ಬೋಯೆಂದು ಕೂಗಿ ಹಾ ಹಾಯೆನ್ನುತತ್ತೋರ್ವ ।
ರಾಯನಾನೆನ್ನಪ್ಪ ಬಾಯೆಂದು ಶರಿಮಾರ್ವ ತೋಯು
ಜಾನನೆ ಕರಗಳಂ ॥
ಕೈಯಿಂದು ಪಿಡಿದೋರ್ವ ನ್ಯಾಯಮಿದು ಅನ್ಯಾಯ ।
ವಾಯಿತಿದು ಹೋಯಿತಿದು ಹೋಯೆಂದು ನೆಲಕುರಳಿ ।
ಕಾಯದೊಳು ಮೊಣ್ಪೊತ್ತಿ ನಾಪ್ಗಳಂತಿರುವ ಸಮು
ದಾಯದೋಳ್ ಮತ್ತೋರ್ವನು ॥

೨೭

ಮದಿರಪಾನಂಗೈದು ವದನದೆರಿದಂಗಾತ ।
ರದನಗಾಣಿಸುತಲುಟ್ಟುದು ಸಡಲಿ ಕಣ್ಮುಚ್ಚಿ ।
ಹದನಾದ ಕಟ್ಟಿದಾಯುಧ ಕಂಡಕಡಿಗೆ ಚಲ್ಲಿದನ
ಕಾಣುತ ತೋಷದಿ ॥
ಇದರಿಂದಲ್ಹೆಚ್ಚಿಗಾದುದು ತಮ್ಮಗಿಂದಿನ ದೊ ।
ಳೊದವಿಸೆಂಬುತಲವನಯದೆ ತುಳಿದು ಪೋಗುತಂ ।
ತದೆ ಕುಡಿದು ಮೊದಲಿನವನ್ಹದನಾಗುತನೆರಡು ಬದಿ
ಯೊಳಗೆ ಬಿದ್ದರೆಲ್ಲಾ ॥

೨೮

ಕೆಲಹೊತ್ತಿನಲ್ದಿ ಕಂಗಳ ತೆರದು ನೋಡುತಲಿ ।
ಕಾಲಬಲಂ ಸಮರಾತ್ರಿಯೊಳು ಬಂದು ಶರಣನಾ ।
ನಿಳಯದ್ವಾರದಿ ನಿಂದು ಬಲುಹಸಿದೆವನ್ನಿತ್ತು ಕಳುಹೆ
ನುತ್ತನಿಬರೊಮ್ಮೆ ॥
ಕಲಕಲ ಧ್ವನಿಗೈಯ್ಯೆ ಸುಲಭನೆಚ್ಚುತ್ತಮನ ।
ಪೊಲದೇಳುತಡಿಗಿ ಮನೆಯೊಳು ಪೊಕ್ಕು ನೋಳ್ಪಲ್ಲಿ ।
ತಳಗಿಯೊಳು ಪಿಡಿನುಚ್ಚು ಉಳದಿರಲು ಪೊಗಳಿ ತಿಂಗಳ
ಸೂಡಿದನ ಮಹಿಮೆಯಂ ॥

೨೯

ತಂದನಿಬರಿಂಗೆಲ್ಲವಂದೊಂದು ಖಿಸ್ತೆನ್ನ ।
ವಂದುಂಬುತುಣಿಸುತಿರೆ ಹಿಂದೆ ನಾವಿದರೊಲು ।
ವಂಧಂಸ ಕಂಡರಿಯೆ ವಿಂದಿಂಥನ್ಯಾಮತವ ಸುಂದರಿ
ಯೊಳಾರ್‍ಕಾಣರು ॥
ಎಂದು ಕೊಂಡಾಡಿ ಮನಸಂದ ತೋಷದಿ ಪೊಗಳಿ ।
ವಂದಿಸುತ ನಿನಗೆ ಜಯತೆಂದ್ಹರಸಿತೀಪ್ರ ನಡೆ ।
ತಂದು ಸಾಹೇಬಗ್ಹೇಳ್ದರೊಂದೆ ಹಿಡಿ ದಿವ್ಯಾನ್ನದಿಂದೆಲ್ಲರಂ
ತಣಿಸಿದಂ ॥

೩೦

ಕೇಳಿಸಲೆ ಕೌತುಕಂ ತಾಳುತ ಮಶಾಖನವ ।
ರೇಳಿಗಿಗೆ ಮೆಚ್ಚಿ ತವೆ ಯೌಲಿಯಾ ನಿಜಮೆಂಬು ।
ದಾಲಿಸುತ ಜನರೆಲ್ಲಕಾಲಜಿತನಿವನೆಂದು ಮೇಲು
ನುಡಿಯಿಂ ಪೊಗಳುತೆ ॥
ಕೇಳಿಬಲ್ಲೆವು ಹಿಂದೆ ಮೋಳಿಗೆಯ ಮಾರಾದಿ ।
ಭಾಳಾಕ್ಷ ಶರಣಜನಜಾಲಾತ್ಮ ಕಾಯಕದಿ ।
ಶೈಲಾದಿ ಮುಖ್ಯ ಪ್ರಮಥಾಳಿಗುಣಿಸುತಪೊನ್ನ ಜಾಳಿಗಿ
ಗಳಂ ಕೊಟ್ಟುದು ॥

೩೧

ನೇತ್ರದಿಂ ಕಂಡೆವು ವಿಚಿತ್ರ ಮಹಿಮನ ಸುಚಾರಿ ।
ರಿತ್ರ ಘನವೆಂತು ಸಲೆ ಸ್ತೋತ್ರವಂ ಗೆಯ್ಯುತಲಿ ।
ಧಾತ್ರಿಜನ ತಮ್ಮಮ್ಮ ಕ್ಷೇತ್ರಕ್ಕೆ ಪೋಗಲಾ
ಪೊತ್ತಿನೊಳು ಶರಣಬಸವಾ ॥
ಮಿತ್ರಾಕ್ಷನಂ ಪೂಜೆಸುತ್ತೆಂಟುವರ್ಣದಾ ।
ಸೂತ್ರಮಾಚರಿಸುತಲಿ ಮಿತ್ರೋದಯದೊವಳನ್ನ ।
ಛತ್ರವಂಗೈದು ಸತ್ಪಾತ್ರನಿರುತಿರಲೊಮ್ಮೆ ಸಾತ
ಪೇಡದ ವಿಪ್ರರು ॥

೩೨

ಹುಡುಗಗೋರ್ವಗೆ ಸೀರಿಯುಡಿಸಿ ಸ್ತ್ರೀವೇಷವಂ ।
ಕೊಡುತ ಶರಣನ ಸತ್ವ ನಡೆನೋಡಲೆಂದು ಬಂ ।
ದಡಿಗೆರಗಿಸಿವಳಿಂಗೆ ಕೊಡಲು ಸಂತತಿ ಸಹಸ್ರ
ಕೊಡುಪೆವೆಂದವರಾಡಲು ॥
ಜಡರ ಕಪಟರಿದೊಂದು ಕೊಡುತ ಖರ್ಜುರತಿನಸಿ ।
ಹಡೆವಳ್ಹೋಗೆನಲ್ಹೋಗೆ ಪೊಡೆ ಬೆಳೆಯುತಿರಲವನ ।
ಹಡದವರು ಕಂಡಿದೇನೆಡರೆನಲು ಪೇಳಿದನು
ನಡೆದ ಸಂಗತಿಯಲ್ಲವಂ ॥

೩೩

ಆದು ಕೇಳಿ ತಾಯ್ತಂದೆಯರು ಹಣೆಯ ಬಡಕೊಳುತ ।
ಹದನವೇನೆಂದವರ ಸದನಕ್ಕೆಪೋಗಿ ಬಹು ।
ವಿಧ ವಿಧದಿ ಗೋಳಾಡಿ ಚದುರೊಬ್ಬ ಮಗನಿಗೀ ವಿಧಿ
ಗೈದ ಪಾಪಿಗಳಿರಾ ॥
ಸದುಗತಿಯು ನಮಗೆ ನೀಗಿದ ಕಾರಣಂ ನಿಮ ।
ಪದದ ಬಳಿ ಜೀವ ಕೊಡುವದನೆ ದಿಟವೆನೆ ಕೇಳಿ ।
ಬೆದರುತವರ್ಕೈತಂದು ಸದಯಾಳ ಪೊರೆಯೆಂದು
ಪದಕೆರಗುತಾ ಶರಣನಾ ॥

೩೪

ತಂದೆ ಸಾಸಿರಹಣಂ ತಂದಿಡುವೆವೀಗಲಾವ್ ।
ಹಿಂದೆಗೈದಪರಾಧ ನೋಂದೆಣಿಸದಲೆ ದಯಾ ।
ಸಿಂಧು ಪೊರೆ ಭಕ್ತಜನ ಬಂಧು ನಮ ತ್ರಾಹಿ ತ್ರಾಹೆಂದು
ಕೊಂಡಾಡುತಿರಲು ॥
ಮಂದನಗೆ ಮಿನುಗೆ ಭಸ್ಮಂದಳೆಯೆ ಪೊಡೆಕರಗಿ ।
ತೊಂದೆ ನಿಮಿಷದೊಳೆಲ್ಲಮಂದಿ ಜಯ ಜಯ ಶರಣ ।
ನೆಂದು ಕೈ ವಾರಿಸುತ ಹಿಂದರಿದುದಿಲ್ಲಿಂಥ ಚಂದ
ಮೆರಿದುರೆ ಪೊಗಳುತೆ ॥

೩೫

ಮನೆ ಮನೆಗೆ ಪೋಗಲೆಂದಿನದೊಲುರೆ ಶರಣೊಂದು ।
ದಿನ ಸರಡಗಿಯ ಪಾರ್ವತನುಜ ಮತ್ತೋರ್ವನಿಗೆ ।
ವನುತೆ ವೇಷವ ಧರಿಸಿ ತನಗೆ ಸಲೆಯೆನಿಸಿ ಯವ್ವನ
ಮದದಿ ಶರಣಪ್ಪನಾ ॥
ಘನತೆಯ ಪರೀಕ್ಷಿಸಲು ವನಜಭವ ಪುರಿಗೈದು ।
ವಿನುತ ನೆರದಿಹಳು ಶೋಭನಗೈದು ಕೊಂಬುವಡೆ ।
ಧನಂ ಕೈಯ್ಯೊಳಿಲ್ಲದ ಕಾರಣಂ ನಿಮ್ಮ ಬಳಿಗೈದೆನೆನೆ
ಕೇಳಿದಪ್ಪು ॥

೩೬

ಕೊಟ್ಟು ಕಳುಹಲ್ಕೆ ಪೊರಮಟ್ಟು ಪುರಪೋಗುತಿಹ ।
ಬಟ್ಟೆಯೊಳಗವನುಟ್ಟ ಬಟ್ಟೆಕಳಿಯನಲಪ್ಪಿ ।
ಥಟ್ಟನೆ ಮುಖದಿ ಮುದ್ದಿಟ್ಟೀಗೆ ತನಗೆ ರತಿ ಕೊಟ್ಟಲ್ಲದಾಂ
ಬಿಡನೆನೆ ॥
ಚಟ್ಟನೆ ಚೀರುತೆದೆಗೆಟ್ಟು ಹಾ ಹಾ ಹರಿಯೆ ।
ಕೆಟ್ಟೆನೆಂದವನಂಗ ಮುಟ್ಟುತೆದೆ ಬದೆ ಮತ್ತೆ ।
ಪುಟ್ಟ ಮೊದಲಾದವಂ ದಿಟ್ಟಯಿನ್ನೋಡಿ ಕಂಗೆಟ್ಟು
ತಾಂ ಕಳವಳಿಸುತೆ ॥

೩೭

ಮರುಗಿ ಮರಮರ ಬಂದು ತಿರುಗಿ ಶರಣನ ಬಳಿಗೆ ।
ಚರಣಕಾನತನಾಗಿ ಕರುಣಸಾಗರನೆನ್ನ ।
ದುರಿತವಂ ನೋಡದುದ್ಧರಿಸೆಂದು ಮುಂಬಿನೊಳು
ಸುರವಿ ಸಾಸಿರ ಹಣವನು ॥
ನೆರೆಪ್ರಾಯಶ್ಚಿತಮಿದಂ ನಿರಿಸಿಕೊಂಬುವದೆನಲು ।
ಶಿರದೂಗಿ ಧೂಳಪದಶರ ತಳೆದ ನಿಮಿಷದೊಳು ।
ಪುರುಷನಾಗುತ ಪಾದಕೆರಗಿ ಕೊಂಡಾಡುತಲಿ
ತೆರಳಿ ಸರಡಿಗಿಗ್ಹೋಗಲು ॥

೩೮

ಅಲ್ಲಿ ನೆರೆದಿರುವ ಜನರೆಲ್ಲರೀ ಮಹಿಮೆಯಂ ।
ಬಲ್ಲರಾರ್ಧಿಂದೆಂದು ಸೊಲ್ಲು ಸೊಲ್ಲಿಗೆ ಪೊಗಳೆ ।
ಉಲ್ಲಾಸದಿಂ ಗೌರಿಯೊಲ್ಲಭನ ಕೊಂಡಾಡಿ ನಲ್ಲಮಿರೆ
ಶರಣಪ್ಪನು ॥
ಸಲ್ಲೀಲೆಯಿಂದೊಂದಿನಲ್ಲಿ ಚರತೃಪ್ತಿ ಗೈ ।
ವಲ್ಲ ವ್ಯಯಮಾಗಿ ಘೃತಮಿಲ್ಲದಂತಿರೆ ಕಂಡು ।
ನಿಲ್ಲದೆಡೆ ಬಡಿಸುವರು ಬಲ್ಲಿದನು ಶರಣನಿದ್ದಲ್ಲಿಗೈತಂದು
ಸುರಲು ॥

೩೯

ಕೇಳಿ ಕಳವಳಗೊಂಡು ತಾಳಿ ಧೃತಿ ತಡಮಾಡ |
ದೇಳಿ ಗಂಗಾಂಬಿಕಿಗೆ ಕೇಳಿ ಕೈಗಡವೆನ್ನು |
ತ್ತೋಳಲ್ಕೆ ಶರಣನುಡಿ ಲಾಲಿಸುತ ಭಕ್ತಜನಜಾಲ
ಮಾಡದೆ ಬರುತಲಿ ||
ಸಾಲುಗೊಡಗಳು ಕೂಪ ಕೀಲಾಲದೊಳಗದ್ದಿ |
ಮೇಲೆತ್ತಲಾದ ಘೃತವಾಲೋಕಿಸುತ ಶರಣ |
ಬಾಳೆನ್ನುತುಘೆ ಘರಾಕ್ಷೋಳಿಸುತ ಬಂದಗ್ನಿ
ಜ್ವಾಲೆ ಶಖೆಯಿಂ ಕರಗಿಸಿ ||

೪೦

ಶತಸಹಸ್ರ ಚರರು ಸಂಘೃತದ ಗುಣಲೇಸು ಹೊಗ |
ಳುತಮಿರಲು ಕುಂಭಪೂರಿತಗಳೆತ್ತಿತ್ತುತಲಿ |
ಮಿತಿಮೀರಿ ಸುರಿಯುತಿರಲ ಬಳ ಶೋಷದೊಳ್
ಗುಣ್ಣುತ ಹೊಟ್ಟೆನೇವರಿಸುತಾ ||
ರುತುರಸಂ ಶುಭ್ರಕೋಭಿತದನ್ನ ಕಟ್ಟಾಮ್ರ |
ಜತೆಗೆ ಹಪ್ಪಳ ಸಂಡಿಗತಿಯುಂಡುನಾಡೆ ತೇ |
ಗುತ ಲೇಳಲಾಗದಿರೆ ಕ್ಷಿತಿಗೆ ಕೈಯೂರೆದ್ದು ಗತಿ
ಮಾಂದ್ಯದಿಂ ಪೊರಿಯ ಕೇಳ್ ||

೪೧

ಬರುತ ತಾಂಬೂಲ ಕ್ರಮುಕ ಚರುವಣಂಗೈಯ್ಯು |
ತಿರುತಿರುವಾಗೆ ಸಹಸ್ರಾರುಪರಕೆ ತುಪ್ಪದ ಕೊಡಂ |
ಬರೆಕಂಡು ಶರಣಪ್ಪ ತರಿಸಿರ್ದ ಕಡುತುಪ್ಪಸುರಿಸಿ
ಕೂಪದ ಜಲದೊಳು ||
ಬೆರಸಲಿಕೆ ಜನಗಳಚ್ಚರಿವಟ್ಟು ಘೃತಶರಧಿ |
ಕರಗುತೇಕಾದುದಾರರಿಯರ್ದಿಂದಿಂದು ಮುಂ |
ದರರೆಯಿದು ಸೋಜಿಗೆಂದುರೆ ಪೊಗಳಿ ಭಾಪು ಭಾಪ್ಪುರೆ
ಭಕ್ತ ಭಾಪು ಶರಣಾ ||

೪೨

ಕೇಳಿಬಲ್ಲೆವು ಭೂತಕಾಲದೊಳು ಸೋವಾಜಿ |
ಭಾಳಾಕ್ಷನಿಗೆ ನಿತ್ಯತೈಲಪತ್ರ್ಯರ್ಪಿಸುವ |
ಶೀಲತನನಾಗಿರುವ ಕಾಲದೊಳಗೊಂದು ದಿನ ತೈಲ
ಮಿಲ್ಲದಲಿರುತಿರೆ ||
ಕೀಲಾಲವೆರೆದು ಪರಜ್ವಾಲಿ ಬೆಳಗುತಲಿ ಶಶಿ |
ಮೌಳಿಯಂನೊಲಿಸಿ ಸಲೆ ಕೈಲಾಸ ಪಡೆದುದಿಂ |
ದಾಲಿಯಿಂ ಕಂಡುದುದೆ ಮೇಲೆಂದು ಪೊಗಳೆ
ತಮ್ಮಾಲಯಕೆ ಪೋದರೆಲ್ಲಾ ||

೪೩

ಶರಣಾರು ಸ್ಥಲಗಳಾಚರಣೆ ಯಿಂದಾಸೋಹ |
ಸಿರುತೆಸಗಿ ಚರತೃಪ್ತಿಕರಿಸುತಿರುತಿರಲೊಮ್ಮೆ |
ಸರಡಿಗಿ ಧನಿಕನ ಸೊಸಿ ಕರಕರಿಗೆ ತಾಳದಲೆ ತ್ವರಿ
ತ್ಯಜಿಸುತತ್ತೆ ಮನೆಯಿಂ ||
ಭರದಿತವರೂರ ಹಾಗರಿಗಿಗ್ಹೋಗುವ ಪೋಳ್ತು |
ಸರಣಿಯೊಳಗೋರ್ವ ನೆರೆದುರುಳನವಳಂ ಬಲ |
ತ್ಕರಿಸಿ ರತಿಗೈಯಲ್ಕೆ ಕರವು ಪಿಡಿದೆಳೆವುತಿರೆ
ಶರಣನಾಣೆಂಬನಿಟ್ಟಳು ||

೪೪

ಆಣೆಯಿಡಲವ ಶಕ್ತಿಹೀನನಾಗುತ ಮನಕೆ |
ಕೇಣವಂ ತಾಳಿ ತವೆ ಗೋಣ ಬಾಗುತಲಾಗ |
ಮೀನಾಕ್ಷಿ ಕೈಬಿಡಲು ತಾನೈದು ಹಾಗರಿಗಿ ತಾಣ
ದೊಳು ಸುಖಮಿರ್ದಳು ||
ಜ್ಞಾನರಹಿತನು ತೋಚದೇನೊಂದು ಷಂಡಾಗು |
ತೇನೆಂದು ತೋರಿಸುವೆನಾ ನನ್ನ ಜನಕೆಂದು |
ಕ್ಷೀಣಾಗುತಿರುವ ನಭಿಮಾನಧನ ಪೋಯ್ತಿಂದು
ನಾನೇನು ಗೈವೆನೆನುತಾ ||

೪೫

ಶನಿವಾರ ಷಂಡ್ಹೊತ್ತಿಲುಣುತ ಪರಕಿಯ ಪೊತ್ತು |
ಬಿನಗು ಜಟ್ಟಂಗ ಗರ್ಜನಗೈದು ಮಾರುತನ |
ತನಯನಂ ಪೂಜಿಸುತ ಬೆನಕನಂ ಮನ್ಮಥನ |
ಜನಕನ ಕೊಂಡಾಡುತೆ ||
ಸನುಮತದಿ ಗಂಗೆ ಜಕ್ಕಣಿಗಳಿಗೆ ನೈವೇದ್ಯ |
ವನು ಮಾಡಿ ಭೂತಕುಲದಣಿವಂತೆಯನ್ನವಂ |
ಮನಸು ಬಂದಡೆ ಚೆಲ್ಲಿದಿನಗಳೆಯಲೊಂದೆಳ್ಳಿನನಿತು
ಲೇಸಾಗದಿರಲು ||

೪೬

ಬಿಳಿಯುಳ್ಳಿ ಬೊಮದಂಡಿ ಗೊಳಗೊಳಿಕೆಯಡಿಬೆಂಡಿ |
ಸಲೆಮನ್ಮಥೋದ್ಭವದ ಗುಳಿಗಿಯಜಿವಾನುದ್ದು |
ಲಲನೆಯರ ಶತವೊಂದಿರುಳು ಜೋಗಿಸುವ ಮಾತ್ರೆ
ಗಳುಗೊಳ್ಳುತದಕೆ ಪಥ್ಯಂ ||
ಒಲಿದುರಾಜಾನ್ನವಾಕಳಪಾಲು ಸೇವಿಸುತ |
ಹಲವು ತೆರಪೌಷಧಂಗೊಳುತ ಬೆಂಡಾಗಲೇಂ |
ಫಲವಾಗದಿರೆ ನೋಡಿಲಲನೆಗೇಂಗತಿಯುತನ್ನುಳುವಿ
ಗಿದು ಕಡೆಯೆನ್ನುತಾ ||

೪೭

ಪರಿಪರಿಯು ತಿಳಿದು ಸಾಸಿರ ಯೋಚಿಸುತ ಕೊನೆಗೆ ।
ಹರಣ ಕೊಡುವುದನೆ ನಿರ್ಧರಿಸಿರಲು ಹಡದವರು ।
ನೆರೆಯುವರು ನೆರೆತಿಳುಹಿ ಶರಣಬಸವನ ಬಳಿಗೆ ಕರ
ದೊಯ್ಯುತಾಗ ಕರುಣಾ ॥
ಶರಧಿ ಪೊರೆಯಂದವರ ಚರಣದೊಳು ಸಾಷ್ಟಾಂಗ ।
ವೆರಗೆದ್ದು ಕುಳಿತಿವನ ದುರಿತವೇಂ ಪೇಳು ತು ।
ದ್ಧರಿಸೆಂದು ಕೇಳುವರಗ್ಗುರುಸದ್ಧಿಂದಾದ ಚರಿತೆ
ಯಂ ಪೇಳಿ ಮತ್ತೆ ॥

೪೮

ಮಡದಿಯೆನ್ನಾಣೆಯಂ ನಿಡಲಿಕಿವನವಳ ಕೈ ।
ಬಿಡದೆ ಬಾಧಿಸಿದಿರೀ ಪಡೆಯಾಯಿತಿವಗೆಂದು ।
ನುಡಿದು ಧೂಳೋಪಕಂ ನಿಡಿಸಿ ಭಸಿತಂ ಮೈಗೆ
ತೊಡೆದವಗೆ ಸಸಿನೆಸಗಲು ॥
ಪಡಿಗಟ್ಟಲುಂಟೆ ಯೀಪೊಡವಿಯೊಳಗಿವನೆ ನಿಜ ।
ಮೃಡನೆಂದು ಕೊಂಡಾಡುತಡಿಗಡಿಗೆಯಡಿಗಳಿಗೆ ।
ಪೊಡಮಟ್ಟು ಬಹುಳ ಧನ ಕೊಡುತ ದಾಸೋಹಕ್ಕೆ
ಪಡೆದು ಕೊಂಡಾಶಿರ್ವಚಂ ॥

೪೯

ಅರವತ್ತು ಪೋಗಲ್ಕೆ ವಿವಿಧಜನ ಸಾಕ್ಷಾತ್ ।
ಶಿವನೆ ಶರಣಪ್ಪ ನಿಜಮಿವನ ಘನತಿಂಗೆ ಪೋ ।
ಲುವರಿಲ್ಲಲಾ ಮೂರು ಭುವನದೊಳಗೆಂದಂದು
ತವತವಗೆ ಕೊಂಡಾಡಲು ॥
ಶಿವಪೂಜೆ ಚಾರುಚರ ನಿವಹ ದಾಸೋಹಂ ।
ಅವಿರತಂ ಗೈಯ್ಯುತಲಿ ಶಿವಶರಣ ನಿರಲೊಂದು ।
ದಿವಸ ಒಕ್ಕಲಗೇರಿ ಭವನದೊಳು ಸದ್ಭಕ್ತರವ
ರಿರಲು ಘನತೋಷದಿ ॥

೫೦

ಆ ಕೇತನದೊಳೋರ್ವ ರಾಕೇಂದು ಮುಖಿ ಗಂಡ ।
ನೇ ಕಾಮವೈರಿಯಂದೇಕ ಪತಿವ್ರದಿತರುವ ।
ಕಾಕುದೈವತಗಳ ನಿರಾಕರಿಸಿ ಗುರುಲಿಂಗ ಕೋಕ
ಜಂಗಮ ಭಜಿಸುತೆ ॥
ಶ್ರೀಕಂಠಕೊಟ್ಟುದುದೆ ಸಾಕೆಂದು ಶಾಂತಿಯಿಂ ।
ಬೇಕು ಬೇಡೆಂಬುದಂ ಶೋಕ ಹರ್ಷದೊಳು ಘನ ।
ವ್ಯಾಕುಲಂತನಗೆಂದು ತಾ ಕಲ್ಪಿಸದೆ ಪುರುಷನಾಕಾರ
ದೋಳ್ ನಡಿವಳು ॥

೫೧

ವೀರಶೈವರ ಸದಾಚಾರ ಸ್ತ್ರೀಯರಿಗೆ ಹೆ ।
ದ್ದಾರಿಯಂತಿರುತಿರ್ಪ ನಾರಿಯಂ ಕಾಣುತಾ ।
ಕೇರಿಯೊಳಗಿರುತಿಹ ಹಜಾರಿ ಹುಡುಗನು ಕಾಮವೇರಿ
ತಡಿಯದಲವಳನು ॥
ಬಾರಿಬಾರಿಗೆ ಕೆಣಕಿ ದಾ ಬೀದಿಗಳೊಳಗೆ ।
ನೀರು ಬಾವಿಯ ಮೇಲೆ ಭೂರಿ ಸಂಕಷ್ಟವಂ ।
ಬೀರುತಿರಲವಳದಕೆ ಸೈರಿಸದೆ ಬುದ್ಧಿಯಂ ಸಾರಿ
ತಿಳುಹಿದಳವನಿಗೆ ॥

೫೨

ಪರನಾರಿಯ ಕೆಣಕಿ ನರಕಕ್ಕೋಗುವ ಬುದ್ಧಿ ।
ಥರವಲ್ಲ ಕೇಳಣ್ಣ ದುರುಳತನ ಬಿಡು ತಂಗಿ ।
ಸರಿಯೆಂದು ತಿಳಿಯೆನ್ನ ನೆರೆವಿಚಾರಿಸಲು ಕಸವರ
ರಜತ ಕಬ್ಬಿಣಗಳಾ ॥
ನಿರುತ ಹಿತ್ತಾಳಿ ತಾಂಬರ ಮಣ್ಣ ಪಾತ್ರೆಯೊಳ ।
ಗಿರುವ ಹಾಲ್ರುಚಿಯೆಂದೆ ಪರಕಿಪೊಡೆ ಪಾತ್ರೆ ಭಿ ।
ನ್ನಿರುವವೆಂದರಿದು ನೀ ದುರಿತಕೆಳಸದೆ ನಿನ್ನ ಹರದಿ
ಯೊಡಗೂಡೆಂದಳು ॥

೫೩

ಸತಿಗೆ ಪತಿವ್ರತವಂತೆ ಪತಿಗೆ ಸತಿವ್ರತವಿರಲು ।
ಶತಮುಖನೆ ಮುಖಸುರರ ವಿತತಿ ಮಣಿಯುತಲಿ ಪದ ।
ನತರಾಗ್ವರವರ ಸತ್ಕೃತತಿಯೆ ಘನವೆಂದುವಗೆ ಮತಿ ಪೇಳಿ
ಬಂದು ಮನೆಯಾ ॥
ಕೃತಿಯೊಳಿರುತಿರಲು ಕುತ್ಸಿತನುಮವಳಾಡಿರ್ದ ।
ಹಿತನುಡಿಗೆ ಮತ್ತಿಷ್ಟು ಖತಿ ತಾಳಿ ನೆರೆ ಸಾಧಿ ।
ಸುತ ನಿರುತ ಸಮಯವಂ ಸಿತಗನೊಂದೊಂದ್ಯೋಚಿ
ಸುತಲಿರಲಿಕಿವಳಿತ್ತಲು ॥

೫೪

ನಲ್ಲಗುಣಿಸದಲನ್ನ ಕೊಳ್ಳದಿಹ ನೇಮತನ ।
ಗುಳ್ಳಸತಿ ಕರತಂದು ನಲ್ಲಜಂಗಮ ಪಾದ ।
ಪಲ್ಲಪೋದಕ ಸಲಿಸಿ ಸಲ್ಲಿಸುತಲೆಡೆಯುಣಿಸಿ ಕೊಳ್ಳುತಿಡೆ
ಕೈಯೊಳಾಂತು ॥
ನಿಲ್ಲದ್ದೊಲಕಾವ ಪತಿಯಲ್ಲಿಗ್ಹೋಗ್ವನಿತರೊಳು ।
ಖುಲ್ಲಮುಂದ್ಹಿಂದಾರು ಮಿಲ್ಲದಂ ಕಂಡೈದು ।
ನಿಲ್ಲು ನೀ ಪೋಪುದಿಂದೆಲ್ಲನಗೆ ಭೋಗಕೊಟ್ಟಲ್ಲ
ದಾಂ ಬಿಡೆನೆಂದನು ॥

೫೫

ಅದುಕೇಳಿ ಸಾಧ್ವಿ ಗದಗದ ನಡುಗಿ ಧೃತಿ ತಾಳಿ |
ಮುದಮುಖನೆಯನ್ನ ಮುಟ್ಟದಡೆ ಶರಣಪ್ಪನಾ |
ಪದದಾಣೆ ನಿನಗೆನಲು ಬೆದರದಲೆ ಶರಣಪ್ಪ ಶಪ್ಪದ ಮೇಲೆ
ಕುಳಿತನೆಂದು ||
ವದಿಸೆತ್ತಿಕೊಂಡು ಜೋಳದ ಬೆಳೆಯೊಳೊಯ್ದು ರತಿ |
ಕದನ ಗೈಯಲ್ಕೆಂದು ಸುದತಿ ಕರ ಪಿಡಿದ ಕ್ಷಣ |
ಉದಕ ಶತಕುಂಭ ಸುರವಿದೊಲಾಗಿ ಶಿರವ ಬಾಗಿದ
ನವನು ನಾಚುತಾಗ ||

೫೬

ಮಾನಿನಿಯು ಶರಣನಭಿಮಾನ ರಕ್ಷಕನ ಸಲೆ |
ಧೇನಿಸುತೆ ವಾಸಕ್ಕೆ ತಾನೈದು ಮಡಿಯಾಗಿ |
ಬೋನವಂ ಕೊಂಡೊಯ್ದು ಪ್ರಾಣೇಶಗಿಡಲವನಿದೆನಿನಿತು
ಹೊತ್ತ್ಯಾತಕೆ ||
ನೀನಲಸಿದೆನೆ ಕೇಳಿ ಶ್ವಾನ ಮುಟ್ಟಲು ತಿರುಗಿ |
ಸ್ನಾನವಂ ಮಾಡಿ ಕೊಂಡಾನೈದೆನೆನುತುಣಿಸಿ |
ಮೀನಾಕ್ಷಿ ಮನೆಗೆ ಸುಮ್ಮಾನದಿಂ ಬಂದುಂಡು ಸಾನುರಾಗ
ದೊಳಿರುತಿರೆ ||

೫೭

ಆ ದುಷ್ಟ ಪುರುಷತ್ವ ಪೋದಕಾರಣ ಮನಕೆ |
ವೇದನಂ ತಾಳುತ ದಿನೆ ದಿನಂ ಕೊರಗಿ ಬೆಂಡಾ |
ದುದಂ ಕಂಡು ಬಲು ಖೇದದಿಂದವನ ಸತಿ ಕಾದು
ಕಾಮನ ಜರದಿ ಮೈ ||
ಹಾದಿಗ್ಹೋಪರ ಕಂಡು ಹಾದರಕೆ ಮನಮಾಡಿ |
ಬೀದಿಯೊಳು ನಿಂತು ಮನಸಾದತ್ತ ಚರಿಸಲೇ |
ನಾದುದೆಂದವಳತ್ತೆ ರೋದಿಸುತ ಪುತ್ರನಿಗೆ ಬೈದು
ಕೇಳಲು ಸುಮ್ಮನೆ ||

೫೮

ಇರುತಿಪ್ಪನಂ ಕಂಡು ಪುರುಷತ್ವಮಿಲ್ಲೆನ್ನ |
ತರಿದು ಕೈಕೊಂಡು ಸಾಸಿರ ಹಣವಂ ಉಡಿಗಟ್ಟ |
ಕರೆದುಕೊಂಡಾತ್ಮಜನ ಭರದೊಳೈತಂದು ಶಿವ
ಶರಣಬಸವಪ್ಪನಡಿಗೆ ||
ಎರಗಿ ಸಾಷ್ಟಾಂಗ ಸಾಸಿರಕೊಂಡು ಸಂತತಿಯು |
ಕರುಣಿಸೆನಲವಳಂತರರಿದರಿಯದವನಂತೆ |
ತರುಣಿಸಿವನಲ್ತೆ ನಿನಗರರೆ ನೀ ಕೇಳಿದಚ್ಚರಿಗಂಡ
ಸಿಲ್ಲದೆಂತು ||

೫೯

ಪಡೆವೆ ಮಗನಂ ಪೇಳುಗಡನೆನಲು ದೇವ ನಿ |
ಮ್ಮಡಿಗೆ ಮರೆಯೇನುಂಟು ನುಡಿದು ನಾಚಿಸಲೇಕೆ |
ಬಿಡಿಸು ಚಿಂತೆನಲ್ಲಿಂದೆ ನಡೆದ ಸಂಗತಿಯಲ್ಲ ನುಡಿಸು
ಮಗನಿಂದೆನ್ನಲು ||
ಗಡಗಡನೆ ನಡುಗುತವನ ಮಡದಿಯಿಟ್ಟಾಣ್ಯವರಿ |
ಗೊಡನಾಡಿತಾನದಕೆಡನುಡಿದುದಂ ಪೇಳಿ |
ಪೊಡಮಡುತಲಪರಾಧ ಕಡೆಗಿಟ್ಟು ಪೊರೆಯುನ್ನ
ತುಡಿಯೊಡ್ಡಿ ಬೇಡಿಕೊಳಲು ||

೬೦

ಚರರಟ್ಟುತಾ ಸತಿಯ ಕರಸಿ ಮನ್ನಿಸುತಲವಳ |
ಚರಣದೊಳು ಕೆಡಹಿ ನೀ ಪೊರೆಯಾಣೆ ಬಿಟ್ಟೆಗೆಲು |
ಭರದಿ ತೊಂಡಾಣೆಯನೆ ಪುರುಷರೊಳು ಕಲಿತು ಘನ
ಹರುಷವಂದಾಳುತವನು ||
ತರುಣಿಯಂ ತಾಯೆಂದು ಶರಣನಂ ಪಿತನೆಂದು |
ನೆರೆಪೊಗಳಿ ಧರೆಯಮೇಲೊರಗುತಂತೇಳುತಂ |
ಪರಿಪರಿಯು ಕೊಂಡಾಡೆ ನೆರವಿ ಜನರಾಗಲಚ್ಚರಿವಟ್ಟು
ಪೊಗಳುತಿರಲು ||

೬೧

ಭೂತಕಾಲದೊಳಗೀ ಮಾತು ಕೇಳಿರೆ ದೇವ |
ವ್ರಾತದೊಳಗಿನಿತಿಪ್ಪ ಮಾತು ಮಿಗಳುಳ್ಳೊಡಂ |
ದೇತಕಿ ಶಿಖಂಡಿಯಂಬಾತನ್ಹಾಗಿರ್ದಪಂ ಪೂತು
ಪೂತುರೆ ಶರಣನೆ ||
ಭೂತಳದಿ ನೀನೆ ಸಾಕ್ಷಾತ ಶಿವಭಕ್ತ ನಿಂ |
ದೇತರಧಿಕಾರವಾ ಭೂತೇಶನೆಂದು ಮಹಿ |
ಮಾತಿಶಯ ಪೊಗಳಿ ಜನವ್ರಾತ ತಮ್ಮತಮ್ಮಯ
ನಿಕೇತನಕೆ ಪೋಗಲಾಗ ||

೬೨

ಈಶಾರ್ಚನಂ ಚರರ ದಾಸೋಹಗೈದು ಶರ |
ಣೇಶ ಸೌಖ್ಯದೊಳಗಿರುವಾ ಸಮಯದೊಳು ರಟ್ಟ |
ಪಾಷಾಣಗ್ರಾಮದ ನಿವಾಸ ಕೋಮಟಶೆಟ್ಟಿ ತೋಷ
ದಿಂದಿರಲವನೀ ||
ಭೂಷಣಾಗದೆ ಕುಲವಿನಾಶಪ್ಪ ಮಗ ಪೂರ್ವ |
ದೋಷದಿ ಶಿಖಂಡಿಯಿರಲಾ ಸುದ್ದಿ ತಿಳಿಯದಲೆ |
ವೈಶ್ಯ ಹೀರಾಪುರವಾಸನಾತ್ಮಜೆ ತೆಗೆದು ಲೇಸೆನಿಸ
ಲಗ್ನಗೈದು ||

೧೩

ಇರುತಿರಲವಳು ಮೈನೆರತಿರಲು ಋತು ಶಾಂತಿ ।
ವಿರಚಿಸುತ ಕಳುಹಲಂದಿರುಳೆಮೇಕಾಂತದೊಳು ।
ಪುರುಷಗಿರುತಿಹ ಕೊರತಿಯರಿಯುತದನಾರಾರ್ಗೆ
ಯರುಹದಂತಾ ತರುಣಿಯು ॥
ಮರಿಯಾದಿಯಿಂ ಸುಮ್ಮನಿರಲು ತವರವರು ನಾ ।
ಗರ ಪಂಚಿಮಿಗೆ ತನ್ನ ಕರೆದೊಯ್ಯಲಾ ಪುರದ ।
ನರರಿಂದ ತಿಳಿದು ಸಲೆ ಶರಣಬಸವನ ಮಹಿಮೆ
ನೆರೆಹಿಗ್ಗಿ ಕೊಂಡಾಡುತೆ ॥

೧೪

ಒಂದು ದಿನ ಮಡಿಯಾಗಿ ಬಂದು ಶರಣನ ಪಾದ ।
ಕೊಂದಿಸುತ ಸಾಷ್ಟಾಂಗದಿಂದಲೇಕಾಂತದೊಳ ।
ಗೆಂದಳೈ ನೀನೆ ನಿಜ ತಂದೆ ನಾನಿದುವರೆಗೆ
ಬಂಧು ಜನರಿಗೆ ತಿಳಿಸದಾ ॥
ದಂದುಗಂ ನೀನರಿಯದೊಂದುಂಟಿಲೇಸೆಸಗ ।
ಲೆಂದು ಸಾಸಿರ ಬೆಲೆಗೆ ಕುಂದಿಲ್ಲದೊಡವೆಗಳ ।
ತಂದೊಪ್ಪಿಸುವೆ ದಯಾಸಿಂಧು ಪೊರೆಯನೆ ಕೇಳು
ತಂದುವುಡಿಯೊಳು ಭಸಿತವಂ ॥

೧೫

ಪಾಲಿಸುತೆ ನಿತ್ಯತ್ರೈಕಾಲದೊಳ ಧರಿಸೆಂದು ।
ಪೇಳಲದು ಕೊಂಡು ಪಿತನಾಲಯಕೆ ಬಂದೊಂದು ।
ಏಳುದಿನ ಧರಿಸಲಾಮೇಲವಳ ಪತಿಗೆ ರತಿ ಕೇಳಿಂಗೆ
ಮನಸಾಗಲು ॥
ಜಾಲಮಾಡದೆ ಬಂದು ತೋಳಿನಿಂ ಬಿಗಿದಪ್ಪಿ ।
ಲೋಲಾಡಿ ಮುದ್ದಿಡುವ ಕಾಲದೊಳಗೊಲ್ದು ಪತಿ ।
ಕಾಲಿಗೆರಗುತ ಪರಕಿಪೇಳೆ ಸಮ್ಮುದದಲನುಕೂಲಾದಳಾ
ಸಮಯದಿ ॥

೧೬

ಬಡವರಿಗೆ ಭಾಗ್ಯದ ಕೊಡದೊರಕಿಯದಂತೆ ಸಲೆ ।
ನುಡಿಮೂಕರಿಗೆ ಹೆಳವಗಡಿಬಂದಪರಿ ಮೇಣ್ ಕು ।
ರುಡಗೆರಡು ಕಣ್ಣು ರುಜೆಯಡಿಸಿದವಗಮೃಥುಟ್ಟ
ಹಡೆಯದಿರುತಿಹ ಬಂಜೆಯಾ ॥
ಪಡದಂತೆ ಮಗನ ಬಲು ಸಡಗರದಿ ಸಮರತಿಯ ।
ಕೊಡುತ ಕುಚಗಲ್ಲದೊಳಗಿಡುತ ಕೈವಶನ ಸುಖ ।
ಪಡೆದು ಸಾ ನಂಗೈದು ಮಡಿಯಾಗುತೀರ್ವರುನ್ನಡೆ
ತಂದು ಶರಣನಡಿಗೆ ॥

೧೭

ಪೋಷಿಸೆಂದೆರಗುತ ವಿಭೂಷಣಂಗೊಟ್ಟು ಘನ ।
ತೋಷದಿಂ ಶರಣಪ್ಪನಾಶಿರ್ವದಂ ಪಡೆದು ।
ಕ್ಲೇಶವಂ ಕಳೆದ ಮಹಿಮಾಶರಧಿಯಂ ಪೊಗಳಲಾ
ಸಮಯಕಲ್ಲಿರುತಿಹ ॥
ಏಸೊಂದು ಜನರು ಜಯಘೋಷ ಮೆಸಗುತ ಹಿಂದ ।
ಕೀ ಸುದ್ದಿ ಬಲ್ಲರಾರೀ ಶರಣನಂ ಪೋಲ್ವ ।
ದೀಶನಾಗದು ಆದಿಶೇಷ ಪೊಗಳಲ್ಕರಿಯನೈ ಸಲೆ
ಸಲೆಯೆಂದರು ॥

೧೮

ಜನಪೊಗಳಿ ಪೋಗಲ್ಕೆ ಮನೆಮನೆಗೆ ಮುಂದೊಂದು ।
ದಿನ ಬಂದು ಶರಣಬಸವನ ಬಳಿಗೆ ದ್ವಿಜನೋರ್ವ ।
ತನುಜ ಲಗ್ನಕ್ಕಾದ ತನಗೊಂದು ಸಾಸಿರಂ ಹಣ
ಬೇಕು ಕೊಡುಯನ್ನಲು ॥
ಸನುಮತಿಸಿ ಕಿಲ್ಲೆಗೆಡಕಿನ ಕಬರಸ್ಥಾನ ಕ ।
ವನ ಕರೆಯುತೊಯ್ದು ಹುತ್ತಿನ ಬಳಿಯ ನಿಂದು ಭೋ।
ಕನಕವೇ ಬಾರೆಂಬ ನಿನದಾಲಿಸುತ ಕದ್ರುತನಯ
ಪೊರಿಯಕೆ ಬಂದುದು ॥

೧೯

ನೋಡಿ ಕಾಳೋರಗಂದೋಡುತಿರಲವಗೆ ಕೈ ।
ಮಾಡಿ ಕರೆಯುತ ಕನಕ ಬಾಡಬನ ಕೊಳ್ಳೆನಲು ।
ಕ್ಷ್ವೇಡಧರ ಮುಟ್ಟಲಿಕೆ ಕೇಡಹುದು ಕೊಂಡದೇಂ
ಮಾಡುವೆನು ತಾನೆಂದನು ॥
ಬೆಡಿದಿಡಲೊಲ್ಲೆನೆಂದಾಡುವದು ಸರಿಯೆ ನಾ ।
ನಾಡಲೇಂ ನಿನ್ನ ಮನನೋಡೆಂದು ಸರ್ಪಕ್ಕೆ ।
ಬೇಡ ಪೋಗೆನೆ ತಿರುಗಿ ಗೂಡುಬಿಲ ಸೇರುತಿರಲಾಡಿದನು
ಶರಣಪ್ಪನು ॥

೨೦

ಭೋಗಿಮುಖ ಕೆಳಗಾದುದೀಗಾದರುಂ ಕೊಳ್ಳಿ ।
ನೀಗದಿರು ಸೌಖ್ಯ ಬಲುಬೇಗಯನೆ ಧೃತಿತಾಳಿ ।
ನಾಗರದ ಪುಚ್ಛದ್ಧಿಂಭಾಗ ನಾಲ್ಕೈರಳ್ದಿಡಿಯಲಾಗಲದು
ಕನಕಾದುದು ॥
ಏಗೈವೆನಾನೆನ್ನ ಭಾಗಮಿನಿತಾದ್ದರಿಂ ।
ರಾಗದಿಂ ಶರಣೆಂದವಾಗಿನೊಳು ವಿಶ್ವಾಸ ।
ನೀಗಿ ದಿಟ ಕೆಟ್ಟೆನೆಂದ್ಹೋಗಲ್ಕೆ ಮನೆಗೆ ಜನ ಪೂಗ
ಶರಣನ ಮಹಿಮೆಯಂ ॥

೭೧

ಪರಿಪರಿಯು ಕೊಂಡಾಡುತಿರುತಿರಲು ಮತ್ತೊಮ್ಮೆ |
ಹರಸೂರ ದಿಗ್ಗಾವಿ ಗುರುಬಸವನಾಮ ಸಾ |
ಸಿರ ಕೊಟ್ಟು ಸಂತಾನ ಕರುಣಿಸೆನೆ ಖರ್ಜುರಂಕರ
ಕಿತ್ತೊಡವನು ಮನೆಗೆ ||
ಭರದಿ ತಂದದು ತನ್ನ ಹರದಿಗಿಡೆ ಗರ್ಭವಂ |
ಧರಿಸಿ ದಶಮಾಸದೊಳು ತರುಳನಂ ಪಡೆದು ಸು |
ಸ್ಥಿರ ಸೌಖ್ಯ ಸಂಪದದೊಳಿರುತವರು ಶರಣಂ
ಸಿರುತ ಭಜಿಸುತ ಮೆರೆವರು ||

೭೨

ಈಶಾರ್ಚನಂಗೈಯ್ಯುತಾ ಶರಣನಿರಲೊಂದು |
ವಾಸರದೊಳೈತಂದು ವೈಶ್ಯನೋರ್ವ್ವಹ್ಹಣವೆರಡು |
ಸಾಸಿರಂ ಗೊಂದೆರಡು ಕೂಸು ಪಾಲಿಪುದೆನ್ನಲಾ
ಶಿರ್ವಚಂ ಗೈದನು ||
ಮಾಸಧರ್ಮವು ತಡೆಯುತಾ ಸುದತಿ ಗರ್ಭದಾ |
ಯಾಸದಿಂ ಬಹುಳತರ ಕ್ಲೇಶದಿಂದಿರುತ ಪ್ರಾ |
ಣೇಶನಂ ಕರೆಯುತಾನೇಸುದಿನತಾಳ್ವೆನತಿ
ಬೇಸರೆನೆ ಕಾಯ್ತೆನ್ನಲು ||

೭೩

ಅದು ಕೇಳುತವ ಶರಣಪದ ಪಂಕಜಂ ಕಂಡು |
ಒದಿಸಿದೊಲು ಹಣವಿತ್ತು ಸುದತಿಗಾಯಾಸ ವಾ |
ದುದು ಪೇಳುತಿಂದೊಂದೆಸದು ಪುತ್ರನಂ ಪಾಲಿವುದು
ಯೆಂದು ಬೇಡಿಕೊಳಲು ||
ಆದಕೊಡಂಬಟ್ಟು ಪೋಪುದು ಮಗನೆ ನೀನಿನ್ನ |
ಸದನಕೆನೆ ಪೋದ ನಿಮಿಷದೊಳರ್ಧ ಗರ್ಭಾಗ |
ಲದುಭುತದುಭುತಮೆಂದು ಮುದವಂದು ತವ
ನಂದು ವಿಧವಿಧದಿ ಕೊಂಡಾಡಿದಂ ||

೭೪

ಮುಂದೊಂದು ಶುಭದಿನದಿ ನಂದನನ ಪಡೆದಳಾ |
ಸುಂದರಿಯು ಶರಣಪ್ಪನೆಂದು ಪೆಸರಿಡುತಲಾ |
ನಂದಪೊಂದಿರೆ ಶರಣನೆಂದಿನೋಲಿರುತಿರಲಿ ಕೊಂದು
ವಾಸರ ಮೊದಲೊಳು ||
ಬಂದು ಕಮಲಾಪೂರದಿಂದೋರ್ವ ಭಕ್ತಪದ |
ಕೊಂದಿ ಸಾಷ್ಟಾಂಗೆರಗಿ ತಂದೆಯುನಗೀರ್ವ್ವರಂ |
ನಂದನರಕೊಡು ಮುಡುಪು ತಂದಿಡುವೆನೆರಡು
ಸಹಸ್ರ್ಯಂದರೆರಡುತ್ತ್ರತ್ತ್ರಿಯಂ ||

೭೫

ಕೊಡುತ ನೀ ಖರ್ಜ್ಜುರಂ ಮಡದಿಗೊಂದೊಂದರೋ |
ಲ್ಕೊಡುಯೀರ್ವರಿಗೆ ಪೋಗು ನಡಿಯನಲು ಬಂದು ಕಿರಿ|
ಮಡದಿ ಕೈಯ್ಯೊಳು ಶರಣ ನುಡಿದುದಂ ಪೇಳಿಡಲಿಕ್ಕೊ
ಡನೆರಡುತಾ ಭುಂಜಿಸಿ ||
ಗಡ ಖರ್ಜುರೊಂದನಂಗಡಿಯಂದ ತರಿಸಿ ಹಿರೆ |
ಮಡದಿಗಿಡುತಂ ಗರ್ಭಪಡೆದು ಕಿರಿಯವಳು ಬಲು |
ಸಡಗರದೊಳಿರೆ ಪತಿಯು ಮಿಡುಕುತೀ ಪಿರಿಯವಳ
ಪೊಡೆಗಾಯಿತೇನೆನ್ನುತೆ ||

೭೬

ಚಿಂತಿಸುತಲಿರಲು ಕಿರಿಕಾಂತೆಯೊಂದಿನದೊಳೇ |
ಕಾಂತದೊಳು ಪೇಳಿದಳು ಕಾಂತಗೆಮುಗೀಗೊಂದೆ |
ಸಂತತಿಯು ಮುಪ್ಪುದದರಿಂದೆರಡು ಸಾಸಿರಾ ಸಂತನಿಗೆ
ಕೊಡಲೇತಕೆ ||
ನೀ ತಿಳಿವುದೆನಲಿದಂ ಮುಂದೆ ನೋಡುವೆನೆನ್ನು |
ತಂತಿರಲು ಹಡಿವದಿನವಂ ತುಂಬಿ ಬಹುಬೇನೆ |
ಯಂತಿಂಬುವಳ ನೋಡಿ ತಾಂ ತಡಿಯದಲೆ ಬಂದು
ಸ್ವಂತ ಶರಣನ ಪಾದಕೆ ||

೭೭

ಎರಗಿ ಸಾಷ್ಟಾಂಗ ಭೋ ಶರಣ ಸಜ್ಜನಕಲ್ಪ |
ತರುವೆ ಕರುಣಾಬ್ಧಿ ಶಂಕರರೂಪ ಸಲ್ಲಾಪ |
ಪರಮಪಾವನ ಪಾಹಿ ಪರಮೇಷ್ಟಿ ಪುರಹೂತ ಸುರ
ಮುಖ್ಯ ವಿನುತನೆಂದು ||
ಪರಿಪರಿಯು ಪೊಗಳು ತಂದರುಡಲಾ ಪೊತ್ತೆನಗೆ |
ಕಿರಿಯ ಪೆಂಡತಿ ಕಪಟನೆರಿ ತಿಳುಹುತಿದೆ ಪೊತ್ತಿ |
ಗೆರಡು ಸಾಸಿರಕೊಟ್ಟರೆರಡು ಸುತರಂ ಪಡಿವಿ ನಿರುತ
ಮದರೊಳಗೊಂದನು ||

೭೮

ಕೊಡಿಸು ಹಿರಿಯವಳಿಗದು ಕೊಡದಿರ್ದೊಡೆರಡೊಮ್ಮೆ |
ಮಡಿವಪೆನೆ ಕೇಳಿ ಗಡಗಡ ನಡುಗಿ ನುಡಿದನಿತು |
ಮುಡಪು ಒಪ್ಪಿಸಿ ಪರಕಿ ಪಡಕೊಂಡು ಬರುವನಿತಕ್ಕಡೆ
ದಿಹಳು ಸುಖರೂಪದಿಂ ||
ನಡೆನೋಡಿ ಶರಣಪ್ಪ ನುಡಿದ ತೆರನೊಂದು ಮಗು |
ಕೊಡಸಿ ಹಿರಿಯವಳಿಗತಿ ಸಡಗರದೊಳಿರುತಿಂಲು |
ಪೊಡವಿಜನ ಮಹಿಮನಂ ನಡಿಗಡಿಗೆ ಕೊಂಡಾಡಿ
ಮೃಡನಿವನೆ ದಿಟವೆಂದರು ||

೧೭೯

ಶಿವಶರಣ ಸರಸಿಜೋದ್ಭವಪುರದಿ ಸುಖಮಿರಲು ।
ಅವನಿಸುರನೋರ್ವ ವೈಷ್ಣವನದೇ ಪುರದೊಳಿರು ।
ವವನ ಪೆಂಡತಿ ಬಂದು ಆವನತಾಗಲು ಬಯಕೆ
ವಿವರಿಸೆನಲವಳೆಂದಳು ॥
ಕುವರನಂ ಕೊಡು ಸಾಸಿರವ ಕೊಡುವೆನೆನಲೊಪ್ಪು ।
ತವಳ್ಗೆ ಖರ್ಜುರ ಕೊಡಲು ಜವದೊಳೈತಂದಾತ್ಮ ।
ಭುವನದೊಳು ಪೆಲಿದೊಂದೆ ನವಮಾಸ ಪೆತ್ತುತಾ
ಸುವಿಲಾಸದಿಂ ಗಂಡಗೆ ॥

೮೦

ಶರಣನಿಗೈದಿಪ್ಪ ಪರಕೆಯಂ ತಿಳಿಸಲ್ಕೆ ।
ಘರಘರೀ ಹಲ್ಲರಿದು ಹರಿಸಮರ್ಥನ ಬಿಟ್ಟು ।
ಕಿರಕೂಳ ಮಾನವರಿಗೆರಗುವರೆ ದುರುಳೆನೀ ಪರಕೆ
ಗೈದಿಹ ಧನವನು ॥
ಗಿರಿ ವೆಂಕಟೇಶನಿಗೆ ಆರುಪಿಸುವೆನೆನೆ ಕೇಳಿ ।
ತರಹರಿಸಿ ಸತಿ ಸುಮ್ಮನಿರುತಿರಲು ಬಾಲಕಂ ।
ಗರುದಿಂಗಳಾಗಲ್ಕೆ ಹರುಷದಿಂ ತಾಯ್ತಂದೆ ಮರೆದ
ರ್ಹಿಂದಿನ ಚರಿತೆಯಂ ॥

೮೧

ಸಾರುವನ ಸತಿ ಬಾವಿನೀರು ತರುವಸಿತಕೆ ಕು ।
ಮಾರತೊಟ್ಟಿಲೊಳು ಬಾಯಾರುತೂರ್ಧ್ವಸ್ವಾಸ ।
ಸಾರುವೆದೆ ಬಿಳಿಗುರುಡೆ ತೋರುತಿಹ ಕಣ್ಣು ಬಲು
ಚೀರುತಿಹ ಸಂಕಟಸರಂ ॥
ನಾರಿಯದು ಕೇಳ್ದಂಡು ಧಾರುಣಿಗೆ ಕೊಡ ಬಿಸುಟಿ ।
ಮೋರೆ ನೋಡುತಲಿದಂ ನಾರಿಗ್ಹೇಳುವೆನು ಕೈ ।
ಮೀರಿತಯ್ಯೊಯೆಂದು ಘೋರ ಕುಚಬಾಯ್ಗಿಟ್ಟು ಸೀರೆ
ಸೆರಗಲಿ ಮುಚ್ಚುತೆ ॥

೮೨

ಎದೆಗವಚಿ ಕೈ ಪೆಗಲು ಬದಿಗೆ ಕೂಸಿನ ಹಚ್ಚಿ ।
ವದನದೊಳು ಮೊಲೆಯಿಟ್ಟರದು ಕುಡಿಯದಿರೆ ಕಾಣು ।
ತೊದರಿ ನೆರೆಯವರಿಗಿಂದಿದಕೇನುಗತಿ ಗೈವೆ
ವದಿಸಿರೆಂಬುತ ಕೇಳಲು ॥
ಸದನದಿಂ ಪೋದಪತಿ ಮುದವಸಿತ ಕೈತಂದು ।
ಮುದವಡಗಿ ರೋದಿಸುವ ಸುದತಿಯಂ ಕಾಣುತಣೆ ।
ಎದೆ ಬಡಿದುಕೊಂಡು ಕೋವಿದರಾದ ಮಂತ್ರವೌಷಧ
ಯಂತ್ರಗಳ ಮಾಡಿಸಿ ॥

೮೩

ತಾಂ ಕಾಣದಿರಲೊಳಿತಂ ಕೆಟ್ಟೆನೆಂದು ಮೂ ।
ರ್ಛೆಂ ಕೆಳಗೆ ಬಿದ್ದಿರಲು ವೆಂಕಟನೆ ಕನಸಿನೊಳು ।
ಭೋಂಕನೈತಂದೆಲವೊ ಮಂಕುಮನುಜನೆ ನಿರುತ
ಶಂಕರೆನಗಧಿ ದೈವತಂ ॥
ನೀಂ ಕೇಳು ಶಿವನು ಭಕ್ತಾಂಕಿತನುಮದರಿಂದ ।
ಶಂಕಿಸದೆ ಶರಣಪದ ಪಂಕಜಂ ಕಂಡು ಮುಡು ।
ಪಂ ಕೊಡಲು ಪೋಪುದೀ ಸಂಕಟಂಮೇಲೆ ಸಾಸಿರಂ
ಕೊಡುವದೆನಗೆನ್ನುತೆ ॥

೮೪

ಮರೆಯಾಗಲಾಗ ಕಣ್ದೆರದು ಹಣವಂದು ಸಾ ।
ಸಿರವೈದು ಸಲ್ಲಿಸುತೆ ಶರಣನ ಪದಾಬ್ಜದೊಳ ।
ಗೆರಗುತೆನ್ನಪರಾಧ ಪರಿಗಣಿಸದಲೆ ಕೃಪಾಕರ ಕರುಣದಿಂ
ಪೊರೆಯನೆ ॥
ಚರಣೋದಕಂ ಭೂತಿ ಕರಕಿತ್ತು ವೈದಿವಂ ।
ತರುಣಂಗೆ ಕುಡಿಸುಮೇಣ್ ಸಿರಿಯರಸ ವೆಂಕಟನ ।
ಪರಕೆ ಧಸಸಹಸ್ರ ಕೊಡು ಮರೆಯದಿರು ಪೋಗೆನಲು
ಭರದಿ ಮನೆಗೈತರುತಲಿ ॥

೮೫

ಶಿಸುವಿಂಗೆ ಧೂಳೋದ ಭಸಿತವಂ ಕೊಟ್ಟಕ್ಷಣ ।
ಸಸಿನಾಗಿ ತಾಯಿಮುಖ ಹಸಿತದಿಂ ನೋಡಿ ಮೊಲೆ ।
ಯಸವಸದಿ ತಿನುತಿರಲು ವಸುಧೆಯೊಳಗೀ ಮಹಿಮೆ
ಪೊಸತೆಂದು ಜನರೆಲ್ಲರು ॥
ಅಸಮ ಶರಣನಿಗೆ ಮಾನಿಸನೆಂದು ನುಡಿಯುವರ ।
ರಸನೆ ತಾ ಕೀಳ್ಕುಯೀ ರಸೆಯೊಳಗೆ ಬೀಳ ದಿವ ।
ಶಶಿಧರನೆ ನಿಜವೆಂದು ಕುಸುರನತಿ ಮುದವಂದನಿಶ
ಭಜಿಸುತಿರುತಿಪ್ಪನು ॥

೮೬

ಅಜಪುರದಿ ಶರಣಪ್ಪ ನಿಜ ಸೌಖ್ಯದಿಂದಿರಲು ।
ದ್ವಿಜ ಸ್ಮಾರ್ತನೈತಂದು ಸುಜನವಿನುತನ ಪದ ಶ ।
ರಜಕೆರಗಿ ತನ್ನಗಾತ್ಮಜನ ಕೊಡು ಮುಡುಪಿಡುವೆ
ರಜತ ನಾಣ್ಯವ ಸಾಸಿರಂ ॥
ನಿಜಮೆನುತ ಭಕ್ತಿಯಿಂ ಭಜಿಸುತಿರಲದ ಕೊಪ್ಪಿ ।
ತ್ಯಜಿಸು ಚಿಂತಿಯು ಕೊಡುವಗಜಮುಖನ ಪಿತನಡೆ ತ ।
ನುಜನೆಂದಾಶೀರ್ವದಿಸಲು ಜವದೊಳು ಮನೆಗೈದು
ರಜನಿಪತಿಮುಖಿ ಸತಿಗದಂ ॥

೮೭

ತ್ತಿಳುಹುತಲಿ ಖರ್ಜೂರ ಫಲ ಕೊಡಲು ಕೈಕೊಳುತ ।
ಸಲಿಸುತದು ಗರ್ಭವಂ ತಳೆದಿರುತಲೊಂದು ದಿನ ।
ದೊಳು ತನ್ನ ಪತಿಗೆ ಪೇಳಿದಳು ತಾಪೆತ್ತು ನಿಷ್ಫಲ
ಶರಣನಿಗೆ ಹಣವನು ॥
ತಿಳಿಗೇಡಿಯೊಲು ಕೊಟ್ಟು ಕಳೆಯದಿರುಯನುತಿಟ್ಟ ।
ಸ್ಥಲದಿಂದ ತೆಗೆದು ಧನವಲಿ ಮುಂದೆ ಪೂಳಿಟ್ಟು ।
ಕೊಳಲು ಪತಿ ತಾನಿಟ್ಟ ನೆಲದೊಳದುಮಿಲ್ಲದಿರೆ ಕಳ
ವಳಿಸುತಃ ಶೋಕದಿ ॥

೮೮

ಭರದೊಳೈತಂದದಂ ಶರಣಗರುಪಲು ಕೇಳಿ ।
ದುರಿತಿಲ್ಲ ನಿನ್ನ ಕಡೆತೆರಳುಯಿದ್ದವರುಣ್ಣು ।
ವರು ಕಾಂಬೆಯನಲೊಂದಿನಿರುಳವಳ್ಗೆ ಬೇನೆದ್ದು ತರ
ಹರದಿ ತಲ್ಲಣಿಸುತೆ ॥
ಧರೆಯ ಬಾಯ್ದೆರೆಯೆಂದು ನೆರೆಕಷ್ಟದಿಂದ್ಹೊರಳಿ ।
ಹರಣಗಳಗತಮಾಗೆ ಕರೆದು ಗಂಡಗೆ ಪೋಗಿ ।
ಶರಣಪ್ಪಗಿದನರುಹಿ ಪರಿಹರಿದಕೇನೆಂದು ಭರದಿ
ಕೇಳುವದೆನ್ನಲು ॥

೮೯

ಕೇಳುತವನೈತಂದು ಕಾಲಿಗೆರತುತಲಿ ಪೊರೆವ ।
ಬಾಳ ದೀನಾಪ್ತ ಸತಿ ಕಾಲನೊಶನಹಳೆನುತ ।
ಪೇಳಲೊಲೆ ಮುಂದಿನೊಳು ಪೂಳಿಟ್ಟ ಧನ ಕೊಡಲು
ಬಾಲನಂ ಪಡೆವಳೆನಲು ॥
ಜಾಲಮಾಡದಲೆ ದ್ವಿಜನಾಲಯಕೆ ಬಂದೊಯ್ದು ।
ಶೂಲಿಶರಣಗೆ ಕೊಟ್ಟು ಪಾಲಿಸೆನೆ ಚರಪಾದ ।
ಧೂಳೋದಕವಗಿತ್ತು ಬಾಳೆಂದು ಪರಸಿ ನೀನೇಳು
ಜವ ಪೋಗೆಂದನು ॥

೯೦

ಗಡತಂಪು ಧೂಳೋದಕ ಕುಡಿಸಲೊಂದರಕ್ಷಣದಿ ।
ಪಡೆಯೆ ಮಗನಂ ನೋಡುತಡಿಗಡಿಗೆ ಶರಣನಿಗೆ ।
ಪಡಿಗಟ್ಟಲಿನ್ನಾರು ಪೊಡವಿಯೊಳಗಿಲ್ಲವನ ಮೃಡನೆಂದು
ಕೊಂಡಾಡುತೆ ॥
ಸಡಗರದೊಳಿರಲೋರ್ವ ಜಡಜಭವಪುರ ಶರಣ ।
ನಡಿಗೆಯುಪ್ಪಾರೋರ್ವ ಬಡವಿಯೈತಂದೆರಗಿ ।
ಕೊಡು ತನಗೆ ಸುತನೆನಲು ಕೊಡದೆ ಸಾಸಿರ ಮಗನ
ಪಡೆವ ಬಗೆಯಂಥ್ಹೇಳನೆ ॥

೯೧

ಕಾಸು ಕೈಯ್ಯೊಳಗಿಲ್ಲ ಸಾಸಿರೆಲ್ಲಿಂ ತರಲಿ ।
ನೀ ಸಲಹು ಮನಬಂದ ವಾಸರೆಂದಡಿಗೆರಗಿ ।
ವಾಸಕೈತಂದು ಸಂತೋಷವರ್ಜಿಸುತ ಶರಣೇಶ
ಧ್ಯಾನದೊಳಿರ್ದಳು ॥
ಆ ಸುದತಿ ಚಿಂತಾಗ್ನಿ ನಾಶ ಗೈಯಲ್ಕೆನ್ನು ।
ಶೀಶನೆಡೆಬಿಡದೆ ತ್ರೈದಾಸ ಮಳೆಗರಿಸುತಿರ ।
ಲಾ ಸಮಯಕಿಚ್ಚಿಲ್ದೆ ದಾಸೋಹ ಸಿಲ್ವುದಂದಾಸಜನ
ತಿಳಿಸಲಾಗ ॥

೯೨

ಇಸಿತೇಕೆ ಚಿಂತೆ ಪ್ರತಿ ಮನೆಮನೆಗಳಂ ಪುಡುಕಿ ।
ಧನಕೊಟ್ಟು ತರುವದೆಂದೆನೆ ಕೇಳಿ ನಡೆತಂದು ।
ಎನಿತ್ಹುಡಿಕಿದರು ಸಿಗದೆ ಕೊನೆಗೆಯುಪ್ಪಾರವಳ ಮನೆಗೆ
ಗಮನಿಸುತವಳಿಗೆ ॥
ವನಿತೆಯುಳ್ಳೊಡೆ ಕೊಡು ಬೆರಣೆಯನಲಿಕವಳಾರಿ ।
ಗೆನುತೆ ಕೇಳುತ ತಿಳಿದು ಹಣಕೊಂದು ಕುರುಳೆಂದು ।
[ ಅನುಮತವ ತಿಳಿಸಲಾನಾರಿ ಸುಜನ ಬಂದು ನುಡಿದಾ
ಶರಣಬಸಪ್ಪಗೆ ॥ ]

೯೩

[ ಕುರುಳು ಬೇಡಿದಷ್ಟುಂಟು ಕೊಡುವೆ ಹಣಕೊಂದೆನು। ]
ತಿರುವಳೆನಲವಳಂತರರಿದು ನಿನ್ನಿಚ್ಛಿತಂ ।
ತರುಳೆ ಸಫಲಾದುದೌ ಕುರುಳು ಕೊಡುಯೆನಲಿತ್ತು ಪಡ
ಕೊಳ್ಳುತೆ ॥
ಶರಣನೆನ್ನುತ ನಾಮಕರಣಿಟ್ಟು ಅನವರತ ।
ಕುರುಳು ಕೊಡುವರಿಘೊಟ್ಟ ಕರುಳ ಕೊಡುವನೆಂದು।
ಸರವಾಜೋಗುಳಂ ಪರಿಪರಿಯು ಪಾಡಿ ಘನ ಹರುಷ
ದಿಂದಿರುತಿರ್ದಳು ॥

೯೪

ಬೆರಣಿ ಸಾಸಿರಕೋರ್ವ ತರುಣನಂ ಕೊಟ್ಟನೆಂ ।
ದರಿದೋರ್ವ ಘನರೋಗಿ ಬಿರುಕಾದ ಮೈಕಾಲು ।
ಕರದಿಂದ ಉದುರಿರ್ದ ಬೆರಳು ದಪ್ಪಾದ ಮೊಗಮಿರಿಮಿರಿ
ಯು ಮಿಂಚುತಿರಲು ॥
ಅರುಣಲೋಚನ ಮೂಗು ನೆರೆ ದೊಡ್ಡದಾಗಿರಲು ।
ಸರಬದಲು ಕೀವ್ರಕ್ತ ಸುರಿಯುತಿರಲದಕೆ ನೊಣ ।
ನೊರಜು ಪತ್ತಿರೆ ಬಂದು ಶರಣಬಸವನ ದಿವ್ಯ ಚರಣ
ಕಾನತನಾದನು ॥

೯೫

ಕಷ್ಟದಿಂದೂರ ನೆಲಮುಟ್ಟಿ ನಮಿಸಲ್ಕದನ ।
ಭಿಷ್ಟವಂ ನರಿದು ದಯಪುಟ್ಟಿ ಮುಂದಕೆ ಕರೆದು ।
ಶ್ರೇಷ್ಠನವನಂಗಕ್ಕೆ ತಟ್ಟಿ ಕೈಧೂಳೋದಕೊಟ್ಟು
ಕುಡಿಸಲ್ಕಾಗಳೆ ॥
ಕಷ್ಟವಂ ನೀಗುತಂದಷ್ಟು ಅಂಗುಲ ಚಿಗಿಯ ।
ತುಷ್ಟಿಯಿಂದೆದ್ದೆರಗಿ ಸಾಷ್ಟಾಂಗ ಮತ್ತೆರಗಿ ।
ಸೃಷ್ಟಿಯೊಳಗೀ ಮಹಿಮೆ ದೃಷ್ಟಿಯಿಂ ಕಂಡೆವೆಂದಷ್ಟು
ಜನ ಕೊಂಡಾಡಲು ॥

೯೬

ಸಾಧುನಿವನೀ ನಿನ್ನ ಪಾದ ನಿಜ ಭಕ್ತ ಸುರ ।
ಪಾದಪೆನಲೇನುಂಟು ಭೇದ ಸಲೆ ನೂತ್ನಮಹಿ ।
ಮೋದಯನೆ ದೀನಕರುಣೋದಧಿಯೆ ನೀನೆ ಘನ
ಮಾದೇವನಲ್ಲೆಂಬುತ ॥
ವಾದವಂಗೈವಗೆಮ ಬಾಧೆ ತಪ್ಪುವದೆ ನೀ ।
ನಾದಿಗಾದಿಯು ಸತ್ಯಬೋಧರೂಪಂ ವಿನುತ ।
ವೇದ ದಿಟ ದಿಟನೆಂದು ಮೋದದಿಂ ಪೊಗಳಿ ಮನೆ
ಗ್ಹೋದರೆಂದೆಂಬಲ್ಲಿಗೆ ॥

೯೭

ವರಪುರದ ಶಿವಲಿಂಗಶರಣಬಸವನಚರಿತೆ ।
ಗುರುಬಸವಣಾರ್ಯ ಪದಸರಸಿರುಹ ಲೀನಮಧು ।
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ॥
ವಿರಚಿಸಿದನೋದಿಸುವ ಬರೆದಗೋದುವಗೆ ಪರ ।
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ ।
ದೊರಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ಮನುಸಂಧಿಯನುಬಂಧಿಯು ॥

**ಸಂಧಿ ೧೪ ಕ್ಕೆ ಪದ ೧೨೧೫ ಕ್ಕಂ ಮಂಗಳಂ.**



ಶ್ರೀ ಶರಣಬಸವೇಶ್ವರ ಪ್ರಸನ್ನ

# ಹದಿನೈದನೆಯ ಸಂಧಿ

ಸೂಚನೆ॥ ಕ್ರೂರ ಸತಿಯರಿಗೆ ಸುಕುಮಾರರಿಡದ್ದಡಪಿಗಳ ।
ಚೋರರಂ ಚರಮೂರ್ತಿ ಚಾರರಂ ಕುಸುರರಿಗೆ ।
ಕ್ಷೀರಿತ್ತು ಪೊರೆದುಂಡು ಭೂರಿಶೇಷಂಗೌಪ್ಯಸೇರಿ ಮಹಿಮೆಯ ನಡೆಸುವಂ ॥

೧

ಅಜಯಜಿತಧ್ವಜ ವೃಷಭ ರಜತ ನಗಧಾಮ ಮನ ।
ಸಿಜ ವಿಜಿತ ಭುಜಗ ಶೃತಿ ಗಜಹನನ ಸೋಮಮುನಿ ।
ವ್ರಜ ಭಜಿತ ರಜನಿಪತಿ ನಿಜನಯನಭಿಮುಭವಗಜ
ಮುಖಷಡಾನನ ಪಿತಾ ॥
ಲಜನಿಜಾಂಬಕ ವಾತ ರುಜ ಜನನ ಲಯಧೂತ ।
ಸುಜನ ಜನ ಸಂಪ್ರೀತ ಶೃಜಿತಖಿಳ ವಿನುತಸುರ ।
ಕುಜ ವ್ರಜವಿದೂರ ದಶಭುಜ ಪಾತು ಶಿವಲಿಂಗ ತ್ರಿಜಗ
ಸಂತಸ ಶಾಂತಭೊ ॥

೨

ಧಾತ್ರಿ ಜನರೆಲ್ಲ ತವೆ ಸ್ತೋತ್ರಗೈಯ್ಯುವ ನೆವದಿ ।
ಪುತ್ರಿ ಪುತ್ರರಿಗಂತೆಯಿತ್ತು ಕುದುರಿಗೆ ನಾಮ ।
ಯಿತ್ತು ಶರಣಪ್ಪ ಶರಣಪ್ಪ ಶರಣೆಂದೆನುತುತ್ತ ಗೋ
ತ್ರರ ಕರೆವರು ॥
ನಿತ್ಯ ಸಹಸ್ರಾರು ಜನ ಪೂತ್ತು ಪರಕೆಯ ಸುತರ ।
ನೆತ್ತಿ ಜಾವಳ ತೆಗಿಸಿ ಮತ್ತೆ ಲಗ್ನೆಸಗುತುಣಿ ।
ಸುತ್ತ ಚರರಿಗೆ ನಿರುತ ತೃಪ್ತಿಯಂಕರಿಸುತಲುದಾತ್ತ
ಮಹಿಮನ ಪಾಡಲು ॥

೩

ಧರಣಿ ಮೇಲೆಲ್ಲ ಶಿವಶರಣಮುಪುವಾಪ್ತೆನಲು ।
ಹಿರಿಯಪ್ಪ ಹಿರಿಶರಣ ಕಿರಿಯಪ್ಪ ಕಿರಿಶರಣ ।
ತರುಳನಿಜ ಶರಣೋರ್ವ ತರುಳ ಶಿವಶರಣ ಮೇಣ್
ಶರಣಬಸವಪ್ಪೋರ್ವಗೆ ॥
ವರನಾಮದಿಂ ಕರೆವರೊಂದೊಂದೆ ಮನೆಯವರು ।
ಹರುಷದಿಂ ನಾಮದೊಳಗಿರುವ ಮಮತಿನಿತೆಂದು ।
ವರಣಿಸುವವಾರ್ಜಗದಿ ಶರಣಕ್ಷರತ್ರಯದಿ ಮರಣ
ಭವರುಜೆನಾಶವು ॥

೪

ಇನಿತಪ್ಪ ಘನ ಮಹಿಮನನುದಿನಂ ಲಿಂಗಪೂ ।
ಜನ ಭಜನ ಜಂಗಮಾರ್ಚನ ಮತ್ತೆ ದಾಸೋಹ ।
ಮನೆವಾರ್ತೆಯಾಗೆಯೆಂದಿನದೊಲಿರೆ ಮುಂದೊಂದು ದಿನ
ಮುಕ್ತಂಪೂರದ ॥
ವನಜಾನನೆಯಳಾತ್ಮಜನ ಪಡೆವ ಕಾಂಕ್ಷೆಯಿಂ ।
ದನುಕರಸಿ ಸ್ನಾನವಂ ವನಜಭವಪುರಿಗೆ ಬರು ।
ವನಿತರೊಳು ಮಾರ್ಗದೊಳು ವನಿತೆಯಿನ್ನೊಬ್ಬಾಕೆ
ತನುಜನಂನೆತ್ತಿಕೊಂಡು ॥

೫

ಕೆರೆ ಕಿಲ್ಲೆ ಮಧ್ಯದೊಳಗಿರು ಹಾದಿ ಹಿಡಿದು ಬರು ।
ತಿರಲು ಮಲಬಿಡಲವಳ ತರುಳ ಸೀರೆಯ ಮೇಲೆ ।
ಕರದಿಕೊಳ್ಳಕ್ಕ ನಾ ಭರದಿ ಸೀರೆಯ ತೊಳೆದು ಬರುವೆ
ನೆನಲವಳೆಂದಳು ॥
ಸಿರಿಗೇಡಿ ಹಟಮಾರಿ ಕರಿಯಾಡಿಗ್ಹೋಲುತಿಹ ।
ಶರಿರ ಸುಂಬುಳ ಜೊಲ್ಲು ಸುರಿವುತೆಡೆಬಿಡದೆ ಬಲು ।
ಕರೆ ಕರೆಯುಗೈವುದಕೆ ಕರ ಪಿಡಿಯಲಾರೆನಾ ನಿರಿಸದ
ಕೆ ಮಣ್ಣೊಳೆನುತೆ ॥

೬

ಘಳಿಲನವಳ್ಹೋಗುತಿರಲಿಳುಹಿ ನೆಲದೊಳು ಮಗನ ।
ತೊಳೆಯ ವಸನವನೆತ್ತಿಕೊಳುತವಳು ಬರುವಷ್ಟ ।
ರೊಳು ಬಂದು ಶರಣ ಪದನಳಿನಗಳಿಗೆರಗಿ ಮಂಗಳ
ಮಹಿಮ ನಿಜಭಕ್ತರಾ ॥
ಸುಲಭಸುತನಿತ್ತೆನ್ನ ಕಳುಹೆನಲು ಕೇಳ್ದಾರಿ ।
ಯೊಳು ಕೊಡಲು ಬಿಟ್ಟುಭೂತಿಳುಹೆನಲು ಕೌತುಕಂ ।
ದಳೆದೇನು ಗೈವೆನೆಂದಳುಕುತಿರೆ ಪುತ್ರವತಿ ಲಲನೆ
ಬರಲವಳಕಂಡು ॥

೭

ಈ ಕೂಸು ಕೊಟ್ಟರೆ ನಿರಾಕರಿಸುತೊಲ್ಲೆಂದು |
ದೇಕೆ ತ್ವರಪೇಳ್ ಪೇಳುರಾಕೆಂದುಮುಖಿ ನೀನು |
ಮೂಕಾದರೇಂ ನಿನ್ನ ಶೋಕ ಬಿಡುವವೆ ಕರ್ಮ
ಪಾಕಾಗದಿಹುದು ನಿನ್ನ ||
ವ್ಯಾಕುಲಂಬಿಡು ಸುತನ ಬೇಕೆಂಬ ಬಯಕೆಯಂ |
ಸಾಕುಮನದಿಂದದಂ ನೂಕು ಮನಿಗ್ಹೋಗು ನಿ |
ರ್ವ್ಯಾಕುಳದೊಳಿರು ನಿನ್ನಗೀ ಕಾಲದೊಳಗಜನ ರೇಖೆ
ತಾನಡ್ಡಾದುದು ||

೮

ಅದರಿಂದ ನಿನ್ನಗಭ್ಯುದಯಮಾಗದೆಂದು |
ಸುದತೆ ಪೋಗೆನಲವಳು ವದನ ಬಾಡುತಲೆದ್ದು |
ಸದನಕ್ಹೋದಳು ತನ್ನ ಹದನಕುರೆ ನಿಂದಿಸುತ ವಿಧಿಯ
ಸಲೆಬೈದು ಸುಯ್ದು ||
ಮದನಾರಿ ಬಲ್ಲನೀ ಸದುಶರಣ ಮಹಿಮೆ ನಾ |
ನಿದು ಕಾಣೆಹಿಂದಿಂದು ವಿಧವಿಧದಿ ಪೊಗಳಿ ಜನ |
ಪದಕೆರಗಿ ಪರಕಿಯಂ ಪಡೆದು ಪಡಕೊಂಡಾತ್ಮ
ಸದನಕೆ ಪೋದರು ||

೯

ನಿತ್ಯದೋಲಿರೆ ಶರಣ ಮತ್ತೊಂದು ವಾಸರದಿ |
ಕೊತ್ತಲಿಯ ಪುರದೋರ್ವ ಮತ್ತಕಾಸಿನಿ ತನ್ನ |
ಅತ್ತಿಗೆಯನೊಡಗೊಂಡು ಪುತ್ರನಂ ಪಡೆವೆನೆಂಬ
ರ್ಥಿಯಿಂ ಬರುವಾಗಲು ||
ಮತ್ತೆ ಮಾರ್ಗದೊಳಿಳಿದು ಬುತ್ತಿಯುಂಡೇಳಲವ |
ಳತ್ತಿಗುಣುತಿರುತಿವ ಪೊತ್ತವಳ ಕೂಸು ಕಾ |
ಡುತ್ತಿರಲು ಕರದಿದನ್ನೆತ್ತಿ ಕೊಳಲೆನಲವಳಿಗುತ್ತರಂ
ಗೊಟ್ಟಳಿನಿತು ||

೧೦

ವಸನವಗೆದುಟ್ಟಿ ನೀ ಕಸಮುಳನ ಕೊಳಲು ವೈ |
ಮುಸರಿಯಾಗ್ವದು ತೆಗೆ ಹೊಲಸವೆಂಬುದಂ ಕೇಳು |
ತಸವಸದೊಳುಂಡೆದ್ದು ರಸದಿಂದದೊಳಿದು ಜವ ಬಿಸಜ
ಭವಪುರಿಗೆ ಬಂದು ||
ಒಸೆದು ಸಾಷ್ಟಾಂಗ ಪೊಂದಿಸಿ ಪಾಡುತೆನಗೊಂದು |
ಶಿಸುವು ಕರುಣಿಸು ನಿಮ್ಮ ವಶಕಿಡುವೆ ಸಹಸ್ರೆನ್ನು |
ತುಸುರಲದು ಕೇಳುತಾಯಸ ಬಹಳ ಸುತರಿಂದ
ಸಸಿನಿರುವದಾ ಪಡೆಯದೆ ||

೧೧

ತನುಜನಂ ಕೊಟ್ಟೆ ನಾ ನಿನಗೆ ಮಾರ್ಗದೊಳಿಂದೆ |
ವನಿತೆಯೊಲ್ಲೆಂಬುತೀಗೆನಗೆ ಕೇಳುವದುಚಿತೆ |
ಹಣದಾಸೆಗಾಗಿ ದುರ್ಗುಣ ಕೊಲಿದರುಂಟೆ ಪಿಂದಿನ
ಪ್ರಮಥರೊಳಗೋರ್ವರು ||
ಉಣುತಾಡಿ ಗಾಲ್ಗೆಜ್ಜೆ ಝುಣರೆಂದು ನುಡಿಸುತಂ |
ಗಣದೊಳಡ್ಡಾಡ್ವ ಪರರುಡುಗರಂ ಕಂಡು ತವೆ |
ಹಣೆ ಹುಬ್ಬಗಂಟಿಕ್ಕಿ ಅಣಕಿಸುತ ತೆರದು ಲೋಚನ
ಔಡಗಚ್ಚೆಂಜಿಸಿ ||

೧೨

ಜನರೊಲುಮೆಗಾಗಿ ಪರರಣುಗರಂ ಕರೆದು ತಂ |
ಮಣಬಡಿಸುತೀ ಪಾಪಿ ತಿನುವದೆಷ್ಟವ್ವ ನೋ |
ಡೆನುತ ತುಟಿಮುಚ್ಚಿ ಕೈಗೊನೆ ಬೆರಳಿನಿಂದಾತ್ಮ
ಮನಸಿನೊಳು ಕಳವಳಿಸುತ ||
ಮನುಜರೆಡಬಲಮಿಲ್ಲದನು ಕಂಡು ಚಿವುಟಿ ಪ |
ಲ್ದಿನುತ್ಹೇಸಿ ಪಿಚ್ಚುಗಣ್ಣಿನ ಮೇಲೆ ಮಣ್ಣೆಂದು |
ಕನಲಿ ಕಾಡುವ ಹೊಲತಿಯನು ಮುಟ್ಟಲಾಗದಾ
ದನುಜೆಯವಳ್ನಿಜವೆಂದನು ||

೧೩

ಪರರ ಮಕ್ಕಳ ನೋಡಿ ಮರುಗುತಾಪಾಪಿ ಪುರ |
ಹರನು ಬಡವರಿಗೇಕೆ ತರುಳನಂ ಕೊಟ್ಟನುಡ |
ಲರುವಿ ಯಿಲ್ಲುಣಲನ್ನವರಿಗಿಲ್ಲಮಿವು ಹಂದಿ ಮರಿ
ಗಳಾಗಿವೆಯೆಂಬುತೆ ||
ಜರಿವುತವೆಕೆಕ್ಕಿಯುಮ್ಮುರಿದು ಮಸುವಟಿಗೆಯೋಳ್ |
ಗಿರಿಸಲೆನುತಾಡುತಲಿ ತರಹರಿಸಿ ಮೂರು ಚ |
ಪ್ಪರಗಲಿತ ಮನೆಗಳಿಗೆಯುರಿಹಚ್ಚಿ ದುರುಳಿಯರು
ನರಕಕ್ಕೆ ಗುರಿಯಾಗ್ವರು ||

೧೪

ದ್ವೇಷ ಧರವಲ್ಲಾರ ಕೂಸಿನೊಳಗವು ಕಂಡು |
ಹೇಸಬಾರದು ತಿಳಿಯಲೀಶನ ಪ್ರಸಾದವದು |
ಪೋಷಿಸುವವೈದೆಯಭಿಲಾಷಿಸುವದೇಳ್ಗೆಗೆ ವಿಲಾಸ
ನಾಟವು ಕಾಣುತೆ ||
ತೋಷಿಸುತ ವಸನನೊಡವಿ ಭೂಷಣಗಳಿತ್ತು ಮೃದು |
ಭಾಷಿಗ್ಹಿಗ್ಗದೆ ಕೇಳಿ ರೋಷವಂಗೈವಳಿಗೆ |
ದೋಷಮಲ್ಲದೆ ಸುಕೃತ ಶೇಷವೆಲ್ಲಿಹದು ಯಮ
ಶಾಸನೆಸಗುವ ನಿರುತದಿ ||

೧೫

ತನ್ನವರ ಸುತರಾಗಲನ್ಯರಾತ್ಮಜರಾಗ ।
ಲುಣ್ಣಿಸುತಲುಡಿಸುತಂ ಕಣ್ಣಿಂದ ಕಂಡ್ಹಿಗ್ಗಿ ।
ಭಿನ್ನ ತಿಳಿಯದೆ ಸಲಹಿ ಪುಣ್ಯಪಡೆಯಲ್ಕೆ ಮುಕ್ಕಣ್ಣ
ನೊಲಿಯುತ್ತಲವರಿಗೆ ॥
ಚಿಣ್ಣನಂ ಕೊಡುವ ನಿಜವನ್ನಂಬದಲೆ ನೀನು ।
ನಿನ್ನತ್ತಿಗಿಯ ಪುತ್ರನಂ ನೆತ್ತಿಕೊಳದಾದ ।
ರಿನ್ನಿನಗೆ ಸಂತತಿಯದಿನ್ನೆಲ್ಲಿ ಪೋಗೆನಲು ಖಿನನಾಗುತ
ವಳೋದಳು ॥

೧೬

ಜಡಜಭವಪುರದೊಳಗೆ ಮೃಡಶರಣ ದಾಸೋಹ ।
ಎಡೆಬಿಡದಲೆಂದಿನೋಲ್ ನಡಿಸುತಿರಲೊಂದು ದಿನ ।
ಹಡಪಿಗನ ಧರ್ಮಸತಿ ಕಡುರೂಪವತಿ ಚಾರು ।
ಉಡುರಾಜವದನೆ ಸೋಗೆ ॥
ಮುಡಿ ಬಿಂಬದುಟಿ ಸಿಂಗ ನಡು ಕೋಕಿಲಾಲಾಪೆ ।
ಜಡಜಲೋಚನೆಯು ಗಿಳಿಯನುಡಿ ಶಂಕಗೊರಳೆ ತೆಳು ।
ಪೊಡೆ ಕುಂಭಕುಚ ಹಸ್ತಿನಡೆ ಕಮಲಗಂಧಿ ಸೊಂಪಿಡಿದ
ಸೌಂದರರಾಸಿಯು ॥

೧೭

ಮತಿವಂತೆ ಚಾರುಪತಿವ್ರತೆ ತೋಷದಿಂದ ಸಂ ।
ಸ್ಮೃತಿಗೈಯ್ಯುತಿರಲವಳ ಪತಿಯೊಂದಿನಂ ಸುಭಾ ।
ಷಿತ ಗ್ರಂಥನೋರ್ವ ಪಂಡಿತ ಪೇಳುತಿರಲು
ಋಣಕೃತ ತಾತ ಶತ್ರು ಮತ್ತೆ ॥
ಸುತಮೂಢ ಜಾರಸದ್ಧತಿ ತಾಯಿ ಸತಿ ರೂಪ ।
ವತಿ ತನ್ನಪಗೆ ದಿಟಂ ಶೃತಿಸಿದ್ಧಮೆನಲು ಕೇ ।
ಳುತ ಮನೆಗೆ ಬಂದು ಸಲೆ ಖತಿತಾಳಿ ತನ್ನಾತ್ಮ ಸತಿ
ಬಗೆಗೆ ಯೋಚಿಸುತಲಿ ॥

೧೮

ರೂಪವತಿಯಿವಳೆನ್ನಗೇ ಪರಿಯೊಳಾದಡಂ ॥
ತಾಪಿಡುವಳೆನ್ನುತಾಳಾಪಿಸುತ ಕೊಲ್ಲಿದೊಡೆ ।
ಪಾಪ ಮದರಿಂದಂಗಲೋಪೆಸಗಲೆನ್ನುತ ನಿರಾಪರಾಧಿಗೆ
ಸುಮ್ಮನೆ ॥
ಕೋಪದಿಂ ಕೆಡಹಿ ಬಲು ಕೈಪೆಟ್ಟು ತಿನಿಸುತಿರೆ ।
ರಾಪುಗೈಯ್ಯದೆ ಬೇಡ್ದ ಳಾಪೊಳ್ತು ಸೆರಗೊಡ್ಡಿ ।
ನಾಪರಾಧಿಯ ನಾಥ ಪಾಡ್ವುದೆಂದು ತನ್ನೋಪನ
ಪದಂ ಪಿಡಿಯಲು ॥

೧೯

ಅವನದಕೆ ಮನ್ನಿಸದಲವಿವೇಕದಿಂ ನಾಸಿ ।
ಕವು ಕೊರೆವೆನೆಂದೆದ್ದು ಜವದಿ ಕತ್ತಿಯ ತರಲು ।
ಭವನದೊಳು ಪೋಗಲಾ ಅವಧಿಯೊಳು ಮೆಲ್ಲನಾಯುವತಿ
ಮನೆಹೊರಗಾಗುತೆ ॥
ಪವನಗತಿಯಿಂ ಬಂದು ಶಿವಶರಣ ಪಾದಗಳಿ ।
ಗವನ ತಾಗುತಲೆಲ್ಲ ವಿವರಿಸಲು ಕೇಳಿ ಬೀ ।
ಸುವರೊಳಗೆ ಕೂಡಿಸಲುನವಪನಿತರೊಳು ಬಂದು
ತವೆ ಕೋಪದಿಂ ಶಂಣಗೆ ॥

೨೦

ನುಡಿದನವಳೆಲ್ಲೀಗ ಅಡಗಿಪ್ಪಳ್ಹೇಳ್ತೆಂದು ।
ಪೊಡು ಕೈಗೆ ಮಾಜುತಲಿ ಕೊಡದಿರ್ದಡೆನ್ನ ತಲೆ ।
ಯೊಡೆದು ಕೊಂಬುವೆ ನಿನ್ನ ಅಡಿಯೊಳೆನಲೆದ್ದು
ನೀನ್ಹುಡಿಕಿಕೋ ಮನಸು ಬಂದಾ ॥
ಯಡೆಯೊಳೆಲ್ಲಿದ್ದರುಂ ಪಿಡಿದೊಯ್ವುದೆನೆ ಕೇಳು ।
ತೊಡನೆ ಶೋಧಿಸಲೆಲ್ಲ ಮಡದಿಯರು ತನ್ನ ಸತಿ ।
ಪಡಿಯಾಮದಂ ನೋಡಿ ಕಡುಸೋಜಿಗಂಗೊಂಡು
ಪೊಡಮಟ್ಟು ಶರಣಪ್ಪಗೆ ॥

೨೧

ದೇವಯಿಲ್ಲಿಪ್ಪ ರಾಜೀವ ಮುಖಿಯರೊಳು ಸತಿ ।
ಯಾವಳೆಂದಾನರಿಯೆ ನೀವೆ ಕರುಣದಿ ತೋರಿ ।
ಕಾಪುದೆಂದೆನುತೊಂದೆ ಭಾವದಿಂ ಬೇಡಿಕೊಳಲಾ
ವೇಳೆಯೊಳಗೆಂದನು ॥
ಈ ವನಿತೆ ವಿಷಯದೊಳು ಭಾವಿಸದಿರೆಂದ ದು ।
ರ್ಭಾವನೀಸಿವಳ ಗುಣ ನಾವು ಬಲ್ಲೆವು ಪೂರ್ಣ ।
ಸಾವಿತ್ರಿಗ್ಹೋಲುವಳು ಸಾವಧಾನದಿ ಕೇಳ್ವುದೀ
ವಚನ ದಿಟನಂಬೆಲೆ ॥

೨೨

ನೀತಿಯೊಳಗುಂಟೆರಡು ರೀತಿ ದುರ್ಬಳ ಸಬಲ ।
ಖ್ಯಾತಿವಚ ಬುಧರಿಂಗೆ ನೀತಪ್ಪ ವಚನಗಳೆ ।
ಪ್ರೀತಿಯಿಂ ಕೇಳುತಾ ಮಾತು ಮನಿಸಿಗೆ ತಂದು ತಾ
ತವೆ ವಿಚಾರಿಸುತಲಿ ॥
ಭೂತಳದೊಳಾಚರಿಸುವಾತನುತ್ತಮನವಗೆ ।
ಭೀತಿಯೇನುಂಟೆಲವೊ ನೀ ತಿಳಿದು ನೋಡದೀ ।
ಶೀತಕರ ಮುಖಿಯೊಡನೆಯಾತಕೀ ಪರಿ ನಿನ್ನ
ಕಾತಳಂ ಪೇಳ್ ಮೂಢನೆ ॥

೨೩

ಹಾದರದು ಹಾಲಿನಿನಿಸಿದಾದುದೆಂದೋರ್ವ ಸಂ |
ಪಾದಿಸುತ ಲಿಖಿಸಲದ ವೇದದ ಪ್ರಮಾಣವೆನ |
ಲಾದಿತೇಂ ತಿಳಿದವರೋದುತಿಹ ದುರ್ನೀತಿಗಾದರದಿ
ಮನ್ನಿಸುತ ನೀ ||
ಖೇದವಂ ತಾಳುತೀ ಸಾಧ್ವಿಯುಳ ನಾಸಿಕಂ |
ಗ್ವೊದರಿಂದು ಪುರುಷಾರ್ಥವೇ ದಡ್ಡ್ತನ ಬಿಟ್ಟು |
ಕಾದಲೆಯ ಕೂಡಿ ಸಮ್ಮೋದದಿಂ ಸಂಸಾರ ಸಾಗಿಸುವದು
ಹಿತವೆಂದನು ||

೨೪

ಇನಿತು ಬುದ್ಧಿಯ ಪೇಳಿ ಸನುಮತಿಸಿ ಕರೆಯುತಾ |
ವನಿತೆಯಂ ಪೋಗು ನಿನ್ನಿನಯನೊಡಗೊಂಡು ನೀ |
ಮನೆಗೆಸುತ ಕಳುಹಲಾಕ್ಷಣ ಸತಿಯರೆಲ್ಲ ಮುನ್ನಿನ
ರೂಪವಂ ತಾಳ್ದರು ||
ಜನರದಂ ಕಂಡು ನೂತನ ಮಹಿಮೆ ದಿಟವಿದೆಂ |
ದೆನುತ ಶರಣಪ್ಪನಾ ಘನತಿಂಗೆ ಪೋಲ್ವನಾ |
ವನು ದೇವರೊಳು ತ್ರೈಭುವನದೊಳೆನುತೊಲ್ದು ಸಲೆ
ತನಗೆ ಕೊಂಡಾಡುತೆ ||

೨೫

ಸರಸಿಜೋದ್ಭವನಿಗಿನಿತಿರುವದೇಂ ಸೃಷ್ಟಿಯಂ |
ವಿರಚಿಸುವ ಶಕ್ತಿ ಸೌಂದರಮನಡೆ ನುಡಿವದಂ |
ಸರಮಿನಿತರೊಳು ನಾಡೆಪರಕಿಪೊಡೊಬ್ಬನೋಲಿರ
ರೊಬ್ಬರೀ ಜಗತ್ತಿನೊಳು ||
ಹರದಿಯರ ಶತಮುಂದೆ ಪರಿಗೈದು ತೋರಿಸಿದ |
ನರರೆ ಈ ಧರೆಯೊಳಗೆ ಶರಣಬಸವನ ಮಹಿಮೆ |
ಸಿರಿದೆಂದು ಕೊಂಡಾಡಿ ನೆರೆವಿ ಜನ ಮನೆಮನೆಗೆ
ಪರಿದು ಪೋಗಲಿಕಾಗಳು ||

೨೬

ಕೀಲಾಲಜಭವಪುರದಾಲಯದಿ ಶರಣೆಂದಿ |
ನೋಲಿರಲು ಮುಂದೊಂದು ಕಾಲ ದೊಡ್ಡಪ್ಪನನು |
ಕೂಲಾಂಗಿ ಸುವಧು ಜನವೌಳಿ ಸುಶೀಲೆಯಘದಾಳಿ
ಗುಣಮಣಿ ಮಾಲೆಯು ||
ನೀಲಮ್ಮ ಶರಣನಿಗೆ ಕೇಳಿ ತವರೂರಿಂಗೆ |
ಬೀಳುಗೊಂಡಲ್ಲಿ ಕೆಲಕಾಲಿರ್ದು ತಿರುಗಿ ಬರು |
ವೇಳೆ ಭಗ ಮುಳುಗಿ ನಸುಕಾಳಾಗಲಶ್ವದಾ ಮೇಲ್ಕು
ಳಿತು ಬರುವನಿತದಿ ||

೨೭

ಜೇರಟಗಿ ದೇವಪ್ಪ ಕ್ರೂರ ಕೂಡೀರಾಯ |
ಚೋರರೀರ್ವರು ಆದೇ ದಾರಿಯೊಳು ಕಾದಿರ್ದು |
ಭೂರಿ ವಸನೊಡವಿಗಳ ಸೂರೆಗೊಂಡವಳುಟ್ಟ ಸೀರೆ
ಯೊಂದೇ ಬಿಟ್ಟರು ||
ನಾರಿಯಾಕಳ್ಳರಿಗೆ ಚೀರಿ ಪೇಳ್ದಳು ನಿಮಗೆ |
ಚಾರು ಶರಣನ ಪಥ ಸಾರಿರ್ದನೆನ್ನಲಂ |
ಕಾರ ಕೊಡಿರೆಂದ ನುಡಿಮೀರಿ ಕೊಡದಂತೆ ಕಾಂತಾರ
ಸೇರಿರೆ ದುಷ್ಟರು ||

೨೮

ಆಮೇಲೆ ನೀಲಮ್ಮ ಧಾಮಕೈತಂದು ಪದ |
ತಾಮರಸಕೆರಗೆಲ್ಲ ಸ್ವಾಮಿಗರುಪಲ್ಕೇಳಿ |
ತಾಮಸವ ಬಿಡು ಬೆಳಗು ಝಾಮ ನಿನ್ನೊಡವಿಗಳವೇ
ಮರಳಿ ಬಪ್ಪವೆಂದು ||
ಪ್ರೇಮದಿಂ ತಿಳುಹುತಾಭಾಮೆಯಂ ಸಂತೈಸೆ |
ಪಾಮರರು ತಮ್ಮಯ ವಿರಾಮಸ್ಥಲ ತಲ್ಪವನ |
ಕಾ ಮಡದಿಯಿಟ್ಟಾಣೆ ನೇಮಮೀರಿದ ಬಗೆಗೆ ರಾಮಣೀ
ಯಕ ಕಂಗಳು ||

೨೯

ಕಾಣದಿರುತಿರಲಿಕಾತಾಣದಿಂದೆದ್ದರಿ |
ನ್ನೇನಪ್ಪುದೋಯೆಂದು ಧ್ಯೇನಿಸುತ ತಮ್ಮೊಳಗೆ |
ಜಾಣೆ ತಮಗಿಟ್ಟಪ್ಪನಾಣೆಯಂ ನೆನಪಾಗೆ ದೀನರಕ್ಷಕ
ಶರಣನೀ ||
ಸೂನುಗಳು ನಿನ್ನವರು ಹೀನಕೃತಿಗೈದುದಂ |
ನೀನೆಣಿಸದಿಡಲಕ್ಷಿ ಭಾನೋದಯದಿ ಪಾದ |
ಕಾಣುತೊಡವೆಗಳು ಸ್ವಾಧೀನಕಿಡುವೆವು ನಿನ್ನಮಾನ
ನಿನ್ನ ಮಾನ ರಕ್ಷಿಪುದೆಂದರು ||

೩೦

ಸ್ತ್ರೋತ್ರಸಲೆಗೈಯಲ್ಕೆ ನೇತ್ರ ಬರಲೀರ್ವರಿಗೆ |
ಮಿತ್ರೋದಯದೊಳೆದ್ದು ಅರ್ಥಿಯಿಂ ಶ್ರೀಬೊಮ್ಮ |
ಕ್ಷೇತ್ರಕೈತಂದು ಮುಂದಿತ್ತೊಡವಿ ಪಾದಶತಪತ್ರ
ಕಾನತರಾಗಲು ||
ಪುತ್ರರೇ ಎಳೆರೆನ್ನುತ್ತ ದೊಡ್ಡಪ್ಪನಾ |
ಮಿತ್ರೆಯಂ ಕರದೊಡವಿ ವಸ್ತ್ರಮಂ ನೀನಿನ್ನ |
ವೆತ್ತಿಕೋಯೆನಲವಳು ಚಿತ್ತತೋಷದಿ ಕೊಳಲು
ಮತ್ತವರು ಕೊಂಡಾಡುತೆ ||

೩೧

ಪಡಕೊಂಡನುಜ್ಞೆಯಂ ನಡೆದು ಬಂದಿರುತಿರಲಿ |
ಕಡವಿಯೊಳುಸುಲಿವಾಗಲಿಡೆ ಶರಣನಾಣೆಂಜಿ |
ಬಿಡುತಿರುವ ಸುದ್ದಿಲ್ಲ ಕಡೆಗಾಗಿ ಜನರಂತೆ ನುಡಿಯು
ತಿರುತಿರೆ ಸರ್ವದಿಂ ||
ನಡೆಯದಿರಲುದ್ಯೋಗ ಬಿಡುತಮದುಕೃಷಿಕರ್ಮ |
ಪಿಡಿದು ಕೆಲಕಾಲವಂ ನಡಸುತಿರಲ್ಲಿಂದವರು |
ತಡುಗುವಾಳ್ಪಾಗಿನಿಂ ಪುಡುಕುತಿಪ್ಪರಸಾಳ್ಗಲೊಡನೈದು
ಮಿಚೋರರ ||

೩೨

ಕರಪಿಡಿದು ಕಟ್ಟ ಹೈದರಾಬಾದಿಗೊಯ್ಯುತಿರು |
ತಿರಲಾಗ ಕಟ್ಟುಸಹ ಶರಣನಲ್ಲಿಗೆ ಬಂದು |
ಚರಣಕಾನತನಾಗಿ ಕರುಣ ತಪ್ಪಿತು ಪೋಗಿಬರುವೆ
ವಪ್ಪಣೆ ಕೊಡಿರೆನೆ ||
ಮರುಗದಿರಿ ಮಕ್ಕಳಿರಾ ತಿರುಗಿ ನಿಮ್ಮನು ನಾನೆ |
ಭರದಿ ಕರಕೊಳುವೆನು ಹರುಷದಿಂ ಪೋಗೆನ್ನ |
ತಿರುಗುತಪ್ಪಣೆಕೊಂಡು ಸುರಿಸುತಲಿ ಕಣ್ಣೀರು ಚರ
ರೊಡನೆ ಪೋದರಾಗ ||

೩೩

ಕಳೆಯಲೊಂದಿನ ಮುಖ್ಯ ಕೆಲಸಗಾರನ ಕನಸಿ |
ನೊಳು ಶರಣ ಪೋಗಿ ಮಂಗಳ ರೂಪು ತೋರಿ ನೀ |
ತಳುವದೆ ಬಿಡಿವರೆನ್ನ ಒಲುಮೆ ಭಕ್ತರುಯೆಂದು
ತಿಳಿಸುತದೃಶವಾಗಲು ||
ಘಳಿಲನವನೆದ್ದು ಕಂಗಳ ತೆರೆದು ತಸ್ಕರರ |
ಬೆಳಗಿನೊಳು ಕರಸಿ ನಿಮ್ಮೊಳ್ಪಿಹಲೊಳಗೆ ಸಾಧುಜನ |
ತಿಲಕನಿಹನೇನಿದ್ದರೊಳಿತು ಪೇಳ ಲಕ್ಷಣಗಳು |
ಯಿರುವದೇಗೆಂದನು ||

೩೪

ಜಡೆಗದ್ದ ಮುಖದೊಳಗೆ ತೊಡೆಭೂತಿಯು ಕರದಿ |
ಪಿಡಿದಚಿತ್ತವು ಕೊರಳತೊಡವಕ್ಷಮಾಲೆ ಬಿಳಿ |
ಮಡಿಗಂಬಳಿಹೊದಿಕೆಯೊಡೆಯ ಶರಣೇಶನುತು
ಲವ ಕನಸಿನೊಳಗೆ ||
ನಡೆಕಂಡುದುದೆ ಕೇಳುತೊಡನವರ ಕೈಸೆರಿಪ |
ಬಿಡುಸುತವರಪ್ಪಣೆಯ ಕೊಡುತಲಿ ಸಲಾಮುಮಂ |
ಮೃಡಶರಣಗ್ಹೇಳೆನಲು ಗಡ ಹೊರಟು ಬಂದರಾ
ಜಡಜಭವ ಪುರಿಗಾಗಲೆ ||

೩೫

ಬಂದು ಶರಣಪಾದಕ್ಕೊಂದ್ದಿಸುತ ಚರಣ ಧಯ |
ದಿಂದ ನಮಗಾಯ್ತು ತಂದೆಯೀ ಗೊದಗಿದಡೆ |
ಬಂಧಮುಕ್ತರವು ತಮ್ಮಗೊಂದನನ ಪೇಳಿನವನೆಂದು
ಪೇಳುತ ವಾಸ ಕೈ ||
ತಂದು ಸತಿ ಬಂಧುಜನ ನಂದನರ ನೋಡುತಾ |
ನಂದದಿಂದಿರುತ ಧಯಸಿಂಧು ಶರಣನ ನಿರುತ |
ಒಂದೆ ಭಾವದಿ ಭಜಿಸಿ ಮುಂದಿರದೊಳಿರಲಿತ್ತಲೆಂದಿ
ನೋಲ್ ಶರಣಪ್ಪನು ||

೩೬

ಗುರುಲಿಂಗ ಜಂಗಮದ ಪರಿಚರ್ಯವಂ ಗೆಯ್ಯು |
ತಿರಲು ಮುಂದೆಂದುವಾಸರದಿ ಹೇಮಯ್ಯಸುರ |
ಪುರದವನು ನಾಡೆ ತಸ್ಕರನವನ ತಪ್ಪಿಂಗೆ ಸರಕಾರದಾಣ
ಲೆಯಲಿ ||
ಶಿರಗಡಿಯುಲೆಂದು ಕಲಬುರಗಿ ಮುಂಡಿಯ ಪಾಳ್ಗೆ |
ಕರಮೊಪ್ದು ನಿನ್ನದೇವರ ನಾಮಗೊಳೆನಲು |
ಶರಣಶರಣಪ್ಪ ಪರತರ ಶರಣಬಸವೇಶ ಗುರುವೆ
ಗತದೋಷನೆಂದು ||

೩೭

ಉರುಭಕ್ತಿಯಿಂದ ಸಂಸ್ಮರಣೆ ಗೈಯ್ಯುವಪೊಳ್ತು |
ಕರವಾಳ ಪಿಡಿದೆತ್ತಿ ಕೊರಳಿಗಿಡುತಿರೆಪೊಲ್ಲಿ |
ಸರಗಳಾಗುತಲಲಂಕರಿಸಲದು ಕಾಣುತಚ್ಚರಿಪಟ್ಟರೆಲ್ಲ
ಜನರು ||
ಸುರಪುಷ್ಪದ ಮಳೆಯುಗರೆದು ಜಯಜಯತೆಂದು |
ಶರಣನಂ ಪಾಡಿವರು ನರರೆಲ್ಲರದು ಕಂಡು |
ಸರಕಾರದವರವನ ಹರ್ಷದಿಂ ಬಿಡೆ ಬಂದು ಸರಸಿ
ಜೋದ್ಭವಗ್ರಾಮಕೆ ||

೩೮

ಶ್ರೀ ಶರಣವರ ಪದ ಕುಶೇಷಯುವ ಕಂಡೆರಗಿ |
ದಾಸಜನ ಭವ ಮರಣ ಕ್ಲೇಶಹರನಾ ನಿತು |
ದೋಷಗೈದವನೊಮ್ಮೆ ಧ್ಯಾಸಗೈದರೆ ಬಿಡದೆ ಘೋಷಿಸಿದ
ಘನಮಹಿಮನೆ ||
ಈಶ ನಿನ್ನನೇನಂಬಿ ತೋಷದಿಂ ಭಜಿಸುವರಿ |
ಗೇಸುಸುಕೃತಂಬುದಂ ಭಾಷಿಸಲು ಬಲ್ಲರಾ |
ರೀ ಸಕಲ ಭವನದೊಳು ಭಾಸುರಗತಾಶಮುವಧೀಶ
ಸದ್ಗುಣ ಕೋಶನೆ ||

೩೯

ಮಂಡಲದೊಳಿದರ್ಹಿಂದೆ ಕಂಡರಾರೀ ಮಹಿಮೆ ।
ಚಂಡಕರನಾತ್ಮ ಜನ ತುಂಡದೊಳಗಾದವನ ।
ಗೊಂಡರೊಡರೇಂ ಮರಳಿ ಖಂಡಿತೆಂದಖಿಳಜನ
ಕೊಂಡಾಡಿದರು ಜನ ॥
ತಂಡತಂಡದಿ ಪರುಷೆ ಗೊಂಡಜನ ಬಂದು ಪದ ।
ಪುಂಡರೀಕಕೆ ನಮಿಸುತಂಡಲಿಯುಕಳದು ಕೊಳು ।
ತುಂಡ ದಾಸೋಹದೊಳು ಪಾಂಡುರಂಗನೆ ದಿಟವನೆಂದು
ಪೋಪರು ನಿರುತದಿ ॥

೪೦

ಸುಲಭ ಶರಣಿರಲೆಂದಿನೊಂದಿನೊಲು ಸೌಖ್ಯದಿಂ ।
ಸಲಿಲಭವಭವಪುರದಿ ಸುಲೆಪೇಟಿ ಚರಮೂರ್ತಿ ।
ಗಳು ಬಂದು ಶರಣನಿಗೆ ತಿಳುಹಿದರುಮಿದರಿನಗ್ಗಳ
ಗೈವೆ ದಾಸೋಹವಂ ॥
ಬಲು ಘನ ಪುರಾಣ ನಡೆಸಲು ನಿನ್ನ ಕರೆ ಬಂದೆ ।
ನೆಲೆ ಶರಣ ನಡೆಯನ್ನಲಲಘುಮತಿ ಗುರುವೆ ಈ ।
ಗಳೆ ಸಾಗಿಸಲು ವಿಘ್ನನೆಲಸುವದು ದಿಟ ಮುಂದೆ ಕೆಲ
ದಿನದಿನೋಳ್ಪೆವಂತೆ ॥

೪೧

ಎನಲದಕೊಡಂಬಡದೆ ನಿನಗೇನು ತಿಳಿವದೆಂ ।
ದೆನುತ ಪುರಕ್ಹೋಗುತಲಿ ಘನಪುರಾಣವು ನೂರು ।
ದಿನಮ ವಿಘ್ನದಿನಡಸಿಮನಗರ್ವದೊಳು ಬೆರಸಿ ಜನರಿ
ಗಂದನು ಶರಣನಾ ॥
ಗಣಿಸದಾಂ ಗೈದೆನೆಂದಿನಿ ತಾಯಿತಿಲ್ಲಿದಿರ ।
ಲನುಮಾನದಿಂ ಬಿಟ್ಟುಋಣತಿರರದಿಷ್ಟು ಜನ ।
ವಿನುತಾದೆ ಭಳಿರೆಂದು ತನಗೆ ತಾ ಹೊಗಳೆಲ್ಲ ದಿನಸುಗಳ
ನೆರಹಿಕೊಂಡು ॥

೪೨

ಮೋದದಿಂದಲಿ ಗಣಾರಾಧನಂಗೈವಡದ ।
ರಾದಿದಿನದಲಿ ಮಹಾಪಾದ ಪೂಜನವು ಸಂ ।
ಪಾದಿಸುತಲಿರೆ ಹೊತ್ತು ಸಾಧಿಸುತ ಬಂದು ಪುಟ
ಭೇದನದ ಸುತ್ತಲೆಲ್ಲ ॥
ಬೇಪಾಡೆ ದಳಮುತ್ತಿ ಕಾದಿಸುಲಿಯುತ ಮಠ ।
ಕ್ಕೈದು ಸಂತರ್ಪಣಕೆ ಗೈದಸಾಹಿತ್ಯಲ್ಲ ।
ಸ್ವಾಧೀನ ಪಡಸಿಕೊಂಡ್ಹೋದರಾ ದುಷ್ಟರತಿ ಖೇದದಿಂ
ಚರಮೂರ್ತಿಯು ॥

೪೩

ಭರದಿ ಕಲಬುರಿಗಿಗೈತರಲೆದ್ದು ಶರಣಪ್ಪ ।
ಚರಣಕಾನತನಾಗಿ ಕರೆದುಕೂಡ್ರಿಸಿ ಬಂದ ।
ಪರಿಯೇನು ಕರಣದಿಂದರುಹೆನಲು ಕೇಳುತಾ ಚರ
ಮೂರ್ತಿಗಳು ಪೇಳ್ದರು ॥
ವರಭಕ್ತ ನಿನ್ನಧಿಃಕ್ಕರಿಸಿ ಪೌರಾಣಮಂ ।
ನೆರೆಗೈಯ್ಯಲೆನಿಗಿನಿತು ಪರಿಭವಣೆಯಾಯ್ತಿನ್ನು ।
ಮರುಗಿಸದೆ ಮನಬಂದ ಪರಿಗೈವುದೆನಲಾಗ ಗುರುವೆ
ಮೊದಲಿಗೆ ಪೇಳ್ದನು ॥

೪೪

ಆದರಿಸದೆನ್ನ ನುಡಿಗೈದಿದಂ ಕೆಡಿಸುತ ವಿ ।
ಷಾಧ ಪಡಲಿಂದಿನೇನಾದವುದು ಬಿಡಿ ನಿಮ್ಮ ।
ಪಾದ ಕರುಣಿದ್ದಂತೆ ಸಾಧಿಸುವಪಾಂಬರುವೆನ್ನೈ
ದಯಾನಿಧಿಯಂಬುತೆ ॥
ಐದು ಸುಲೆಗಾವಿಗಂದ್ಯೈದು ಮಾನಕ್ಕನಿತೆ ।
ಗೋದಿ ಪಿಷ್ಟಿಂದಡಗಿಗೈದಿರಿಸುತೆಲ್ಲ ಪುಟ ।
ಭೇದನದವರಿಗುಣಿಸಿ ಬೇಪಾಡೆನಂಕರಸುತಾದಂಡಿನವರಿ
ಗೆಲ್ಲಾ ॥

೪೫

ಎಡೆ ಬಡಿಸುತುಣಿಸಲಾ ಪಡಿನಾಯಕಂ ಗುರ್ತು ।
ಪಿಡಿದೆದ್ದು ಮೃಡಶರಣ ನಡಿಮೇಲೆ ಬಿದ್ದು ಯೀ ।
ಕಡೆ ತಾವು ಬಂದ ಪಡಿನುಡಿಯರೆನೆ ಪೇಳ್ದರಾನಡೆದ
ಸಂಗತಿಯೆವಲ್ಲಂ ॥
ಹುಡುಕಿದರು ಸಿಗದ ಪದ ನಡೆದು ಬಂದುದು ತನ್ನ ।
ಕಡುಭಾಗ್ಯವೆನುತ್ಹಿಗ್ಗಿ ಕೊಡುತಸಂಖ್ಯಾತ ಧನ ।
ಪಡಕೊಂಡನುಜ್ಞೆಯಂ ನಡೆಯಲವ ಧನವೆಲ್ಲ ಮೃಡ
ರೂಪು ಚರಕಿತ್ತನು ॥

೪೬

ನೆರದಜನರೆಲ್ಲಲಚ್ಚರಿವಟ್ಟು ಭಲ ಭಲಾ ।
ಶರಣೋರ್ವ ಸಾಮಾನ್ಯರನಾದೊಡೀ ಮಹಿಮೆ ।
ಜರಗುದೆಯಿವನಿರುವಧರೆ ಪುಣ್ಯ ಕ್ಷೇತ್ರಾತ್ರಪದ ಶರಜ
ಸೋಂಕಿರ್ದದುದಕವೆ ॥
ವರತೀರ್ಥ ನಿವನೊಲ್ದಕರುವೆ ಸುರತುರು ಮತ್ತೆ ।
ನೆರಳೊಳಗೆ ಕುಳಿತಾವ ಮರನಾಗಲಮು ದೇವ ।
ತರುವಾದ್ದರಿಂದಾರ್ಗೆ ಎರಗದಿಹ ತುರುಕರೇ ಚರಣ
ಕಾನತರಾದರು ॥

೪೭

ಬಸವಶರಣನಮಳಿವ ಬಸದಿ ಭಕ್ತರೆ ಮುಖ್ಯ ।
ರೊಸೆದು ಶರಣನೆ ಶರಣಬಸವನೆನಲೆಸ್ನುತ ।
ಶಶಿಕಲಾಧರನೆಯಿವ ಸುಧೆಯೊಳಗುದಿಸುತಹರ್ನಿಶಿ
ಮಹಿಮೆಯಂ ಮೆರಿಸುವಂ ॥
ವೃಷಭನಿವ ಶರಣನಿವನಸಮಾಕ್ಷ ನಿವನಿದಂ ।
ಪುಸಿಯೆಂಬ ಪಾಮರನರಸನೆ ಹುಳಿತದರಿಂದ ।
ಪೊಸಪುಳಗಳಂ ಸುರಿವ ಉಸುರಲೊಮ್ಮೀನಾಮ ನಸಿದು
ಭವಭಯ ಪೋಪುದು ॥

೪೮

ಎಂದ್ಹೊಗಳಿ ಜನತಮ್ಮ ಮಂದಿರಕೆ ಪೋಗಲ್ಕೈ ।
ತಂದು ಕಲಬುರಗಿಯೊಳಗೆಂದಿನೊಲು ಶರಣಿರೆ ಪು ।
ಳಿಂದ ವೆಂಕಟನಾಯಕೆಂದೆಂಬ ದೊರೆ ಭಕ್ತಿಯಿಂದ
ಸಾಸಿರ ಹಣವನು ॥
ಒಂದು ಮೌಕ್ತಿಕಹಾರ ತಂದೆ ಶರಣನಿಗೆ ಕೊಡ ।
ಲೆಂದಿತ್ತು ಸುರಪೂರದಿಂದ ಚರರಂ ಕಳಿಸ ।
ಲೊಂದೆ ಸಮ ನಡೆದ್ಹಾದಿಯಿಂ ದಣಿವುತಾಯಾಸದಿಂದ
ವೃಕ್ಷದ ನೆರಳೊಳು ॥

೪೯

ಕುಳಿತಲ್ಲಿಯಾಸುರಂಗಳಿವಾಗ ಮಾತು ತ ।
ಮ್ಮೊಳಗಾಡಿದರು ಕಾಲುಗಳು ನೊಯ್ವುದಂ ನಾವು ।
ಕಲಬುರಗಿಗ್ಹೋಗ್ಯೊಂದು ಘಳಿಗೆಯೊಳು ಹೋಳಿಗೆಗ್ಗಳ
ತುಪ್ಪವಂನುಂಡರೆ ॥
ಸಿಲುವುದಲ್ಲಿಂದ ಕಲಹೊತ್ತಿನೊಳಗೆದ್ದು ।
ಘಳಿಲನೈತರುವನಿತರೊಳು ಶರಣ ಮನೆಯೊಳಗೆ ।
ತಿಳುಹುತವರೆಂದುದಂಬಲು ತೀವ್ರ ಮಾಡಿಸುತ
ಸುಲಭನಿರೆ ಸಂತೋಷದಿ ॥

೫೦

ಅನಿತರೊಳು ಬಂದವರು ವಿನುತರಾಗುತ ತಂದ ।
ಹಣ ಹಾರ ಕೊಡೆ ಮೊದಲಿಗುಣರೇಳಿರಿಂದು ತಾ ।
ಮನೆಯೊಳಗೆ ಪೋಗಿ ತಂದ್ಹಣಿ ನೀರವರ್ಗೆ
ಭೋಜನಗೈಸಿದಂ ಬಯಸಿದಂ ॥
ತ್ರಿಣಿಯನಿವ ನಾವು ನಿರ್ಜನ ಪ್ರದೇಶದೊಳಾಡಿದನೆ ॥
ಘಣಿಸುತೆಮ್ಮ ಗತಿ ತಣಿಸಿದಲಾಯೆಂದು ।
ಮನದೊಳಗೆ ಹಿಗ್ಗುತದು ಜನರಿಗರುಪಲು ಕೇಳಿ
ತನ ತನಗೆ ಕೊಂಡಾಡಲು ॥

೫೧

ಚಾರುಶರಣನ ಮಹಿಮೆ ಸಾರ ತೇಜವು ನಿನ್ನ ।
ಮೀರಿಪ್ಪುದೆಂದಂದ ಸೂರಗರುಪಲ್ಕೆಂದು ।
ಚೀರುತಲನೇಕ ಮುಖಧಾರುಣಿಯು ತೆರದಳೆನೆ
ತೋರಿದವು ನೆಲಬೀಡುಗಳ್ ॥
ಸಾರಸಾಪ್ತನು ಕೇಳಿ ಸೈರಿಸಡೆ ಜೀವಕಾ ।
ಧಾರ ಜೀವನಮಾದ ನೀರನಿತನೆಲ್ಲೊಮ್ಮೆ ।
ಹೀರುತಾನೀಗಲೆ ವಿಚಾರಿಸುವೆ ಶರಣನ ಉದಾರೆಂದು
ಯೋಚಿಸಿದನು ॥

೫೨

ಇನನ ಉಪಟಳಕಂಜಿವನ ಬಹಳ ಸವಿದೋರಿ ।
ಜನರೊಡಲ ಪೊಕ್ಕು ಶರಣೆನಲಿರಿಸಿಕೊಳಲು ರವಿ ।
ಕನಲಿ ಕಾಡಲಿಕವರತನು ರೋಮ ರಂಧ್ರದಿಂ ಹನಿ
ಹನಿಗಳಾಗಿ ಪೊರಗೆ ॥
ತನತನಗೆ ಪ್ರವಿಸ್ಯದಕೆ ದಣಿಯದಲೆ ಉತ್ತರಾ ।
ಯಣನಾಗಿ ಜಗಕೆ ತಂಪಿನಗಾಳಿ ಕೊಡದೆ ಕರ ।
ವನಿತರಿಂ ಹಿಮವಂತನನು ಪಿಂದಕೊತ್ತಿ ತಾ
ಘನರೋಷದಿಂದಿರುವನು ॥

೫೩

ಖರ ಖರನ ಉರವಣಿಗೆ ಸಿರದಿ ಗಂಬಾಂಬೆಯಂ ।
ಧರಿಸಿ ಹಿಮವತ್ತು ವರತರುಳಿಯರ ಮೈಯ್ಯೊಳಗೆ ।
ಯಿರಿಸಿಕೊಂಡೆನು ಮತ್ತೆ ಹರಿತಾಳದಲೆ ಪಯೋ
ಶರಧಿಯೊಳು ಮೈಗರೆದನು ॥
ಪರಮೇಷ್ಟಿತಾ ಮೊದಲೆ ಸರಸಿಜೋದ್ಭವನಾದ ।
ಕರಿಯಾಸ್ಯನಹಿಗಳಂ ಶರಿರ ಭೂಷಣಗೈದ ।
ಸರಸತಿಯು ಕವಿ ವದನ ಮರೆಗೊಂಡಳಿದು ಪೂರ್ಣ
ವಿರಚಿಸುವ ನಾವನವನು ॥

೫೪

ಆ ಕಾಲದೊಳು ಜನ ನಿಶಾಕರನ ತಂಪಿಂಗೆ ।
ಹಾಕಿ ಪಾಸಿಕಿ ಪೊರಗೆ ನಾಕದೆಶೆ ನೋಡುತಲಿ ।
ಶೋಕಗಳಿಯಲು ಬದ್ದನೇಕರುಜೆ ಬಳಗವಂ
ಕೈಕೊಂಡು ನರಳುತಿಹರು ॥
ಏಕಾಂತ ಮುದ್ದಿಟ್ಟುರಾಕೇಂದು ಮುಖದೊಳಗೆ ।
ಕೋಕ ಕುಚಕಪ್ಪಿ ಹಿಮಪಾಕ ತಾಂಬುಲ ಸವಿದು ।
ಮಾಕುವರ ರತಿಯಸಗಿ ನೂಕುವರು ಉಷ್ಣಸಲೆ
ಸೌಖ್ಯ ಸದನಡಿ ರಸಿಕರು ॥

೫೫

ಕುಂದ ಕಲ್ಹಾರ ಮರುಂದ ಮಾಲಿಗಳು ಹರಿ |
ಚಂದನರಗಜವೆರೆದ ಗಂಧ ಮೈಯ್ಯೊಳು ಧರಿಸಿ |
ನಂದನಂಗಳೊಳು ನಡೆತಂದಿರುತ ಮುಡಿವಾಳದಿಂದೆಸಗಿ
ದಾಲವಟ್ಟ ||
ದಿಂದ ಬೀಸುವ ದಿವ್ಯ ಸುಂದರಿಯರೊಡಗೂಡಿ |
ಚಂದಳಿರ ಪಾಸಿಕೆಯೊಳ್ಹೊಂದಿರುತ ಮೈಯ್ಯೊಡ್ಡಿ |
ಮುಂದಮರುತಸಿಗೆ ಮಾಕಂದ ನೆರಳೊಳು ಭೋಗಿವೃಂದ
ಪೋಕ್ತಂಗಳಿವಮು ||

೫೬

ಒಣಗಿದವು ಸಲೆ ಕರೆವ ದನದ ಮೊಲೆ ಶಕ್ತಿಯಿಂ |
ಪಿಣುಕಿ ಹಿಂಡಲಿಕೊಂದ ಹನಿಹಾಲುಯಿಲ್ಲದೊಲು |
ಜನತರ್ಕದಧಿ ಬೆಣ್ಣೆ ನೆನಸಿ ಯತ್ನದಿ ತರಿಸುತುಣುತುಪ್ಪ
ರಾ ಕಾಲದಿ ||
ಇನಿತಾದ ಬೇಸಗಿಯ ಘನಕಷ್ಟಕಳೆಯಲೇಂ |
ದೆನುತೆಲ್ಲರುಂಬಯಸುವನಿತರೊಳು ಗ್ರೀಷ್ಮ ಭೀ |
ಷ್ಮನು ತಲೆಯದೋರಲೊಂದಿನ ಮಳಿಗೆಯೊಳಗೆ ಶರಣನ
ಮಹಿಮೆಯಂ ಪೇಳುತೆ ||

೫೭

ಕುಳಿತು ನೂರಾರು ಜನಗಳು ಮಾತನಾಡುನವ |
ರೊಳಗೋರ್ವ ನೊಂದೊಂದರೊಲು ಮಹತ್ವ ಪೇಳುತಂ|
ತಿಳಿಯುತಂ ತವೆ ಹೊಗಳಿ ಭಳಿ ಭಳಿರೆ ಭಾಪೆಂದು
ಕೊಳುತ ಶರಣನ ನಾಮವಂ ||
ನಲಿದು ಹಿಗ್ಗುತಲಿರುವರೊಳಗೋರ್ವನೆಂದನವ |
ಗ್ಗಳನವನು ಬೇಡಿದರೆ ಹುಲಿಗಿನ್ನಕೊಡುವನಿವ |
ಸಲೆ ಪರಬ್ರಹ್ಮವೆನೆ ಕೆಲ ವೈಷ್ಣವರು ಸಹಿಸದೆಲವೊ
ನೀ ನೀ ಪೊಳ್ತಿಗೆ ||

೫೮

ಹೆಮ್ಮೆಯಿಂ ನುಡಿದುದಿನ್ನೊಮ್ಮೆ ಹೇಳೇಲು ಪರ |
ಬೊಮ್ಮನಿತು ನರನಪ್ಪ ಸುಮ್ಮನೆಗಳಹದಿರು |
ನಮಗ್ಯಾಗ್ಹುಲಿಗಿನ್ನ ನಿಮ್ಮ ಶರಣನ ಕೈಲೆಯೆಮ್ಮಗಿನ್ನ
ವೇ ಸಾಕೆಲೆ ||
ತಮ್ಮ ಕೊಡಿಸೆನಲಿಕವ ಸಮ್ಮತಿಸಿ ಕರಕೊಂಡು |
ಬ್ರಾಹ್ಮಣ ನಿದಿರಿಗೆಲ್ಲಗಮ್ಮನೈತಂದು ಶಿರ |
ವಮ್ಮಣಿಯುತವರಂದುದುಂ ಮಾಜದುಸುರಿ ತಾವಮ್ಮ
ನದಿ ಕೊಂಡಾಡಲು ||

೫೯

ಕೇಳಿ ಶರಣಪ್ಪವಿದು ಮೌಳಿತಾಕೊಡುವನೆನು |
ತ್ತೋಳುವನಿತರೋಳ್ವ ಗೌಳಿಗನೆರಡು ಭುಜದ |
ಮೇಲೆ ಕರುಪೊತ್ತಿರಲು ನಾಲಿಗ್ಹೊರದೆಗಿದವನ ಕಾಲು
ತುಳಿಯುತ ಕೆಚ್ಚಿಗೆ ||
ಜೋಲಾಡುತಿಹ ಮಾಸು ಪಾಲ್ದುಂಬಿ ಬಿಗಿದ ಮೊಲೆ |
ಆಲಿಯವೆಯಿಕ್ಕದಂತಾಲೋಕಿಸುತದ ಕರುವ |
ಲೋಲಮನದೆಮ್ಮೆ ಸಹ ಜಾಲ ಮಾಡದೆ ಬಂದು ಆಲ
ಯದೊಳಂಗಣದೊಳು ||

೬೦

ಕರುಯಿಳುಹಿ ಬಂದು ಶ್ರೀಚರಣಕಾನತನಾಗಿ |
ಶರಣಬಸವನೆ ತನಗೆ ತ್ವರ ಚಂಬು ಕೊಡಿಸೀಗೆ |
ಕರುತಿನ್ನದದಕೆಮ್ಮೆ ಬರಗೊಡದು ನಾ ಮೊದಲೆಪರಕೆ
ಗೈದಿಹ ಕಾರಣಂ ||
ಅರುಹಲದು ಕೇಳುತಲಿ ತರಿಸಿ ಚರಿಗೆಗಳು ಭೂ |
ಸುರದಿಂದ ಶತಸಂಖ್ಯ ಭರದಿ ತಾನೆ ತನ್ನ |
ಕರದಿಂದಲ್ಹಿಂಡುತನಿಬರಿಗೆಲ್ಲ ತಂಬಿಗಿಗೆ ಪೊರಸೂಸು
ಮೇಲ್ಕೊಟ್ಟನು ||

೬೧

ಕಾಣುತದು ಭೂಸುರರು ಕೇಣದಿಂ ತಲೆಬಾಗಿ |
ನೀನೆ ಪರಬೊಮ್ಮನಿಜ ಸ್ಥಾಣು ಶಂಕರ ಸಚ್ಚಿ |
ದಾನಂದ ರೂಪ ಸುಜ್ಞಾನಿಯೆಂದರಿಯದಲೆ ಮಾನವನು
ಯೆನುತಾಡಿದ ||
ಹೀನವಚನಗಳಿಗಿನ್ನೇನು ನಿಷ್ಕೃತಿ ದೇವ |
ದೀನ ರಕ್ಷಕ ಪೊರೆ ದಯಾನಿಧಿಯೆ ನಾವ್ ನಿನ್ನ |
ಸೂನುಗಳ ದಿಟವೆಂದು ಗೋಣುಬಾಗುತ ತಮ್ಮ ಸ್ಥಾನಕೆ
ಪೋದರು ||

೬೨

ಹಿಂದೆ ಕಲ್ಯಾಣದೊಳು ನಂದೀಶಗೋರ್ವ ಚರ |
ಬಂದು ಬೇಡಲು ಕರುವಿನಿಂದ ಪಾಲ್ಗರಿಸಿರ್ದ |
ನೆಂದು ಕೇಳುತ ಬಲ್ಲೆವಿಂದು ನಾವ್ಕಂಡುದುದರಿಂದ
ಧಿಕ ತರವಾದುದು ||
ಒಂದೆಯಂ ಮ್ಯಾಲು ನೂರ್ಮಡಿಂಗಿಡುತಲಿ ತಣಿಸಿ |
ದಂ ದೇವಸಿವನೆ ದಿಟಕಿಂದುಧರನೆನುತ ಜನ |
ವೃಂದ ಪೊಗಳುತ ತಮ್ಮ ಮಂದಿರಕೆ ಪೋಗಲಾನಂದದಿಂ
ಶರಣಪ್ಪನು ||

೬೩

ನೀರಜೋದ್ಭವ ಪುರಾಗಾರದೊಳು ಗೈಯ್ಯುತಲಿ ।
ಭೂರಿದಾಸೋಹಮಿರೆ ಚಾರು ಶರಣಪ್ಪೊಂದು ।
ವಾರಪಂಕ್ತಿಯೊಳು ತವೆ ನೂರುಜನಸಂಖ್ಯೆಯಾ
ಚಾರ ಸಂಪನ್ನರೊಡನೆ ॥
ಸಾರಶೇಷಮ್ಮುಗಿದಡೋವರಿಂಗೆ ಮನ ।
ವಾರೆ ನೀಡಿಸಲು ವಶಮೀರಿ ಕೆಲಬಲ ನೋಡು ।
ತಾರ್ಕೈವುತವರಂದಿನಾರೋಗಣೆಸಗದಿರೆ ವಾರಿಗಣ್ಣಿಂ
ನೋಡುತೆ ॥

೬೪

ಚರರನಿತಕೊಮ್ಮೊಮ್ಮೆ ಶರಣಾರ್ಥಿಯೆಂದವರ ।
ವರಶೇಷ ಕೊಂಡು ನಿಬ್ಬರದಿ ಸಲಿಸುತ ಮೇಲೆ ।
ಗುರುಪದೋದಕ ಮುಗಿಯುತಿರಲದಂ ಕಾಣುತಚ್ಚ
ರಿವಟ್ಟರವರೆಲ್ಲರು ॥
ಧರಿಯಜನ ಕೇಳುತಾ ಪರಿಯಿನಿತು ಮಹಿಮೆಯಾ ।
ಗಿರುವ ದಿವನೇಕಾಲಹರನೆಂದು ಕೊಂಡಾಡು ।
ತಿರಲು ಮುಂದೊಂದಿನಂ ಶರಣನ ನಿಕೇತನಕೆ
ಚರನೋರ್ವನೈತಂದನು ॥

೬೫

ಪರಮಾಯಸದಿ ಬಂದು ಕರಚೂರಿ ಕೂಡುತಲಿ ।
ಶಿರಉಯ್ಯಲಾಡೆ ಪೊಡೆ ಸರಿದ್ದಿಂದು ಮುಂದೆ ತಿದಿ ।
ಪರಿಯಶಿಯ ಉಃಪೆನ್ನುತಿರದಂತೆ ಉಸ್ಸೆಂದು ಸರ
ಗದ್ಗದಂಗೈಯ್ಯುತೆ ॥
ಶರಣಜಯಮೆನಲವ ಕರಣ ಕೆರಗುತ ಬಂದ ।
ಪರಿಕೇಳಲವದಮ್ಮ ನಿರತ ಕಳಿಯುಂಬುದಂ ।
ಮರೆತು ಕೊಳಿಯನಲದಕೆ ಗುರುವೆ ಹಾಗಾಗಲೆನಗಿ
ರಲೆಂದು ಕೈಕೊಂಡನು ॥

೬೬

ನೆರೆದ ಜನರೆಲ್ಲರಚ್ಚರಿ ತಾಳುತಾವ್ದಿಂದ ।
ಕರಿದೆ ಪಾಮಾಮೃಡ್ಡಿ ಶರಣೆ ಮಲ್ಲಮ್ಮ ಶ್ರೀ ।
ಗಿರಿಮಲ್ಲಿಕಾರ್ಜುನನು ವರವು ಬೇಡೆನೆ ನಿನ್ನ ಚರಣ
ತನ್ನಯ ಶಿರದೊಳು ॥
ಇರಲೆನುತ ಬೇಳ್ಪದಂ ಮರೆದೆಂದಳೆನ್ನಪದ ।
ನಿರುತ ನಿನ್ನಯ ತಲೆಯೊಳಿರಿಸೆನಲು ಮೆಚ್ಚಿ ಶಂ ।
ಕರನಂತೆ ಗೈದುದಿಂದರೆಯಿದು ಕಂಡೆವೆಂದುರು
ತೋಷದಿಂ ಪೊಗಳುತಾ ॥

೬೭

ಒಂದೆ ಕ್ಷಣದೊಳು ಕೆಮ್ಮುಬಂದು ಶರಣನ ಕಾಯ ।
ಪೊಂದಿರಲಿಕಿವನುಚರನಂಪಾದನಾ ಚರನು ।
ಮುಂದಿನೋಲ್ಸದೃಢಾಗಿ ಮಂದಿರಕೆ ಬಿಜಗೈಯ್ಯಲಂದಿ
ನಿಂ ಶರಣಪ್ಪನು ॥
ಕಂದಿತನು ಕೊರಗುತಿರೆ ಬಂದು ದೊಡ್ಡಪ್ಪನವ ।
ಗೊಂದಿಸುತ ಪೇಳ್ದನೀವಂದುಗ ದೊಳಿರುವದೇಂ ।
ಚಂದವೆ ನಿಮುಗೆ ನಾನಂದು ತೋರಿಸಲೇಕೆ ಪಿಂದಗಣಿತರ
ಪೊರೆದೆಲಾ ॥

೬೮

ದಂದಶೂಕಂ ಮುಟ್ಟಿದಂದು ಜಂಗಮುಗುಳಿಸು ।
ತೊಂದೆ ಗೋಗಿನ್ನ ಬಹುಮಂದಿಗುಣಿಸಿದೆ ನೀ ಪು ।
ಳಿಂದರಂ ಪೊರೆದೆಯಾ ಬಂದೇನವಾಜನ್ನಿಗೆ ಗಂಧವಂ
ಧರಿಸಿರ್ದೆಲಾ ॥
ಇಂದುಧರನಾಣೆಟ್ಟು ಕಂದನಂ ತಡದೆ ಚರ ।
ವೃಂದದೊಕ್ಕುದ ನುಂಡೆಯೊಂದು ಕಾಳಿಲ್ಲದಂತೆ ।
ಯಿಂ ಧಾನ್ಯಸುರಿ ಬಹುಳಂಧರಿಗೆ ಕಣ್ಣಿತ್ತ ತಂದೆ
ನಿನಗೀ ವಿಧಿಯೆ ಹಾ ॥

೬೯

ಮುಡುಪಿಡುತ ಗರ್ಭವಂ ಪಡೆದವಂ ಕೊಡದಿರಲು ।
ಹಡೆವದಂತಡಸ್ಯದಂ ಕೊಡಲು ಪಡಸಿದೆ ಚಳಿಯು ।
ತಡೆಗೆ ಸೇರಿಸಿದೆ ಕಿವಿಗ್ದಿಡಿದ ಶೂಲಿಯ ಕಳದೆ
ಮಡಿದವರಿಗಸುವಿತ್ತೆಲಾ ॥
ಮೃಡನಿಂದೆ ನಿನ್ನರುಣ ಕೊಡಿಸುತಣಿವೀರನಾ ।
ಗುಡಿಯ ಕಲ್ಲಿತ್ತಿರ್ದೆ ಮಡಿ ಕಂಬಳೆಸಗಿ ಗೋ ।
ದಡೆ ಬದುಕಿಸಿ ಮತ್ತೆ ಕಡುಗನಿಂದೊಂದು ಗೋ
ಬಿಡಿಸಿದನಿಗೀಯೆಡರವೆ ॥

೭೦

ಭೂತಗಳ ಬಿಡಿಸಿದೆ ಕಿರಾತರಂ ಪೊರೆದೆ ಸಲೆ ।
ವಾತಶನಕನಕೆಸಗಿ ಪಾದ ಘೃತಗೈದೆ ನೀ ।
ಮಾತಿಲ್ಲದನ ಪೊರೆಯುತಾ ತರಂಗಿಣಿ ದಾಂಟ ಪ್ರೀತಿ
ಯಿಂದಲಿ ಚೋರರಾ ॥
ವ್ರಾತ ರಕ್ಷಿಸುತೋರ್ವ ಶೀತಕರ ಮುಖಿಗೆ ಮನ ।
ಸೋತು ಸಾಸಿರ ಬೆರಣೆಗಾತುಮಜನಿತ್ತೆ ಚರ ।
ನಾಥ ನಿಷ್ಠೆಯು ಸಲಿಸುತಾ ತುರುಕರಿಂಗೊಲ್ದನೀತ
ನಿನಗಿನಿತಾಯಿತೆ ॥

೭೧

ಸುರಪುರದ ಚರರಂತರರಿದುಣಿಸುತೊಂದು ಸಾ ।
ಸಿರಹಣಕಸಂಖ್ಯರಿಗೆ ತರುಳರಂ ಪದೆದಿತ್ತೆ ।
ಪುರುಷತ್ವ ಕಳೆದಿಲ್ಲದರಿಗಿತ್ತೆ ಸ್ತ್ರೀ ವೇಷಧರಿಸರಲಿಕ
ವರಿಗಂತೇ ॥
ಇರಿಸಿ ಮತ್ತೆರಗಲಿಕೆ ಕರುಣಿಸ್ಯೊಂದೆಸಿವ್ಹಾ ್ಯಲು ।
ಭರದಿ ನೂರ್ಜನಗಿತ್ತ ವರಮಹಿಮ ನಿನಗಿದೊಂ ।
ದರಿವೆರುಜೆಗಳೆವುದಂ ಪರಿತ್ಯಜಿಸಿ ನೀ ಸುಖದೊಳಿರು
ಯಂದೆ ದೊಡ್ಡಪ್ಪಗೆ ॥

೭೨

ಹಾಗೆ ತಿಳಿಯಲಿಕೆಂದಿಗಾಗದೆಲೆ ದೊಡ್ಡಪ್ಪ ।
ರೋಗಿಗಳು ಬಂದವಂ ನೀಗಿಸೆನಲವ ಕೊಪ್ಪಿ ।
ನಾಗಭೂಷಣನು ತಾನೆಗೈದ ನೊಳಿತಿಗಲ್ಲ ನೆರೆ ತಿಳಿ
ವಡೆ ॥
ಈಗಿದಂ ನಿನಗಿರುದಾಗಲೆಂದ್ಹೇಳಿರ್ದ ।
ಶ್ರೀಗುರು ನಿರೂಪವಂ ಹೇಗೆ ಮರೆಯುವೆ ನಲ್ಪ ।
ಭೋಗಕಾಸಿಸಿ ಗೌಪ್ಯಕ್ಹೊಗುವದೆ ದಿಟವೆನುತ
ರಾಗದಿಂ ಪೇಳುತಂತೆ ॥

೭೩

ನಾಳೊಂದು ಮಾಸಾದ ಮೇಲೆ ಬರುತಿಪ್ಪದಾ ।
ಫಾಲಗುಣ ತಿಂಗಳದ ಬಹುಳಪಂಚಮಿ ಶಿವನ ।
ಮೌಳಿವಾಸರ ಮುಕ್ತಿ ಕಾಲ ದಿಟವೆನಲದಂ ಕೇಳುತಾ
ದೊಡ್ಡಪ್ಪನು ॥
ಕಾಲಿಗೆರಗುತಲಿದೇಂ ಪೇಳಿದಪೆ ನಮಗಾರು ।
ಪಾಲಿಪರು ಮುಂದೆಮ್ಮ ಆಲಿಗೆದುರಿದು ಬೇಡ ।
ಆಲಿಸೈ ಸುಜನಾನುಕೂಲ ಸದ್ಗುಣಶೀಲ ಪಾಳಾಗ
ದಿರದೀ ಸ್ಥಲಂ ॥

೭೪

ಎನೆಕೇಳಿ ಶರಣೆಂಪನು ಕೇಳು ದೊಡ್ಡಪ್ಪ ।
ನಿನಗಿದರ ಚಿಂತೀತಕನುದಿನಂ ಗೌಪ್ಯದೊಳು ।
ಜನರ ಕಣ್ಮರೆಗಿದ್ದು ಘನ ಮಹಿಮೆಗಳ ತೋರ್ವೆನನು
ಮಾನತ್ಯಜಿಸೀಪುರಂ ॥
ದಿನದಿನಕೆ ಪೆಚ್ಚಿ ಮಠಮನೆಯು ಗುಡಿ ಗೋಪುರಂ ।
ಜನರಸಂದಣಿ ವಸನ ಕನಕ ಮಣಿ ಭೂಷಣಂ ।
ತನ ತನಗೆ ಗಜತುರಗ ಧನವೃದ್ಧಿಯಾಗುತೀ ಮನೆ
ವಿಭವ ಸಲೆ ಬೆಳೆವುದಂ ॥

೭೫

ಚಾರುನಾಟಕ ಸೂತ್ರಧಾರಿ ಮೊದಲಿಗ ರಂಗ ।
ಧಾರುಣಿಯೊಳು ಬಿನ್ನೈಸಿ ತೋರಿ ತೆರೆ ಮೊರೆಯಾಗಿ।
ಕಾರಣನಿತಂ ವೇಷದ್ಧಾರರಿಂ ರಚಿಸುವೊಲು ಸೇರಿ ಗೌಪ್ಯ
ದೊಳಿರ್ದನಾ ॥
ಸಾರ ನಿನ್ನಂಶ ಸುಕುಮಾರರಿಂಗುತ್ತರಧಿ ।
ಕಾರಿತ್ತು ನಡೆಸುವೆನು ಭೂರಿವರ ಮಹಿಮೆಗಳ ।
ನಾರತಂ ಬಿಡುಕ್ಲೇಶ ಸ್ಥೈರಣೆಯು ಗೊಳ್ಳೆಂದು ಬಾರಿ
ಬಾರಿಗೆ ಪೇಳ್ದನು ॥

೭೬

ಗುರುವೆ ನಿನ್ನಗಲಿ ನಾನಿರುವೆನೆಂತಕಟಯೀ ।
ಧರೆಯೊಳಗೆ ಪೇಳೆನಲು ಶರಣನಾಡಿದನು ತನ ।
ಗಿರುವ ಮೂಗಳ ಜೋಳದಋಣ ತಪ್ಪಿಸಿ ತನ್ನ ಕರೆದು
ತಂದಾದ್ದರಿಂದ ॥
ಮರೆಯೊಳಿರ್ದಾದೊಡಂ ಪೊರೆಯಬೇಕಾದುದ್ಮೆ ।
ನಿರುತ ನಿನ್ನಯ ಪರಂಪರೆ ವಂಶಕೆನೆ ಕೇಳಿ ।
ಶಿರಬಾಗಿ ದೊಡ್ಡಪ್ಪ ಚರಣಕಾನತನಾಗಿ ನೆರೆ ನಾಚು
ತಿಂತೆಂದನು ॥

೭೭

ಋಣವಾರದ್ಮೆ ನಿನಗೆ ತ್ರಿಣಯ ನೀನೆ ಶ್ರೈಭು ।
ವನಪಾಲಿಸುವ ಘನಕೆ ಘನ ಸರ್ವವ್ಯಾಪ್ತ ಕೊಡು ।
ವನುದಾರು ಕೊಳುವನಾರ್ತನಗೆ ತಿಳಿಯದು ನಿನ್ನ ಬಿನದ
ದೇವರ ದೇವನೆ ॥
ನಿನಗೆ ಭಕ್ತಾದವರಿಗಿಸಿತಾಡಿ ನಾಚಿಸುವ।
ದನು ಸಾಕು ನಾಕೊಟ್ಟ ನೆನಪಿಟ್ಟ ರಾಗಲೈ ।
ಚಿನುಮಯನೆ ರೌರವಂ ಶುನಿ ಗೂಗಿ ಕಿಟಯೋನಿ
ಜನನ ನಿಶ್ಚಯವೆಂದನು ॥

೭೮

ನೆರೆಕೊಟ್ಟ ಸದ್ಭಕ್ತ ಮರೆವುದದಹಿತ ಕೊಂಡ ।
ನರಮರೆಯಲಾಗದೆಂದಿರುವ ಶಾಸ್ತ್ರಾರ್ಥ ನೀ ।
ನರಿಯದುದೆ ಮರೆಯಿದಿರೆ ಹರುವಾಗುವುದು ಪುಣ್ಯ
ಮರೆದವಗೆ ನಿರುತಪ್ಪಮ ॥
ಸಿರಿಭೋಗ ಸಂತತಿಯು ವರಮುಕ್ತಿಯಾದ್ದರಿಂ ।
ದಿರುತ ಗೌಪ್ಯದಿ ನಿನ್ನ ಪರಿಪಾಲಿಸಲೆ ಬೇಕು ।
ಪರಿಪರಿಯಲೆನೆ ನಿನ್ನ ವಿರಹತಾಳುವದೊಂದೆ ನೆರೆ
ಕಷ್ಟ ತನಗೆಂದನು ॥

೬೯

ನೀಲಮ್ಮ ಬಂದೆರಗಿ ಕಾಲಿಗಿದುವರಿಗೆಮ್ಮ |
ಪಾಲಿಸುತಲಿರ್ದು ಸದಯಾಳ ಮಹತ್ವಂಗಳಂ |
ಲೀಲೆಯಿಂ ಬಹುಳಿಸಗಿ ಕಾಲಕ್ರಮಿಸುವರಿಗೀಯಾಲಯ
ದೊಳತಿಬೇಸರೆ |
ಬಾಲದರ ಮೇಲ್ಮುನಿಸೊವೌಳಿಗ್ಯೆದೆವೊ ತಾವು |
ಪೇಳಿರ್ದ ನುಡಿಮೀರಿ ಜಾಲ ಮಾಡಿದೆವೊ ಗುಣ |
ಶೀಲಧರ್ಮಕನಾನುಕೂಲಾದೆವೋ ತಮ್ಮ ಮೇಲೆ
ಸಿರ್ದಯವೇತಕೆ ||

೭೦

ತಂದೆನೀ ತಾಯಿನೀ ಬಂಧುಬಳಗ ನೀನೇ |
ಎಂದು ನಂಬಿರ್ವೆಮ್ಮನುಅದಾರ ಕೈಗಿತ್ತು |
ಪೊಂದುವಿ ಸಮಾಧಿ ದಯಸಿಂಧು ಪೇಳೆನಲವಳಿಗೆಂದನಾ
ಶರಣಪ್ಪನು ||
ನಂದನಿಯೆ ನಿನ್ನೊಂಶ ನಂದನನಿಗೊಲಿವುತಾ |
ನಂದದಿಂದವರ ಕಡೆಯಿಂದ ದಾಸೋಹವಂ |
ಎಂದಿನಂತೆಸಗಿಸುತ ಸಂದ ತೋಷದೊಳಿರುವೆ ಮುಂದಿ
ಕಣ್ಣಿಗೆ ಕಾಣದೋಲ್ ||

೭೧

ಬಿಡು ಚಿಂತೆಯೆಂದವಳ ಜಡಜಾಂಬಕದ ಬಾಷ್ಪ |
ತೊಡೆದು ಸಂತೈಸುತಲಿ ಮೃಡಕರಣ ದಾಸೋಹ |
ನಡಸುತಿರೆ ಮುಂದಿನೊಲು ಸಡಗರದಿ ವತ್ಸರದ
ಕಡೆಮಾಸ ಬಂದುದದರಾ ||
ನಡುಕೃಷ್ಣಪಕ್ಷ ಮೂರೆರಡು ಮೇಳದ ತಿಥಿಯು |
ಉಡುರಾಜ ವಾಸರದಿ ಬಿಡುತತನು ಸಾಯುಜ್ಯ |
ಪಡೆವೆನೆಂದವರಂದ ನುಡಿಯೊಬ್ಬರಿಂದೊಬ್ಬರೊಡನೆ
ಕೇಳ್ಯೆತಂದರು ||

೭೨

ಗೌಡದೇಸಾಯಿಗಳು ನಾಡೆಸಾಂಡಿಯರು ಮಹ |
ನಾಡ ಮಹಜನಶೆಟ್ಟಿ ಬೇಡುವರು ದಾನವಂ |
ನೀಡುವರು ನಾಮ ಕೊಂಡಾಡುವರು ಸುಸ್ವರದಿ
ಪಾಡುವರು ಸಲೆ ನಾಟ್ಯವಂ ||
ಆಡುವರು ಪೂಜೆಯಂ ಮಾಡುವರು ನಯನದಿಂ |
ನೋಡುವರು ವಿಧುಕಲಾ ಸೂಡಿದನ ಶರಣಜನ |
ಕೂಡೆಂಟು ದಿಕ್ಕಿಸಿಂದೋಡುತ್ಯೆ ತಂವರತಿಗಾಢ
ದಿಂದಖಿಳ ಜನರು ||

೭೩

ದೇಶಿಕರು ಚರಪಟ್ಟಧೀಶ ಮುಖ ಜಂಗಮರು |
ಭಾಸಮಾನ ವಿರಕ್ತರೀಶ ಜೀವೈಕ್ಯರಘೆ |
ನಾಶಕರು ಲಿಂಗಾಂಗದಾ ಸಕೀಲಂಬಲ್ಲ ತೋಷಚಿತ್ತರು
ಸರ್ವದಾ ||
ಕ್ಲೇಶನುದ ಮೋಹರಿದು ರಾಶಿ ಮತ್ಸರಲೋಭ |
ರೋಷ ಪರಿಸರ್ದ ಗುರುದಾಸಿ ಶಿವದಾಸಿ ಚರ |
ದಾಸಿ ಗಣದಾಸರೆಂಬೇಸು ಜನರಖಿಳ ಪುರವಾಸಿಗಳು
ಬಂದರಾಗಾ ||

೭೪

ಮತ್ತೇಭಗಾಮಿಯರುದಾತ್ತ ಗುಣಪೂರಿಯರು |
ವೃತ್ತಕುಚ ನೀರೆಯರು ಸತ್ಯವ್ರತ ನಾರಿಯರು |
ಚಿತ್ತಭವ ಸತಿಯಿಂದಲತ್ಯಧಿಕ ಸೌಂದರ್ಯವೆತ್ತ
ಕಮಲಾನನೆಯರು ||
ಮತ್ತಕಾಶಿನಿಯರರಿವುತ್ತಿಲಾ ಸುದ್ದಿಯಂ |
ದೆತ್ತಿತ್ತಣಿಂ ತಮ್ಮ ಪುತ್ರ ಪುತ್ರಿಯರನ್ನು |
ಎತ್ತಿಕೊಂಡ್ಯೆತಂದು ಮುತ್ತಿ ಶರಣನ ಮನೆಯ ಸುತ್ತೆಲ್ಲ
ನೆರೆದರಾಗಾ ||

೭೫

ರಾಕೇಂದು ವದನೆಯರು ಕೋಕಕುಚೆಯರು ಧನುಸ್ಯ |
ದಾಕಾರ ಪೂರ್ಬಿಯರು ಶ್ರೀಕಾರ ಕರ್ಣಿಯರು |
ಕೋಕಿಲಾಲಾಪ ಸೌಸ್ತೋಕ ಹಾಸ್ಯದ ದಂದಶೂಕಾ |
ಭವರವೇಣಿಯರ್ ||
ಮಾಕಂದದಳಿರಾ ಥರಾಕರ್ಣ ನಯನೆಯರ |
ನೇಕಲಂಕಾರದ ಮಯೂಖ ಪರಪುತ ಬಂದ |
ರಾಕಾಲ ಶರಣಪ್ಪನೈಕ್ಯಮಾದಪನೆಂಬುದಾಕರ್ಣಿಸುತ
ಭರದಲಿ ||

೭೬

ಬಂದುಜನ ಶರಣಪ್ಪಗೊಂದಿಸಲು ಮರುಳವರಿ |
ಗೊಂದಿಸುತ ನಿಮ್ಮ ದಯದಿಂದಿನಿತುದಿನ ನಿಮ್ಮ |
ಪೊಂದಿಪ್ಪ ಕಾಲಕೆ ನೊಂದಾಗೆ ಮರವಿನಿಂ ಕುಂದು
ಪೆಚ್ಚಂಗ್ಯೆದಿರೆ ||
ಒಂದೆಣಿಸದಲೆ ಪೊರೆವದಿಂದಿನಿಂದೆನ್ನ ತಾಂ |
ಬಂದ ದೊಡ್ಡಪ್ಪನಾನಂದದಿಂ ಕಾಣಲೇಂ |
ಸಂದೇಹಮಿಲ್ಲ ದಿಟವೆಂದಾಡಿದನು ನೆರೆದ ಮಂದಿಗಾ
ಶರಣಪ್ಪನು ||

೮೭

ಪೌರವರೆ ಕೇಳಿಂದು ಸೇರುವೆನು ಗೌಪ್ಯ ।
ನಾರೈಯ್ಯನದ ಸಾರುವೆನು ಹಿತವಚನ ।
ಸಾರತರದಷ್ಟದಶಪುರಾಣದೊಳಗೆ ನೆರೆವಿಚಾರಿಸಿದ
ರೆರಡೆ ವಚನಂ ॥
ಹೇರಳಂ ಪರರಿಗುಪಕಾರ ಗೈವುದೇ ಪುಣ್ಯ ।
ಕ್ರೂರತನದಿಂ ಪರರಗೋರಿಸುವುದದೆ ಪಾಪ ।
ವೈರಾಗ್ಯ್ವರಭಕ್ತಿ ಮೂರುಗುಣವುಳ್ಳವನೆ ಧಾರುಣಿ
ಯೊಳತ್ಯಧಿಕನು ॥

೮೮

ಶೃತಿಗಳಾಚಾರಮೋ ಪ್ರಥಮ ಧರ್ಮೆಂದು ಸಲೆ ।
ಖತಿಗೈಯ್ಯುತಿವೆ ಮರೆಯುತತಿಗಳೆದು ಕ್ರಿಯಧರ್ಮ ।
ಪತಿಕರಿರೆ ಪರರ ದುಷ್ಕೃತೆ ತ್ಯಜಿಸುವಾಚಾರ ಮತಿಭ್ರಷ್ಟರಿ
ಗದೆಂದಿಗೆ ॥
ಗತಿಯಿಲ್ಲ ನಿರುತಧಿಮತನಾತ್ಮ ಧರ್ಮದೊಳು ।
ರತಿಯುಳ್ಳವಿಹ ಪರಕೆ ಹಿತಮುಪ್ಪನದರಿಂದ ।
ಕ್ಷಿತಿಯೊಳು ಸದಾಚಾರ ಕೃತಕೃತ್ಯವೆಂದು ಜನತತಿ
ಗಾಡಿದನು ಶರಣನು ॥

೮೯

ಧಾರುಣಿಯೊಳಖಿಳ ಮತ ತಾರತಮ್ಯಂಗಳೊಳು ।
ನೀರಶೈವಧಿಕ ಗಂಭೀರನವನಿಂ ಸದಾ ।
ಚಾರ ಸಂಪನ್ನವಗು ಸಾರಲಿಂಗಾರ್ಚಕವಿಸ್ತಿರಿದವ
ನವನಿಂದಲೂ ॥
ಆರುವರಲಿಂಗಗಳಿಗಾರು ಶೇಷದಿ ತೃಪ್ತಿ ।
ಬೀರುವನು ಅವನಿಂದ ಧೀರನನವರತ ಭಾ ।
ವಾರು ಪಣಗೈವನಿದು ಪೌರಜನ ನಡಿಸೆಂದು ಭೂರಿ
ತೋಷದಿ ಪೇಳ್ದನು ॥

೯೦

ಕೆಡದಿರಳಿಯಾಶಿಂಗೆ ಕೊಡುತಮನ ನಾಂ ಪೇಳ್ದ ।
ನುಡಿಮರೆಯದೋಲ್ ನಿರುತ ನಡೆದು ಜೀವನ್ಮುಕ್ತಿ ।
ಪಡೆವುದದೆ ಘನಪಥಂ ಮೃಡಭಕ್ತರಾದರ್ಗೆ ಬಿಡುತೆ
ಕೇಳಿರಿ ಭ್ರಾಂತಿಯಂ ॥
ಷಡು ಸಮಾರ್ಜನವೆಸಗುತಿಡು ರಂಗವಲ್ಲಿ ಮೇ ।
ಲ್ಮಡಿಕಂಬಲಂ ಪಾಸಿ ತಡವಾಯಿತೆನಲೆಲ್ಲ ।
ರಡಿಗೆರಗಿ ಶೋಕಿಸುತ ಬಿಡಲೆಮ್ಮ ಕೈಯೊಡಂಬಡು
ವದೇಂ ಮನ ದೇವನೆ ॥

೯೧

ಶ್ರೇಷ್ಠ ನೀನೆಲ್ಲರಂ ಬಿಟ್ಟು ಪೋಗುವದುಚಿತೆ ।
ಸೃಷ್ಟಿಯೊಳಗಿನ್ನೊಮ್ಮೆ ಹುಟ್ಟುಸಾವುಗಳುಂಟೆ ।
ಸುಟ್ಟಸರವಿಯ ಕರದಿ ಮುಟ್ಟಲೇನಿರುವುದುರಿಗಿಟ್ಟರ್ದ
ಘನಸಾರದೋಲ್ ॥
ಕಷ್ಟಪಡಲೇನು ಅದೃಷ್ಟವಮೆಲ್ಲೊಂದು ದಿನ ।
ನಷ್ಟೆಂದು ಪೇಳ್ದುದಂ ದೃಷ್ಟಿಗೋಚರಗೈವ ।
ಡಿಷ್ಟ ನಿಮ್ಮದು ಪ್ರೇಮವಿಟ್ಟುಯಲ್ಲಿರ್ದೊಡಾಭಿಷ್ಟ
ಕೊಡುವದು ಭಕ್ತರಾ ॥

೯೨

ಮೃಡನಿಮ್ಮಗಿಚ್ಛಿತನ್ನಡಿಸುವನ ಚಿಂತೆಯಂ ।
ಬಿಡಿರೆನ್ನುತಾಡಿ ಸಲೆಮಡಿಯಾಗಿ ಭಸ್ಮವಂ ತೊ ।
ಡೆದು ಮೈಯೊಳಗಂತೆ ತೊಡುತಕ್ಷಮಾಲೆಗಳ ಪಡ
ಕೊಂಡು ಚರಣೋದಕಂ ॥
ಮೃಡಚರರ ಶೇಷವಂಗಡಗೊಂಡು ಗದ್ದುಗಿಗೆ ।
ನಡೆತಂದು ಶಿವ ಸಾಂಬ ಮೃಡ ಭವ ಭವಾನಿಧವ ।
ಜಡಜಾರಿಚೂಡ ಜಗದೊಡೆಯ ಜನ್ನವಿಮಾರ ಷಡು
ವದನ ವೀರ ಜನಕಾ ॥

೯೩

ತಾಮರಸಲೋಚನ ಪಿತಾಮಹಾ ಮುಖವಿನ ಮಿ ।
ತಾಮರಸಮೂಹ ಪದ ತಾಮರಸ ಧನ್ಯವರ ।
ತಾಮರಸನಗಭಕ್ತ ತಾಮಹರ ಸಲೆ ವಿಜಿತ ತಾಮಿಸ್ರ
ಕುಲಶಂಕರಾ ॥
ಧಾಮಕರ ಕರಕೋಟಿ ಧಾಮಸಜ್ಜನ ಪ್ರೇಮ ।
ಧಾಮರುಜೆ ಮೃತ್ಯುಹರಸೋಮ ಸಖವರ ಸೋಮ ।
ಧಾಮ ರೌಪ್ಯಾದ್ರಿ ಭವಭೀಮ ಪುರಹರ ಪರಂಧಾಮಪತಿ
ಸುತ ಶರವರಾ ॥

೯೪

ಕಮಲ ಶರಹರ ಕಾಲದಮನ ಶಿವ ಕಿಸಲಯೋ ।
ಪಮಚರಣನುತಕೀ ಕುದಮನ ದಯಸಾಗರಂ ।
ಕುಮುದಬಾಂಧವ ಭೂಷಣ ಮಲಹರಿ ಕೂಟಾಳಿ ಸುಮ
ಕೇಶಗಿರಿಜೇಶನೆ ॥
ತಮನಾಶ ಕೈವಲ್ಯ ದಮಹಿತಗ ಕೋದಂಡ ।
ಷಮುಖ ಕೌಮಾರಪಿತ ಗಮನಂದಿ ಕಂಠವಿಷ ।
ನಮಿತ ಕಾರ್ಪಣ್ಯಾಗತ ಸುಮನ ಸಾಧಿಪ ಸ್ತಮಿತ
ಭ್ರಮರಾಂಬ ಪತಿ ಪಾತುಮಾಂ ॥

೯೫

ಶ್ರೀಕರ ಮೃಗಾಂಕಕರಮಾಕುವರ ಹರ ಶಿವ ಸು ।
ಧಾಕರ ಕಲಾಧರ ಶುಭಾಕರ ಸುಶೀಲ ಮಹಿ ।
ಮಾಕರ ಮುರಾಂತನುತ ಸಾಕಾರ ಬ್ರಹ್ಮಂ ವಿಭಾಕ
ರಾಂಬಕ ಪಾಹಿಮಾಂ ॥
ಲೋಕೇಶ ಶಿರಕರ ಪ್ರಭಾಕರ ಪರೇಶನತ ।
ಪಾಕಾರಿ ಪದಭಕ್ತ ಶೋಕಹರ ಭವದೂರ ।
ಶ್ರೀಕಂಠ ಶಂಭು ಕರುಣಾಕರ ಪಾಲಿ ಜಗದೇಕದೈವತ
ಪರತರಾ ॥

೯೬

ದಿಗ್ವಸನ ದೀನದಯ ವ್ಯಾಘ್ರ ಚರ್ಮಾಂಬರಂ ।
ಋಗ್ವಾದಿ ವೇದನುತ ಉಗ್ರಭವ ಭೀಮ ಸಂ ।
ಮೃಗ್ವರಜಿತವಾಮ ರುಗ್ಗಣಾಧಿಪಚೂಡ ಭರ್ಗ
ಭವಭಯಮಾರಣಾ ॥
ಭೂಗ್ವಾತ ಭೂಷಣ ಪವರ್ಗ ಪ್ರದಾತ ಶಿವ ।
ದಿಗ್ವರಾನತ ಗಣೋದಗ್ರ ರವಿಚಂದ್ರಾಗ್ನಿ ।
ದೃಗ್ವಾಮ ದೇವಗರಳಗ್ರೀವ ಶಂಕರ ಸಮಗ್ರ
ಭಕ್ತೌಘ ಪಾಹಿ ॥

೯೭

ಮದನಹರ ರಜತಗಿರಿ ಸದ ದಶಭುಜ ಪಂಚ ।
ವದನ ವಾಸವವಿನುತ ವಿಧುನಳಿನ ವೈರಿಸಖ ।
ರದನಗತ ನಯನಜಿತ ಕುದನುಜಾಂತಕ ವ್ಯಾಘ್ರಕದನ
ಕಮಲಾಸನನುತ ॥
ಮುದನಟನ ಶೀಲ ಸತಪದನರ ಸುರಾಸುರ ಸು ।
ಬುಧನಿಕರ ಸೇವ್ಯಸುಮ ಮದನ ಸಂಪ್ರೇಮ ಸುರ ।
ಸದನ ಕೋದಂಡ ತೂಣುದಧಿನರವಾಹನ ಸುಹೃದ
ನಿರುತಮಾಂ ಪಾಲಯ ॥

೯೮

ಎನುತ ಕೊಂಡಾಡುತಲಿ ಗಣಃಂಥಿಣಿಗೆ ನಮಿಸಿ ।
ಮನು ಷಡಾಕ್ಷರಿ ರಸನೆಗೊನೆಯೊಳಗೆ ಜಪಿಸುತ್ತ ।
ಲನಘ ಜಂಗಮಪಾದವನು ಮಸ್ತಕದೊಳಿಟ್ಟು
ವಿನುತನಿರುತಿರಲು ಸರ್ವ ॥
ಜನರೆಲ್ಲರುಘೆ ಘರಾಕೆನುತ ಕೈವಾರಿಸುತ ।
ಘನಸಾರದಾರುತಿಯುಗಣಿತೆತ್ತಿ ತೆಂಗುಗಳು ।
ತನತನಗೆ ಒಡೆದು ಕರಪನಜದಿ ಸುಮಾಂಜುಳಿಯ
ಘನತೋಷದಿಂ ಸುರಿದರು ॥

೯೯

ನೆರೆದ ಜನಸಂದಣಿಯೊಳುರಿ ಕತ್ತಲಾಗಲದ ।
ಕುರಿವ ಕರ್ಪುರ ಬೆಳಗು ಪರಿದುದಂತಲ್ಲದಾ ।
ಶರಣಬಸವನ ವದನಸರಸಿರುಹವವರ್ಗೆ ದುಸ್ತರ
ವಿತ್ತು ನೆರೆ ಕಾಂಬೊಡೆ ॥
ನೆರೆ ತೆಂಗೊಡೆದ ನೀರು ಪರಿದುಕೆರೆ ಬೆರೆವುತಿರೆ ।
ಗುರುಬಸವ ಶಿವಬಸವ ಹರಬಸವ ನಾಮವು ।
ಚ್ಚರಿಸುತದರೊಳಗಾತ್ಮ ಪರಜೋತಿ ಬೆರಿಸೆ ಜನ
ಹರಹರ ಪರಾಕೆಂದರು ॥

೧೦೦

ಮೋದದಿಂದಲಿ ಗಣಾರಾಧನಂಗೈಸಿ ಸಲೆ ।
ಯೂದಿಸುತ ಬಾಜಿಸುತ ಲೋದಿಸುತ ಪೌರಾಣ ।
ವೈದು ಗೌಪ್ಯದ ಬಳಿಯೊಳೈದನೆ ಸುಮಾಂಜಳಿಯ
ಗೈದಿರಿಸಿ ಶಾಸ್ತ್ರೋಕ್ತದಿಂ ॥
ಪಾದಿವ್ಯ ಗೌಪ್ಯದೊಳು ಸಾಧು ಶರಣ್ಣರ ಹರ ಮ ।
ಹಾದೇವ ಜಯತೆನ್ನುತಾ ದೈವದವರು ಸಂ ।
ವಾದಿಸುತಲಿರೆ ಹುಮನಬಾದಿ ಹೇತೆತ್ರಿಸವೆರ್ೈದರಿದು
ಕಂಡೆಲ್ಲವಂ ॥

೧೦೧

ಭೂರಿಕೌತುಕವ್ಹಿಂದಿದಾರು ಕಂಡರಿಯರಾ ।
ಚಾರು ಶರಣಪ್ಪುಳುವಿಗಾರ ಪೋಗುವೆನೆಂದು ।
ಸಾರಿ ದರ್ಶನವಿತ್ತ ದಾರಿಯೊಳು ಕೇಳ್ದೆ ವೀಪೇರು
ನಿಮ್ಮಯ ಪರಕೆಯ ॥
ನಾರಿ ಕೇಳಾಧಿಪಳವಾರಿಗಿಡಲೆನಲಿಕಾ ।
ಗಾರದೊಳು ದೊಡ್ಡಪ್ಪಗೋರಂತೆ ಕೊಡಿರೆಂದ ।
ಸಾರ ಮಹಿಮೆಂದಿಡುತಲಾರುತಿಯ ಮಾಳ್ಪನಿತ
ಕಾರತದೋಳೋರ್ವ ಚರನು ॥

೧೦೨

ಘಳಿಲನೈತಂದೆಲ್ಲ ತಿಳುಹಿ ತವೆಯಾಶ್ಚರ್ಯ ।
ದಳೆದು ಶರಣಪ್ಪಿಂದಿನುಳುವಿಗ್ಹೋಗುವೆನೆಂದು ।
ಹವವಳದೊಳು ಭೆಟ್ಟ್ಯಾಗಿ ಸಲೆನಮಿಸಿ ಮೊದಲಾನು
ಸುಲೆಪೇಟ ಮಾರ್ಗದೊಳಗೆ ॥
ಶುಲಭನಿತ್ತಪನೆಂದ ಕಲಧೌತ ಸರಗಿಹಿರೆ ।
ನಿಲಯ ಮಾಡಿಹುದು ಬಡಗಲ ಮುಖದರೊಳಗಿಹುದು ।
ತಿಳುಹಿ ದೊಡ್ಡಪ್ಪನಿಂ ಕೊಳಿಯಂದನೆನಲದೇ
ಘಳಿಗೆಯೊಳು ನೋಳ್ಪನಿತಕೆ ॥

೧೦೩

ಇರಲಲ್ಲಿ ಕಂಡದಂ ಚರಗರ್ಪಿಸುತ ಕಳಹು ।
ತರರೆ ನಾವ್ ಸಾವಳಿಗೆ ಪುರದ ಶಿವಲಿಂಗೊಮ್ಮೆ ।
ಗೆರಡು ಸ್ಥಲದೊಳಗೊಂದೆ ಶರಿರದಿಂ ಗೋಪ್ಯದೊಳು
ಬೆರೆದನೆಂಬುದು ಕೇಳ್ದಿವು ॥
ಅರಿದುದಿಂದಿನವದೇ ಪರಿಯೆಂದು ಕೊಂಡಾಡಿ ।
ಶರಣಪ್ಪ ಸರ್ವಮಯ ನಿರುತ ಘನ ಮಹಿಮೆಗಳ!
ಮೆರೆಸಲೇಂ ಸಂದೇಹ ಮಿರದೆಂದು ತಮ ತಮಗೆ ಹರುಷ
ದಿಂದಿರುತಿರ್ದರು ॥

೧೦೪

ಶಶಿಕಲಾಧರ ದೇವವಿಸರ ನತಚರಣ ಶಿವ ।
ಕಸವರೋದರ ವಿನುತ ವಿಷಕಂಠ ದಕ್ಷದಿ ।
ಗ್ವಸನ ಶರಣೌಘ ದುರ್ವಸನಗಳಿತನವರತ ವಸುಧಿ
ರಥ ಗಂಗಾಧರ ॥
ದಶ ಶಿರಾರ್ಚಿತಸಾರ ರಸಜಾಕ್ಷ ಸಖ ಸದಾ ।
ಋಷಿ ಹೃದಯವಾಸ ಕರ್ಕಶ ಕಾಲಹನನ ಸಾ ।
ರಸ ಶರ ವಿನಾಶನಹರ್ನಿಶ ಸಕಲ ಜಗತಿ ರಕ್ಷಿಸು
ಗೌರಿವರ ಶಂಕರ ॥

೧೦೫

ಜಯತು ಶಿವಲಿಂಗ ಜಯ ಜಯತು ಧವಳಾಂಗ ಜಯ।
ಜಯತು ಮಾತಂಗ ಜಯ ಜಯ ಶೃತಿ ತುರಂಗ ಜಯ।
ಜಯತು ಸಜ್ಜನಸಂಗ ಜಯಮಾರಮದ ಭಂಗ
ಜಯತು ಗಂಗಾಧರ ॥
ಜಯ ಜಯತು ಶಿವಸರ್ವಮಯ ಭವಾಮೇಯ ಮರಣ।
ಭಯಲಯ ಸುಧಾಸೂತಿಹಯ ಸಪ್ತವಾತ ಸಖ ।
ನಯನ ಯತಿ ವಿನುತ ಚಿನ್ಮಯ ಭೂಮಿರಥ ಪಾತು
ವಿಯದಳಿಕ ಭುವನತ್ರಯಾ ॥

೧೦೬

ಇದು ಮೆಚ್ಚಲೆಂದು ಕೋವಿದ ಜನರಿಗೊಂದೊಂದು ।
ಪದದಿ ಪ್ರಾಸಕ್ಷರಂ ಹದಿನಾಲ್ಕರಂತಿಟ್ಟು ।
ಒದಿಸಿದೆನು ತೀವ್ರ ಸದ್ಬುಧರೊಲುಮೆಗಾಗಿ ಮೇಣ್ ।
ವದನ ಭೂಷಕ ರಸಿಕರ ॥
ಇದನಾರು ಭಕ್ತಿಲೋದಿದರೋದಿಸಲು ತಮ್ಮ ।
ಸದನದೊಳು ಸರ್ವಸಂಪದವಕ್ಕು ಪೇಳಿದರು ।
ಸದುಶ್ರದ್ಧೆಯಿಂದೆ ಕೇಳಿದರಪ್ಪುದವರಿಗಭ್ಯುದಯ
ನಿಶ್ಚಯ ನಿಶ್ಚಯಂ ॥

೧೦೭

ಶೃತಿ ಸಿದ್ಧಮೀಶರಣ ಕೃತಿಯೊಳೊಂದಕ್ಷರವ ।
ನತಿಭಕ್ತಿಯಿಂ ಕೇಳಲತುಳ ವೈಭವ ಪಡೆವ ।
ವ್ರತಶೀಲಧರ್ಮ ಪದ್ಧತಿಯಿಂದ ನಡಿವ ಮೇಣ್ ಮಿತಿ
ಯಿಲ್ಲದನಿತುರೋಗಂ ॥
ಹತವಾಗಿ ಬಹುಳ ಸಂತತಿ ಪಡೆವ ಮೂಢಧಿ ।
ಮತ ನಪ್ಪ ನಡೆಯವಾ ಕೃತಕ ಮಾರಣ ತಂತ್ರ ।
ಶತವರುಷ ಬಾಳ್ವನಪಮೃತಿಯಿಲ್ಲಮವಕೆಂದು
ಕ್ಷಿತಿಯೊಳತಿಬಳನಪ್ಪನು ॥

೧೦೮

ಈ ಶರಣಕೃತಿಯಾವದೇಶದೊಳಗಿರಲಲ್ಲಿ ।
ಕ್ಲೇಶ ದುರ್ಮೋಹ ದುರ್ದೋಷ ದುಷ್ಕೃತಿಗಳು ದು ।
ರಾಸೆ ದುರ್ಮರಣ ಭವಪಾಶ ಸಂಕುಳಮಿಲ್ಲವಾ
ಸವಸ ಕಾಲದಲ್ಲಿ ॥
ಸೂಸುವ ಸುವೃಷ್ಟಿ ಧರಣೀಶ ಧರ್ಮದಿ ಪ್ರಜೆರ ।
ಪೋಷಿಸುವ ಧನಧಾನ್ಯರಾಸಿ ಸುರಿವವುಯೆತ್ತಿ ।
ಕೂಸುಗಳ ತಿರುಗುವ ಸುವಾಸಿನಿಯರಿಂದ ಭೂ
ಭೂಷಿಸುವದತಿ ತೋಷದಿ ॥

೧೦೯

ಧರೆಯ ಜನರೆಲ್ಲ ಸುಖವೆರೆಸಲಿ ಸಕಾಲ ಮಳೆ ।
ಗರೆಯಲಿ ಸುಪುತ್ರಿ ಪುತ್ರರ ಪಡೆದುಕೊಳಲಿ ಶಂ ।
ಕರ ಭಕ್ತಿ ದೃಢವಿರಲಿ ಕರೆಯಲಾವ್ಯಮ್ಮೆ ಪಾಲ್
ಸಿರಿಸಂಪದಂ ಪಡೆಯಲಿ ॥
ಸುರಧರ್ಮದಿ ನಡೆಯಲರಿನಾಶವಾಗಲಿ ।
ಚರಿತನಿತಕಿಲ್ಲ ಸುರತುರುವಿನಂತಹುದಿದಂ ।
ಬರೆದೋದಿದವರ್ಗೈಸಿರಿಯಾಗಲೆಂದು ಸಲೆ ಪರಿಸುವನು
ಗುರುಲಿಂಗನು ॥

೧೧೦

ಉಪಲನಗರದ ಭಕ್ತರಪರೂಪ ಸುರಸ ಮಂ ।
ಟಪ ರಚಿಸಿ ಮುಗಿಯಲಿದಿರುಪವಾಸ್ತು ಶಾಂತಿ ಚರ ।
ರು ಪರಾಮುಗೈವನಿತಕ ಪರತರ ಶರಣಬಸವ
ಪುರಾಣ ಮುಗಿಸೆನ್ನಲು ॥
ಅಪದಾನಗೈವಗೇನಪರಾಧಮಿಲ್ಲೆಂದು ।
ಚಪಲತನದಿಂಗೈದೆನು ಪುರಾಣಮಿದರೊಳಗೆ ।
ಅಪಶಬ್ದ ಮಿರೆ ತಿದ್ದುತುಪಕೃತೆಸಗುವರೆಂದು
ಕೃಪೆ ಕೋರುವೆನು ಸುಜನರ ॥

೧೧೧

ಮಾಷಮುಶಗೈಸರುಂ ದೋಷಗತ ರಂದೊಂಟು ।
ರಾಶಿಯೊಳು ಭಂಗೆಸಗೆಲೇಸರ ಕವಿಗೆಂದು ।
ಘೋಷಿಸುವರಾಧ್ಯರಾಭಾಷಿ ನೆರೆನಂಬಿ ನಾಸೀ
ಶರಣಕೃತಿಗೈವಡೆ ॥
ಏಸೊಂದು ತಾಣದೊಳಗೀಶಾಕ್ಷರಂಗೈದೆ ।
ಕೇಶವಾಕ್ಷರವಂತೆ ಈಶ ವರ್ಣಸಗಿದೆನು ।
ತೋಷದೀ ಚರಿತೆ ಶಿವಶಾಸನದರಿಂದ ನಿರ್ದೋಷ
ಮೆನಲಾತಂಕಮೊ ॥

೧೧೨

ಮಾರಣಘ ಕುಲದ ಸಂಹಾರಣಾಮೆಯ ಮರಣ ।
ಪೂರಣಾರ್ಚಕ ಬಯಕೆ ಗೋರಣಾಚರಣೆಗೆಸ ।
ಮೀರಣೆಳೆಕಾಲದರ ದಾರಣಾಹಿತಿ ಕುಜನ ವಾರಣಂ
ಮೇಣ್ ಸತ್ಕುಲೊ ॥
ದ್ವಾರಣ ಭವಾಂಬುನಿಧಿ ತಾರಣ ಶಿವಾಧಿಕದ ।
ಚಾರಣಂ ಹರಸಮಯ ಪೂರಣ ಸುಧಾಕರಂ ।
ಧಾರುಣಿಯೊಳಿನಿತಕ್ಕೆ ರಾರಣಾಗಿಸ್ವದೀಣ ಪೌರಾ
ಜಗಕೆಲ್ಲಕೆ ॥

೧೧೩

ಶರಣೈಕ್ಯನಾದ ಮೇಲೊರೆದೆನೆಂಬೊಂಭತ್ತು ।
ವರುಷದೊಳು ಶಾಲಿವಾಹನುರೆ ಶತಕ ಪುರಾಶತ ।
ಬರಿಸ ಮೂವತ್ತು ಮೂರಿರುವ ಪಗೆ ಕೃತಸಂವತ್ಸರ
ದಾಸಡದೆ ಮಾಸದ ॥
ಶರಧಿಸುತ ಕಲೆಷೆಚ್ಚುತಿರುವ ಪಕ್ಷದ ದಶಿಮಿ ।
ಗುರುವಾರ ವೃದ್ಧ ಷಟ್‌ಚರದಿಂ ಸಿಧಿನಯುನ ।
ಪುರಚಂದ್ರ ಸಂಖ್ಯಗಣೆ ತಿರಿಸುತಲಿ ಸಂಪೂರ್ಣ
ವಿರಚಿಸಿದನೆಂಬಲ್ಲಿಗೆ ॥

೧೧೪

ವರಪುರದ ಶಿವಲಿಂಗಶರಣಬಸವನಚರಿತೆ ।
ಗುರುಬಸವಣಾರ್ಯ ಪದಸರಸಿರುಹ ಲೀನಮಧು ।
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ॥
ವಿರಚಿಸಿದನೋದಿಸುವ ಬರೆದಗೋದುವಗೆ ಪರ ।
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ ।
ದೊರಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ಹದಿನೈದನೇ ಸಂಧಿ ಇಂದುಧರನ ಮನಸಂಧಿ ॥

ಸಂಧಿ ೧೫ ಕ್ಕೆ ಪದ ೧೩೬೯ ಕ್ಕಂ ಮಂಗಳಂ.



# ಕಠಿಣ ಶಬ್ದಕೋಶ

## ಒಂದನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಕುಶೇಶಯ | ಕಮಲ | ೨ |
| ಬಿಲಾಶಯ | ಸರ್ಪ | |
| ಶಾರ್ವರೀಶ | ಚಂದ್ರ | |
| ರೋಚಿಷ್ಣೀಶ | ಅಗ್ನಿ | |
| ಸುರಪದಕೇಶ | ಆಕಾಶಕೇಶ | |
| ನಾರ್ತೆ | ಕ್ಷೇಮ | ೩ |
| ಆರ್ತೆ | ಅಕ್ಕರತೆ, ಉಪದ್ರವ | |
| ಸ್ಫೂರ್ತಿ | ಪ್ರಭಾವ | |
| ತುಹಿನಗಿರಿ | ಮಂಜಿನ ಬೆಟ್ಟ | ೬ |
| ಕಾಯದಲೆ | ಸಿಟ್ಟಾಗದಲೆ | |
| ಧೃಗುಕರ್ಣ | ಸರ್ಪ | ೮ |
| ದೇಶಿಕ | ದಿಕ್ಕಿಲ್ಲದ್ದು | ೧೦ |
| ತಾರಕನ | ಶಿವನ | ೧೭ |
| ಅವತಂಸ | ಧರಿಸಲ್ಪಟ್ಟ | ೧೮ |
| ಕರಜಾತ | ಶಿಷ್ಯ | |
| ಭಕ್ತಾಘರಣ್ಯ ದಾವಾ | ಭಕ್ತರ ಪಾಪವೆಂಬ ಕಾಡಿಗೆಅಗ್ನಿ | ೧೯ |
| ಭಾಮ | ಸೂರ್ಯ | ೨೦ |
| ಭೀಮ | ಕಲಿಭೀಮ, ಭಯಂಕರ | |
| ಸೋಮ | ಶ್ರೇಷ್ಠ, ಸೋಮಕವಿ | |
| ಸದ್ಮ | ಮನೆ | |
| ಧಾಮ | ಮಹಿಮೆ | |
| ತೆನೆ | ಕಲಶ | |
| ಲಾಘವ | ಸುಲಭ | |
| ಗಾಢ | ಅತಿಶಯವಾಗಿ | ೨೨ |
| ಈರ್ಬೈದರೊಂದು | ಹನ್ನೊಂದು | ೨೬ |
| ಚಾರುತರ | ಶ್ರೇಷ್ಠ | ೨೮ |
| ವರ್ಣ | ಜಾತಿ–ಅಕ್ಷರ | |
| ಸತ್ಕರ್ಮ | ಸದಾಚರಣೆ–ಕರ್ಮಪದ | |
| ಕ್ರಿಯಾಪದ | ಕ್ರಿಯಾಪಡ–ಆಚರಣೆ ಕಾರಣವಾಗುಳ್ಳ | |
| ಆರುಸಂಪದ | ಷಟ್ಪದಿ - ಭಕ್ತಾದಿ ಷಟ್ಸ್ಥಲ | |
| ನವರಸ | ಶೃಂಗಾರಾದಿ ನವರಸಗಳು - ಅಭಿವೃದ್ಧಿ - ಶುಭ ಸಂತೋಷ | ೨೮ |
| ಯತಿಪದವಿಭಕ್ತಿ | ವಿಶ್ರಾಂತಿಸ್ಥಲ - ವಿಭಕ್ತಿಪದ ನೀಯತಿಗಳ ಚರಣದಲ್ಲಿ ವಿಶೇಷಭಕ್ತಿ | |
| ಗಣ | ಮಗಣಾದಿ ಅಷ್ಟಗಣ - ಪ್ರಮಥಗಣ | |
| ಮಾತ್ರೆ | ಲಘು - ಗುರು - ಪ್ಲುತ | |
| ಈಡು | ಸಮಾನ | ೨೯ |
| ತೋಡು | ಸರಿ | |
| ಪಾಡು | ನಾಶ | |
| ರಾಗಿ | ಸಂತೋಷಿ | |
| ಪಾಗಿ | ಕುಶಲಗಾರ | |
| ವಾಗಿಗತಿ | ಭಾಷಣಕತಿ | |
| ಪೂಗ | ಸಮೂಹ | |
| ಆಗಮ | ಬರುವ | |
| ಸೋಂಬೇರಿ | ಸೋಮಾರಿ | ೩೦ |
| ಸೂರಿ | ಪಂಡಿತ | |
| ಭಾಸಾಂತ | ಸೂರ್ಯ | ೩೧ |
| ಆಸುರ | ಅತಿಶಯ | ೩೫ |
| ಶರ | ಧ್ವಾನ - ಬಾಣ | ೩೬ |
| ಅನಿಮಿಷರು | ದೇವತೆಗಳು - ಮೀನಗಳು | |
| ಅಹಿಮಕರ | ಸೂರ್ಯ - ಸರ್ಪ - ಮೊಸಳೆ-ಚಂದ್ರ | |
| ಭುವನ | ಬ್ರಹ್ಮಾಂಡ - ಭೂಮಿ | |
| ಕುಕ್ಷಿ | ಹೊಟ್ಟೆ | |
| ಮುನಿಸತಿ | ಲೋಪಾಮುದ್ರ - ಲೋಪಾ ಮುದ್ರನದಿ | ೩೭ |
| ಚಾಮಿಕರ | ಬಂಗಾರ | ೩೯ |
| ಮರುದೇಷ್ಟ | ಅಗ್ನಿ | ೪೫ |
| ಆಸಮಂತ | ಸುತ್ತಲು | ೪೬ |
| ಸಾಚಿ | ಡೊಂಕಾಗಿ | ೫೪ |
| ಜೀವನ | ಪರಮಾತ್ಮ | ೫೭ |
| ಭಾವ | ಸತ್ಯನಾದ | |

೧೧೧

ಮಾಷಮಶಗೈಸರುಂ ದೋಷಗತ ರಂಡೊಂಬು ।
ರಾಶಿಯೊಳು ಭಂಗೆಸಗೆಲೇಸರ ಕವಿಗೆಂದು ।
ಘೋಷಿಸುವರಾಧ್ಯರಾಭಾಷಿ ನೆರೆನಂಬಿ ನಾಸೀ
ಶರಣಕೃತಿಗೈವಡೆ ॥
ಏಸೊಂದು ತಾಣದೊಳಗೀಶಾಕ್ಷರಂಗೈದೆ ।
ಕೇಶವಾಕ್ಷರವಂತೆ ಈಶ ವರ್ಣಸಗಿದೆನು ।
ತೋಷದೀ ಚರಿತೆ ಶಿವಶಾಸನದರಿಂದ ನಿರ್ದೋಷ
ಮೆನಲಾತಂಕವೊ ॥

೧೧೨

ಮಾರಣಘ ಕುಲದ ಸಂಹಾರಣಾಮೆಯ ಮರಣ ।
ಪೂರಣಾರ್ಚಕ ಬಯಕೆ ಗೋರಣಾಚರಣೆಗೆಸ ।
ಮೀರಣೆಳೆಕಾಲದರ ದಾರಣಾಹಿತಿ ಕುಜನ ವಾರಣಂ
ಮೇಣ್ ಸತ್ಕುಲೊ ॥
ದ್ದಾರಣ ಭವಾಂಬುನಿಧಿ ತಾರಣ ಶಿವಾಧಿಕದ ।
ಚಾರಣಂ ಹರಸಮಯ ಪೂರಣ ಸುಧಾಕರಂ ।
ಧಾರುಣಿಯೊಳಿನಿತಕ್ಕೆ ರಾರಣಾಗಿಷ್ಟದೀಣ ಪೌರಾ
ಜಗಕೆಲ್ಲಕೆ ॥

೧೧೩

ಶರಣೈಕ್ಯನಾದ ಮೇಲೊರೆದೆನೆಂಬೊಂಭತ್ತು ।
ವರುಷದೊಳು ಶಾಲಿವಾಹನುರೆ ಶತಕ ಪುರಾಶತ ।
ಬರಿಸ ಮೂವತ್ತು ಮೂರಿರುವ ಪಗೆ ಕೃತಸಂವತ್ಸರ
ದಾಸಡದೆ ಮಾಸದ ॥
ಶರಧಿಸುತ ಕಲೆಷೆಚ್ಚುತಿರುವ ಪಕ್ಷದ ದಶಮಿ ।
ಗುರುವಾರ ವೃದ್ಧ ಷಟ್ ಚರದಿಂ ಸಿಧಿನಯನ ।
ಪುರಚಂದ್ರ ಸಂಖ್ಯಗಣೆ ತಿರಿಸುತಲಿ ಸಂಪೂರ್ಣ
ವಿರಚಿಸಿದನೆಂಬಲ್ಲಿಗೆ ॥

೧೧೪

ವರಪುರದ ಶಿವಲಿಂಗಶರಣಬಸವನಚರಿತೆ ।
ಗುರುಬಸವಣಾರ್ಯ ಪದಸರಸಿರುಹ ಲೀನಮಧು ।
ಕರನು ಗುರುಲಿಂಗಚರ ಸೇವಕಂ ಗುರುಲಿಂಗ ಕವಿ
ರಸಿಕಸಖ ಭಕ್ತಿಯಿಂ ॥
ವಿರಚಿಸಿದನೋದಿಸುವ ಬರೆದಗೋದುವಗೆ ಪರ ।
ತರ ಭಕ್ತಿಯಿಂದ ಪೇಳಿದರೆ ಕೇಳಿದರೆ ತಾಂ ।
ದೊರಕೊಳಗು ಸತಿ ಸುತರು ಸಿರಿ ಸಕಲ ಸಿದ್ಧಿಗಳು
ಹದಿನೈದನೇ ಸಂಧಿ ಇಂದುಧರನ ಮನಸಂಧಿ ॥

**ಸಂಧಿ ೧೫ ಕ್ಕೆ ಪದ ೧೩೨೫ ಕ್ಕಂ ಮಂಗಳಂ.**



# ಕಠಿಣ ಶಬ್ದಕೋಶ

## ಒಂದನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಕುಶೇಶಯ | ಕಮಲ | ೨ |
| ಬಿಲಾಶಯ | ಸರ್ಪ | |
| ಶಾರ್ವರೀಶ | ಚಂದ್ರ | |
| ರೋಚಿಷ್ಕೇಶ | ಅಗ್ನಿ | |
| ಸುರಪದಕೇಶ | ಆಕಾಶಕೇಶ | |
| ವಾರ್ತೆ | ಕ್ಷೇಮ | ೩ |
| ಆರ್ತೆ | ಅಕ್ಕರತೆ, ಉಪದ್ರವ | |
| ಸ್ಫೂರ್ತಿ | ಪ್ರಭಾವ | |
| ತುಹಿನಗಿರಿ | ಮಂಜಿನ ಬೆಟ್ಟ | ೬ |
| ಕಾಯದಲೆ | ಸಿಟ್ಟಾಗದಲೆ | |
| ವೃಗುಕರ್ಣ | ಸರ್ಪ | ೮ |
| ದೇಶಿಕ | ದಿಕ್ಕಿಲ್ಲದ್ದು | ೧೦ |
| ತಾರಕನ | ಶಿವನ | ೧೨ |
| ಅವತಂಸ | ಧರಿಸಲ್ಪಟ್ಟ | ೧೮ |
| ಕರಜಾತ | ಶಿಷ್ಯ | |
| ಭಕ್ತಾಘರಣ್ಯ ದಾವಾ | ಭಕ್ತರ ಪಾಪವೆಂಬ ಕಾಡಿಗೆಅಗ್ನಿ | ೧೯ |
| ಭಾಮ | ಸೂರ್ಯ | ೨೦ |
| ಭೀಮ | ಕಲಿಭೀಮ, ಭಯಂಕರ | |
| ಸೋಮ | ಶ್ರೇಷ್ಠ, ಸೋಮಕವಿ | |
| ಸದ್ಮ | ಮನೆ | |
| ಧಾಮ | ಮಹಿಮೆ | |
| ತೆನೆ | ಕಲಶ | |
| ಲಾಘವ | ಸುಲಭ | |
| ಗಾಢ | ಅತಿಶಯವಾಗಿ | ೨೨ |
| ಈರೈದರೊಂದು | ಹನ್ನೊಂದು | ೨೬ |
| ಚಾರುತರ | ಶ್ರೇಷ್ಠ | ೨೮ |
| ವರ್ಣ | ಜಾತಿ–ಅಕ್ಷರ | |
| ಸತ್ಕರ್ಮ | ಸದಾಚರಣೆ–ಕರ್ಮಪದ | |
| ಕ್ರಿಯಾಪದ | ಕ್ರಿಯಾಪದ–ಆಚರಣೆ ಕಾರಣವಾಗುಳ್ಳ | |
| ಆರುಸಂಪದ | ಷಟ್ಪದಿ - ಭಕ್ತಾದಿ ಷಟ್ಸ್ಥಲ | |

| ಪದ | ಅರ್ಥ | ನುಡಿ |
|---|---|---|
| ನವರಸ | ಶೃಂಗಾರಾದಿ ನವರಸಗಳು - ಅಭಿವೃದ್ಧಿ - ಶುಭ ಸಂತೋಷ | ೨೮ |
| ಯತಿಪದವಿಭಕ್ತಿ | ವಿಶ್ರಾಂತಿಸ್ಥಲ - ವಿಭಕ್ತಿಪದ ನೀಯತಿಗಳ ಚರಣದಲ್ಲಿ ವಿಶೇಷಭಕ್ತಿ | |
| ಗಣ | ಮಗಣಾದಿ ಅಷ್ಟಗಣ - ಪ್ರಮಥಗಣ | |
| ಮಾತ್ರೆ | ಲಘು - ಗುರು - ಪ್ಲುತ | |
| ಈಡು | ಸಮಾನ | ೨೯ |
| ತೋಡು | ಸರಿ | |
| ಪಾಡು | ನಾಶ | |
| ರಾಗಿ | ಸಂತೋಷಿ | |
| ಪಾಗಿ | ಕುಶಲಗಾರ | |
| ವಾಗಿಗತಿ | ಭಾಷಣಕತಿ | |
| ಪೂಗ | ಸಮೂಹ | |
| ಆಗಮ | ಬರುವ | |
| ಸೋಂಬೇರಿ | ಸೋಮಾರಿ | ೩೦ |
| ಸೂರಿ | ಪಂಡಿತ | |
| ಭಾಸಾಂತ | ಸೂರ್ಯ | ೩೧ |
| ಆಸುರ | ಅತಿಶಯ | ೩೪ |
| ಶರ | ಧ್ವಾನ - ಬಾಣ | ೩೬ |
| ಅನಿಮಿಷರು | ದೇವತೆಗಳು - ಮೀನಗಳು | |
| ಅಹಿಮಕರ | ಸೂರ್ಯ - ಸರ್ಪ - ಮೊಸಳಿ-ಚಂದ್ರ | |
| ಭುವನ | ಬ್ರಹ್ಮಾಂಡ - ಭೂಮಿ | |
| ಕುಕ್ಷಿ | ಹೊಟ್ಟೆ | |
| ಮುನಿಸತಿ | ಲೋಪಾಮುದ್ರ - ಲೋಪಾ ಮುದ್ರನದಿ | ೩೭ |
| ಚಾಮೀಕರ | ಬಂಗಾರ | ೩೯ |
| ಮರುದೇಷ್ಟ | ಅಗ್ನಿ | ೪೫ |
| ಆಸಮಂತ | ಸುತ್ತಲು | ೪೬ |
| ಸಾಚಿ | ಡೊಂಕಾಗಿ | ೫೪ |
| ಜೀವನ | ಪರಮಾತ್ಮ | ೫೭ |
| ಭಾವ | ಸತ್ಯನಾದ | |

| ಪದ | ಅರ್ಥ | ನುಡಿ |
|---|---|---|
| ಸೇವ್ಯ ಸೇವಕ | ಭಕ್ತ ಭಕ್ತ | ೫೭ |
| ಮಾನಾಥಧವ | ವಿಷ್ಣು ವಲ್ಲಭ | |
| ವಾಮ | ಮನೋಹರ - ವಾಮನ - ಯಡಭಾಗ - ಪಾರ್ವತಿ | ೫೮ |
| ಸೋಮು | ಶಿವ-ಚಂದ್ರ-ಶ್ರೇಷ್ಠ-ಕುಬೇರ | |
| ಕಾಮು | ಪರಮಾತ್ಮ-ಆಶ-ಮನ್ಮಥ | |
| ಥಾಮಕರ | ಸೂರ್ಯ | ೭.೨ |
| ಶಶಿ | ಒಂದರ ಸಂಖ್ಯೆ | ೮೧ |

## ಎರಡನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಜನಪದ | ದೇಶ | ಪಲ್ಲವಿ |
| ಪದ | ನಿಧಿ | ೩ |
| ಅಣೆಗಳು | ಪಾತೆಗಳು | |
| ಸೋಗೆ | ಕಬ್ಬಿನಯಲೆ - ನವಿಲು | |
| ಕುಳಿರ್ಗಲ್ಲ | ಚಂದ್ರಕಾಂತಿಶಿಲೆ | ೭ |
| ಮುಡಿವಾಳ | ಬಾಳದಬೇರು | |
| ದಾರು | ದೇವದಾರ | ೮ |
| ವಿಷ | ಉದಕ–ಗರಳ | ೧೨ |
| ಕುಶ | ದರ್ಭೆ - ಲವಾಗ್ರಜ | |
| ಕಮಲ | ಎರಳೆ - ಹಾವಸೆ | ೧೨ |
| ಕಂಚಾರ | ಕೌಂಗುವೃಕ್ಷ | ೧೩ |
| ಪೆಂಪು | ಅಭಿವೃದ್ಧಿ | ೧೪ |
| ಲಂಪು | ಲಾವಣ್ಯ | |
| ಚಾರಣ | ಶಿವಕಥೆಮಾಡುವ ಗೋಸಾಯಿ | ೧೭ |
| ಕುಪಡಾರಿ | ಕೆಟ್ಟ-ಅರಿಷಡ್ವರ್ಗ | ೨೯ |
| ಕಕುದ | ಉತ್ಕೃಷ್ಟ | ೩೬ |

## ಮೂರನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಕಾದಂಬ | ಹಂಸ | ೫ |
| ಕಾದಂಬಿನಿ | ಮೇಘ | |
| ಲೋಲ | ಒಲಿವಿಕೆ - ಚಂಚಲ | ೧೨ |
| ತಂ ಅಕ್ಷಯ | ತಣ್ಣೀರು | ೧೪ |
| ಜಾವಳಿಯೆ | ಚಪಲತ್ವ | ೨೧ |
| ಖಾವಳಿಯೆ | ಮನೋವಿಕಾರನಾಶಗೈದ | |
| ಮಾಳಿಗಳ | ಶ್ರೇಣಿಗಳ | |

| ಪದ | ಅರ್ಥ | ನುಡಿ |
|---|---|---|
| ಅಸ್ತುಕ | ಮೋಕ್ಷ | ೨೪ |
| ಭಾವ ಭಾವ | ಸತ್ಯ–ಸ್ವಭಾವ | ೩೨ |
| ಪರಾತ್ಪರ | ಪ್ರಭುಶ್ರೇಷ್ಠ | |
| ಶರಣಶರಣ | ಮರೆಹೊಕ್ಕವರ ರಕ್ಷಿಸುವವನು | |
| ಸುರವರಣ | ಸೂರ್ಯಪ್ರಕಾಶ | |
| ಕರ್ಣಿಕಾರ | ಬೆಟ್ಟದಾವರೆ | ೩೩ |
| ಭೂತ | ಪಿಶಾಚಿ - ಆನೆ | ೩೫ |
| ಪೋತ | ಕಪೋತಮರಿ | |
| ಜಾತಿ | ಸಮೂಹ | |
| ಸೋಮಾರ್ಕ | ಚಂದ್ರರವಿ ಸೋಮುವ ಲಿಲ್ಲಯಕ್ಕೆಗಿಡ | ೩೬ |
| ಹರಿ | ಕಪಿ ಸಿಂಹ | |
| ಪುಷ್ಕರ | ಯುದ್ಧ–ಕೊಳ | |
| ಸುಧ | ಅಮೃತ - ಅಣಲೆಗಿಡ | |
| ಹೇಮುಗರ್ಭ | ಬ್ರಹ್ಮ - ಮುತ್ತುಗಮರ | |
| ವೃಕ್ಷ | ನಕ್ಷತ್ರ–ಕರಡಿ | |
| ಶರ | ಬಾಣ - ತೃಣ | ೩೭ |
| ರುರು | ರಾಕ್ಷಸ - ಜಿಂಕೆ | |
| ಹರಿ | ಕಪ್ಪೆ - ನವಿಲು | |
| ಗಂಧರ | ಗಂಧರ್ವ–ಗವಿ | |
| ಸುರ | ಸರ್ಪ-ದೇವತೆ | |
| ಸೂಕರ | ಕುಂಬಾರ - ಪಟ | |
| ಮಾರ | ಮದನ - ಧತ್ತೂರ | |
| ಮದ | ಗರ್ವ - ಕಸ್ತೂರಿ | |
| ಮರ | ನಾಶ - ವೃಕ್ಷ | |
| ವೆಕ್ಕಸ | ದೊಡ್ಡದು | ೪೧ |
| ಥಾಮ | ಪ್ರತಾಪ | ೪೭ |
| ಘಂಟಾಪದ | ರಾಜಮಾರ್ಗ | ೪೯ |
| ದಾಮೋಸಿ | ರಾತ್ರಿಗ್ರಾಮ ರಕ್ಷಿಸುವವನು | ೫೦ |
| ಅಸುರ | ಅತಿಶಯ | ೫೩ |
| ಚಂಡಕರ | ಅಗ್ನಿ | ೬೪ |
| ಚಂಡ | ಶಾಸನ | ೬೫ |
| ಕಂಜಭುಗ್ವಿನುತ | ಅಮೃತಸೇವಿಸುವರಿಂದವಂದಿತನು | |
| ಕಜಕಂಧರ | ಬ್ರಹ್ಮಕಪಾಲ | |
| ಫಾಲ | ಶಿವ | ೬೬ |
| ಪಾಲಿ | ಟೊಂಕ | |

| ಪದ | ಅರ್ಥ | ನುಡಿ |
|---|---|---|
| ದುಹಿತೆ | ಮಗಳು | ೬೬ |
| ಕೀಲಾಲ | ಅಮೃತ | |
| ಕಕ್ಷ್ಯೆ | ಬ್ರಹ್ಮ | ೬೭ |
| ದಕ್ಷ | ಸಮರ್ಥ—ದಕ್ಷಬ್ರಹ್ಮ | ೭೨ |
| ಕುತನ | ಸೂರ್ಯ | |
| ಗೋಜ | ಹಾಲು | |
| ರಾಮ | ಸ್ತ್ರೀ | ೭೪ |

## ನಾಲ್ಕನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಅದ್ರಿ | ಅಗ್ನಿ - ಪರ್ವತ | ೪ |
| ಕಮಲ | ತಾವರೆ-ಜಿಂಕೆ-ಭ್ರಮರ-ನೀರು | ೬ |
| ಕಮಲಾಕರ | ತಾವರೆಗೊಳ | |
| ಕಲ್ಲೋಲ | ಸಂತೋಷ | ೧೧ |
| ಕಲ್ಯಾಣಕ್ಕೈತರಲು | ಶುಭಗ್ಯೆಯಲ್ಕೈಬರಲು | |
| ಆಶಯಾಶ | ಅಗ್ನಿ | ೧೩ |
| ಸುರತಿಲಕ | ಶಿವ - ನಾರದ | ೧೪ |
| ಚಂದ್ರ | ತೋರಣ - ಶ್ರೇಷ್ಠ | ೨೨ |
| ತಕ್ಕನಲ್ಲ | ಯೋಗ್ಯವಾದಪ್ರಿಯನ ಯೋಗ್ಯನಲ್ಲದವನ | ೨೪ |
| ಅಕ್ಕಜನ | ಅಕ್ಕರತೆ-ಅಗ್ರಜೆ-ತ್ವರ | |
| ಯಕ್ಕರನೆ | ಮತ್ಸರ-ನಿಜನೆಅಲ್ಲ- ನೀಚಸೆನಿಶ್ಚಯ | |
| ಒಕ್ಕರ | ವಕ್ರ | ೨೪ |
| ಬೆಳ್ಳಾರ | ಬಲೆ | ೨೬ |
| ತೋಹು | ಕಪಟ | |
| ರಾಗ | ಸೌಂದರ್ಯ—ಕೆಂಪು | ೩೪ |
| ವ | ವಾರಾಸಿ | |
| ಸೂನೆ | ಪುಷ್ಪ | ೩೭ |
| ಮಣಿರನ್ನ | ರಜಸ್ವಲೆಯ ಪ್ರಥಮದಿನ-ರತ್ನ | ೪೦ |
| ಇಂದುಚವುತಿ | ವಿರುತುಮತಿಯ ನಾಲ್ಕನೆಯ- ದಿನ ವರದಚವುತಿಚಂದ್ರ | |
| ಜಾಪು | ದಡ್ಡತನ | ೪೧ |
| ಗಡುಲ | ಕುಬ್ಜ | |
| ಅಕ್ಕವಿಟನತ್ತೆಸತ್ತಳು | ನಮ್ಮಕ್ಕವಿಟನತ್ತೆಸತ್ತಳು- ಅಗ್ರಜೇನಿನ್ನ ವಿಟನತ್ತೆಸತ್ತಳು | ೪೨ |

| ಪದ | ಅರ್ಥ | ನುಡಿ |
|---|---|---|
| ಅಂಚಿತ | ಚಂದ | ೪೨ |
| ಹರಿ | ಗಿಳಿ—ಸರ್ಪ-ಕೋಕಿಲ-ಮರಾಳ- ನೇತ್ರ-ಚಕ್ರ-ಆನೆ-ಕೋದಂಡ- ಬಂಗಾರ-ಚಂದ್ರ-ನೀರು-ಚಿತ್ರ- ಬಾಣ-ನಾರಾಯಣ | ೫೩ |
| ಒಸರಿಸು | ಅನುಸರಿಸು | ೬೦ |
| ಆಸುರ | ಅತಿಶಯ | |
| ಕುಡಿ | ಕಣ್ಣು | ೬೬ |
| ಅದೃಷ್ಟಿ | ಸಿಟ್ಟಿನನೋಟ | ೭೭ |
| ಅದ್ರಿ | ಕಲ್ಲು | |

## ಐದನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಸಾರಸ | ಚಂದ್ರ-ಕಮಲ-ಮೃತ್ಯು- ಗಿರಿ—ಹಂಸ | ೧ |
| ಸಾರ | ವಾತ—ರೋಗ | |
| ಸಾರಂಗ | ನವಿಲು - ಆನೆ | |
| ಗ | ಭೂಮಿ-ಗಮನ | |
| ಜ | ಜಾತ | |
| ತರಣಿ | ಹಡಗ | ೨ |
| ಧನಿಕ | ಯಜಮಾನ-ಗಂಡ | ೧೦ |
| ವಾತಯಿದು | ಪ್ರಾಣಪಂಚಕ | ೧೮ |
| ಕೋಕ | ಶ್ರೇಷ್ಠ | ೨೬ |
| ಕುಸುರ | ಬ್ರಾಹ್ಮಣ | ೩೦ |
| ಕಿನ್ನರವತಿ | ಪ್ರಭುದೇವರು | ೩೧ |
| ಭಣತ | ಮಾತು | ೩೨ |
| ಸುಜ್ಞಾನಾಶ್ರಮ | ಒಬ್ಬಋಷಿಯನಾಮ | ೩೮ |
| ಪದಜನಿತ | ಶೂದ್ರ | |
| ಕೀನಾಶ | ಯಮ | ೪೫ |
| ಭಾರಣೆ | ಬಿರುದುಸನ್ನಾಹ | ೪೭ |
| ಪೊಳಂಚು | ಮೇರೆಬೀಳು | ೫೭ |
| ಕೇಣ | ಹೊಟ್ಟೆಕಿಚ್ಚು | |
| ಕಣ | ಯುದ್ಧ-ನೊರಜು | ೭೨ |
| ರಣ | ಧ್ವನಿ-ಯುದ್ಧ | |
| ಗುಣ | ನಾರಾಚ | |

## ಆರನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಪಂಚತರು | ಕಲ್ಪವೃಕ್ಷ | ೨ |
| ಸಂಚಯಿನಿ | ಪ್ರಾಪ್ತಮಾಡಿಕೊಡುವದು | |
| ಉಪಕ್ರೋಶ | ನಿಂದೆ | ೪ |
| ಅಪಲಾಪ | ನಿಷೇಧವಾಕ್ಯ | |
| ಕಂದಲ | ಬಂಗಾರ | ೯ |
| ಮಾರ್ಗೊಂಡಳು | ವಶಪಡಿಸಿದಳು | |
| ಜೀವ | ಜೀವನೋಪಾಯ-ಭೂಮಿ-ಬೃಹಸ್ಪತಿ-ಪ್ರಾಣ-ನೀರು-ಭಾಷಣ | ೧೦ |
| ಜೀವಕ | ಊಳಿಗದವ | |
| ಜೀವನ | ನೀರು-ನಾರಾಚ ವಾಯು-ಮಗ–ವೃತ್ತಿ | |
| ವಾಹ | ಭುಜ | |
| ಕಣ | ಕಿಡಿ | ೧೧ |
| ಕ್ರಾಂತಿ | ಕುಂದು | ೧೨ |
| ಮಾಧವ | ಲಕ್ಷ್ಮಿ | ೧೩ |
| ದೋಷ | ಕತ್ತಲೆ | ೧೭ |
| ದ್ವಿಜ | ಬ್ರಾಹ್ಮಣ-ಪಕ್ಷಿ | |
| ಪಿಡಿಕರ | ಹೆಣ್ಣಾನೆ ಸೊಂಡಿಲು | ೧೯ |
| ಮಾರುತ | ವಾಯು | ೨೦ |
| ಚ | ಭೋಜನ | |
| ಕಶ್ಯಪಕುಮಾರ | ಗರುಡ | |
| ವಾರು | ತುರಗ | |
| ದೇವಮಣಿ | ಚಿಂತಾರತ್ನ - ಅಶ್ವದ ಹೃದಯದಸುಳಿ | ೨೨ |
| ಕಂಠಾಭರಣ | ಮಂಗಲಸೂತ್ರ - ಅಶ್ವಕಂಠದ ಶುಭಸುಳಿ | |
| ಚತುಷ್ಪದ | ಕುದುರೆಕಾಲು - ಗ್ರಂಥದಚರಣ | |
| ಜಯಶುಭ | ವಿಜಯಮಂಗಲ ಜಯಮಂಗಲವೆಂಬೆರಡು ಕಣ್ಣುಗಾರುಳ್ಳ ಕುದುರೆ | |
| ಚಪಲತರ | ಮಿಂಚು-ಅತಿವೇಗ | |
| ಜೈಲ | ನೀಚ | ೩೨ |
| ತಮಾಲಗ | ಕದ್ದಾಳಿಮರ | ೩೭ |
| ನಗವೈರಿರತ್ನ | ಇಂದ್ರನೀಲಮಣಿ | |
| ಶಾಲ | ಶಕ್ತಿ | ೩೮ |
| ಹಾಸುಕೀಲು | ಕೊರಳುಪಟ್ಟಿ | |
| ಶಾಲೆ | ಪುನಗಿನಬೆಕ್ಕು | |
| ವ್ಯಾಳ | ಮದಗಜ | |
| ಶಾರ್ದೂಲ | ಹುಲಿ | |
| ಪಿಡಿ | ಹೆಣ್ಣಾನೆ | |
| ಜಟಿಲ | ಸಿಂಹ | ೩೯ |
| ಶೀಲ | ದೊಡ್ಡಸರ್ಪ | ೪೦ |
| ಶಿಖಿ | ಪರ್ವತ-ನವಿಲು | |
| ಪಾಲಿ | ಟೊಂಕ | ೪೧ |
| ಮೆಳೆ | ಹೊದರು | ೪೩ |
| ಹರಿ | ದಿಕ್ಕು-ಆನೆ-ಚಂದ್ರ-ಸಿಂಹ-ವಿಕ್ರಮ-ಮನುಜ-ಇಂದ್ರ-ತುರಗ-ಉಚ್ಚೈಶ್ರವ-ವಾಯುಚಕ್ರ-ಯಮ-ಸೂರ್ಯ ಸಮೂಹ | ೪೪ |
| ಲಹರಿ | ಪರಂಪರೆ | |
| ಪುಷ್ಪವತಿ | ರಜಸ್ವಲಿ-ಕುಸುಮಯುತಲತಾ | ೪೯ |
| ಅಂಬರ | ಬಟ್ಟೆ - ಆಕಾಶ | |
| ಶಾಸನ | ಶಿಕ್ಷೆ | ೫೮ |
| ಶಾಲ | ವಿಶಾಲ | |
| ಸೈಪು | ಪುಣ್ಯ | ೬೫ |
| ಶತಪ್ರಾಶಿ | ಕಣಿಗಿಲ | ೬೮ |
| ಸಂಕ್ರಮ | ಕೂಡಿದ | |
| ಅಂಗ | ಉಪಾಯ | ೭೩ |

## ಏಳನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಜಾಂಬುನದ | ಬಂಗಾರ | ೧ |
| ಧರ್ಮ | ಬಿಲ್ಲು | ೬ |
| ಶ್ರೀ | ಐಶ್ವರ್ಯ | ೭ |
| ಲ | ಇಂದ್ರ | |
| ಅಜಗರ | ಹೆಬ್ಬಾವು | ೧೧ |
| ಹೇಡಿ | ಕೈಲಾಗದವನು - ಭಳಿ | ೧೩ |

| ಪದ | ಅರ್ಥ | ನುಡಿ |
|---|---|---|
| ಬಗ್ಗ | ಹುಲಿ | ೧೩ |
| ಶಂಬರ | ನೀರು | ೧೭ |
| ಪೊಡೆ | ಹೊಟ್ಟೆ | ೧೯ |
| ಘೋಣ | ಹಂದಿ | ೨೪ |
| ಬಾಡಬ | ಬ್ರಾಹ್ಮಣ | ೨೭ |
| ನಿಬ್ಬರ | ತ್ವರ | ೩೪ |
| ನಿಗಬ್ಬ | ನಿಗರ್ವ | |
| ತಂತ್ರ | ವೇದಶಾಖೆ | ೪೪ |
| ಮೊಗದಕಂಜ | ಮೀಸೆ | ೪೭ |
| ಕೇಸುರಿ | ಕೆಂಪುರಿ | ೫೦ |
| ಆಶಯಾಶ | ಅಗ್ನಿ | |
| ನಾಗನಾಶನ | ಅಗ್ನಿ | |
| ವೀತಿಹೋತ್ರ | ಅಗ್ನಿ | ೫೪ |
| ಸಕಲಭಕ್ಷ | ಅಗ್ನಿ | ೫೫ |
| ಕದಡು | ಸುದ್ದಿ | ೫೭ |
| ದೇವಲ | ಪೂಜಾರಿ | ೬೬ |
| ಕೈತವ | ಕಪಟ | ೭೧ |
| ಚೇತಸ್ಸು | ಮನಸ್ಸು | ೭೫ |

## ಎಂಟನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಕೇಳಿ | ನೃತ್ಯ | ೨ |
| ತೋಟ | ಕಲಹ | ೯ |
| ಪಲ್ಲವ | ವಿಟ | ೧೩ |
| ನಲ್ಲಮೆನೆ | ಚನ್ನಿಸವ | ೪೪ |
| ದಮ | ಶಿಕ್ಷೆ | ೫೧ |
| ಮಂಡನ | ಅಲಂಕಾರ | |
| ಪದ | ಪತಾಕ | ೫೭ |
| ಶಕುನಿಗ | ಬುಡುಬುಡಿಕೆ | |
| ಕಾಹುರ | ಗರ್ವ | ೬೭ |
| ಅಂಗ | ಅಂಗ | ೬೯ |
| ಝುಷ | ಮತ್ಸ್ಯ | ೭೯ |

## ಒಂಬತ್ತನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ನಲ್ಲ | ಒಳ್ಳೆಯ | ೧ |
| ಭದ್ರ | ವೃಷಭ | |
| ಭಿಷಜ | ವೈದ್ಯ | ೬ |

| ಪದ | ಅರ್ಥ | ನುಡಿ |
|---|---|---|
| ಮಧು | ವಸಂತ | ೧೨ |
| ಆಸುಗೆ | ಅಶೋಕ | ೧೬ |
| ಸೋಮವಲ್ಲಿ | ಅಮೃತದಬಳ್ಳಿ | |
| ಪುನ್ನಾಗ | ಜಾಕಾಯಿ | |
| ನಾಗವಲ್ಲಿ | ಎಲೆಬಳ್ಳಿ | |
| ಪೂಗಿ | ಅಡಿಕೆಗಿಡ | |
| ಆರ | ಆರವೃಕ್ಷ | |
| ಪಳುಕ | ಸ್ಫಟಿಕ | |
| ಕುಟ್ಟಿಮ | ಸಮಕಟ್ಟು | |
| ಮಾಧವ | ವಸಂತ | |
| ರಸ | ಸಂತೋಷ | ೨೨ |
| ಶ್ರೀಮುಖ | ಪತ್ರ | ೨೩ |
| ಸಾರ | ನೀರು | ೨೭ |
| ಆಕುಲ | ಬಹಳಕಷ್ಟ | ೨೯ |
| ಪಾಕ | ಪೂರ್ಣ | |
| ನಿರ್ಮೋಕ | ಬಿಡುಗಡೆ | |
| ಅಗ್ರ | ಕೊನೆ - ಮುಖ್ಯ | |
| ಕಂಕಲ್ಲಿ | ಅಶೋಕ | ೩೦ |
| ತಮಾಲ | ಕದ್ದಾಲೆಗಿಡ | |
| ಕಾಂಗು | ಅಡಿಕಿಗಿಡ | ೩೦ |
| ಪಾಲಾಶ | ಮುತ್ತುಗ | |
| ಮುಡಿವಾಳ | ಬಾಳದಬೇರು | |
| ಮಾಲೂರ | ಬಿಲ್ವ | |
| ಹಿಂತಾಲ | ದೊಡ್ಡತಾಳೆ | |
| ಸೌಗಂಧಿಕ | ನೈದಿಲೆ | ೩೧ |
| ಕಲಾಪ | ಚಂದ್ರ | ೩೩ |
| ಧನು | ಬಿಲ್ಲು - ಬಿಲ್ವ | ೩೪ |
| ಕರಿವೀರಗಳ | ವಿಶೇಷ ವೀರರಕಂಠ - ಕಣಿಗಿಲಪುಷ್ಪ | |
| ಪಾತರಿ | ಹಾದರಿ - ಪಾದರಿಪುಷ್ಪ | |
| ಓಜೆ | ಸಮೂಹ | ೩೬ |
| ಸೆಣಸಿತು | ತಿರಸ್ಕರಿಸಿತು | ೪೦ |
| ಶೀವಾಂತ | ಶೀಮೆಯೊಳಗೆ | |
| ಭೃಂಗಾರಿ | ಚಂಪಕ | |
| ನಾಗ | ಹೂವು | ೬೪ |
| ರ | ಅಶ | ೬೬ |

| ಪದ | ಅರ್ಥ | ನುಡಿ |
|---|---|---|
| ಅಂತೇನಾಸಿ | ಶಿಷ್ಯ | ೭೪ |
| ಆಶೆ | ದಿಕ್ಕು | ೯೬ |
| ಸುರ | ಸೂರ್ಯ | ೯೭ |
| ಭಾವ | ಪರಮಾತ್ಮ | ೯೯ |
| ಐಲಬಿಲ | ಕುಬೇರ | ೧೦೧ |
| ಅಕ್ಷ | ಇಂದ್ರಿ | |

## ಹತ್ತನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಅಂಸ | ಭಾಗ | ಪಲ್ಲವಿ |
| ಹಂಸ | ಶಿವ | |
| ಶಾರಿಕೆ | ಗೊರವಂಕ | ೩ |
| ಬರ್ದಿ | ಮುದಿಕಿ | ೧೦ |
| ಯಾವನಾಳ | ಜೋಳ | ೧೪ |
| ರಾವ | ಧ್ವನಿ | ೧೬ |
| ಪಿಶುನ | ದುಷ್ಟ | |
| ಓಕ | ಮನೆ | ೨೩ |
| ಯಾಮಿನಿ | ರಾತ್ರಿ | ೨೯ |
| ವ್ಯಾಜ | ನೆವನ | ೩೭ |
| ಎಡುಗ | ದಡ್ಡ | ೫೯ |
| ಪಡಿಸೆಣೆಸು | ಪರೀಕ್ಷೆ | |
| ಪೇಚು | ಗೂಗಿ | ೬೧ |
| ಬಳಕೆ | ಸ್ನೇಹ | ೬೯ |
| ಅಬು | ವರ್ಷ | ೭೦ |
| ಕುಂಪಟೆ | ಕಲಹ | ೭೬ |
| ಶಾತ | ಸಂತೋಷ | ೮೮ |
| ಬಿಪ್ಪಂಡ | ಹಕ್ಕಿಗಳ ಚಿಮಿಚಿಮಿಸರ್ಪ | ೮೯ |
| ಬಂಡು | ಪರಾಗ | |

## ಹನ್ನೊಂದನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಉಪಲನಗರ | ಕಲಬುರಿಗಿ | ಪಲ್ಲವಿ |
| ಸದಾಗತಿ | ಗಾಳಿ | ೧ |
| ನಿಗಮ | ತಂತಿ | ೧೨ |
| ನಗ | ವೃಕ್ಷ | |
| ಪ್ರಸ್ತರ | ಕಲ್ಲು | ೧೫ |
| ಪ್ರಸ್ಥಾನ | ಪ್ರಯಾಣ | |
| ನ್ಯಸ್ತ | ಧರಿಸೋಣ | |
| ಗಭಸ್ತಿ | ಪ್ರಕಾಶ | |

| ಪದ | ಅರ್ಥ | ನುಡಿ |
|---|---|---|
| ಅಮೃತ | ಚೆನ್ನ-ಸವಕಾಂತಿ | ೧೭ |
| ಅನಿಮಿಷ | ಮೀನು - ಸುರ | |
| ಹರಿ | ನಾರಾಯಣ - ಕಪ್ಪೆ | |
| ಜಲಂಧರ | ನೀರುಧರಿಸಿದ್ದು—ಜಲಂಧರಾಸುರ | |
| ಪಾಪ | ಕ್ರೂರ - ದೋಷ | ೧೭ |
| ಗಾವಿಲ | ಗೌಡ | ೨೭ |
| ಧಾಮ | ಕಾಂತಿ | ೨೯ |
| ಭಾಮ | ಹೊಳಪು | |
| ಭೂಮಿಸಿರಿ | ಪಸರು | |
| ಹೇಮಾದ್ರಿಚಲ್ವ | ಹಳದಿ | |
| ಸತ್ಯಭಾಮಕಾಂತ ವೈಗಾಂತಿ | ಕೃಷ್ಣ | |
| ಕಾಮಹಂಪು | ಗಿಳಿ | |
| ಛತ್ರ | ಚಂದ್ರ | |
| ಭಟ | ಕೋಕಿಲ | |
| ತಾಮರಸ | ಕಮಲ | |
| ರಾಜ | ಚಂದ್ರ | ೩೦ |
| ಹಂಸ | ಸೂರ್ಯ-ಯತಿಶೇಷ್ಠ-ಅರಸಂಚೆ | |
| ದ್ವಿಜ | ಬ್ರಾಹ್ಮಣ-ನಕ್ಷತ್ರ | |
| ಕುಭವ | ವೃಕ್ಷ ಕೆಟ್ಟದ್ದರಲ್ಲಿ ಹುಟ್ಟಿದ್ದು | |
| ಓಜೆ | ತೇಜ | |
| ಮೃಗರಾಜ | ಸಿಂಹ-ಹುಲಿ | |
| ಗೋ | ಆಕಳು-ನೀರು | |
| ಪಂಕ | ಪಾಪ-ಕೆಸರು | |
| ಗೋಜ | ತೊಂದರೆ-ಕೆಸರು | |
| ದುರ್ದಿನಪ | ಕೆಟ್ಟದಿವಸದೊಡಿಯ-ವರ್ಷಾಋತು | |
| ಕುವರಿ | ಗುಡ್ಡದೋರಿಯಹೊಲ | ೩೧ |
| ಕುಮುದ | ಕೆಟ್ಟಸಂತೋಷ—ನೀರು | |
| ವಿಚಿಕಿಲ | ಮೊಲ್ಲೆ | ೪೧ |
| ಗುಣ | ಮೃದು | |
| ಅಶ್ಮಪುರ | ಕಲಬುರಿಗಿ | ೪೫ |
| ಸುರಪಾದಪ | ಕಲ್ಪವೃಕ್ಷ | ೭೯ |
| ಸಾರಂಗ | ಕಮಲ-ಜಿಂಕೆ-ಕರ್ಪುರ. ತುಂಬಿ-ಕಾಮ-ಕಾಮಧನು-ಸಿಂಹ-ನವಿಲು-ಚಿತ್ರಬಣ್ಣ-ಕೋಗಿಲೆ-ಆಭರಣ-ಅಲಂಕಾರ-ಭೂವಿ:- | |

| ಪದ | ಅರ್ಥ | ನುಡಿ |
|---|---|---|
| | ಬೆಳಕು-ಆನೆ-ಶ್ರೇಷ್ಠನು. | ೮೧ |
| ಶಾಬ | ಮರಿ | |
| ಜಿತ | ಜೈಸಿದ | |
| ಕಚ | ಕೇಶ | |
| ಪಿಡಿ | ಹೆಣ್ಣಾನೆ | ೮೮ |

## ಹನ್ನೆರಡನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ನೀರದ | ಶುಭ್ರಮೇಘ | ೧೪ |
| ಯೋಗ | ಕೂಡಿದ್ದು | ೨೫ |
| ಶಿವ | ಶಂಕರ—ಹಾವು | |
| ಋಣ ಅರುಣ | ಸಾಲ-ಕೆಂಪು, ಕುಷ್ಠರೋಗ ಸಾಲಯಿಲ್ಲದ್ದು. | |
| ಕಟಿ | ಪ್ರೇತ-ರುತು | |
| ಕಟು | ತೀಕ್ಷ್ಣ—ಅಯೋಗ್ಯಕೆಲಸ | |
| ಶಠ | ಗರ್ವ | |
| ಚಟುಲ | ಚಂಚಲ | |
| ಕಟಪಿಟ | ಉಪದ್ರವ - ರಗಳೆಮಾತು | |
| ಕಾಡಿಗ | ಕಾಡುವವ-ನೀರ್ಹಕ್ಕಿ | ೨೬ |
| ಮಾಥಿ | ಎಲೆಗಳನರ - ದೈನ್ಯ | |
| ಕಾಡು | ಕೆಡಕು—ಕಪ್ಪು | |
| ಪಾಡು | ಕಷ್ಟಕೆಲಸ—ನಾಶ—ಹಣ್ಣಾಗಲು ಸಿದ್ಧವಾದ ಫಲ | |
| ಬಾಡು | ಒಣಗಿಹೋಗುವದು-ಕಾಯಿಪಲ್ಯ | |
| ಬೀಳು | ಹಾಳುಭೂಮಿ—ಫಲ ಬರುವಿಕೆ | |
| ನೋಡ | ಹುಚ್ಚ—ಮೇಘ | |
| ಮೋಡಿ | ಸಿಟ್ಟು—ಗಾರುಡವಿದ್ಯೆ | |
| ಗೋಡು | ಗೋಕಾಟ—ಗೊಜ್ಜು | |
| ಚೌರ್ಯ | ಕಳವು | ೨೭ |
| ವಾಸಿ | ಪಂಥ | ೬೯ |
| ಪಾರಿತೋಷ | ಉಡುಗರೆ | ೩೫ |
| ಯವನ | ಮುಸಲ್ಮಾನ | ೫೦ |

## ಹದಿಮೂರನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಕ್ಷೇತ್ರ | ಮನೆ | ೩ |
| ಗರ | ಭೂತ | |
| ಹೆಟ್ಟುಗೆ | ಹೆಂಡತಿ | ೬ |
| ಸುರಪಾದಪ | ಕಲ್ಪವೃಕ್ಷ | ೧೪ |
| ಸದಾಗತಿ | ಗಾಳಿ | ೧೫ |

## ಹದಿನಾಲ್ಕನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ಶುಚಿ | ಅಗ್ನಿ | ೧ |
| ವಿಚಿಕಿಲಾಂಬಕ | ಮದನ | |
| ಕಡರಥುನಿ | ದೇವಗಂಗಾ | |
| ಸಜ್ಜಾದಿ | ಫಕೀರವಂಶ | ೨ |
| ಡಬೀರಿ | ಕರಣಿಕ | |
| ಮಂಡಲ | ೪೮ ದಿನ | ೩ |
| ಊರ್ಬಣಿ | ತ್ವರ | ೧೨ |
| ಅಖರ್ವ | ಬಹಳ | |
| ಕರಣಿ | ಕೃತಿ | ೧೫ |
| ಕೋಕ | ಶ್ರೇಷ್ಠ | |
| ವಾರುಣಿ | ಸೆರೆ | ೨೯ |
| ಝೂರಿ | ಹೂಜಿ | |
| ಮಧು | ದಾರು | |
| ನ್ಯಾಮತ | ದಿವ್ಯಾನ್ನ | |
| ಕೀಲಾಲ | ರಕ್ತ | ೪೨ |
| ಕುಚ್ಚಿತ | ನೀಚ | ೫೩ |
| ಶಿತಗ | ಜಾರ | |

## ಹದಿನೈದನೆಯ ಸಂಧಿ

| ಪದ | ಅರ್ಥ | ನುಡಿ |
|---|---|---|
| ರಜನಿ | ರಾತ್ರಿ | ೧ |
| ಲ | ಇಂದ್ರ | |
| ಅಂಬಕ | ಶರ | |
| ಸೃಜಿತ | ಹುಟ್ಟಿಸುವ | |
| ಉದಾತ್ತ | ದಾನ | ೨ |
| ಏಳ್ಗೆ | ಆನಂದ | ೧೪ |
| ಶೇಷ | ಮುಕ್ತಿ | |
| ವಿಯದಳಿಕ | ಆಕಾಶಕೇಶ | ೧೫ |
| ರಾವು | ಓಡಿಹೋಗುವದು | ೧೬ |
| ಕಾತಳ | ಸಿಟ್ಟು | ೨೨ |
| ಕಾದಲೆ | ಹೆಂಡತಿ | ೨೩ |

| ಪದ | ಅರ್ಥ | ಸುಡಿ | ಪದ | ಅರ್ಥ | ಸುಡಿ |
|---|---|---|---|---|---|
| ಕೀಲಾಲ | ನೀರು | ೬೨ | ಸುಮುಖ | ಗಜಾನನ | ೯೪ |
| ಥಾಳಿ | ಲೂಟಿ | | ಕಾರ್ಪಣ್ಯ | ದಾರಿದ್ರ | |
| ಖಗ | ಸೂರ್ಯ | ೪೪ | ಸಾಕಾರಿ | ದೇವೇಂದ್ರ | ೯೫ |
| ವನ | ನೀರು | ೫೨ | ವಾಮೆ | ಐಶ್ವರ್ಯ | ೯೬ |
| ಹಿಮವತ್ತು | ಹಿಮಾಚಲ | ೫೩ | ವಿಧು | ಗಾಳಿ | ೯೭ |
| ಆಲವಟ್ಟ | ಬೀಸಣಿಕೆ | ೫೫ | ಸುಮಮುದನ | ಧತ್ತೂರಿಹುವ್ವು | |
| ಭೀಷ್ಮ | ಭಯಂಕರ | ೫೬ | ನರವಾಹನ | ಕುಬೇರ | |
| ಕೇಣ | ನಾಚಿಕೆ | ೬೧ | ಸುಹೃದ | ಗೆಳೆಯ | |
| ನಿಬ್ಬರ | ಅತಿಶಯ | | ಆ | ನಾನು | ೧೦೧ |
| ಪಾಥ | ನೀರು | ೭೦ | ರ | ತ್ವರ | |
| ಸ್ತೋಕ | ಮಂದ | ೮೫ | ಆರತ | ಸಂತೋಷಪಡೆದ | |
| ಮಯೂಖ | ಕಿರಣ | | ಉಪವಾಸ್ತು | ಸ್ಥಲ | ೧೧೦ |
| ರಯ್ಯ | ತ್ವರೆ | ೮೭ | ಉಪರಾಮ | ತೃಪ್ತಿ | |
| ಜನ್ನ | ಯಾಗ | ೯೨ | ಅಪದಾನ | ಚಲೋಕೆಲಸ | |
| ತಾಮರಸ | ಕಮಲ-ಬಂಗಾರ | ೯೩ | ಈಶಾಕ್ಷರ | ದೀರ್ಘಾಕ್ಷರ | ೧೧೧ |
| ತಾಮ | ದುಃಖ | | ಕೇಶವಾಕ್ಷರ | ಹ್ರಸ್ವಾಕ್ಷರ | |
| ತಾಮಿಸ್ರ | ರಕ್ಕಸ | | ದಾರಣ | ಸೀಳೋಣ | |
| ಧಾಮ | ಪ್ರಕಾಶ-ಜನನ-ಮನೆ | | ತಾರಣ | ದಾಟಿಸೋಣ | |
| ಸೋಮ | ಕುಬೇರ–ಶಿವ | | ಚಾರಣ | ಕಥೆಮಾಡುವಗೋಸಾಯಿ | |
| ಕಿಸಲಯ | ತಳಿರು | ೯೪ | ಪೂರಣ | ಸಾಗರ | |
| ಕೀಕು | ಸಂಕಟ | | ಪುರಾಣ | ಹದಿನೆಂಟು | ೧೧೩ |
| ಮದನ | ಶೀಕ್ಷ | | ಹಗೆಕೃತ | ವಿರೋಧಿಕೃದ್ವತ್ಸರ | |
| ಕೂಟಾಳಿ | ಸಖ | | ನಿಧಿ | ಒಂಬತ್ತು | |
| ಸುಮ | ಆಕಾಶ | | ನಯನ | ಎರಡು | |
| ತಮ | ಪಾಪ | | ಪುರ | ಮೂರು | |
| ಮಹಿತ | ಪೂಜ್ಯ | | ಚಂದ್ರ | ಒಂದು | |

........

# ತಪ್ಪು-ಒಪ್ಪೋಲೆ

## ಒಂದನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ದೆಖಿಳ | ದಖಿಳ | ೪ | ೬ |
| ಮೂವತಂಸಂ | ಮಾವತಂಸಂ | ೧೭ | ೬ |
| ಶೈರ್ಯನತೆ | ಶೈರ್ಯನತ | ೪೫ | ೨ |
| ಬಾರಲೆ | ಬಾರೆಲೆ | ೫೦ | ೧ |
| ಭಕ್ಷಾದಿ | ಕ್ಷಾದಿ | ೫೩ | ೧ |
| ಪದಾರ್ಥ | ಪದಾರ್ಥ | ೬೫ | ೪ |
| ಕೇಳುಮತ್ತೆ | ಕೇಳು | ೭೪ | ೪ |
| ಬುಲ್ಲುದೆ | ಬಲ್ಲುದೆ | ೭೫ | ೭ |

## ಎರಡನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಶರದಿ | ಶರಧಿ | ೨ | ೩ |
| ಮಿಲ್ಲರು | ಮಿಲ್ಲಿರು | ೧೩ | ೧ |
| ಕಂಚಾರ | ಸಂಚಾರ | ೧೩ | ೭ |
| ಇರನೇನು | ಇರಲೇನು | ೧೭ | ೩ |
| ಕಾಂತಿಗೆ | ಕಾಂತಗೆ | ೨೧ | ೮ |
| ಆಚಾರಂ | ಆಚಾರಂ | ೨೨ | ೧ |
| ಮಹಾರ ವಂಕಿ ವಿಗತಿ | ಮಹಾರವಂ ಕಿವಿಗತಿ | ೨೨ | ೩ |
| ತೇಜ | ತೇಜಿ | ೨೨ | ೬ |
| ಬಸುರ | ಬಸುರು | ೨೮ | ೩ |
| ಕೇಯೊಳಂ | ಕೇಳಿಯೋಳಂ | ೪೬ | ೧ |
| ಲೇಪ್ಟಾ | ಲೇಷ್ಟಾ | ೪೮ | ೭ |
| ಪೂಯ್ತ್ತಂ | ಮಾಯ್ತ್ತಂ | ೪೯ | ೮ |
| ಮಾಡನೆ | ಮಾಡದೆ | ೫೨ | ೩ |

## ಮೂರನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಕಲೆಂಗಳೆಳಿಸುವದೇ | ಕಲೆಗೆಳಿಸುವದೆ | ೫ | ೫ |
| ಸಂಸ್ಕೃತಿ | ಸಂಸ್ಕೃತಿ | ೫ | ೭ |
| ಸರಿಯೇ | ಸರಿಯೆ | ೬ | ೧ |
| ದಾಂಟಸುವೀ | ದಾಂಟಸುವಿ | ೭ | ೫ |
| ಪೊಳ್ಳು | ಪೊಳ್ತು | ೭ | ೫ |
| ರತ್ತ | ರತ್ನ | ೧೦ | ೬ |
| ಳಿಂಮ್ಮ್ರಂ | ಳಿಮ್ಮ್ರಂ | ೧೩ | ೭ |
| ಹಚ್ಟಡ | ಹಚ್ಚಡ | ೧೬ | ೮ |
| ಪೇದಿಕೆ | ವೇದಿಕೆ | ೨೦ | ೨ |
| ಮುಗಳ | ಮಗಳು | ೨೧ | ೭ |
| ದಸ | ದೆಸ | ೨೩ | ೫ |
| ದೊಳರ್ದ | ದೊಳಿರ್ದ | ೨೪ | ೧ |
| ಬಿತ್ತ | ಚಿತ್ತ | ೨೪ | ೮ |
| ಡಲೆ | ಡೆಲೆ | ೩೦ | ೧ |
| ತವತಕ | ತವಕ | ೩೩ | ೭ |
| ಗಳಿಪು | ಗಳಿವು | ೪೪ | ೧ |
| ರಾ ಮೋಸಿ | ರಾಮೋಸಿ | ೫೦ | ೫ |
| ಹರಪಾಪ | ಹರ ಪಾಪ | ೨೨ | ೩ |
| ಮಾನೆ | ಮಾನ | ೭೨ | ೫ |

## ನಾಲ್ಕನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ನೆನ | ನೆನಲು | ೧೬ | ೬ |
| ಜಗವ | ಜವ | ೨೪ | ೨ |
| ನೆ ವದಿ | ನೆವದಿ | ೨೭ | ೫ |
| ನಿಂತ್ಯಾಕೆ | ನಿತ್ಯಾಕೆ | ೩೨ | ೧ |
| ಮಾಗುಳ್ಳ | ಮೂಗುಳ್ಳ | ೩೪ | ೨ |
| ಮುನಾ | ಮುನಾ | ೩೫ | ೨ |
| ಏಟ | ಏಟ | ೩೮ | ೧ |
| ತುರುಣಿ | ತರುಣಿ | ೩೯ | ೭ |
| ಸರದಿಂ ಚರದಿ | ಸರದಿಂಚರದಿ | ೪೮ | ೬ |
| ಸರಿಯೆ | ಸುರಿಯೆ | ೫೬ | ೧ |
| ದಿಂದಧಿಕ | ನಿಂದಧಿಕ | ೭೧ | ೧ |

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಕೊಯ್ಯು | ಕೊಯ್ಯೆ | ೭೩ | ೩ |
| ದುಂಬಿ | ದುಂಬಿ | ೭೫ | ೭ |
| ವನತೆ | ವನಿತೆ | ೭೯ | ೫ |
| ಬಿಂದು | ಬಂದು | ೭೯ | ೫ |
| ಸಿರಿಯೂಳ | ಸಿರಿಯಾಳ | ೮೨ | ೩ |
| ದರೇಳು | ದಿರೇಳು | ೮೫ | ೧ |
| ಡಾಸೋಹ | ದಾಸೋಹ | ೯೮ | ೨ |
| ಜಂಗದುದ | ಜಂಗಮದ | ೮೮ | ೩ |
| ಗುಡಿಮಾರ | ಗುಡಿಮಾರ ಕೈ | ೮೯ | ೧ |
| ಕೈಕೂಲಿ | ಕೂಲಿ | ೮೯ | ೨ |

### ಐದನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಸಾರ ಸಗಮಾ | ಸಾರಸ ಗಮಾ | ೧ | ೩ |
| ಜವಯಂ | ಜಯಂ | ೬ | ೨ |
| ಸಕಲ ರೋಸಲಿಂಗಾ | ಸಕಲರೊ ಸಲಿಂಗಾ | ೮ | ೬ |
| ರೈದಳಾರಿ | ರೈದಳಾ | ೧೧ | ೭ |
| ಳಂದು ಣುತಿ | ಳಂದುಣುತಿ | ೨೦ | ೨ |
| ಕುರುಣೆ | ಕರುಣ | ೨೩ | ೬ |
| ಬವದ | ಬವರ | ೪೦ | ೬ |
| ಮೊರಗಿದ | ಮೊದಗಿದ | ೪೦ | ೬ |
| ರುಂತಿ | ರಂತಿ | ೪೧ | ೨ |
| ಲದವನು | ಲವನು | ೪೨ | ೨ |
| ಪುರಕೆಳಿಸು | ಪುರಕೆ ಕಳಿಸು | ೪೨ | ೮ |
| ಯವ | ಯುವ | ೫೮ | ೧ |
| ಪೂಸ | ಪೊಸ | ೫೨ | ೨ |
| ಮೋಗಿ | ಪೋಗಿ | ೬೦ | ೬ |
| ಗಿಡು | ಗಿಡುವ | ೬೩ | ೫ |
| ನಿಂದೌ | ನಿಂದಾ | ೬೭ | ೭ |
| ಕುರುಳತಾ | ಕುರುಳುತ | ೭೦ | ೧ |
| ತೆನಲು | ತೆನಲುಪರ | ೮೨ | ೫ |
| ಪರತರ | ತರ | ೮೨ | ೬ |
| ಶಂಕರನಾಮು | ಶಂ | ೮೨ | ೬ |
| ಸ್ಮರಣೆ | ಕರನಾಮ ಸ್ಮರಣೆ | ೮೩ | ೭ |
| ಶೃತಿ | ಶರ | ೮೪ | ೮ |

### ಆರನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಭಯಿ | ಭಯ | ೬ | ೮ |
| ವಗೆ | ಪಗೆ | ೧೧ | ೧ |
| ರೋಧನ | ರೋದನ | ೧೩ | ೫ |
| ಮೂಡಿತ | ಮೂಡಿತು | ೨೩ | ೧ |
| ಯಕ್ಕಲ | ಎಕ್ಕಲ | ೨೭ | ೧ |
| ಸಜಿವ | ಸಚಿವ | ೪೮ | ೭ |
| ಕ್ಷಾಂಬುಧಿ | ಷಾಂಬುಧಿ | ೫೪ | ೩ |
| ಭಾಸು | ಭಾನು | ೫೯ | ೧ |
| ಶಂಕೆ | ಶಂಕರ | ೮೫ | ೪ |
| ಶೃತಿ | ಋುತು | ೮೮ | ೮ |

### ಏಳನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಪೇಳ | ಪೇಳೆ | ೨ | ೧ |
| ದುಂ | ದು | -೪ | ೫ |
| ಯೊಲ್ದು | ಯೊಲ್ದ | ೭ | ೫ |
| ತಿತ್ತುರ | ತಿತ್ತರ | ೯ | ೮ |
| ಪುಟ್ಟವಂ | ಪಟ್ಟನಂ | ೨೦ | ೭ |
| ಬಾಡ ಬನ | ಬಾಡಬನ | ೨೭ | ೨ |
| ದಿಮ್ಮೆನುಗೆ | ದಿಮ್ಮನುಗೆ | ೩೧ | ೩ |
| ಶೇವಿಸುತ | ಸೇವಿಸುತ | ೩೪ | ೭ |
| ಪೂಗಳು | ಪೊಗಳು | ೩೬ | ೭ |
| ಶರಣಂ | ಶರಣರಂ | ೩೯ | ೮ |
| ಸಂಕ ಟ | ಸಂಕಟ | ೫೧ | ೩ |
| ದಶೆ | ದಶ | ೫೮ | ೮ |
| ಜನಯನ | ನಯನ | ೬೦ | ೫ |

### ಎಂಟನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಧಟ್ಟ | ಧಟ್ಟೆ | ೧೧ | ೪ |
| ತೊಬಂತ್ತು | ತೊಂಬತ್ತು | ೧೮ | ೨ |
| ಲಿಂಗದ | ಲಿಂಗದಾ | ೨೧ | ೧ |
| ದೀಶ | ಧೀಶ | ೨೫ | ೬ |
| ಲೆಂದರಿಜ್ಜು | ಲೆಂದುಜ್ಜು | ೩೮ | ೫ |
| ಸಲೆ | ಸತಿ | ೩೯ | ೧ |

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಹರಿಯ | ಹರಯ | ೬೯ | ೮ |
| ನಂಬಯು | ನಂಬಿಯು | ೨೪ | ೭ |

### ಒಂಬತ್ತನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ತೋಣಂ | ತೋರಣಂ | ೧೨ | ೧ |
| ಮಾಶಾಶ | ಮಾಶಾಳ | ೭೧ | ೫ |
| ವಕ್ಕಾ | ವರಕ್ಕಾ | ೭೧ | ೫ |
| ಬೊಮ್ಮ್ರ | ಬೊಮ್ಮ್ರ | ೩೧ | ೧ |
| ತೋಡಿಸಿ | ತೊಡಿಸಿ | ೪೪ | ೫ |
| ಮುಬಿ | ಮುಖಿ | ೪೨ | ೧ |
| ದಿನ್ನೈ | ನಿನ್ನ | ೫೫ | ೩ |
| ಭೇವ | ಭೇದ | ೬೫ | ೭ |
| ದಾಸ ಕೀಲ | ವಾ ಸಕೀಲ | ೨೬ | ೭ |
| ದಂಗ ಜಾಂತ | ದಂಗಜಾಂತ | ೨೮ | ೫ |
| ನಿಥೇ | ನಿಥೆ | ೯೯ | ೮ |
| ಸರಿಥಾನ | ಸಂಥಾನ | ೧೦೫ | ೧ |

### ಹತ್ತನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಧ್ಯಾನ | ಧಾನ್ಯ | ಸೂಚನೆ | ೧ |
| ಗಿಮ್ಹಡ | ಗ್ಹಿಮ್ಮ್ರಡ | ೭೫ | ೩ |
| ಗಿಕ್ಕೈ | ಗಿಕ್ಕಿ | ೭೯ | ೩ |
| ದ್ಹೋಕ್ಕು | ದೊಕ್ಕು | ೭೯ | ೨ |
| ತಿನ್ನೊಲು | ನಿನ್ನೊಲು | ೪೩ | ೩ |
| ನಾಧ | ನಾಥ | ೫೭ | ೭ |
| ಣುದಕೆ | ಣುದಕ | ೫೩ | ೭ |
| ಹಲ್ಲಣಪು | ಹಲ್ಲಣವು | ೫೩ | ೬ |
| ಸೋಹ | ಸೋಗ | ೬೨ | ೭ |
| ತ್ತೊಯ್ದವನ | ತೊಯ್ದ | ೨೦ | ೧ |
| ಸೊಸಿಯು | ವನಸೊಸಿಯು | ೨೦ | ೭ |
| ಡರೆ | ದರೆ | ೨೮ | ೨ |
| ಕಂಡೆಂ | ಕಂಡೆ | ೯೦ | ೨ |

### ಹನ್ನೊಂದನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಲ್ಕೈಂದು | ಲ್ಕೊಂದು | ೧೩ | ೨ |
| ಶಿಬಿ | ಶಿಖಿ | ೭೮ | ೫ |

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಡಾಗ | ದಾಗ | ೫೩ | ೬ |
| ಚೋಳ | ಜೋಳ | ೨೦ | ೫ |
| ಜಿನರು | ಜನರು | ೨೫ | ೫ |

### ಹನ್ನೆರಡನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಬರುವ | ಬರ | ೭೧ | ೮ |
| ನದುಡು | ನಡೆದು | ೪೫ | ೧ |
| ದ ಹಿಂಸ | ದಹಿಂಸ | ೪೨ | ೧ |
| ಗಜ | ಜಗ | ೪೮ | ೩ |
| ಸರಜಿ | ಸರಸಿ | ೫೧ | ೫ |

### ಹದಿಮೂರನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ವನುತೆ | ವನಿತೆ | ೧೦ | ೬ |
| ಲಿರ | ಲರ | ೧೭ | ೨ |
| ತುರು | ತರು | ೭೯ | ೧ |
| ನೋಜಿ | ಸೋಜಿ | ೩೭ | ೫ |
| ಮಡು | ಮರು | ೪೫ | ೩ |
| ಮೃಷ | ಮೃದು | ೪೯ | ೧ |
| ಶಬ | ಶವ | ೫೦ | ೧ |
| ಸುದ್ರ | ಸುದ್ದಿ | ೫೬ | ೭ |
| ದ್ಹಿಡಿದು | ಬ್ಹಿಡಿದು | ೬೬ | ೨ |
| ನಿವನೆ | ನಿವನ | ೬೮ | ೧ |
| ತಿನ | ತನ | | |
| ನಿನ್ನಯ | ನಿನ್ನಯ ಮಹಿಮೆ | " | " |
| ಬನವನೆ | ಬಸವದೆ | ೨೫ | ೧ |

### ಹದಿನಾಲ್ಕನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಬಟ್ಟು | ಬಿಟ್ಟು | ೪ | ೬ |
| ಸೂಲ್ಲು | ಸೊಲ್ಲು | ೫ | ೫ |
| ನೆಂದೆಂ | ನೆಂದಂ | ೫ | ೯ |
| ಸಚಿಪ | ಸಚಿವ | ೯ | ೧ |
| ವಿನೆ | ವಿನ | ೧೩ | ೨ |
| ದಿಂದ | ದಿಂದ | ೧೬ | ೨ |
| ಗಾಲ ರಥ | ಗಾಲಿರಥ | ೬೯ | ೫ |
| ಬೆಡಿದ | ಬೇಡಿದ | ೬೯ | ೨ |

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಭುವನ | ಭವನ | ೭೯ | ೭ |
| ಮನಬಂಪ | ಮನಬಂದ | ೯೧ | ೨ |

ಹದಿನೈದನೆಯ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ವವನ | ಪವನ | ೧೯ | ೫ |
| ತಡುಗು | ತುಡುಗು | ೩೧ | ೭ |
| ಚಿತ್ರ | ಬಿತ್ರ | ೩೪ | ೨ |
| ಭವನ | ಭುವನ | ೩೮ | ೭ |
| ಗೊಂಡ | ಗೊಂಡು | ೩೯ | ೫ |
| ಸೂರ | ಸೂರ್ಯ | ೫೧ | ೨ |
| ವಿದು | ವಿಧು | ೫೯ | ೧ |
| ಪಾಮಾ | ವಾಯಾ | ೬೬ | ೨ |
| ದದ | ದದು | ೭೮ | ೧ |
| ದುರುಳ | ಮರುಳ | ೮೬ | ೧ |
| ವೌರಾಣ | ಪೌರಾಣ | ೧೦೦ | ೨ |
| ಹದವಳ | ಹಳವ | ೧೦೨ | ೩ |
| ಗೈಸರುಂ | ಗೈದರುಂ | ೧೧೧ | ೧ |
| ರಂದೊಂಬು | ಛಂದೊಂಬ | " | " |
| ಲೇಸರ | ಲೇಸರಲ್ಲ | " | ೨ |
| ಣಾಹಿತಿ | ಣಾಹಿತ | ೧೧೨ | ೩ |
| ಲೊ | ಲೋ | ,, | ೪ |
| ಡ್ದಾರರ | ಡ್ಧಾರಣ | ,, | ೫ |
| ರಾರಣಾ | ಕಾರಣಾ | ,, | ೬ |
| ಗಿಷ್ಟದೀ | ಗಿಪ್ಪುದೀ | ,, | ೭ |
| ಪೌರಾ | ಪೌರಾಣ | ,, | ,, |
| ನೆಂಬೊಂ | ನೆಂಬ್ರೊಂ | ೧೧೩ | ೧ |
| ಷೆಚ್ಚು | ಪೆಚ್ಚು | ೧೧೩ | ೫ |
| ಚಕದಿಂ | ಚರಣದಿಂ | ೧೧೩ | ೬ |

ಹದಿನೈದನೇ ಸಂಧಿ

| ತಪ್ಪು | ಒಪ್ಪು | ನುಡಿ | ಸಾಲು |
|---|---|---|---|
| ಇಂದು | ಇಂದು | ೧೧೪ | ೮ |

೧೪ನೆಯ ಸಂಧಿ ೯೨ನೆಯ ನುಡಿಯ ಕೊನೆಸಾಲು

ಕುರುಳೆನಲು ।

ಮಿನುಗೆ ಮುಗುಳ್ನಗೆಯಲ್ಲಿ ತನಕ ನೀನಡೆಯೆಂದು
ಸನುಮತಿಸಿ ಕರೆತರುತಲಿ ॥

೯೩ನೆಯ ಮೊದಲಿನ ಸಾಲು

ಶರಣನಿಗೆ ಅವಳೊಂದು ಬೆರಣಿಗೊಂಡ್ಡಣವೆನ್ನು
ಎಂದು ಓದಿಕೊಳ್ಳಬೇಕು